ಶ್ರೀ

ವ್ಯಾಸಮಹರ್ಷಿಪ್ರಣೀತ

# ಶ್ರೀಮಹಾಭಾರತವು

SHREE MAHABHARATA

ಕರ್ನಾಟಕ ವಚನ

## ಶಲ್ಯಪರ್ವವು.

SHALYA — PARVA

ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯರ ವಿರಚಿತವು.



ಪ್ರಕಾಶಕರು:

ಕರ್ಣಾಟಕ ಡಿಪೋ,

1/59, ಸನ್ನಿಧಿ ಬೀದಿ, ತಿರುವಲ್ಲಿಕ್ಕೇಣಿ, ಮದರಾಸು.

1934

[ಬೆಲೆ ೨-೦-೦.

---





# ವಿಷಯಾನುಕ್ರಮಣಿಕೆ.

## ಹ್ರದಪ್ರವೇಶಪರ್ವವು

## ಗದಾಯುದ್ಧ ಪರ್ವವು

# ಚಿತ್ರಪಟಗಳ ಪಟ್ಟಿ.









# ಶ್ರೀಮಹಾಭಾರತವು

## ಶಲ್ಯಪರ್ವವು

### ಶಲ್ಯವಧಪರ್ವವು.

ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ।
ದೇವೀಂ ಸರಸ್ವತೀಂಚೈವ ತತೋ ಜಯಮುದೀರಯೇತ್ ॥

ದುರ್ಯೋಧನನು ಶಲ್ಯನನ್ನು ಸೇನಾಧಿಪತ್ಯದಲ್ಲಿ ಅಭಿಷೇಕಿಸಿ ಯುದ್ಧಕ್ಕೆ ಹೊರಟಮೇಲೆ ಸಂಜಯನಿಂದ ಶಲ್ಯ ದುರ್ಯೋಧನಾದಿಗಳ ವಧವೃತ್ತಾಂತವನ್ನು ಸಂಗ್ರಹವಾಗಿ ಕೇಳಿ ಮೂರ್ಛಿತನಾದ ಧೃತರಾಷ್ಟ್ರನನ್ನು ವಿದುರನು ಸಮಾಧಾನಗೊಳಿಸಿದುದು

ಜನಮೇಜಯನು ವೈಶಂಪಾಯನನನ್ನು ಕುರಿತು "ಓ ಬ್ರಾಹ್ಮಣೋತ್ತಮಾ! ಸವ್ಯಸಾಚಿಯಿಂದ ಕರ್ಣನು ಹತನಾದಮೇಲೆ ಅಲ್ಪಸ್ವಲ್ಪವಾಗಿ ಉಳಿದಿದ್ದ ಇತರಕೌರವರು ಏನುಮಾಡಿದರು? ದುರ್ಯೋಧನನು ಪಾಂಡವರಿಂದ ಬೇಧಿಸಲ್ಪಡುತ್ತಿರುವ ತನ್ನ ಸೇನೆಯನ್ನು ನೋಡಿ, ಕಾಲೋಚಿತವಾದ ಯಾವ ಕಾರ್ಯವನ್ನು ಮಾಡಿದನು? ನಾನು ಇವುಗಳೆಲ್ಲವನ್ನೂ ಕೇಳಲು ಕುತೂಹಲವುಳ್ಳವನಾಗಿರುವೆನು. ವಿವರವಾಗಿ ತಿಳಿಸು ನಮ್ಮ ಪೂರ್ವಿಕರ ಮಹಾಚರಿತ್ರವನ್ನು ಎಷ್ಟೆಷ್ಟು ಕೇಳಿದರೂ ನನಗೆ ಇನ್ನೂ ತೃಪ್ತಿಯಿಲ್ಲದಿದೆ" ಎಂದನು.

ಆಗ ವೈಶಂಪಾಯನನು "ಓ ರಾಜಾ! ಕರ್ಣನು ಹತನಾದೊಡನೆ ದುರ್ಯೋಧನನು ಮಹಾದುಃಖಸಮುದ್ರದಲ್ಲಿ ಮುಳುಗಿ, ನಿರಾಶೆಯಾಗಿ ಬಿಟ್ಟನು. ಆಗ ಆ ಮಹಾವ್ಯಸನದಿಂದ ಆತನು "ಹಾ! ಕರ್ಣಾ! ಹಾ! ಕರ್ಣಾ!" ಎಂದು ಅಡಿಗಡಿಗೆ ವಿಲಪಿಸುತ್ತ, ಹತಶೇಷರಾದ ತನ್ನ ಕಡೆಯ ರಾಜರೊಡನೆ ತನ್ನ ಬಿಡಾರಕ್ಕೆ ಹೋದನು ಅಲ್ಲಿ ಅವನ ಪುರೋವೃದ್ಧಿಯನ್ನು ಕೋರತಕ್ಕ ಹಿತೈಷಿಗಳಾದವರೆಲ್ಲರೂ, ಶಾಸ್ತ್ರೀಯವಾದ ಕಾರಣಗಳಿಂದ ಅವನನ್ನು ಸಮಾಧಾನಗೊಳಿಸಿದರೂ, ಆ ದುರ್ಯೋಧನನು ಕರ್ಣನನ್ನೇ ನೆನೆಸಿ ದುಃಖಿಸುತ್ತ, 'ಇವೆಲ್ಲವೂ ವಿಧಿವಿಲಾಸಗ'ಳೆಂದೇ ನಿಶ್ಚಯಿಸಿ, ಬೆಳಗಾದೊಡನೆ ತಿರುಗಿ ಯುದ್ಧಮಾಡುವುದಾಗಿ ತೀರ್ಮಾನಿಸಿಕೊಂಡು, ಅದರಂತೆ ಮರುದಿನವೂ ಯುದ್ಧಕ್ಕೆ ಹೊರಟನು ರಾಜಶ್ರೇಷ್ಠನಾದ ಶಲ್ಯನನ್ನು ಶಾಸ್ತ್ರವಿಧಿಯಂತೆ ಸೇನಾಪತ್ಯದಲ್ಲಿ ಅಭಿಷೇಕಿಸಿ, ಸತ್ತುಳಿದ ಕೆಲವು ರಾಜರೊಡನೆ ಯುದ್ಧಕ್ಕೆ ಸಿದ್ಧನಾಗಿ ನಿಂತನು ರಾಜೇಂದ್ರಾ! ಒಡನೆಯೇ ಕೌರವಪಾಂಡವರಿಗೆ ದೇವಾಸುರಯುದ್ಧಕ್ಕೆ ಸಮಾನವಾದ ಘೋರಯುದ್ಧವು ಪ್ರಾರಂಭಿಸಿತು. ಶಲ್ಯನು ಪಾಂಡವಸೇನೆಯನ್ನು ನಾಶಮಾಡುತ್ತ ಯುದ್ಧಮಾಡುತ್ತಿದ್ದು ಕೊನೆಗೆ ಮಧ್ಯಾಹ್ನಕಾಲದಲ್ಲಿ ಧರ್ಮರಾಜನಿಂದ ಕೆಳಕ್ಕೆ ಕೆಡಹಲ್ಪಟ್ಟನು ಹೀಗೆ ತನ್ನ ಬಂಧುಗಳೆಲ್ಲರೂ ಹತರಾದುದನ್ನು ನೋಡಿ, ದುರ್ಯೋಧನನು ಶತ್ರುಭಯದಿಂದ ಯುದ್ಧರಂಗವನ್ನು ಬಿಟ್ಟು ಓಡಿಹೋಗಿ, ಘೋರವಾದೊಂದು ಮಡುವನ್ನು ಪ್ರವೇಶಿಸಿ ಅಲ್ಲಿ ಅವಿತುಕೊಂಡುಬಿಟ್ಟನು ಆಮೇಲೆ ಅಪರಾಹ್ಣದ ಕೊನೆಯಭಾಗದಲ್ಲಿ, ಭೀಮನು ಅನೇಕಮಹಾರಥರೊಡನೆ ನಾಲ್ಕುಕಡೆಗಳಲ್ಲಿಯೂ ಆ ಮಡುವನ್ನು ಆವರಿಸಿಕೊಂಡು, ದುರ್ಯೋಧನನನ್ನು ಮೂದಲಿಸಿ ಕರೆದು, ಕೊನೆಗೆ ಅವನನ್ನೂ ಯುದ್ಧದಲ್ಲಿ ಕೆಳಕ್ಕೆ ಕೆಡಹಿಬಿಟ್ಟನು ವೀರನಾದ ನಿನ್ನ ಮಗನು ಕೆಳಗೆಬಿದ್ದಮೇಲೆ, ಮಹಾಧನುರ್ಧಾರಿಗಳಾದ ಕೃತವರ್ಮಕೃಪಾಶ್ವತ್ಥಾಮರು ಮೂವರೂ ತಿರುಗಿ ಯುದ್ಧವನ್ನಾರಂಭಿಸಿ ಪಾಂಡವಸೇನಾವೀರರನ್ನು ಕೊಂದರು ಮರುದಿನದ ಪೂರ್ವಾಹ್ಣಸಮಯದಲ್ಲಿ ಸಂಜಯನು ಬಿಡಾರದಿಂದ ಹೊರಟು, ಬಹಳ ದೈನ್ಯದಿಂದಲೂ, ಶೋಕದಿಂದಲೂ ಪಟ್ಟಣವನ್ನು ಪ್ರವೇಶಿಸುತ್ತ ತನ್ನ ತೋಳುಗಳೆರಡನ್ನೂ

ಮೇಲಕ್ಕೆ ನೀಡಿ, ದುಃಖದಿಂದ ನಡುಗುತ್ತ ಅರಮನೆಗೆ ಬಂದನು ಆಗ ಅಲ್ಲಲ್ಲಿ ಕೆಲವು ಪ್ರಮುಖರು ಅಲ್ಲಿಂದಿಲ್ಲಿಗೆ ಓಡುತ್ತಲೂ, ಹುಚ್ಚರಂತೆ ಮಾನ ಮರ್ಯಾದೆಗಳನ್ನು ಬಿಟ್ಟು ದುಃಖದಿಂದ ರೋದಿಸುತ್ತಲೂ ಇರುವುದನ್ನು ಕಂಡನು ಅವರನ್ನು ಕಂಡೊಡನೆ ಸಂಜಯನ ದುಃಖವು ಇನ್ನೂ ಹೆಚ್ಚಿತು ಆಗ ಅವನು 'ಅಯ್ಯೋ! ಕಷ್ಟವೆ! ಮಹಾತ್ಮನಾದ ಆ ದುರ್ಯೋಧನನ ನಾಶದಿಂದ ನಾವು ಮಹಾವಿಪತ್ತಿಗೀಡಾದೆವು ಯಾವ ಕಾಲಮಹಿಮೆಯಿಂದ ಇಂದ್ರಸಮಾನರಾದ ಅಂತಹ ಅರಸರೆಲ್ಲರೂ ಕೊಲ್ಲಲ್ಪಟ್ಟರೋ ಆ ಕಾಲಕ್ಕಿಂತಲೂ ಪ್ರಬಲವಾದುದಿಲ್ಲ ಹಾ! ಕಾಲಗತಿಯು ಅತ್ಯಂತ ವಿಷಮವಾದುದು" ಎಂದು ಗಟ್ಟಿಯಾಗಿ ಕೂಗತೊಡಗಿದನು ಪಟ್ಟಣದ ಜನರೆಲ್ಲರೂ ಸಂಜಯನ ಆ ಸ್ಥಿತಿಯನ್ನು ನೋಡಿದಮಾತ್ರದಿಂದಲೇ, ನಡೆದ ಅನರ್ಥವನ್ನು ಊಹಿಸಿ ತಿಳಿದು, ಭಯಪೀಡಿತರಾಗಿ 'ಹಾ ಇದೇನು ಗತಿಯೋ' ಎಂದು ಗಟ್ಟಿಯಾಗಿ ಕೂಗಿದರು ಕ್ರಮಕ್ರಮವಾಗಿ ಸಂಜಯನ ಬಾಯಿಂದಲೇ ರಾಜನ ಮರಣವಿಷಯವನ್ನು ಕೇಳಿ ಜನರೆಲ್ಲರೂ 'ಹೋ' ಎಂದು ರೋದಿಸತೊಡಗಿದರು ಅದನ್ನೆಲ್ಲ ನೋಡುತ್ತಲೇ ಸಂಜಯನು ಅರಮನೆಯನ್ನು ಪ್ರವೇಶಿಸಿ, ರಾಜೋತ್ತಮನೂ, ಜ್ಞಾನಚಕ್ಷುಸ್ಸುಳ್ಳವನೂ ಆದ ಧೃತರಾಷ್ಟ್ರನಿದ್ದಲ್ಲಿಗೆ ಬಂದನು ಓ ಜನಮೇಜಯರಾಜಾ! ಅಲ್ಲಿ ಧೃತರಾಷ್ಟ್ರನು ತನ್ನ ಎಲ್ಲಾ ಸೊಸೆಯರಿಂದ ಪರಿವೃತನಾಗಿ ಗಾಂಧಾರೀವಿದುರರೊಡನೆ ಕುಳಿತಿರುವುದನ್ನು ಕಂಡನು ಇನ್ನೂ ಇತರ ಪರಿಚಾರಕರೂ, ಹಿತೈಷಿಗಳಾದ ಜ್ಞಾತಿಗಳೂ ಅವನನ್ನು ಸುತ್ತಿ ಕುಳಿತಿದ್ದರು. ಆಗಲೇ ಧೃತರಾಷ್ಟ್ರನು ಕರ್ಣನ ವಧವನ್ನು ನೆನೆಸಿಕೊಂಡು ವ್ಯಸನಪಟ್ಟು ಕೊರಗುತ್ತಿದ್ದನು. ಈ ಸ್ಥಿತಿಯಲ್ಲಿದ್ದ ತನ್ನ ಅರಸನನ್ನು ಕಂಡು ಸಂಜಯನು, ಮನಸ್ಸಿನಲ್ಲಿ ಮಹಾದುಃಖದಿಂದ ಕಣ್ಣೀರು ಸುರಿಸುತ್ತ, ಗದ್ಗದಸ್ವರದಿಂದ ಹೀಗೆ ಹೇಳುವನು

"ಓ ಪುರುಷಶ್ರೇಷ್ಠಾ! ಸಂಜಯನಾದ ನಾನು ನಮಸ್ಕರಿಸುವೆನು. ಈಚೆಗೆ ಮದ್ರಾಧಿಪತಿಯಾದ ಶಲ್ಯನೂ ಸತ್ತನು ಸೌಬಲಪುತ್ರನಾದ ಶಕುನಿಯೂ ಹತನಾದನು. ಮಹಾಬಲಿಷ್ಠನೂ, ಶಕುನಿಪುತ್ರನೂ, ಕಪಟಿಯೂ

ಆದ ಉಲೂಕನೂ ಹತನಾದನು ಎಲ್ಲಾ ಸಂಶಪ್ತಕರೂ, ಶಕರೂ, ಕಾಂಭೋಜರೂ, ಮ್ಲೇಚ್ಛರೂ, ಪಾರ್ವತೀಯ ವೀರರೂ, ಯವನರೂ ಮೃತರಾದರು ಓ ಮಹಾರಾಜಾ! ಮಹಾಶೂರರಾದ ಪೂರ್ವದಕ್ಷಿಣ ಪಶ್ಚಿಮೋತ್ತರದೇಶಗಳ ರಾಜರೂ, ರಾಜಪುತ್ರರೂ ಕೊಲ್ಲಲ್ಪಟ್ಟರು ಮಹಾಬಲಶಾಲಿಯೂ, ಕರ್ಣಪುತ್ರನೂ ಆದ ಸತ್ಯಸೇನನೂ ಹತನಾದನು ಕೊನೆಗೆ ಕೌರವರಾಜನೆನಿಸಿದ ನಿನ್ನ ಮಗನಾದ ದುರ್ಯೋಧನನೂ ಹಿಂದೆ ಶಪಥಮಾಡಿದ್ದಂತೆ ಭೀಮಸೇನನಿಂದ ಕೊಲ್ಲಲ್ಪಟ್ಟನು. ಈಗ ಆ ನಿನ್ನ ಮಗನು ತೊಡೆಮುರಿದು (ರಕ್ತದಿಂದ) ತೊಯ್ದು ನೆಲದಮಣ್ಣಿನಲ್ಲಿ ಮಲ ಗಿರುವನು ರಾಜಾ! ಅತ್ತಲಾಗಿ ಧೃಷ್ಟದ್ಯುಮ್ನನೂ, ಅಜೇಯನಾದ ಶಿಖಂಡಿಯೂ, ಉತ್ತಮೌಜಸ್ಸೂ, ಯುಧಾಮನ್ಯುವೂ ಎಲ್ಲಾ ಪ್ರಭದ್ರ ಕರೂ ಹತರಾದರು ಪಾಂಚಾಲರಾಜನೂ, ಚೇದಿದೇಶದ ವೀರರೂ ಕೊಲ್ಲಲ್ಪಟ್ಟರು ನಿನ್ನ ಎಲ್ಲಾ ಪುತ್ರರೂ, ದ್ರೌಪದಿಯ ಕುಮಾರರೂ ಹತರಾದರು ಕಾಲಾಳುಗಳೆಲ್ಲರೂ ಮೃತಿಹೊಂದಿದರು. ಆನೆಗಳೆಲ್ಲ ಕೆಡ ಹಲ್ಪಟ್ಟುವು ಎಲ್ಲಾ ರಥಿಕರೂ, ಅಶ್ವಿಕರೂ ಕೊಲ್ಲಲ್ಪಟ್ಟರು ಹೆಚ್ಚೇಕೆ? ನಿನ್ನವರಿಗೂ, ಪಾಂಡವರಿಗೂ ನಡೆದ ಈಗಿನ ಯುದ್ಧದಲ್ಲಿ, ಆ ಉಭಯ ಪಕ್ಷದ ಸೇನಾನಿವೇಶಗಳೂ ಶುದ್ಧಶೂನ್ಯವಾದುವು ಕಾಲಮಹಿಮೆಯಿಂದ ಮೋಹಿತವಾದ ಈ ಪ್ರಪಂಚದಲ್ಲಿ, ಕೇವಲ ಸ್ತ್ರೀಯರುಮಾತ್ರವೇ ಉಳಿ ದಿರುವಂತಾಯಿತು ಈಗ ಪಾಂಡವರಕಡೆಯಲ್ಲಿ ಪ್ರತಾಪಶಾಲಿಗಳಾದ ಪಂಚಪಾಂಡವರು, ಸಾತ್ಯಕಿ, ಕೃಷ್ಣನು, ಈ ಏಳುಮಂದಿಮಾತ್ರ ಉಳಿ ದಿರುವರು ಕೌರವರ ಪಕ್ಷದಲ್ಲಿ ಕೃಪನು, ಕೃತವರ್ಮನು, ಅಶ್ವತ್ಥಾಮನು, ಈ ಮೂವರುಮಾತ್ರ ಉಳಿದಿರುವರು ರಾಜೋತ್ತಮಾ! ಮೊದಲು ಆಗ ಯುದ್ಧಕ್ಕಾಗಿ ಬಂದು ನೆರೆದ ಹದಿನೆಂಟು ಅಕ್ಷೌಹಿಣೀಸೈನ್ಯದಲ್ಲಿ ಈಗ ಉಳಿದಿರತಕ್ಕವರು ಈ ಹತ್ತುಮಂದಿಯೇ! ಇವರುಹೊರತು ಮಿಕ್ಕವರೆ ಲ್ಲರೂ ಮೃತರಾದರು ಇದು ಸತ್ಯವು ಕಾಲಮಹಿಮೆಯಿಂದ ಪ್ರಪಂ ಚವೇ ಮೊತ್ತಕ್ಕೆ ನಾಶಹೊಂದಿತು. ನಿನ್ನ ಮಗನಾದ ದುರ್ಯೋಧನನ ಮಾತನ್ನು ಕೇಳಿದುದಕ್ಕಾಗಿ ಇಷ್ಟೊಂದು ಜನರು ಪ್ರಾಣವನ್ನೊಪ್ಪಿಸಿದರು" ಎಂದನು.

ಈ ಕ್ರೂರವಾಕ್ಯಗಳು ಕಿವಿಗೆ ಬಿದ್ದೊಡನೆ ಧೃತರಾಷ್ಟ್ರನು ಪ್ರಜ್ಞೆ ತಪ್ಪಿ ಬಿದ್ದನು ಅದನ್ನು ನೋಡಿ ವಿದುರನೂ ಶೋಕದಿಂದ ಮೂರ್ಛಿತ ನಾಗಿ ಬಿದ್ದನು ಹಾಗೆಯೇ ಮಹಾಭಾಗ್ಯವತಿಯಾದ ಗಾಂಧಾರಿಯೂ, ಅಲ್ಲಿದ್ದ ಬೇರೆ ಎಲ್ಲಾ ಕೌರವಸ್ತ್ರೀಯರೂ ಈ ಕಠೋರವಾರ್ತೆಯನ್ನು ಕೇಳಿದೊಡನೆ ಮೂರ್ಛಿತರಾಗಿ ಬಿದ್ದರು ಪ್ರಜ್ಞೆತಪ್ಪಿ ನಿಶ್ಚೇಷ್ಟವಾಗಿ ಬಿದ್ದ ರಾಜಮಂಡಲವೆಲ್ಲ ಆಗ ಬಟ್ಟೆಯಲ್ಲಿ ಬರೆದಿಟ್ಟ ಚಿತ್ರದಂತಿದ್ದಿತು. ಇಷ್ಟರಲ್ಲಿ ಪುತ್ರಮರಣದುಃಖದಿಂದ ಪ್ರಜ್ಞೆತಪ್ಪಿ ಬಿದ್ದಿದ್ದ ಧೃತರಾಷ್ಟ್ರನಿಗೆ ಹೇಗೋ ಪ್ರಯಾಸದಿಂದ ಸ್ಮೃತಿಯು ಬಂದಿತು ಆತನು ದುಃಖದಿಂದ ನಡುಗುತ್ತ, ಸುತ್ತಲೂ ಕಣ್ಣಿಟ್ಟು ನೋಡಿ ವಿದುರನನ್ನು ಕುರಿತು “ಓ ಮಹಾಪ್ರಾಜ್ಞಾ! ವಿದುರಾ! ನಾನು ಹೇಳುವುದನ್ನು ಸಾವಧಾನವಾಗಿ ಕೇಳು ನಾನು ಅನಾಥನಾದೆನು ನನ್ನ ಪುತ್ರರೆಲ್ಲರೂ ನನ್ನನ್ನು ತೊರೆದು ಹೋದರು ಈಗ ನನಗೆ ನೀನೇ ಗತಿ” ಎಂದು ಹೇಳುತ್ತ, ತಿರುಗಿ ಕೆಳಗೆ ಬಿದ್ದುಬಿಟ್ಟನು ಆಗ ಕೆಲವು ಮಂದಿ ಬಂಧುಗಳು ತಣ್ಣೀರನ್ನು ತಂದು ಅವನ ಮುಖಕ್ಕೆ ಚಿಮುಕಿಸಿದರು. ಬೀಸಣಿಗೆಗಳಿಂದ ಬೀಸಿದರು ಇದರಿಂದ ಧೃತರಾಷ್ಟ್ರನಿಗೆ ಸ್ವಲ್ಪಹೊತ್ತಿನಮೇಲೆ ಮೆಲ್ಲಗೆ ತಿರುಗಿ ಪ್ರಜ್ಞೆ ಬಂದಿತು ಆಗ ಆತನು, ಒಂದು ಕೊಡದಲ್ಲಿ ಹಿಡಿದುಹಾಕಲ್ಪಟ್ಟ ಸರ್ಪದಂತೆ, ನಿಟ್ಟುಸಿರುಬಿಡುತ್ತ, ದುಃಖಾವೇಶದಿಂದ ಮಾತನಾಡದೆ ಮೌನದಿಂದಿದ್ದನು ಆ ರಾಜನನ್ನು ಕಂಡು ಸಂಜಯನೂ ರೋದಿಸ ತೊಡಗಿದನು ಕೀರ್ತಿಮತಿಯಾದ ಗಾಂಧಾರಿಯೂ, ಇತರ ಸ್ತ್ರೀಯರೂ, ‘ಹಾ ಹಾ!’ ಎಂದು ಗೋಳಾಡತೊಡಗಿದರು ಅಡಿಗಡಿಗೆ ಬುದ್ಧಿಕಲಗಿ ಪ್ರಜ್ಞೆತಪ್ಪುತ್ತಿದ್ದ ಧೃತರಾಷ್ಟ್ರನು ಸ್ವಲ್ಪಹೊತ್ತಿನಮೇಲೆ ವಿದುರನನ್ನು ಕುರಿತು “ವಿದುರಾ! ಗಾಂಧಾರಿಯೂ, ಇಲ್ಲಿರುವ ಎಲ್ಲಾ ಸ್ತ್ರೀಯರೂ, ಇನ್ನೂ ಇತರ ಬಂಧುಗಳೆಲ್ಲರೂ ಇಲ್ಲಿ ನಿಲ್ಲದೆ ಹೊರಟುಹೋಗಲಿ! ನನಗೆ ಬುದ್ಧಿಯು ಕೆಟ್ಟುಹೋಗಿದೆ” ಎಂದನು ಆಗ ವಿದುರನೂ ಅಡಿಗಡಿಗೆ ಪ್ರಜ್ಞೆತಪ್ಪಿ ಚೇತರಿಸಿಕೊಳ್ಳುತ್ತ, ಆ ಸ್ತ್ರೀಯರನ್ನು ಮೆಲ್ಲನೆ ಹೊರಗೆ ಕಳುಹಿಸಿಬಿಟ್ಟನು. ಆಮೇಲೆ ಅಲ್ಲಿದ್ದ ಸ್ತ್ರೀಯರೂ, ಪರಿಚಾರಿಕೆಯರೂ ಎಲ್ಲರೂ ದುಃಖದಿಂದ ಅರಸನನ್ನು ನೋಡುತ್ತ, ಆ ಸ್ಥಳವನ್ನು ಬಿಟ್ಟು

ಹೊರಗೆಹೊರಟರು ಆಮೇಲೆ ರಾಜನು ಪ್ರಜ್ಞೆ ತಿಳಿದು ತನ್ನಲ್ಲಿತಾನು "ಅಯ್ಯೋ! ಇನ್ನು ನನಗೆ ದಿಕ್ಕಾರು?" ಎಂದು ಚಿಂತಾಕುಲನಾಗಿ, ತನ್ನ ಮುಂದೆ ಕೈಜೋಡಿಸಿನಿಂತು ದುಃಖದಿಂದ ರೋದಿಸುತ್ತಿದ್ದ ಸಂಜಯ ನನ್ನು ಕುರಿತು, ಆ ಯುದ್ಧವಿವರಗಳನ್ನೆಲ್ಲ ತನಗೆ ಸವಿಸ್ತರವಾಗಿ ಹೇಳಬೇ ಕೆಂದು ಪ್ರಶ್ನಮಾಡಿದನು ಇಷ್ಟರಲ್ಲಿ ವಿದುರನು ಜ್ಞಾತಿಗಳನ್ನೂ, ಸ್ತ್ರೀಯರನ್ನೂ ಹೊರಗೆ ಕಳುಹಿಸಿಬಿಟ್ಟು, ದುಃಖದಿಂದ ಹಿಂತಿರುಗಿ ಅರ ಸನ ಸಮೀಪಕ್ಕೆ ಬಂದು, ಅಡಿಗಡಿಗೆ ದುಃಖದಿಂದ ಮೂರ್ಛಿತನಾಗುತಿದ್ದ ಆ ಅರಸನನ್ನು ಹಿತವಾಕ್ಯಗಳಿಂದ ಸಮಾಧಾನಗೊಳಿಸುತಿದ್ದನು

ಇದು ಮೊದಲನೆಯ ಅಧ್ಯಾಯವು

{ ಧೃತರಾಷ್ಟ್ರನು ದುರ್ಯೋಧನನ ಹಿಂದಿನ ಮಾತುಗಳನ್ನೆಲ್ಲ ನೆನೆಸಿಕೊಂಡು ಪ್ರಲಾಪಿಸಿದುದು }

ಓ ಮಹಾರಾಜಾ! ಸ್ತ್ರೀಯರೆಲ್ಲರೂ ಆ ಸ್ಥಳವನ್ನು ಬಿಟ್ಟು ದೂರ ಹೋದೊಡನೆಯೇ, ಅಂಬಿಕಾಪುತ್ರನಾದ ಧೃತರಾಷ್ಟ್ರನು, ಮಹಾದುಃಖ ದಿಂದ ಪ್ರಲಾಪಿಸತೊಡಗಿದನು ಬಿಸಿಬಿಸಿಯಾಗಿ ನಿಟ್ಟುಸಿರುಬಿಡುತ್ತ, ಅಡಿಗಡಿಗೆ ಕೈಗಳನ್ನೊದರುತ್ತ, ಮನಸ್ಸಿನಲ್ಲಿ ಏನೇನನ್ನೋ ಆಲೋಚಿ ಸುತ್ತ, ಕಡೆಗೆ ಸಂಜಯನನ್ನು ಕುರಿತು ಹೀಗೆ ಹೇಳುವನು "ಹಾ! ಕಷ್ಟ ಕಷ್ಟ! ಓ ಸೂತಾ! ಈಗಲೂ ಪಾಂಡವರು ಕ್ಷೇಮದಿಂದಲೂ, ನಿಶ್ಚಿಂತೆ ಯಿಂದಲೂ ಇರುವರೆಂದು ನೀನು ಹೇಳಿದೆಯಷ್ಟೆ! ಇದೇ ನನಗೆ ಎಲ್ಲ ಕ್ಕಿಂತಲೂ ಅಧಿಕದುಃಖಕರವಾದುದು ನನ್ನ ಎಲ್ಲಾ ಪುತ್ರರೂ ಮೃತ ರಾದರೆಂಬುದನ್ನು ಕೇಳಿಯೂ, ನನ್ನ ಮನಸ್ಸು ಸಹಸ್ರಶಕಲಗಳಾಗಿ ಭೇದಿ ಸದಿರುವುದಲ್ಲಾ? ಇದು ವಜ್ರದಿಂದಲೇ ಮಾಡಲ್ಪಟ್ಟಿರಬೇಕು ಆ ನನ್ನ ಪುತ್ರರು ಆಡುತಿದ್ದ ಮಾತುಗಳೂ, ಅವರ ಬಾಲಲೀಲೆಗಳೂ ಈಗಲೂ ನನ್ನ ಕಿವಿಯಲ್ಲಿ ನುಡಿಯುವಂತೆ ನೆನಪಿನಲ್ಲಿವೆ ಇಷ್ಟರಲ್ಲಿಯೇ ಅವರು ಸತ್ತ ಸುದ್ದಿಯನ್ನೂ ಕೇಳಿದುದಾಯಿತೆ? ಅಯ್ಯೋ! ಅದನ್ನು ಕೇಳಿ ನನ್ನ ಮನಸ್ಸು ಸಹಿಸಲಾರದಲ್ಲಾ! ಹುಟ್ಟುಕುರುಡನಾದ ನನಗೆ ಆ ನನ್ನ

ಪುತ್ರರ ರೂಪಗಳನ್ನು ಎಂದಿಗೂ ಕಣ್ಣಾರೆ ನೋಡುವ ಭಾಗ್ಯವಿಲ್ಲವಾದರೂ, ಹೆತ್ತ ಕರುಳಿನಿಂದ ಪೂರ್ಣವಾತ್ಸಲ್ಯವು ಅವರಲ್ಲಿ ನೆಲೆಗೊಂಡಿದ್ದಿತು ಓ ಶುದ್ಧಾತ್ಮನೇ! ಆ ಬಾಲಕರು ಎಳೆಯಪ್ರಾಯವನ್ನು ದಾಟಿ ಯೌವನಸ್ಥರಾದುದನ್ನೂ, ಅವರಿಗೆ ರಾಜ್ಯವು ಬಂದುದನ್ನೂ ಕೇಳಿದಾಗ ನನ್ನ ಸಂತೋಷಕ್ಕೆ ಪಾರವಿಲ್ಲ ಅವರೇ ಈಗ ತಮ್ಮ ತೇಜಸ್ಸನ್ನೂ, ಭಾಗ್ಯವನ್ನೂ, ಕೊನೆಗೆ ಪ್ರಾಣಗಳನ್ನೂ ನೀಗಿ ಮೃತರಾಗಿ ಬಿದ್ದುದನ್ನು ಕೇಳಿದ ನನಗೆ ಯಾವ ವಿಧದಿಂದಲೂ ಮನಶ್ಶಾಂತಿಯಿಲ್ಲದೆ ಬುದ್ಧಿಯು ಕಳವಳಿಸುತ್ತಿದೆ ವತ್ಸಾ! ಬಾ! ಕುಮಾರಾ! ಬಾ! ಬಾ! ರಾಜಶ್ರೇಷ್ಠಾ! ಅನಾಥನಾದೆನ್ನ ಮುದ್ದುಕಂದಾ! ಬಾ! ಮಹಾಬಾಹೂ! ನೀನು ಹೋದ ಮೇಲೆ ಇನ್ನು ನನಗೆ ಗತಿಯೇನು? ಅಪ್ಪಾ ಮಗೂ! ನೀನು ನಿನ್ನ ಸಹಾಯಕ್ಕಾಗಿ ಬಂದ ಅರಸರೆಲ್ಲರನ್ನೂ ಬಿಟ್ಟು ಪ್ರಾಕೃತಮನುಷ್ಯನಂತೆ ಹತನಾಗಿ ಭೂಮಿಯಲ್ಲಿ ಹೇಗೆ ಮಲಗಿರುವೆ? ಓ ಮಹಾರಾಜಾ! ವೀರಾ! ನಿನ್ನ ಜ್ಞಾತಿಗಳಿಗೂ, ಸಹೋದರರಿಗೂ ಮುಖ್ಯಗತಿಯಾಗಿದ್ದ ನೀನು ಮುದಿಗುರುಡನಾದ ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವೆ? ನನ್ನಲ್ಲಿ ನಿನಗಿರುವ ಕನಿಕರವು ಇಷ್ಟೆಯೇನು? ನಿನ್ನ ಪ್ರೀತಿಯೂ ಇಷ್ಟೆಯೇನು! ನಿನಗೆ ರಾಜರಲ್ಲಿಯೂ ಇಷ್ಟುಮಾತ್ರವೇ ಗೌರವವೇನು? ಯುದ್ಧಗಳಲ್ಲ ಎಂತವರಿಗೂ ಅಜೇಯನಾದ ನೀನು, ಆ ಪಾಂಡವರಿಂದ ಹೇಗೆ ಕೊಲ್ಲಲ್ಪಟ್ಟೆ? ಇನ್ನು ಮುಂದೆ (ಪ್ರಾತಃಕಾಲ) ಸಮಯದಲ್ಲಿ ಎದ್ದು 'ಅಪ್ಪಾ! ಅಪ್ಪಾ!' ಎಂದೂ 'ಮಹಾರಾಜಾ! ಲೋಕನಾಥಾ!' ಎಂದೂ ಅಡಿಗಡಿಗೆ ಯಾವನು ನನ್ನನ್ನು ಕರೆಯುವನು? ಹಾ! ಕುರುಕುಲನಂದನಾ! ಇನ್ನು ಮುಂದೆ ನಾನು ಯಾರನ್ನು ಪುತ್ರವಾತ್ಸಲ್ಯದಿಂದಪ್ಪಿಕೊಂಡು, ಆನಂದಬಾಷ್ಪಪೂರ್ಣವಾದ ಕಣ್ಣುಗಳಿಂದ ಆಜ್ಞೆಮಾಡಲಿ? ಹಿಂದೆ ನೀನು ನನ್ನ ಮುಂದೆ ಆಡುತಿದ್ದಂತೆ ಈಗ ಒಂದು ಮಾತನ್ನಾದರೂ ಬಾಯಿಬಿಟ್ಟು ಹೇಳಬಾರದೆ? "ನನಗಿರುವಷ್ಟು ವಿಶಾಲವಾದ ಭೂಮಿಯು ಪಾರ್ಥನಿಗಿಲ್ಲವಪ್ಪಾ!" ಎಂದು ಹೇಳುತ್ತಿದ್ದ ನಿನ್ನ ಹೆಮ್ಮೆಯ ಮಾತುಗಳನ್ನು ನಾನು ಹಿಂದೆ ಕೇಳಿದೆನಲ್ಲಾ! ಅಲ್ಲದೆ, ಭಗದತ್ತನು, ಕೃಪನು, ಶಲ್ಯನು, ಅವಂತಿದೇಶಾಧಿಪತಿ, ಜಯದ್ರಥನು, ಭೂರಿಶ್ರವಸ್ಸು, ಸೋಮದತ್ತನು, ಬಾಹ್ಲೀಕನು, ಅಶ್ವತ್ಥಾ

ಮನು, ಭೋಜನು, ಮಗಧದೇಶಾಧಿಪತಿ, ಬೃಹದ್ಬಲನು, ಕ್ರಾಧನು, ಶಕುನಿ, ಲಕ್ಷಮಂದಿ ಮ್ಲೇಚ್ಛರು, ಯವನರು, ಶಕರು, ಕಾಂಭೋಜಪತಿಯಾದ ಸುದಕ್ಷಿಣನು, ಹಾಗೆಯೇ ತ್ರಿಗರ್ತದೇಶಾಧಿಪತಿ, ತಾತನಾದ ಭೀಷ್ಮನು, ಭರದ್ವಾಜಕುಮಾರನಾದ ದ್ರೋಣನು, ಗೌತಮನು, ಶ್ರುತಾಯುಃ, ಅಶ್ರುತಾಯುಃ, ಶತಾಯುಃ, ಆಷ್ಯರ್ಶೃಂಗಿ, ಜಲಸಂಧನು, ಅಲಾಯುಧನೆಂಬ ರಾಕ್ಷಸನು (ಅಲಂಬುಸನು), ವೀರಬಾಹು, ಮಹಾರಥನಾದ ಸುಬಾಹು, ಮುಂತಾದ ಇನ್ನೂ ಅನೇಕರಾಜರು ನನ್ನ ನಿಮಿತ್ತವಾಗಿ ತಮ್ಮ ಪ್ರಾಣಗಳನ್ನೂ, ಧನಗಳನ್ನೂ ಲಕ್ಷಿಸದೆ ಹೋರಾಡಲು ಸಿದ್ಧರಾಗಿರುವರು ಅವರೆಲ್ಲರ ನಡುವೆ ನಿಂತು, ನನ್ನ ಭ್ರಾತೃಗಳಿಂದಲೂ ಪರಿವೃತನಾಗಿ, ಪಾಂಡವರನ್ನೂ, ಎಲ್ಲಾ ಪಾಂಚಾಲರನ್ನೂ, ಚೇದಿದೇಶದವರನ್ನೂ, ದ್ರೌಪದೀಕುಮಾರರನ್ನೂ, ಸಾತ್ಯಕಿಯನ್ನೂ, ಕುಂತಿಭೋಜನನ್ನೂ, ರಾಕ್ಷಸನಾದ ಘಟೋತ್ಕಚನನ್ನೂ ಇದಿರಿಸಿ ಯುದ್ಧಮಾಡುವೆನು ನಮ್ಮವರಲ್ಲಿ ಒಬ್ಬೊಬ್ಬನುಮಾತ್ರವೇ ಕೋಪಗೊಂಡು ಯುದ್ಧಕ್ಕಾಗಿ ಇದಿರಿಸಿದರೂ, ಪಾಂಡವರನ್ನು ತನ್ನ ಪರಾಕ್ರಮದಿಂದ ನಿಮಿಷಮಾತ್ರದಲ್ಲಿ ತಡೆದು ನಿಗ್ರಹಿಸಬಲ್ಲನು ಹಾಗಿರುವಾಗ ಪಾಂಡವರೊಡನೆ ಬದ್ಧದ್ವೇಷವುಳ್ಳವರೂ, ವೀರರೂ ಆದ ಇವರೆಲ್ಲರೂ ಒಟ್ಟುಗೂಡಿದಮೇಲೆ ಕೇಳಬೇಕೇ? ನಾನಿಲ್ಲದಿದ್ದರೂ ಅವರೇ ಪಾಂಡವರನ್ನು ಹಿಂಬಾಲಿಸಿ ಬರುವ ಎಲ್ಲಾ ವೀರರೊಡನೆ ಯುದ್ಧಮಾಡುವರು ಯುದ್ಧದಲ್ಲಿ ಅವರನ್ನೆಲ್ಲ ಕೊಂದೂ ಬರುವರು ನನ್ನೊಡನೆ ಸೇರಿ ಕರ್ಣನೊಬ್ಬನೇ ಪಾಂಡವರನ್ನು ಕೊಲ್ಲಬಲ್ಲನು ವೀರರಾದ ಅರಸರೆಲ್ಲ ನನ್ನ ಆಜ್ಞೆಯಂತೆ ನಿಂತಿರುವರು. ಅತ್ತಲಾಗಿ ಪಾಂಡವರಿಗೆ ಮುಖ್ಯಸ್ಥನೂ, ಬಲಶಾಲಿಯೂ ಆದ ವಾಸುದೇವನು ಕೂಡ ತಾನು ಯುದ್ಧದಲ್ಲಿ ಕೈಮಾಡುವುದಿಲ್ಲವೆಂದು ಹೇಳಿರುವನು' ಎಂದು ನೀನು ನನ್ನೊಡನೆ ಎಷ್ಟೋ ಸಂತೋಷದಿಂದ ಹೇಳುತ್ತಿದ್ದೆಯಲ್ಲವೆ? ಓ ಸೂತಾ! ದುರ್ಯೋಧನನು ನನ್ನ ಮುಂದೆ ಹೀಗೆಲ್ಲ ಹೇಳುತ್ತಿದ್ದುದರಿಂದ, ಪಾಂಡವರು ಯುದ್ಧದಲ್ಲಿ ಹತರಾದರೆಂದೇ ನಿಶ್ಚಯಿಸಿದ್ದೆನು ಅಂತಹ ವೀರರಾಜರಿಂದ ರಕ್ಷಿತರಾಗಿರುವಾಗಲೂ, ನನ್ನ ಪುತ್ರರು ಯುದ್ಧದಲ್ಲಿ ಕೊಲ್ಲಲ್ಪಟ್ಟರೆಂದಮೇಲೆ, ಇದೆಲ್ಲ ಕೇವಲ ಅದೃಷ್ಟಾಧೀನವಲ್ಲದೆ ಬೇರೇ

ನು? ಸಿಂಹವು ನರಿಯನ್ನಿದಿರಿಸಿ ಅದರಿಂದ ಕೊಲ್ಲಲ್ಪಟ್ಟಂತೆ ಭೀಷ್ಮನು ಯುದ್ಧದಲ್ಲಿ ಶಿಖಂಡಿಯನ್ನಿದಿರಿಸಿ ಕೊಲ್ಲಲ್ಪಟ್ಟನಲ್ಲಾ! ಮತ್ತು ಎಲ್ಲಾ ಶಸ್ತ್ರಾಸ್ತ್ರಗಳಲ್ಲಿ ನಿಸ್ಸೀಮನೂ, ಬ್ರಾಹ್ಮಣೋತ್ತಮನೂ ಆದ ದ್ರೋಣನೇ ಆ ಪಾಂಡವರಿಂದ ಕೊಲ್ಲಲ್ಪಟ್ಟನೆಂದಮೇಲೆ, ಅದೃಷ್ಟಕ್ಕಿಂತಲೂ ಜಯಾಪಜಯಕ್ಕೆ ಬೇರೆ ಕಾರಣವಿಲ್ಲ. ದಿವ್ಯಾಸ್ತ್ರಗಳನ್ನರಿತವನೂ, ಮಹಾಬಲಶಾಲಿಯೂ ಆದ ಕರ್ಣನೂ, ಭೂರಿಶ್ರವಸ್ಸೂ, ಸೋಮದತ್ತನೂ, ಬಾಹ್ಲೀಕನೂ ಕೊಲ್ಲಲ್ಪಟ್ಟರೆಂದರೆ, ಇದಕ್ಕೆ ನಮ್ಮ ದುರದೃಷ್ಟವಲ್ಲದೆ ಬೇರೇನುಕಾರಣವು! ಗಜಯುದ್ಧದಲ್ಲಿ ಅಸಮಾನನಾದ ಭಗದತ್ತನೂ, ಜಯದ್ರಥನೂ ಕೊಲ್ಲಲ್ಪಟ್ಟುದಕ್ಕೆ ವಿಧಿಯೇ ಕಾರಣವಲ್ಲದೆ ಮತ್ತೇನು? ಸುದಕ್ಷಿಣನೂ, ಪೌರವನಾದ ಜಲಸಂಧನೂ, ಶ್ರುತಾಯುವೂ, ಅಶ್ರುತಾಯುವೂ ಹತರಾದುದಕ್ಕೆ ದುರದೃಷ್ಟವಲ್ಲವೇ ಕಾರಣವು? ಹಾಗೆಯೇ ಮಹಾಬಲಶಾಲಿಯೂ ಶಸ್ತ್ರಪಾಣಿಗಳಾದ ವೀರರಿಗೆಲ್ಲ ಶ್ರೇಷ್ಠನೂ ಆದ ಪಾಂಡ್ಯನೂ ಪಾಂಡವರಿಂದ ಕೊಲ್ಲಲ್ಪಟ್ಟನು ಬೃಹದ್ಬಲನೂ, ಮಹಾಬಲಶಾಲಿಯಾದ ಮಾಗಧನೂ, ಬಿಲ್ಲಾಳುಗಳಿಗೆಲ್ಲ ಧ್ವಜಪ್ರಾಯನೆನಿಸಿದ ಉಗ್ರಾಯುಧನೂ, ಅವಂತಿದೇಶಾಧಿಪತಿಯೂ, ತ್ರಿಗರ್ತರಾಜನೂ, ಸಂಶಪ್ತಕರೂ ಹತರಾದರಲ್ಲವೆ? ಅಲಂಬುಸನೂ, ರಾಕ್ಷಸನಾದ ಅಲಾಯುಧನೂ, ಆರ್ಷ್ಯಶೃಂಗಿಯೂ ಕೊಲ್ಲಲ್ಪಟ್ಟರಲ್ಲವೆ? ನಾರಾಯಣರೂ, ಗೋಪಾಲಕರೂ, ಸಾವಿರಾರುಮಂದಿ ಮ್ಲೇಚ್ಛರೂ ಕೊಲ್ಲಲ್ಪಟ್ಟರಲ್ಲವೆ? ಸುಬಲಪುತ್ರನೂ, ಮಹಾಬಲಶಾಲಿಯೂ, ಅಪಾರಸೈನ್ಯವುಳ್ಳವನೂ, ಯುದ್ಧಸಮರ್ಥನೂ ಆದ ಶಕುನಿಯೂ ಹತನಾದನಲ್ಲವೆ? ಇವೆಲ್ಲಕ್ಕೂ ದುರದೃಷ್ಟವಲ್ಲದೆ ಬೇರೆ ಕಾರಣವೇನಿದೆ? ಇವರಲ್ಲದೆ ಇನ್ನೂ ಹಲವು ಮಂದಿ ಶಸ್ತ್ರವಿದ್ಯಾನಿಪುಣರೂ, ಯುದ್ಧಮತ್ತರೂ ಆದ ರಾಜಪುತ್ರರು ಆ ಯುದ್ಧದಲ್ಲಿ ಕೊಲ್ಲಲ್ಪಟ್ಟುದಕ್ಕೆ ವಿಧಿಯಲ್ಲದೆ ಬೇರೆ ಕಾರಣವೇನಿದೆ? ಓ ಸಂಜಯಾ! ಶೂರರೂ, ಮಹಾಧನುರ್ಧಾರಿಗಳೂ, ಅಸ್ತ್ರವಿದ್ಯಾನಿಪುಣರೂ, ಯುದ್ಧಮತ್ತರೂ, ಮಹೇಂದ್ರಸಮಾನ ಪರಾಕ್ರಮವುಳ್ಳವರೂ ಆದ ನಾನಾದೇಶದ ಕ್ಷತ್ರಿಯರು ಆ ಯುದ್ಧದಲ್ಲಿ ಕೊಲ್ಲಲ್ಪಟ್ಟುದಕ್ಕೆ ಅದೃಷ್ಟವಲ್ಲದೆ ಬೇರೇನುಕಾರಣವಿರುವುದು? ಮಹಾಬಲಶಾಲಿಗಳಾದ ನನ್ನ ಪುತ್ರರೂ, ಪೌತ್ರರೂ, ಬಂಧುಗಳೂ,

ಸಹೋದರರೂ ಕೊಲ್ಲಲ್ಪಟ್ಟರು. ಇವೆಲ್ಲ ವಿಧಿವಶದಿಂದಲೇ ಹೊರತು ಇದಕ್ಕೆ ಬೇರೆ ಕಾರಣವಿಲ್ಲ ಅದೃಷ್ಟದಿಂದಲೇ ಮನುಷ್ಯನು ಮುಂದಕ್ಕೆ ಬರುವನು ಅದೃಷ್ಟವುಳ್ಳವನೇ ಎಲ್ಲಾ ಶುಭವನ್ನೂ ಪಡೆಯುವನು ಸಂಜಯಾ! ಅಂತಹ ಭಾಗ್ಯವೂ ಇಲ್ಲದೆ, ಮಕ್ಕಳನ್ನೂ ಕಳೆದುಕೊಂಡ ನಾನು, ಈ ಮುಪ್ಪಿನಕಾಲದಲ್ಲಿ ಶತ್ರುವಶನಾಗಿ ಈ ಲೋಕದಲ್ಲಿ ಹೇಗೆ ಬದುಕಲಿ? ಈಗ ನನಗೆ ವನವಾಸವೇ ಉತ್ತಮವೆಂದು ತೋರುವುದು ಬಂಧುಗಳೆಲ್ಲ ಮೃತಪಟ್ಟಮೇಲೆ ಕೇಳುವವರಾರೂ ದಿಕ್ಕಿಲ್ಲದೆ, ರಕ್ಕೆಮುರಿದ ಹಕ್ಕಿಯಂತಿರುವ ನಾನು ಕಾನನಕ್ಕೇ ಹೋಗುವೆನು ಈ ಸ್ಥಿತಿಯಲ್ಲಿ ನನಗೆ ವನವಾಸಕ್ಕಿಂತಲೂ ಉತ್ತಮವಾದುದು ಬೇರೊಂದಿಲ್ಲ ಯಾವನ ಯುದ್ಧದಲ್ಲಿ ದುರ್ಯೋಧನನೂ, ಶಲ್ಯನೂ, ದುಶ್ಶಾಸನ ವಿವಿಂಶತಿ ವಿಕರ್ಣರೂ ಕೊಲ್ಲಲ್ಪಟ್ಟರೋ, ಯಾವನೊಬ್ಬನಿಂದಲೇ ನನ್ನ ಮೂರುಮಂದಿ ಮಕ್ಕಳೂ ಹತರಾದರೋ, ಆ ಭೀಮಸೇನನ ಅಟ್ಟಹಾಸದ ಕೂಗನ್ನು ಇನ್ನು ನಾನು ಹೇಗೆ ಕಿವಿಯಿಂದ ಕೇಳಲಿ? ಮೊದಲೇ ದುಃಖದಿಂದ ತಪಿಸುತ್ತಿರುವ ನಾನು, ಈಗ ದುರ್ಯೋಧನನನ್ನು ಕೊಂದುದರಿಂದ ಮತ್ತಷ್ಟು ವೀರವಾದವಾಡುತ್ತಿರುವ ಆ ಬೀಮಸೇನನ ಕ್ರೂರವಾಕ್ಯಗಳನ್ನು ಇನ್ನು ಕೇಳಲಾರನು'' ಎಂದನು

ಹೀಗೆ ಧೃತರಾಷ್ಟ್ರರಾಜನು ತನ್ನ ಬಂಧುಗಳೂ, ಪುತ್ರರೂ ಹೋದ ದುಃಖದಿಂದ ಕುದಿಯುತ್ತ, ಅಡಿಗಡಿಗೆ ಮೂರ್ಛೆಬೀಳುತಿದ್ದನು ಸ್ವಲ್ಪ ಹೊತ್ತಿನಮೇಲೆ ಉಷ್ಣವಾದ ನಿಟ್ಟುಸಿರುಬಿಡುತ್ತ ತನಗಾದ ಅವಮಾನವನ್ನು ನೆನೆಸಿಕೊಂಡು, ತಿರುಗಿ ಸಂಜಯನನ್ನು ಕುರಿತು ಹೀಗೆ ಹೇಳುವನು

"ಓ ಸಂಜಯಾ! ಭೀಷ್ಮದ್ರೋಣರೂ, ಸೂತಪುತ್ರನೂ ಮೃತರಾದಮೇಲೆ, ನಮ್ಮವರು ಯಾವನನ್ನು ಸೇನಾಪತಿಯನ್ನಾಗಿ ಮಾಡಿಕೊಂಡರು? ಅಯ್ಯೋ! ಯಾವನನ್ನು ಸೇನಾಧಿಪತ್ಯಕ್ಕೆ ತಂದರೇನು? ಪಾಂಡವರು ಅಲ್ಪಕಾಲದೊಳಗಾಗಿಯೇ ಅವನನ್ನೂ ಕೊಂದುಬಿಡುವರು ಇದು ನಿಶ್ಚಯವು ನೀನು ನೋಡುತ್ತಿರುವಾಗಲೇ ಭೀಷ್ಮನು ಅರ್ಜುನನಿಂದ

ಕೊಲ್ಲಲ್ಪಟ್ಟನು. ಎಲ್ಲರ ಕಣ್ಣೆದಿರಾಗಿ ದ್ರೋಣನೂ ಹತನಾದನು ರಾಜ ಸಮೂಹಗಳೆಲ್ಲ ನೋಡುತ್ತಿರುವಂತೆಯೇ ಮಹಾಪರಾಕ್ರಮವುಳ್ಳ ಸೂತ ಪುತ್ರನೂ ಅರ್ಜುನನಿಂದ ಹತನಾದನು 'ದುರ್ಯೋಧನನ ದೌಷ್ಟ್ಯ ದಿಂದ ಪ್ರಜೆಗಳೆಲ್ಲ ನಾಶವಾಗುವ'ರೆಂದು ಹಿಂದೆಯೇ ಮಹಾತ್ಮನಾದ ವಿದು ರನು ಹೇಳಿದುದನ್ನು ನಾನು ಕೇಳಿದ್ದೆನು ಕೆಲವರು ದೂರದೃಷ್ಟಿಯಿಂದ ಚೆನ್ನಾಗಿ ಪರಾಮರ್ಶಿಸಿ ನೋಡಲಾರರು ನೋಡಿದರೂ ಕೆಲವರು ಮೂಢ ರಾಗಿಯೇ ನಡೆಯುವರು ಮೂಢನಾದ ನನ್ನ ವಿಷಯದಲ್ಲಿ ಆ ವಿದುರನ ವಾಕ್ಯಗಳೆಲ್ಲ ಹಾಗೆಯೇ ಫಲಿಸಿದುವು ಧರ್ಮಾತ್ಮನೂ, ದೀರ್ಘದರ್ಶಿಯೂ, ಸತ್ಯವಾದಿಯೂ ಆದ ವಿದುರನು ಹೇಳಿದಂತೆಯೇ ಎಲ್ಲವೂ ನಡೆಯಿತು ಓ ಸಂಜಯಾ! ವಿಧಿವಶದಿಂದ ಬುದ್ಧಿಗೆಟ್ಟ ನಾನು ನದೆಸಿದ ದುರ್ನ ಯಕ್ಕೆ, ಏನೇನು ಫಲಗಳುಂಟಾದುವೋ ಅವನ್ನೆಲ್ಲ ವಿವರಿಸಿ ಹೇಳು ಕರ್ಣನು ಹತನಾದಮೇಲೆ ನಮ್ಮ ಸೈನ್ಯಕ್ಕೆ ಯಾವನು ಅಧಿಪತಿಯಾದನು? ಯಾವ ರಥಿಕನು ಅರ್ಜುನಕೃಷ್ಣರನ್ನಿದಿರಿಸಿ ಹೋದನು? ಮದ್ರರಾಜ ನಿಗೆ ಬಲಗಡೆಯಲ್ಲಿ ಸೇನಾಸಮೂಹದ ರಕ್ಷಣೆಯಲ್ಲಿದ್ದವರು ಯಾರು? ಆತನ ಹಿಂಭಾಗದಲ್ಲಿದ್ದವರಾರು? ಅವನ ಎಡಗಡೆಯ ಸೈನ್ಯವನ್ನು ರಕ್ಷಿಸು ತ್ತಿದ್ದವರು ಯಾರು? ಅಲ್ಲಿ ನೀವೆಲ್ಲರೂ ನೋಡುತ್ತಿರುವಾಗಲೇ ಮಹಾ ರಥನಾದ ಮದ್ರರಾಜನೂ, ನನ್ನ ಮಗನೂ ಪಾಂಡವರಿಂದ ಹೇಗೆ ಕೊಲ್ಲ ಲ್ಪಟ್ಟರು? ನಮ್ಮ ಭರತಕುಲಕ್ಕುಂಟಾದ ಮಹಾಕ್ಷಯವನ್ನೆಲ್ಲ ಯಥಾ ವತ್ತಾಗಿ ವಿವರಿಸಿಬಿಡು! ನನ್ನ ಮಗನಾದ ದುರ್ಯೋಧನನು ಯುದ್ಧ ದಲ್ಲಿ ಮರಣಗೊಂಡ ಬಗೆ ಹೇಗೆ? ಅತ್ತಲಾಗಿ ಪಾಂಚಾಲರೂ, ಧೃಷ್ಟ ದ್ಯುಮ್ನನೂ, ಶಿಖಂಡಿಯೂ, ಎಲ್ಲಾ ದ್ರೌಪದೀಕುಮಾರರೂ ಹೇಗೆ ಕೊಲ್ಲ ಲ್ಪಟ್ಟರು? ಪಾಂಡವರೂ, ಕೃಷ್ಣನೂ, ಸಾತ್ಯಕಿಯೂ, ಕೃಪಕೃತವರ್ಮಾ ಶ್ವತ್ಥಾಮರೂ ಮೃತರಾಗದೆ ಬದುಕಿದ ಬಗೆಯೇನು? ಓ ಸಂಜಯಾ! ಆ ಯುದ್ಧವು ಯಾವ ರೀತಿಯಲ್ಲಿ, ಹೇಗೆಹೇಗೆ ನಡೆಯಿತೋ, ಅವೆಲ್ಲವನ್ನೂ ವಿವರವಾಗಿ ಕೇಳಲು ಕುತೂಹಲಗೊಂಡಿರುವೆನು ಅದನ್ನೆಲ್ಲ ಹೇಳಲು ನೀನೇ ಸಮರ್ಥನು" ಎಂದನು

ಇದು ಎರಡನೆಯ ಅಧ್ಯಾಯವು

# ಪ್ರಕ್ಷಿಪ್ತಾಧ್ಯಾಯವು.

{ ಕರ್ಣನು ಕೊಲ್ಲಲ್ಪಟ್ಟೊಡನೆಯೇ ಪಾಂಡವರ ಭಯದಿಂದೋಡುತ್ತಿರುವ ಸೈನ್ಯವನ್ನು ಹಿಂತಿರುಗಿಸಿ, ದುರ್ಯೋಧನನು ತಿರುಗಿ ಯುದ್ಧಕ್ಕೆ ನಿಂತುದು }

ಆಗ ಸಂಜಯನು " ಓ ರಾಜಾ ! ಉಭಯಸೈನ್ಯಗಳೂ ಒಂದನ್ನೊಂದು ತಾಗಿದ ಮೇಲೆ ಕೌರವ ಪಾಂಡವರಲ್ಲಿ ನಡೆದ ಮಹಾನಾಶವೃತ್ತಾಂತವನ್ನು ಲಾಲಿಸು ಮಹಾತ್ಮನಾದ ಪಾರ್ಥನಿಂದ ಸೂತಪುತ್ರನು ಕೊಲ್ಲಲ್ಪಟ್ಟೊಡನೆ, ನಮ್ಮ ಸೈನ್ಯಗಳು ಓಡಲಾರಂಭಿಸಿದುವು ಅಡಿಗಡಿಗೆ ಕೂಗುತ್ತಿದ್ದರೂ ನಿಲ್ಲದೆ ಸೈನ್ಯಗಳು ಓಡುತ್ತಿರುವುದನ್ನು ನೋಡಿ, ಪಾರ್ಥನು ಮೇಲೆಮೇಲೆ ಸಿಂಹನಾದಮಾಡುತ್ತಿದ್ದನು ಆಗ ನಿನ್ನ ಕುಮಾರರೆಲ್ಲರಿಗೂ ಮನಸ್ಸಿನಲ್ಲಿ ಮಹಾಭೀತಿ ಹುಟ್ಟಿತು ಕರ್ಣನು ಹತನಾದಮೇಲೆ, ನಿನ್ನಕಡೆಯಲ್ಲಿ ಯಾವನೊಬ್ಬ ಯುದ್ಧವೀರನಿಗೂ ತನ್ನ ಸೈನ್ಯವನ್ನು ಒಟ್ಟುಗೂಡಿಸುವುದಕ್ಕಾಗಲಿ, ತನ್ನ ಪರಾಕ್ರಮವನ್ನು ವ್ಯಕ್ತಪಡಿಸುವುದಕ್ಕಾಗಲಿ ಧೈರ್ಯವು ಹುಟ್ಟಲಿಲ್ಲ ದಡವೇ ಕಾಣಿಸದ ಮತ್ತು ಆಳವಾದ ಸಮುದ್ರಮಧ್ಯದಲ್ಲಿ ಹಡಗು ಮುರಿದೊಡನೆ, ವ್ಯಾಪಾರಿಗಳ ಅವಸ್ಥೆಯುಹೇಗೋ ಹಾಗೆ, ಕರ್ಣನು ಅರ್ಜುನನಿಂದ ಮೃತನಾದೊಡನೆ ಯುದ್ಧಭಟರು ಹಿಂದುಮುಂದು ತೋರದೆ ತತ್ತಳಿಸುತಿದ್ದರು ಸೂತಪುತ್ರನು ಕೊಲ್ಲಲ್ಪಟ್ಟೊಡನೆ ನಿನ್ನಕಡೆಯ ಸೈನಿಕರೆಲ್ಲರೂ ಭಯಪಟ್ಟು, ಬಾಣದಿಂದ ನೊಂದು ದಿಕ್ಕುಕಾಣದೆ, ತಮ್ಮನ್ನು ಯಾರಾದರೂ ಕಾಪಾಡಿದರೆ ಸಾಕೆಂದು ಬಾಯಿಬಾಯಿಬಿಡುತ್ತ, ಸಿಂಹದಿಂದೋಡಿಸಲ್ಪಟ್ಟ ಜಿಂಕೆಗಳಂತೆ ಭಯದಿಂದ ತತ್ತಳಿಸುತಿದ್ದರು ಅರ್ಜುನನಿಂದ ಬಡಿದೋಟಿಸಲ್ಪಟ್ಟ ನಮ್ಮವರೆಲ್ಲರೂ ಕೊಂಬುಮುರಿದ ಗೂಳಿಗಳಂತೆಯೂ, ಹಲ್ಲುಕಿತ್ತ ಸರ್ಪಗಳಂತೆಯೂ ಸಾಯಂಕಾಲದಲ್ಲಿ ಹಿಂತಿರುಗಿದರು ಓ ರಾಜಾ ! ಕರ್ಣನು ಬಿದ್ದೊಡನೆ ನಿನ್ನ ಕಡೆಯಲ್ಲಿ ಅನೇಕ ಮಹಾವೀರರು ಹತರಾಗಿ, ಉಳಿದವರು ಬಾಣದಿಂದ ಗಾಯಪಟ್ಟು, ದಿಕ್ಕುದಿಕ್ಕಿಗೆ ಓಡಿದರು ನಿನ್ನವರು ಕವಚಗಳು ಹರಿದು ಭಯದಿಂದ ಮೈಮರೆತು ಓಡುತ್ತಿರುವಾಗ, ಬುದ್ಧಿಗೆಟ್ಟು ತಮ್ಮ ಕಡೆಯಲ್ಲಿಯೇ ಒಬ್ಬರಿಗೊಬ್ಬರು ಹೊಡೆದಾಡಿದರು ಭಯದಿಂದ ದಿಕ್ಕುದಿಕ್ಕುಗಳನ್ನು ನೋಡುತ್ತ "ಅದೋ ! ಅರ್ಜುನನು ನನ್ನನ್ನು ಬೆನ್ನಟ್ಟಿ ಬರುವನು ಅದೋ ! ಭೀಮನು ನನ್ನನ್ನು ಬೆನ್ನಟ್ಟಿಬರುವನು " ಎಂದು ಕೂಗುತ್ತ ಬೆಜ್ಜರದಿಂದೋಡುವಾಗ, ಅಲ್ಲಲ್ಲಿ ಸುಕ್ಕಿ ಬೀಳುತಿದ್ದರು ! ಅಲ್ಲಲ್ಲಿ ಕೆಲವು ಮಹಾರಥರು ತಮಗೆ ಸಿಕ್ಕಿದ ಕುದುರೆಗಳನ್ನೂ, ಕೆಲವರು ಆನೆಗಳನ್ನೂ, ಕೆಲವರು ರಥಗಳನ್ನೂ ಏರಿಕೊಂಡು, ಕಾಲಾಳುಗಳನ್ನು ಲಕ್ಷ್ಯಮಾಡದೆ ಅಲ್ಲಲ್ಲಿಯೇ ಬಿಟ್ಟು ವೇಗದಿಂದ ಪಲಾಯನ ಮಾಡಿಬಿಟ್ಟರು ಹೀಗೆ ಓಡುತ್ತಿರುವಾಗ, ಆನೆಗಳಿಂದ ರಥಗಳೂ, ರಥಗಳಿಂದ ಅಶ್ವಸೈನಿಕರೂ, ಅಶ್ವಗಳಿಂದ ಪದಾತಿಗಳೂ, ಚೂರ್ಣೀಭೂತವಾದುವು ಕರ್ಣನು ಮೃತ

ನಾದೊಡನೆಯೇ ನಿಮ್ಮ ಕಡೆಯವರು, ದುಷ್ಟಮೃಗಗಳಿಂದಲೂ, ಕಳ್ಳರಿಂದಲೂ ತುಂಬಿದ ಕಾಡಿನಲ್ಲಿ ತನ್ನ ಗುಂಪಿನಿಂದಗಲಿದ ವ್ಯಾಪಾರಿಯಂತೆ ತತ್ತಳಿಸುತಿದ್ದರು ತಮ್ಮ ಮೇಲಿದ್ದ ಮಾವಟಿಗರು ಸತ್ತು, ಸುಂಡಿಲುಗಳು ಮುರಿದ ಎಷ್ಟೋ ಆನೆಗಳು ದಿಕ್ಕುಗೆಟ್ಟು ಓಡುತಿದ್ದುವು ಅರ್ಜುನನ ಬೆಜ್ಜರದಿಂದ ಕೌರವರು ಪ್ರಪಂಚವೆಲ್ಲವನ್ನೂ ಅರ್ಜುನಮಯವಾಗಿಯೇ ಕಂಡರು ಭೀಮಸೇನನ ಭಯದಿಂದ ಓಡುತ್ತಿರುವ ತನ್ನ ಸೈನಿಕರನ್ನು ನೋಡಿ ದುರ್ಯೋಧನನು ಹಾಹಾಕಾರಮಾಡುತ್ತ ತನ್ನ ಸಾರಥಿಯನ್ನು ಕುರಿತು “ಓ ಸಾರಥೀ ! ಬೇಗನೆ ರಥವನ್ನು ಮುಂದೆ ಬಿಡು ! ಸೇನೆಯಹಿಂದೆ ಯುದ್ಧಮಾಡುತ್ತಿರುವ ನಾನು ಮುಂದೆ ಹೋಗಿ ಧನುರ್ಧಾರಿಯಾಗಿ ನಿಂತರೆ, ಪಾರ್ಥನು ನನ್ನನ್ನು ಎಂದಿಗೂ ಮೀರಿಸಲಾರನು ಮಹಾಸಮುದ್ರವಾದರೂ ತನ್ನ ದಡವನ್ನು ಮೀರಲಾರದಂತೆ, ಧನಂಜಯನು ಯುದ್ಧದಲ್ಲಿ ನನ್ನನ್ನು ಮೀರಿಸಲು ಶಕ್ತನಲ್ಲ ಕೃಷ್ಣಸಮೇತನಾದ ಆ ಅರ್ಜುನನನ್ನೂ, ಗರ್ವಿಯಾದ ಆ ಭೀಮನನ್ನೂ, ಇನ್ನೂ ಇತರ ಶತ್ರುಗಳನ್ನೂ ಕೊಂದು, ಕರ್ಣನವಿಷಯದಲ್ಲಿ ನಾನು ಹೊತ್ತ ಋಣವನ್ನು ಈಗಲೆ ತೀರಿಸಿಕೊಳ್ಳುನೆನು” ಎಂದನು ವೀರಯೋಗ್ಯವಾದ ಆ ಕೌರವರಾಜನ ಮಾತುಗಳನ್ನು ಕೇಳಿ ಸಾರಥಿಯು, ಕುದುರೆಗಳನ್ನು ನಡೆಯಿಸಿದನು ಗಜಾಶ್ವರಥಗಳೆಲ್ಲ ಹೋಗಿ, ಉಳಿದಿದ್ದ ಇಪ್ಪತ್ತುಸಾವಿರ ಮಂದಿ ಪದಾತಿಗಳು ಆಗ ಮೆಲ್ಲಗೆ ದುರ್ಯೋಧನನನ್ನು ಹಿಂಬಾಲಿಸಿ ಓಡಿಬರುತ್ತಿದ್ದರು ಭೀಮಸೇನನೂ, ಧೃಷ್ಟದ್ಯುಮ್ನನೂ ಚತುರಂಗಸೇನೆಗಳೊಡನೆ ಅವರನ್ನು ಸುತ್ತಿಕೊಂಡು ಬಾಣಗಳಿಂದ ಹೊಡೆಯುತ್ತಿದ್ದರು ಅವರಲ್ಲರೂ ಸರಿಧೈರ್ಯದಿಂದ ಧೃಷ್ಟದ್ಯುಮ್ನನೊಡಗೂಡಿದ ಭೀಮಸೇನನನ್ನಿದಿರಿಸಿ ನಿಂತರು ಬೇರೆ ಕೆಲವರೂ ಆಗ ಭೀಮಧೃಷ್ಟದ್ಯುಮ್ನರನ್ನು ಹೆಸರುಹಿಡಿದು ಕರೆಯುತ್ತ ಇದಿರಾಗಿ ಬಂದರು ಆಗ ಭೀಮನು ಅತಿಕೋಪದಿಂದ ತನ್ನ ರಥವನ್ನು ಬಿಟ್ಟು ಕೆಳಕ್ಕಿಳಿದು, ಗದಾಯುಧವನ್ನು ಕೈಯಲ್ಲಿ ಹಿಡಿದು ಯುದ್ಧಮಾಡುವುದಕ್ಕಾರಂಭಿಸಿದನು ಭೀಮನು ಧರ್ಮಯುದ್ಧಮಾಡುವವನಾದುದರಿಂದ, ತಾನು ರಥಾರೋಹಿತನಾಗಿ ಕುಳಿತು ನೆಲದಮೇಲೆ ನಿಂತಿರುವ ಶತ್ರುವೀರರನ್ನಿದಿರಿಸಿ ಯುದ್ಧಮಾಡಲು ಸಮ್ಮತಿಸಲಿಲ್ಲ ಕಾಲದಂಡವನ್ನು ಕೈಯಲ್ಲಿ ಹಿಡಿದ ಯಮನಂತೆ ಅವನು ಗದಾಪಾಣಿಯಾಗಿ ನಮ್ಮ ಕಡೆಯವರೆಲ್ಲರನ್ನೂ ಕೊಲ್ಲುತಿದ್ದನು ನಮ್ಮ ಕಡೆಯ ಕಾಲಾಳುಗಳೆಲ್ಲ ಆಗ ತಮ್ಮ ಪ್ರಾಣಗಳನ್ನೂ, ಬಂಧುವರ್ಗವನ್ನೂ ಲಕ್ಷ್ಯಮಾಡದೆ, ಬೆಂಕಿಯಮೇಲೆ ಬೀಳುವ ಪತಂಗಗಳಂತೆ ಭೀಮನನ್ನಿದಿರಿಸಿ ಓಡಿದರು ಆದರೇನು ? ಅವರು ಭೀಮನ ಉಗ್ರರೂಪವನ್ನು ಕಂಡೊಡನೆ ಯಮನನ್ನು ಕಂಡ ಪ್ರಾಣಿಗಳಂತೆ ಭೀತಿಯಿಂದ ನಡುಗಿದರು ಆಗ ಭೀಮನು ಗಿಡುಗನಂತೆ ಸಂಚರಿಸುತ್ತ, ಕತ್ತಿಯಿಂದಲೂ, ಗದಾಯುಧದಿಂದಲೂ ನಿಮ್ಮ ಕಡೆಯ ಇಪ್ಪತ್ತೊಂದುಸಾವಿರಮಂದಿ ವೀರರನ್ನೂ ಬಡಿದು ಕೊಂದನು. ಹೀಗೆ ಭೀಮನು ಆ ಕಾಲಾಳುಗಳನ್ನು ಕೊಂದಮೇಲೆಯೂ ಧೃಷ್ಟದ್ಯುಮ್ನನನ್ನು ಮುಂದೆ ಬಿಟ್ಟುಕೊಂಡು ತಿರುಗಿ ಯುದ್ಧಕ್ಕೆ ನಿಂತನು. ಧನಂಜಯನೂ ಆಗ ರಥ

ಸೈನ್ಯವನ್ನಿದಿರಿಸಿದನು ಹಾಗೆಯೇ ಒಂದುಕಡೆಯಲ್ಲಿ ನಕುಲಸಹದೇವರೂ, ಸಾತ್ಯಕಿಯೂ ದುರ್ಯೋಧನನ ಸೈನ್ಯವನ್ನು ನಾಶಮಾಡುತ್ತ, ಶಕುನಿಯನ್ನು ಹಿಡಿಯುವುದಕ್ಕಾಗಿ ಹೊರಟು, ಅಸಂಖ್ಯಾತರಾದ ಅವನ ಕುದುರೆಯವೀರರನ್ನೆಲ್ಲ ತೀಕ್ಷ್ಣಬಾಣಗಳಿಂದ ಕೊಂದು, ವೇಗದಿಂದ ಆತನನ್ನಿದಿರಿಸಿ ನಿಂತರು ಉಭಯಪಕ್ಷದವರಿಗೂ ದೊಡ್ಡ ಯುದ್ಧವು ನಡೆಯುತಿದ್ದಿತು ಆಗ ಧನಂಜಯನು ಲೋಕಪ್ರಸಿದ್ಧವಾದ ತನ್ನ ಗಾಂಡೀವದನುಸ್ಸನ್ನು ಒದರುತ್ತ, ರಥಸೈನ್ಯವನ್ನು ಪ್ರವೇಶಿಸಿದಾಗ, ಬಿಳಿಯ ಕುದುರೆಗಳನ್ನು ಹೂಡಿ ಕೃಷ್ಣನಿಂದ ನಡೆಸಲ್ಪಡುತ್ತಿದ್ದ ಆ ಅರ್ಜುನನ ರಥವನ್ನೂ, ಅರ್ಜುನನನ್ನೂ ಕಂಡಾಗಲೇ ನಿಮ್ಮಕಡೆಯವರು ಭಯದಿಂದೋಡಿದರು ರಥಿಕರು ತಮ್ಮ ರಥಗಳನ್ನೂ ಕುದುರೆಗಳನ್ನೂ ಕಳೆದುಕೊಂಡರೂ, ಅರ್ಜುನನ ಬಾಣಗಳು ನಾನಾಕಡೆಗಳಿಂದ ಬಂದು ತಮ್ಮ ಮೇಲೆ ಕವಿಯುತಿದ್ದಾಗಲೂ ಲಕ್ಷ್ಯಮಾಡದೆ, ಇಪ್ಪತ್ತುಸಾವಿರಮಂದಿ ರಥಿಕರು ಕಾಲುನಡೆಯಿಂದಲೇ ಪಾರ್ಥನನ್ನಿದಿರಿಸಿದರು ಮಹಾರಥಿಕನಾದ ದೃಷ್ಟದ್ಯುಮ್ನನು ಆ ಕಾಲ್ಪಡೆಯನ್ನು ಕೊಂದು ಭೀಮಸೇನನನ್ನು ಮುಂದೆ ಬಿಟ್ಟುಕೊಂಡು ವೇಗದಿಂದ ಬಂದು ಜಯಶಾಲಿಯಾಗಿ ಮೆರೆದನು ಪಾರಿವಾಳದ ಬಣ್ಣವುಳ್ಳ ಕುದುರೆಗಳಿಂದಲೂ, ಕೋವಿದಾರಧ್ವಜದಿಂದಲೂ ಕೂಡಿದ ರಥವನ್ನೇರಿಬಂದ ಆ ದೃಷ್ಟದ್ಯುಮ್ನನನ್ನು ಕಂಡಾಗಲೇ ನಿಮ್ಮಕಡೆಯವರು ಭಯದಿಂದೋಡಿದರು ಮಾದ್ರೀಕುಮಾರರಿಬ್ಬರೂ ಸಾತ್ಯಕಿಯೊಡಗೂಡಿ, ರಭಸದಿಂದ ಅಸ್ತ್ರಗಳನ್ನು ಪ್ರಯೋಗಿಸುತಿದ್ದ ಗಾಂಧಾರರಾಜನನ್ನು ಬೆನ್ನಟ್ಟಿ ಅವನನ್ನಿದಿರಿಸಿದರು ಮತ್ತೊಂದು ಕಡೆ ಚೇಕಿತಾನನೂ, ಶಿಖಂಡಿಯೂ, ದ್ರೌಪದೀಪುತ್ರರೂ ಸೇರಿ ನಿನ್ನಕಡೆಯ ದೊಡ್ಡ ಸೈನ್ಯವನ್ನು ಕೊಂದು ಉತ್ಸಾಹದಿಂದ ಶಂಖಗಳನ್ನೂದಿದರು ನಿನ್ನವರು ಆಗ ಭಯದಿಂದ ಹಿಂತಿರುಗಿ ಓಡುತ್ತಿದ್ದರೂ ಬಿಡದೆ, ಅವರನ್ನು ಹೂಡೆಯುತ್ತ ಮಹಾವೃಷಭಗಳು ವೃಷಭಗಳನ್ನು ಬೆನ್ನಟ್ಟುವಂತೆ ಅವರು ಹಿಂಬಾಲಿಸಿ ಹೋಗುತ್ತಿದ್ದರು ಒಂದುಕಡೆ ಅರ್ಜುನನು ಅಲ್ಲಲ್ಲಿ ಉಳಿದಿದ್ದ ನಿನ್ನ ಸೈನ್ಯಗಳಮೇಲೆ ತೀವ್ರಬಾಣಗಳನ್ನು ಬಿಡುತಿದ್ದನು ಆಗ ನೆಲದಿಂದೆದ್ದ ಧೂಳಿಯಿಂದ ಪ್ರಪಂಚವೆಲ್ಲ ಕತ್ತಲೆ ಕವಿದಂತಾಗಿ, ಏನೂ ಕಾಣಿಸದೆ ಕೇವಲ ಬಾಣಮಯವಾಗಿ ತೋರಿತು ಆಗ ದುರ್ಯೋಧನನು ತನ್ನ ಕಡೆಯ ವೀರರೆಲ್ಲ ಬಾಧಿತರಾಗುತಿದ್ದುದನ್ನು ಕಂಡು ಆ ಸೈನ್ಯದ ಸಮೀಪಕ್ಕೆ ತ್ವರೆಯಿಂದೋಡಿಬಂದು, ಬಲಿಯೆಂಬವನು ದೇವತೆಗಳನ್ನು ಯುದ್ಧಕ್ಕೆ ಕರೆದಂತೆ ಪಾಂಡವರನ್ನು ಯುದ್ಧಕ್ಕೆ ಕರೆದನು ಅವರೂ ಮಹಾಕೋಪಗೊಂಡು ಹಲವುಬಗೆಯ ಶಸ್ತ್ರಗಳನ್ನು ಪ್ರಯೋಗಿಸುತ್ತ ಅಡಿಗಡಿಗೆ ಗರ್ಜಿಸುತಿದ್ದರು ಮತ್ತು ಎಲ್ಲರೂ ಒಟ್ಟುಗೂಡಿ ತಮ್ಮನ್ನಿದಿರಿಸಿಬಂದ ದುರ್ಯೋಧನನ ಸಮೀಪಕ್ಕೆ ವೇಗದಿಂದ ಬಂದರು ಆಗ ದುರ್ಯೋಧನನು ಸ್ವಲ್ಪವೂ ಹಿಂಜರಿಯದೆ, ಅನೇಕಶತ್ರುಗಳನ್ನು ಬಾಣಗಳಿಂದ ಹತಮಾಡಿದನು ಪಾಂಡವರೆಲ್ಲರೂ ಒಂದಾಗಿ ಸೇರಿಯೂ ಆಗ ನಿನ್ನ ಕುಮಾರನನ್ನು ತಡೆಯಲಾರದಾದರು ಆಗ ನಿನ್ನ ಪುತ್ರನ ಅತ್ಯಾಶ್ಚರ್ಯಕರವಾದ ಪೌರುಷವನ್ನು ನಾವು

ಕಂಡೆವು ಆಗ ದುರ್ಯೋಧನನು, ಅಧಿಕವಾಗಿ ಗಾಯಪಟ್ಟು ಯುದ್ಧವನ್ನು ಬಿಟ್ಟು ಓಡಿಹೋಗುವ ಉದ್ದೇಶದಿಂದ ಸ್ವಲ್ಪದೂರದವರೆಗೆ ಪಲಾಯನಮಾಡಿದ ತನ್ನ ಸೈನ್ಯವನ್ನು ನೋಡಿ ಅದರಲ್ಲಿದ್ದ ಮುಖ್ಯ ವೀರರನ್ನು ತಡೆದುನಿಲ್ಲಿಸಿ, ಅವರನ್ನು ಉತ್ಸಾಹಗೊಳಿಸುತ್ತ "ಓ ವೀರರೇ ! ಹೀಗೇಕೆ ಓಡುವಿರಿ ? ನೀವು ಎಲ್ಲಿಗೆ ಹೋದರೆತಾನೇ ಪಾಂಡವರು ನಿಮ್ಮನ್ನು ಕೊಲ್ಲಲಾರರೆಂದು ತಿಳಿಯುವಿರಿ ? ಅಂತಹ ಸ್ಥಳವು ಈ ಭೂಮಿಯಲ್ಲಾಗಲಿ, ಬೆಟ್ಟಗಳಲ್ಲಾಗಲಿ ಇರುವುದಾಗಿ ನನಗೆ ಕಾಣಲಿಲ್ಲ. ನೀವು ಓಡುವುದರಿಂದೇನು ಪ್ರಯೋಜನವು ? ಅವರ ಸೇನೆಯೋ ಅಲ್ಪಸಂಖ್ಯಾಕವಾದುದು ಈಗ ಕೃಷ್ಣಾರ್ಜುನರೂ ಅಧಿಕವಾಗಿ ಪೆಟ್ಟುತಿಂದಿರುವರು ನಮಗೇ ಜಯವು ನಿಶ್ಚಯವು ಹಾಗಿಲ್ಲದೆ ನೀವು ಬೆನ್ನುತೋರಿಸಿ ಓಡುವುದಾದರೆ, ನೀವು ಸೋತಿರೆಂದು ತಿಳಿದು, ಪಾಂಡವರು ನಿಮ್ಮನ್ನು ಹಿಂಬಾಲಿಸಿ ಬಂದು ಕೊಲ್ಲುವರು ನೀವು ಪಾಪಕ್ಕೂ ಪಾತ್ರರಾಗುವಿರಿ ಹೀಗಿರುವಾಗ ನಿಮಗೆ ಈ ಯುದ್ಧದಲ್ಲಿಯೇ ವಧೆಯು (ಸಂಭವಿಸುವುದು) ಕ್ಷೇಮಕರವಲ್ಲವೆ ? ಕ್ಷತ್ರಿಯಧರ್ಮರೀತಿಗನುಸಾರವಾಗಿ ಯುದ್ಧಮಾಡುವವರಿಗೆ ಯುದ್ಧದಲ್ಲುಂಟಾಗುವ ಮರಣವೇ ಶ್ರೇಯಸ್ಕರವು ಮೃತರಾದಮೇಲೆ ದುಃಖವೇನೂ ತಿಳಿಯದು ಪ್ರಾಣವನ್ನು ಬಿಟ್ಟಮೇಲೆ ಶಾಶ್ವತವಾದ ಸುಖವುಂಟಾಗುವುದು ಈ ಯುದ್ಧಕ್ಕೆ ಬಂದಿರುವ ಕ್ಷತ್ರಿಯರೆಲ್ಲರೂ ಕೇಳಿರಿ. ಎಲೈ ಹೇಡಿಗಳೇ ! ನೀವು ನಮ್ಮ ಶತ್ರುವಾದ ಭೀಮಸೇನನ ಕೈವಶರಾಗುವಿರಿ ನಮ್ಮ ಪೂರ್ವಿಕರಿಂದ ಅನುಷ್ಠಿತವಾದ ಕ್ಷತ್ರಧರ್ಮವನ್ನು ಈಗ ನೀವು ಬಿಡುವುದು ಸರಿಯಲ್ಲ ಕ್ಷತ್ರಿಯನಿಗೆ ಯುದ್ಧದಿಂದ ಭಯಪಟ್ಟೋಡುವುದಕ್ಕಿಂತಲೂ ಅಧಿಕ ಪಾಪಕೃತ್ಯವು ಬೇರೊಂದಿಲ್ಲ ಓ ಕೌರವರೇ ! ನಮಗೆ ಯುದ್ಧಧರ್ಮವನ್ನು ಬಿಟ್ಟರೆ ಸ್ವರ್ಗಕ್ಕೆ ಹೋಗಲು ಉತ್ತಮವಾದ ದಾರಿಯು ಬೇರೊಂದಿಲ್ಲ ಚಿರಕಾಲಪ್ರಯತ್ನದಿಂದ ಸಾಧಿಸಬಹುದಾದ ಉತ್ತಮಲೋಕಗಳನ್ನು ಯುದ್ಧದಿಂದ ಒಡನೆಯೇ ಪಡೆಯಬಹುದು ' ಎಂದನು

ರಾಜನ ಆ ವಾಕ್ಯಗಳನ್ನು ಕೇಳಿ ಮಹಾರಥರಾದ ಕ್ಷತ್ರಿಯರೆಲ್ಲರೂ ಅದನ್ನಭಿನಂದಿಸುತ್ತ, ತಮ್ಮಲ್ಲಿತಾವೇ ನಾಚಿಕೆಪಟ್ಟು ಪರಾಕ್ರಮಪ್ರದರ್ಶನೆಯಲ್ಲಿ ಉತ್ಸಾಹಗೊಂಡವರಾಗಿ, ತಿರುಗಿ ಪಾಂಡವರನ್ನು ಇದಿರಿಸಲು ಹಿಂತಿರುಗಿದರು ತಿರುಗಿ ದೇವಾಸುರಯುದ್ಧಕ್ಕೆ ಸಮಾನವಾದ ಘೋರಯುದ್ಧವು ಪ್ರಾರಂಭಿಸಿತು ಇತ್ತಲಾಗಿ ನಿನ್ನ ಪುತ್ರನಾದ ದುರ್ಯೋಧನನೇ ಮುಂದಾಳಾಗಿ, ಅತ್ತಲಾಗಿ ಧರ್ಮರಾಜನನ್ನು ಮುಂದಿಟ್ಟುಕೊಂಡು ಬಂದ ಪಾಂಡವಸೈನ್ಯವನ್ನು ಸೇನಾಸಮೇತನಾಗಿ ಇದಿರಿಸಿ ನಿಂತನು

**ಇದು ಪ್ರಕ್ಷಿಪ್ತಪಾಠಾಧ್ಯಾಯವು.**



ಕೃಪನು ಉಭಯಸೈನ್ಯದ ಬಲಾಬಲಗಳನ್ನು ದುರ್ಯೋಧನನಿಗೆ ತಿಳಿಸಿ, ಆಗಲಾದರೂ ಪಾಂಡವರೊಡನೆ ಸಮಾಧಾನ ಮಾಡಿಕೊಳ್ಳುವಂತೆ ಹೇಳಿದುದು

ಸಂಜಯನು “ ಓ ರಾಜಾ ! ಕೌರವಪಾಂಡವರ ಅನ್ಯೋನ್ಯಯುದ್ಧದಿಂದುಂಟಾದ ಮಹಾಕ್ಷಯವನ್ನೆಲ್ಲ ವಿವರಿಸುವೆನು ಸಾವಧಾನವಾಗಿ ಕೇಳು ಮಹಾತ್ಮನಾದ ಅರ್ಜುನನಿಂದ ಕರ್ಣನು ಮೃತನಾದಮೇಲೆ, ನಿನ್ನ ಕಡೆಯ ಸೈನ್ಯಗಳು ಭಯದಿಂದ ಹಿಂತಿರುಗಿದುವು ಬಾರಿಬಾರಿಗೂ ಅವರನ್ನು ಹುರಿಗೊಳಿಸಿ ಕರತಂದು ನಿಲ್ಲಿಸಿದರೂ, ಅರ್ಜುನನ ಬಾಣಗಳಿಗೆ ಭಯಪಟ್ಟು ತಿರುಗಿತಿರುಗಿ ಓಡುತಿದ್ದರು ಇದನ್ನು ನೋಡಿ ನಿನ್ನ ಮಗನಿಗೆ ದುಃಖದಿಂದ ಬುದ್ಧಿಯೇ ಕೆಟ್ಟುಹೋದಂತಾಗಿ ಅವನಿಗೂ ಬೇಸರವು ಹುಟ್ಟಿತು ಅರ್ಜುನನ ಪರಾಕ್ರಮವನ್ನು ನೋಡಿ ಸೈನ್ಯಗಳೆಲ್ಲ ಭಯದಿಂದ ತತ್ತಳಿಸುತಿದ್ದುವು ವೀರರಲ್ಲರೂ ಭಯದಿಂದ ಚಿಂತಾಕುಲರಾಗಿ ಯೋಚಿಸುತಿದ್ದರು ಬಾಣದಿಂದ ನೊಂದ ಸೈನ್ಯಗಳು ನಾನಾಕಡೆಗಳಲ್ಲಿ ದೈನ್ಯದಿಂದ ಕೂಗಿಡುತಿದ್ದುವು ರಾಜರುಗಳ ಗುರುತುಗಳೇ ಸಿಕ್ಕದಂತೆ ವಿಕಾರವಾಗಿದ್ದುವು ಅಲ್ಲಲ್ಲ ಸತ್ತುಬಿದ್ದ ರಾಜರನ್ನೂ, ಮುರಿದುಬಿದ್ದ ಧ್ವಜಗಳನ್ನೂ, ಮೃತವಾದ ಆನೆ ಕುದುರ ಕಾಲಾಳುಗಳನ್ನೂ ನೋಡುವಾಗ, ಆ ರಣರಂಗವು ಕಾಲರುದ್ರನ ಕ್ರೀಡಾಸ್ಥಾನದಂತೆ ಮಹಾಭಯಂಕರವಾಗಿದ್ದಿತು ಕೌರವಪಕ್ಷದಲ್ಲ ನೂರಾರುಮಂದಿ ರಾಜರು ಹೆಸರೇ ಇಲ್ಲದಂತಾಗಿರುವುದನ್ನು ನೋಡಿ, ಆಚಾರ್ಯನಾದ ಕೃಪನಿಗೆ ಮನಸ್ಸಿನಲ್ಲಿ ಬಹಳ ಕನಿಕರವು ಹುಟ್ಟಿತು. ಆಗ ಅವನು ದುರ್ಯೋಧನನನ್ನು ನೋಡಿ ದುಃಖದಿಂದ ಹೀಗೆಂದು ಹೇಳುವನು

“ ಕುರುಜಾತಾ ! ದುರ್ಯೋಧನಾ ! ನಾನು ಹೇಳುವ ಮಾತುಗಳನ್ನು ಲಾಲಿಸು ! ನಿನಗೆ ಸಮ್ಮತವಾದರ ಅದರಂತೆ ನಡೆಸು. ಓ ಕ್ಷತ್ರಿಯೋತ್ತಮಾ ! ಕ್ಷತ್ರಿಯರಿಗೆ ಯುದ್ಧಧರ್ಮಕ್ಕಿಂತಲೂ ಉತ್ತಮವಾದ ಧರ್ಮವಿಲ್ಲ ಅದಕ್ಕಾಗಿಯೇ ಕ್ಷತ್ರಿಯರು ಯುದ್ಧವನ್ನು ಮಾಡುವರು ಕ್ಷತ್ರಿಯದರ್ಮಕನುಸಾರವಾಗಿ ಬದುಕತಕ್ಕವನಿಗೆ, ತನಗಿದಿರಾದವನು ಸ್ವಂತಮಗ

ನಾಗಿರಲಿ, ಸಹೋದರನಾಗಿರಲಿ, ತಂದೆಯಾಗಿರಲಿ, ಸೋದರಳಿಯನಾಗಿರಲಿ, ಮಾವನಾಗಿರಲಿ, ಹಾಗೆಯೇ ಸಂಬಂಧಿಗಳಾಗಿರಲಿ, ಬಂಧುಗಳಾಗಿರಲಿ, ಯುದ್ಧಕ್ಕೆ ನಿಂತು ಅವರನ್ನಿದಿರಿಸಬೇಕಾದುದೇ ಧರ್ಮವು ಯುದ್ಧದಲ್ಲಿ ಅವರನ್ನು ಕೊಲ್ಲುವುದಾದರೂ ಉತ್ತಮಧರ್ಮವೇಹೊರತು ಓಡಿಹೋಗುವುದು ಕೇವಲಅಧರ್ಮವು ಜೀವದಮೇಲೆ ಅಭಿಲಾಷೆಯುಳ್ಳವರು ಓಡಿಹೋಗಿ ಬದುಕುವುದೂ ಘೋರವಾದ ಬದುಕೇ! ಆದುದರಿಂದ ಈಗ ನಿನಗೊಂದು ಹಿತವಾದವನ್ನು ನಾನು ಸೂಕ್ಷ್ಮವಾಗಿ ತಿಳಿಸುವೆನು ಕೇಳು ನಮ್ಮಲ್ಲಿ ಭೀಷ್ಮದ್ರೋಣರು ಹತರಾದರು! ಮಹಾತ್ಮನಾದ ಕರ್ಣನೂ, ಜಯದ್ರಥನೂ ಹತರಾದರು! ನಿನ್ನ ಸಹೋದರರೂ ಸತ್ತರು! ನಿನ್ನ ಮಗನಾದ ಲಕ್ಷ್ಮಣನೂ ಕೊಲ್ಲಲ್ಪಟ್ಟನು ಇನ್ನು ನಾವು ಯಾರನ್ನಾಶ್ರಯಿಸಬೇಕು? ನಮಗೆ ಇನ್ನು ಯಾರು ಸಹಾಯಮಾಡುವರು? ನಾವು ಯಾರಲ್ಲಿ ಮುಖ್ಯಭಾರವನ್ನಿಟ್ಟು ರಾಜ್ಯಕ್ಕಾಗಿ ಆಸೆಪಟ್ಟೆವೋ, ಆ ಶೂರರಲ್ಲ ತಮ್ಮ ಶರೀರವನ್ನು ಬಿಟ್ಟು, ಬ್ರಹ್ಮವಿತ್ತುಗಳ ಗತಿಯನ್ನು ಪಡೆದರು ಈಗ ನಾವು ಗುಣಾಢ್ಯರಾದ ಅಂತಹ ಮಹಾರಥರಿಂದ ವಿಮುಕ್ತರಾದೆವು ಅನೇಕ ರಾಜರನ್ನು ನಾಶಕ್ಕೆ ಗುರಿಮಾಡಿ ಈ ದೀನದೆಶೆಗೆ ಬಂದೆವು ಶ್ರೀಕೃಷ್ಣನನ್ನೇ ತನಗೆ ಸಾರಥಿಯನ್ನಾಗಿಟ್ಟುಕೊಂಡು, ದೇವತೆಗಳಿಗೂ ಅಜೇಯನೆನಿಸಿದ ಆ ಭೀಭತ್ಸುವಾದರೋ, ನಮ್ಮ ಕಡೆಯ ಕೌರವರಲ್ಲರೂ ಬದುಕಿದ್ದಾಗಲೇ, ಅವರಿಂದ ಸೋಲಿಸಲ್ಪಡಲಾರದೆ ಹೋದನು ಇಂದ್ರನ ಧನುಸ್ಸಿಗೂ, ವಜ್ರಾಯುಧಕ್ಕೂ ಸಾಟಿಯಾದ ಗಾಂಡೀವವನ್ನೂ, ಇಂದ್ರಧ್ವಜದಂತೆ ಮಹೋನ್ನತವಾದ ಆ ಪಾರ್ಥನ ಹನುಮದ್ಧ್ವಜವನ್ನೂ ನೋಡಿದಮಾತ್ರದಿಂದಲೇ, ನಮ್ಮ ದೊಡ್ಡ ಸೈನ್ಯವು ಭಯದಿಂದೋಡಿಬಿಟ್ಟಿತು ಭೀಮನ ಸಿಂಹನಾದದಿಂದಲೂ, ಪಾಂಚಜನ್ಯದ ಶಬ್ದದಿಂದಲೂ, ಗಾಂಡೀವಧ್ವನಿಯಿಂದಲೂ ಈಗಲೂ ನಮ್ಮ ಮನಸ್ಸು ಮರುಳುಗೊಳ್ಳುತ್ತಿದೆ ಮಿಂಚಿನಂತೆ ಕಣ್ಣಾಲೆಗಳನ್ನು ಕೋರೈಸುವ ಅರ್ಜುನನ ಗಾಂಡೀವವು ಈಗಲೂ ಅಲಾತಚಕ್ರದಂತೆ ನಮ್ಮ ಮುಂದೆ ಆಡುವಂತಿದೆ ಸುವರ್ಣಾಲಂಕೃತವಾದ ಆ ಗಾಂಡೀವವು ಮೇಘಸಮೂಹಗಳಲ್ಲಿ ತೋರುವ ಮಿಂಚಿನಂತೆ ಈಗಲೂ ಎಲ್ಲಾ ದಿಕ್ಕುಗಳಲ್ಲಿ

ಯೂ ಕಾಣುತ್ತಿರುವುದು ಗಾಳಿಯಿಂದ ನಡೆಸಲ್ಪಡುವ ಮೇಘದಂತೆ ಶ್ರೀಕೃಷ್ಣನ ನಿಯಮಕ್ಕೊಳಪಟ್ಟು ನಡೆಯುತ್ತ, ಸರ್ವಾಸ್ತ್ರವಿಶಾರದನೆನಿಸಿದ ಆ ಅರ್ಜುನನು, ಬೇಸಗೆಯಲ್ಲಿ ಪ್ರಬಲವಾದ ಕಾಡುಗಿಚ್ಚು ಕಾಡನ್ನು ಹೇಗೋಹಾಗೆ ನಿನ್ನ ಸೇನೆಯನ್ನೆಲ್ಲ ದಹಿಸಿಬಿಟ್ಟನು ಇಂದ್ರಸಮಾನನಾದ ಆ ಅರ್ಜುನನು ಆನೆಯು, ತಾವರೆಯ ಕೊಳವನ್ನು ಹೇಗೋಹಾಗೆ ನಮ್ಮ ಸೈನ್ಯವನ್ನೆಲ್ಲ ಕಲಗಿಸಿಬಿಟ್ಟನಲ್ಲವೆ? ತನ್ನ ಬಿಲ್ಲಿನ ಶಬ್ದದಿಂದಲೇ ವೀರರನ್ನೆಲ್ಲ ನಡುಗಿಸುತಿದ್ದ ಆ ಪಾರ್ಥನು, ಜಿಂಕೆಯ ಹಿಂಡುಗಳನ್ನು ಹೆದರಿಸುವ ಸಿಂಹದಂತೆ ಆಗ ನಮಗೆ ಕಾಣಿಸಿದನಲ್ಲವೆ? ಪ್ರಪಂಚಕ್ಕೆಲ್ಲ ಅಸಮಾನರಾದ ಮಹಾಧನುರ್ಧಾರಿಗಳೂ, ಶಸ್ತ್ರವಿದ್ಯಾನಿಪುಣರೂ, ಕವಚಧಾರಿಗಳೂ ಆದ ಆ ಕೃಷ್ಣಾರ್ಜುನರಿಬ್ಬರೂ ಎಲ್ಲಾ ಜನರ ನಡುವೆ ಹೇಗೆ ಬೆಳಗುತ್ತಿದ್ದರೋ ಅದನ್ನು ನೀನು ಕಾಣೆಯಾ? ಈದಿನವೂ ಸೇರಿ ಕಳೆದ ಹದಿನೇಳುದಿನಗಳೂ ಅತಿಘೋರವಾದ ಯುದ್ಧವು ನಡೆದುದಾಯಿತು ಬಿರುಗಾಳಿಯಿಂದ ಚದರಿಸಲ್ಪಟ್ಟ ಶರತ್ಕಾಲದ ಮೇಘದಂತೆ, ಅರ್ಜುನನಿಂದ ನಿನ್ನಕಡೆಯ ಸೈನ್ಯಗಳೆಲ್ಲ ನಾನಾಕಡೆಗಳಿಗೆ ಚದರಿಸಲ್ಪಟ್ಟವು ದೊಡ್ಡ ಸಮುದ್ರಮಧ್ಯದಲ್ಲಿ ಒಡೆದು ಮುಳುಗಿಹೋಗುವ ಹಡಗಿನಂತೆ ನಿನ್ನ ಸೈನ್ಯವೆಲ್ಲ ಅರ್ಜುನನಿಂದ ಛಿನ್ನಭಿನ್ನವಾಯಿತು ರಾಜಾ! ಆಗ ನಿನ್ನ ಸೂತಪುತ್ರನೆಲ್ಲಹೋಗಿದ್ದನು? ದ್ರೋಣನೂ, ದ್ರೋಣಪುತ್ರನೂ ಎಲ್ಲಿಗೆ ಹೋಗಿದ್ದರು? ನಾನೂ ನೀನೂ ಎಲ್ಲಿದ್ದೆವು? ಕೃತವರ್ಮನೆಲ್ಲಿದ್ದನು? ತನ್ನ ಇತರ ಸಹೋದರರೊಡಗೂಡಿದ ದುಶ್ಶಾಸನನೆಲ್ಲಿದ್ದನು? ಜಯದ್ರಥನು ತನ್ನ ಬಾಣಕ್ಕೆ ಸಿಕ್ಕದಂತೆ ಅವಿತುಕೊಂಡಿದ್ದು, ಆಮೇಲೆ ಸಿಕ್ಕಿಬಿದ್ದುದನ್ನು ನೋಡಿದೊಡನೆ ಅರ್ಜುನನು, ನಿಮ್ಮ ಸಂಬಂಧಿಗಳೂ, ಭ್ರಾತೃಗಳೂ, ಜತೆಗಾರರೂ, ಮಾತುಲರೂ, ಇವರೆಲ್ಲರೂ ನೋಡುತ್ತಿರುವಾಗಲೇ ಎಲ್ಲರನ್ನೂ ಮೀರಿಬಂದು, ಎಲ್ಲಾ ವೀರಪ್ರಪಂಚದ ತಲೆಯನ್ನೇ ಮೆಟ್ಟುವಂತೆ ಆ ಜಯದ್ರಥನನ್ನು ಕೊಂದುಬಿಟ್ಟನಲ್ಲವೆ? ನಾವು ಇನ್ನು ಯಾರ ಬಲವನ್ನು ನಂಬಿ ಯುದ್ಧಮಾಡಬಹುದು? ಈ ಪ್ರಪಂಚದಲ್ಲಿ ಅರ್ಜುನನನ್ನು ಜಯಿಸುವ ಸಾಮರ್ಥ್ಯವುಳ್ಳ ಮನುಷ್ಯನು ಯಾವನಿರುವನು? ಮಹಾತ್ಮನಾದ ಅವನ ದಿವ್ಯಾಸ್ತ್ರಮಹಿಮೆಗಳನ್ನು ನೀನೂ ತಿಳಿದಿ

ರುವೆ ಗಾಂಡೀವಧನುಸ್ಸಿನ ಶಬ್ದವೇ ನಮ್ಮೆಲ್ಲರ ಧೈರ್ಯವನ್ನೂ ತಲ್ಲಣ
ಗೊಳಿಸುವುದಲ್ಲವೆ? ಈಗಲೋ ನಾಯಕನಿಲ್ಲದ ನಮ್ಮ ಸೇನೆಯು, ಚಂದ್ರ
ನಿಲ್ಲದ ರಾತ್ರಿಯಂತೆಯೂ, ಆನೆಯಿಂದ ಮುರಿಯಲ್ಪಟ್ಟ ತೀರವೃಕ್ಷಗಳುಳ್ಳ
ಶುಷ್ಕನದಿಯಂತೆಯೂ ನನಗೆ ತೋರುತ್ತಿರುವುದು ಹೀಗೆ ನಾಯಕ
ನನ್ನು ಕಳೆದುಕೊಂಡ ನಮ್ಮ ಸೇನಾಮಧ್ಯದಲ್ಲಿ, ಆ ಅರ್ಜುನನು, ಕಾಡು
ಗಳಲ್ಲಿ ವ್ಯಾಪಿಸುವ ದಾವಾಗ್ನಿಯಂತೆ ಸ್ವೇಚ್ಛೆಯಾಗಿ ಸಂಚರಿಸಬಲ್ಲನು.
ಸಾತ್ಯಕಿ ಭೀಮಸೇನರ ವೇಗವು ಎಂತಹ ಬೆಟ್ಟವನ್ನಾದರೂ ಬೇಧಿಸಬ
ಲ್ಲುದು ಸಮುದ್ರಗಳನ್ನೂ ಬತ್ತಿಸುವುವು ಓ ರಾಜಾ! ಹಿಂದೆ ಭೀಮ
ಸೇನನು ದ್ಯೂತಸಭಾಮಧ್ಯದಲ್ಲಿ ನುಡಿದ ವಾಕ್ಯಗಳೆಲ್ಲವನ್ನೂ ಪ್ರಾಯಕ
ವಾಗಿ ನಡೆಸಿಬಿಟ್ಟನು ಇನ್ನೂ ಅಲ್ಪಸ್ವಲ್ಪವಾಗಿ ಉಳಿದುದನ್ನೂ ಸಾರ್ಥ
ಕಪಡಿಸುವುದರಲ್ಲಿರುವನು ಕರ್ಣನು ಜೀವಂತನಾಗಿ ನೋಡುತ್ತಿರುವಾ
ಗಲೇ, ದುರ್ಜಯವಾದ ಆ ಪಾಂಡವಸೇನೆಯು ಅರ್ಜುನನ ಗಾಂಡೀವದಿಂದ
ನಿರಪಾಯವಾಗಿ ರಕ್ಷಿಸಲ್ಪಟ್ಟಿತಲ್ಲವೆ? ಸತ್ಪುರುಷರಾದ ಪಾಂಡವರ ವಿಷಯ
ದಲ್ಲಿ ನಿಷ್ಕಾರಣವಾಗಿ ನೀವು ನಡೆಸಿದ ತಪ್ಪಿತಗಳಿಗೆಲ್ಲ ತಕ್ಕ ಫಲವು ಈಗ
ನಿಮಗೆ ಪ್ರಾಪ್ತವಾಯಿತು ಅಪ್ಪಾ! ದುರ್ಯೋಧನಾ! ನಿನ್ನ ಸ್ವಪ್ರ
ಯೋಜನಕ್ಕಾಗಿ ಎಷ್ಟೋ ಪ್ರಯತ್ನದಿಂದ ಅನೇಕ ರಾಜಲೋಕಗಳ
ನ್ನೆಲ್ಲ ಇಲ್ಲಿಗೆ ತಂದೊಡ್ಡಿದೆ! ಎಲ್ಲರೂ ಸತ್ತರು! ಉಳಿದವರೂ, ನೀನೂ
ಈಗ ಪ್ರಾಣಸಂಶಯಕ್ಕೊಳಗಾದಿರಿ ದುರ್ಯೋಧನಾ! ಈಗಲಾದರೂ
ನೀನು ನಿನ್ನ ಆತ್ಮವನ್ನು ಕಾಪಾಡಿಕೊಳ್ಳುವನಾಗು ನೀನಾದರೂ ಉಳಿ
ದರೆ ಎಲ್ಲವೂ ಉಳಿದಹಾಗೆಯೇ! ಎಲ್ಲಕ್ಕೂ ಆತ್ಮವೇ ಆಧಾರವು ಪಾತ್ರೆ
ಯು ಒಡೆದುಹೋದರೆ, ಅದರೊಳಗಿರುವ ಪದಾರ್ಥಗಳು ಚದರಿಹೋಗುವು
ವಲ್ಲವೆ? ಕ್ಷೀಣಗತಿಗೆ ಬಂದವನು ತನ್ನ ಸಮಾನನೊಡನೆಯೂ, ತನಗಿಂತ
ಲೂ ಪ್ರಬಲವಾದವನೊಡನೆಯೂ ಸಂಧಿಯನ್ನು ಮಾಡಿಕೊಳ್ಳಬೇಕು
ಪ್ರಬಲದಶೆಗೆ ಬರುತ್ತಿರುವವನು ಕ್ಷೀಣಿಸುವವನೊಡನೆ ಯುದ್ಧವನ್ನೇ
ಹೂಡಬೇಕು ಇದು ದೇವಗುರುವಾದ ಬೃಹಸ್ಪತಿಯಿಂದ ಉಕ್ತವಾದ
ನೀತಿ ಈಗ ನಾವು ಪಾಂಡುಪುತ್ರರಿಗಿಂತಲೂ ಬಲಶಕ್ತಿಗಳಲ್ಲಿ ತಗ್ಗಿರು
ವೆವು ಆದುದರಿಂದ ನಮಗೆ ಈಗ ಪಾಂಡುಪುತ್ರರೊಡನೆ ಸಂಧಿಯೇ ತಕ್ಕು

ದೆಂದೆಣಿಸುವೆನು ಯಾವನು ಶ್ರೇಯಸ್ಸಿಗೆ ದಾರಿಯನ್ನು ತಿಳಿಯುವುದಿಲ್ಲವೋ, ಮತ್ತು ತನ್ನ ಕ್ಷೇಮವನ್ನು ಅಲಕ್ಷಿಸುವನೋ ಆತನು ಬಹುಶೀಘ್ರದಲ್ಲಿ ರಾಜ್ಯದಿಂದ ಭ್ರಷ್ಟನಾಗುವನು ಆತನಿಗೆ ಯಾವ ಶ್ರೇಯಸ್ಸೂ ಲಭಿಸದು. ಓ ರಾಜಾ! ಈಗಲೇ ನಾವು ಧರ್ಮರಾಜನಿಗೆ ನಮ್ರರಾಗಿ ರಾಜ್ಯವನ್ನು ಪಡೆದಪಕ್ಷದಲ್ಲಿ ನಮಗೆ ಮೇಲುಂಟಾಗುವುದು ಮೂರ್ಖಭಾವವನ್ನು ಹಿಡಿದರೆ ಅದು ನಡೆಯಲಾರದು ಈಗ ಮೂಢತನದಿಂದ ಅವಮಾನಕ್ಕೀಡಾಗುವುದು ಉಚಿತವಲ್ಲ ನಿನ್ನ ತಂದೆ ಧೃತರಾಷ್ಟ್ರನ, ಮತ್ತು ಕೃಷ್ಣನ ಮಾತಿನಲ್ಲಿ ವಿಶ್ವಾಸವುಳ್ಳ ಯುಧಿಷ್ಠಿರನು, ಈಗಲೂ ದ್ವೇಷವನ್ನು ಬಿಟ್ಟು ನಿನ್ನನ್ನು ರಾಜ್ಯದಲ್ಲಿ ಸ್ಥಾಪಿಸುವನು ಯಾರನ್ನೂ ತನಗೆ ಶತ್ರುಗಳೆಂದೆಣಿಸದೆ ಅಜಾತಶತ್ರುವೆಂಬ ಬಿರುದುಳ್ಳ ಯುಧಿಷ್ಠಿರನು ಹಿರಿಯರ ವಾಕ್ಯಗಳಲ್ಲಿ ಶ್ರದ್ಧೆಯುಳ್ಳವನು. ಧಾರ್ಮಿಕನಾದ ಅವನು ಧೃತರಾಷ್ಟ್ರನ ಮಾತುಗಳನ್ನು ಅವಮತಿಸಲಾರನು ಆ ಧರ್ಮರಾಜನ ತಮ್ಮಂದಿರೂ, ಆತನ ಮಾತಿನಂತೆ ನಡೆಯತಕ್ಕವರು ಇದರಲ್ಲಿ ಸಂದೇಹವಿಲ್ಲ. ಈಗ ಧರ್ಮರಾಜನು ಜಯಶಾಲಿಯಾಗಿದ್ದರೂ, ಕೃಷ್ಣನು ಹೇಗೆ ಹೇಳುವನೋ ಅದರಂತೆ ನಡೆಯುವನು ಅರ್ಜುನನೂ, ಭೀಮಸೇನನೂ, ಇನ್ನೂ ಇತರ ಸಹೋದರರೂ ಅದರಂತೆ ನಡೆಯುವರು ಹಾಗೆಯೇ ಧರ್ಮರಾಜನ ಮಾತನ್ನು ಕೃಷ್ಣನಾದರೂ ಮೀರುವುದಿಲ್ಲ ಧರ್ಮಪುತ್ರನೂ ಧೃತರಾಷ್ಟ್ರ ವಾಸುದೇವರ ಮಾತುಗಳನ್ನು ಮೀರಿ ನಡೆಯಲಾರನೆಂದೇ ನನ್ನ ನಂಬಿಕೆ ಈಗ ಪಾಂಡವರೊಡನೆ ವಿರೋಧಿಸದಿರುವುದೇ ಉಚಿತವೆಂದು ನನಗೆ ತೋರುವುದು ಪ್ರಾಣಭಯದಿಂದಾಗಲಿ, ದೈನ್ಯದಿಂದಾಗಲಿ ನಾನು ನಿನಗೆ ಹೀಗೆ ಹೇಳುವೆನೆಂದೆಣಿಸಬೇಡ ನಾನು ನಿನಗೆ ಹಿತವನ್ನು ಕೋರಿಯೇ ಹೀಗೆ ಹೇಳುತ್ತಿರುವೆನು ಇದರ ತತ್ವವನ್ನು ನೀನು ಅಂತ್ಯಕಾಲದಲ್ಲಿ ನೆನೆಸುವೆ'' ಎಂದನು ವಯೋವೃದ್ಧನಾದ ಕೃಪಾಚಾರ್ಯನು ಹೀಗೆ ಹೇಳಿ ನಿಟ್ಟುಸಿರು ಬಿಟ್ಟು ದುಃಖಿಸುತ್ತ ಹಾಗೆಯೇ ಮೂರ್ಛೆಬಿದ್ದನು

ಇದು ಮೂರನೆಯ ಅಧ್ಯಾಯವು.



## ದುರ್ಯೋಧನನು ಕೃಪನಿಗೆ ಕೆಲವು ಕಾರಣಗಳನ್ನು ತಿಳಿಸಿ, ಪಾಂಡವರೊಡನೆ ಸಂಧಿಗೆ ಒಪ್ಪದಿದ್ದುದು

ಓ ರಾಜಾ! ಕೃಪಾಚಾರ್ಯನ ಈ ಮಾತುಗಳನ್ನು ಕೇಳಿ ದುರ್ಯೋಧನನು ದೀರ್ಘವಾದ ನಿಟ್ಟುಸಿರನ್ನು ಬಿಟ್ಟು, ಸ್ವಲ್ಪಹೊತ್ತು ಬಾಯೆತ್ತದೆ ಮೌನದಿಂದಿದ್ದನು ಬಹಳ ಧೀರಮನಸ್ಸುಳ್ಳ ನಿನ್ನ ಮಗನು ಒಂದು ಮುಹೂರ್ತಕಾಲದವರೆಗೆ ಧ್ಯಾನಪರನಾಗಿದ್ದು, ಆಮೇಲೆ ಕೃಪಾಚಾರ್ಯನನ್ನು ಕುರಿತು ಹೀಗೆ ಹೇಳುವನು

“ಕೃಪಾಚಾರ್ಯಾ! ನೀನು ನನಗಾಗಿ ಪ್ರಾಣವನ್ನಾದರೂ ತ್ಯಜಿಸಲು ಸಿದ್ಧನಾಗಿ ಯುದ್ಧಮಾಡತಕ್ಕವನು ನಿನ್ನ ವಾಕ್ಯಗಳೆಲ್ಲವನ್ನೂ ಕೇಳಿದೆನು ನೀನೂ ನಿನ್ನಿಂದಾದ ಸಾಹಸಕಾರ್ಯಗಳನ್ನೆಲ್ಲ ಮಾಡಿ ತೋರಿಸಿರುವೆ ನಿನ್ನ ಶೌರ್ಯವಾದರೂ ಸಾಮಾನ್ಯವಲ್ಲ! ನೀನು ಶತ್ರುಸೇನಾಮಧ್ಯದಲ್ಲಿ ನುಗ್ಗಿ ಹೋರಾಡತಕ್ಕವನು ಮಹಾರಥರಾದ ಆ ಪಾಂಡವರೊಡನೆ ನೀನು ತೋರಿಸಿದ ಯುದ್ಧಸಾಹಸವನ್ನು ಲೋಕವೆಲ್ಲವೂ ನೋಡಿರುವುದು ನೀನು ನನ್ನಲ್ಲಿ ಪ್ರೀತಿಯಿಂದ ತಿಳಿಸಿದ ಮಾತನ್ನು ನಾನೂ ಚೆನ್ನಾಗಿ ಕೇಳಿದೆನು ಆದರೇನು? ಮರಣಾವಸ್ಥೆಯಲ್ಲಿರುವವನಿಗೆ ಔಷಧಿಯು ಹೇಗೋ ಹಾಗೆ, ನಿನ್ನ ವಾಕ್ಯಗಳಾವುವೂ ನನಗೆ ಪ್ರಿಯವನ್ನುಂಟುಮಾಡಲಿಲ್ಲ ಓ ಮಹಾಬಾಹೂ! ಬ್ರಾಹ್ಮಣೋತ್ತಮಾ! ನಿನ್ನ ಹಿತವಾಕ್ಯಗಳು ಸಹೇತುಕಗಳಾಗಿ, ಅಮೋಘವಾಗಿದ್ದರೂ ನನಗೆ ಅವು ಸಾಧ್ಯವೆಂದು ತೋರುವುದಿಲ್ಲ ಮೊದಲು ನಮ್ಮಿಂದಲೇ ರಾಜ್ಯದಿಂದ ದೂರೀಕರಿಸಲ್ಪಟ್ಟ ಆ ಧರ್ಮರಾಜನು, ತಿರುಗಿ ನಮ್ಮಲ್ಲಿ ಹೇಗೆ ವಿಶ್ವಾಸವನ್ನು ತೋರಿಸುವನು? ಆ ಧರ್ಮಪುತ್ರನು ಹಿಂದೆ ನಮ್ಮಿಂದ ಕಪಟದ್ಯೂತದಲ್ಲಿ ಸೋಲಿಸಲ್ಪಟ್ಟವನಲ್ಲವೆ? ಆತನು ಈಗ ತಿರುಗಿ ನಮ್ಮ ವಾಕ್ಯಗಳಲ್ಲ ಹೇಗೆ ನಂಬಿಕೆಯನ್ನಿಡುವನು? ಪಾಂಡವರಿಗೆ ಹಿತವನ್ನು ಕೋರಿ, ಅವರಿಗೆ ದೂತನಾಗಿ ನಮ್ಮಲ್ಲಿಗೆ ಬಂದ ಕೃಷ್ಣನನ್ನೂ ನಾವು ವಂಚಿಸಿದೆವಲ್ಲವೆ? ಆತನ ವಾಕ್ಯಗಳನ್ನು ಆಗ ನಾವು ಸ್ವಲ್ಪವಾದರೂ ವಿಚಾರಕ್ಕೇ ತಂದುಕೊಳ್ಳಲಿಲ್ಲ ಆ ಕೃಷ್ಣನಾದರೂ ಈಗ ನಮ್ಮ ಮಾತನ್ನು ಹೇಗೆ

ಆದರಿಸುವನು? ನಮ್ಮಿಂದ ಸಭಾಮಧ್ಯಕ್ಕೆ ಎಳೆಯಲ್ಪಟ್ಟಾಗ ದ್ರೌಪದಿಯು ಮೊರೆಯಿಟ್ಟು ಹೇಳಿದ ಮಾತುಗಳನ್ನೂ, ನಾವು ಆಕೆಯ ಸೀರೆಯನ್ನು ಸೆಳೆದುದನ್ನೂ, ಪಾಂಡವರ ರಾಜ್ಯವನ್ನು ನಾವು ಕಿತ್ತುಕೊಂಡುದನ್ನೂ ಕೃಷ್ಣನು ಎಂದಾದರೂ ಸಹಿಸುವನೆ? ಕೃಷ್ಣಾರ್ಜುನರಿಬ್ಬರಿಗೂ ದೇಹವುಮಾತ್ರ ಬೇರೆಯೇಹೊರತು ಪ್ರಾಣವೊಂದೇ! ಅವರಿಬ್ಬರೂ ಒಬ್ಬರನ್ನು ಬಿಟ್ಟೊಬ್ಬರು ಅಗಲದೆ, ಒಂದಾಗಿಯೇ ಸೇರಿರುವರು ಇದನ್ನು ನಾನು ಅನೇಕರಿಂದ ಕೇಳಿದ್ದೆನು ಅದು ಹಾಗೆಯೇ ನಡೆಯುತ್ತಿರುವುದನ್ನೂ ಕಣ್ಣಾರ ನೋಡುತ್ತಿರುವೆನು ಆ ಕೃಷ್ಣನು ತನ್ನ ಸಹೋದರಿಯ ಮಗನಾದ ಅಭಿಮನ್ಯುವು ಕೊಲ್ಲಲ್ಪಟ್ಟುದಕ್ಕಾಗಿ ಈಗಲೂ ನಿದ್ರೆಯಲ್ಲಿಯೂ ಕನವರಿಸುತ್ತಿರುವನು ಇದರಿಂದ ನಾವು ಆತನ ವಿಷಯದಲ್ಲಿ ಪ್ರಬಲವಾದ ಅಪರಾಧವನ್ನು ಮಾಡಿದೆವು ಹೀಗಿರುವಾಗ ಆತನು ನನಗೆ ಹೇಗೆತಾನೇ ಒಳ್ಳೆಯದನ್ನು ಮಾಡುವನು? ಅರ್ಜುನನೂ ತನ್ನ ಮಗನಾದ ಅಭಿಮನ್ಯುವಿನ ಮರಣದಿಂದ ಮಹತ್ತಾದ ವ್ಯಥೆಗೊಂಡಿರುವನು ಅವನುತಾನೇ ಈಗ ನಾವು ಪ್ರಾರ್ಥಿಸಿದಮಾತ್ರಕ್ಕೆ ನಮಗೆ ಶ್ರೇಯಸ್ಸನ್ನುಂಡುಮಾಡಲು ಯತ್ನಿಸುವನೆ? ಮಹಾಬಲಶಾಲಿಯಾದ ಆ ಭೀಮಸೇನನೋ ಬಹಳ ಕಠಿನನು ಹಠವಾದಿ! ಆತನು ನನ್ನ ವಿಷಯದಲ್ಲಿ ಅತಿಕ್ರೂರವಾದ ಶಪಥವನ್ನು ಮಾಡಿರುವನಲ್ಲವೆ? ಆತನು ಒಂದುವೇಳೆ ಯುದ್ಧದಲ್ಲಿ ಮೈಮುರಿದಾದರೂ ಬೀಳುವನೇಹೊರತು ತಗ್ಗಿಹೋಗುವವನಲ್ಲ ಅವಳಿಮಕ್ಕಳಾದ ಆ ನಕುಲಸಹದೇವರಾದರೂ ಕೈಯಲ್ಲಿ ಕತ್ತಿಗಳನ್ನು ಹಿಡಿದು, ಕವಚಧಾರಿಗಳಾಗಿ ನಿಂತು, ಸದಾ ನಮ್ಮಲ್ಲಿ ದ್ವೇಷವನ್ನೇ ಸಾಧಿಸುತ್ತಿರುವರು ಅವರು ಯಮನಿಗೆ ಸಮಾನರು ಇವರಲ್ಲದೆ ಧೃಷ್ಟದ್ಯುಮ್ನನೂ, ಶಿಖಂಡಿಯೂ ನನ್ನೊಡನೆ ಪ್ರಬಲದ್ವೇಷದಿಂದಿರುವರು ಇವರೆಲ್ಲರೂ ನನಗೆ ಹೇಗೆ ಒಳ್ಳೆಯದನ್ನು ಮಾಡಲು ಸಮ್ಮತಿಸುವರು? ಪಾಂಡವರ ಗೃಹಲಕ್ಷ್ಮಿಯಂತಿದ್ದ ದ್ರೌಪದಿಯು ಏಕವಸ್ತ್ರಧಾರಿಣಿಯಾಗಿದ್ದಾಗ, ಎಲ್ಲಾ ಜನರೂ ನೋಡುತ್ತಿರುವಾಗಲೇ ದುಶ್ಶಾಸನನಿಂದ ಸಭಾಮಧ್ಯಕ್ಕೆಳೆಯಲ್ಪಟ್ಟು, ದೊಡ್ಡ ಅವಮಾನಕ್ಕೆ ಗುರಿಯಾದಳಲ್ಲವೆ? ಹೀಗೆ ಆ ಪಾಂಚಾಲಿಯು ಮಹಾದುಃಖಕ್ಕೂ, ಅವಮಾ

ನಕ್ಕೂ ಗುರಿಯಾದುದನ್ನು ಪಾಂಡವರು ಎಂದಿಗೂ ಮರೆಯುವವರಲ್ಲ ಆ ಪಾಂಡವರನ್ನು ಈಗ ಯುದ್ಧದಿಂದ ಹಿಂತಿರುಗಿಸುವುದು ಸಾಧ್ಯವೇ? ದ್ರೌಪದಿಯುಕೂಡ ನಮ್ಮಿಂದ ಅಂತಹ ಅವಮಾನಕ್ಕೆ ಗುರಿಯಾದುದು ಮೊದಲು, ಬದ್ಧದ್ವೇಷದಿಂದ ನನ್ನ ವಿನಾಶವನ್ನೂ, ತನ್ನ ಪತಿಗಳ ಕಾರ್ಯಸಿದ್ಧಿಯನ್ನೂ ಕುರಿತು ಉಗ್ರವಾದ ತಪಸ್ಸನ್ನು ಮಾಡುತ್ತಿರುವಳು ನಮ್ಮಮೇಲೆ ತನ್ನ ಹಗೆಯನ್ನು ತೀರಿಸಿಕೊಳ್ಳುವವರೆಗೆ ನೆಲದ ಮೇಲೆಯೇ ಮಲಗುವಳು ಕೃಷ್ಣನ ಸಹೋದರಿಯಾದ ಸುಭದ್ರೆಯು ಕೂಡ, ತನ್ನ ಹೆಮ್ಮೆಯನ್ನು ಬಿಟ್ಟು, ಆ ದ್ರೌಪದಿಗೆ ದಾಸಿಯಂತೆ ಉಪಚರಿಸುತ್ತಿರುವಳು ಹೀಗೆ ಎಲ್ಲವೂ ವಿಪರೀತವಾಗಿರುವಾಗ, ನಮ್ಮೊಳಗೆ ಹೇಗೆತಾನೇ ಸಂಧಿಯು ಸಾಧ್ಯವು? ಅಭಿಮನ್ಯುವನ್ನು ಕೊಂದ ನನ್ನೊಡನೆ ಅರ್ಜುನನು ಹೇಗೆ ಸಂಧಿಗೆ ಒಪ್ಪುವನು? ಅದೂ ಹೋಗಲಿ! ಇದುವರೆಗೆ ಮಹಾರಾಜನೆನಿಸಿಕೊಂಡು, ಸಮುದ್ರಾವೃತವಾದ ಈ ಸಮಸ್ತಭೂಮಿಯನ್ನೂ ಅನುಭವಿಸಿದ ನಾನು, ಈಗ ಪಾಂಡವರ ದಯೆಯಿಂದ ದೊರಯುವ ರಾಜ್ಯವನ್ನು ಹೇಗೆ ಅನುಭವಿಸುವೆನು? ರಾಜರಿಗೆಲ್ಲ ಸೂರ್ಯನಂತೆ ಪ್ರಕಾಶಿಸುತ್ತಿದ್ದ ನಾನು, ಈಗ ಹೇಗೆತಾನೇ ಯುಧಿಷ್ಠಿರನನ್ನು ದಾಸನಂತೆ ಅನುವರ್ತಿಸಿ ಕೇಳಿಕೊಳ್ಳಲಿ? ಇಷ್ಟಬಂದ ಭೋಗಗಳನ್ನನುಭವಿಸುತ್ತ, ಬೇಕಾದ ದಾನಗಳನ್ನು ಕೊಡುತ್ತಲೂ ಇದ್ದ ನಾನು, ಈಗ ಆ ಕೃಪಣರೊಡನೆ ಸೇರಿ ಹೇಗೆ ಜೀವನಮಾಡಲಿ? ವಿಶ್ವಾಸಪೂರ್ವಕವಾಗಿ ನೀನು ನನಗೆ ತಿಳಿಸಿದ ಹಿತವಾಕ್ಯಗಳಿಗಾಗಿ ನಾನೇನೂ ಅಸೂಯೆಗೊಳ್ಳುವುದಿಲ್ಲ ಆದರೆ, ಹೇಗೆ ನೋಡಿದರೂ ಈಗ ನನಗೆ ಸಂಧಿಯು ಉಚಿತವೆಂದೇ ತೋರುವುದಿಲ್ಲ ಯುದ್ಧಮಾಡಿ ಶತ್ರುಗಳನ್ನು ಜಯಿಸುವುದೇ ಈಗ ಒಳ್ಳೆಯ ನೀತಿಯೆಂದೆಣಿಸುವೆನು ನಾವು ಷಂಡರಂತಿರುವುದಕ್ಕೆ ಇದು ಸಮಯವಲ್ಲ ಪ್ರಬಲವಾಗಿ ಯುದ್ಧಮಾಡುವುದಕ್ಕೇ ಇದು ಉಚಿತಕಾಲವೆಂದೆಣಿಸುವೆನು ಈಗಾಗಲೇ ನಾನು ಅನೇಕ ಯಜ್ಞಗಳಿಂದ ದೇವತೆಗಳನ್ನು ಪೂಜಿಸಿದುದಾಯಿತು! ಬ್ರಾಹ್ಮಣರಿಗೆ ದಕ್ಷಿಣೆಗಳನ್ನೂ ಕೊಟ್ಟುದಾಯಿತು! ಕಾಮಭೋಗಗಳನ್ನೆಲ್ಲ ಅನುಭವಿಸಿದುದಾಯಿತು! ವೇದಾಧ್ಯಯನಗಳನ್ನು ಮುಗಿಸಿದುದಾಯಿತು!

ಶತ್ರುಗಳ ತಲೆಯನ್ನು ಕಾಲಿಂದ ಮೆಟ್ಟಿದುದಾಯಿತು! ನನ್ನ ಸೇವಕರನ್ನೂ ಚೆನ್ನಾಗಿ ಪೋಷಿಸಿರುವೆನು ದೀನಜನರನ್ನು ಉದ್ಧರಿಸಿರುವೆನು ಹೀಗಿರುವಾಗ ನಾನು ಈಗ ಪಾಂಡವರಲ್ಲಿ ಹೋಗಿ ದೈನ್ಯದ ಮಾತುಗಳನ್ನಾಡುವೆನೆ? ಶತ್ರುರಾಜ್ಯಗಳನ್ನೆಲ್ಲ ಜಯಿಸಿರುವೆನು ಸ್ವಂತರಾಜ್ಯವನ್ನೂ ಚೆನ್ನಾಗಿ ರಕ್ಷಿಸಿದೆನು ಅನೇಕಭೋಗಗಳನ್ನೂ ಅನುಭವಿಸಿರುವೆನು ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳೂ ನನ್ನಿಂದ ಅನುಷ್ಠಿಸಲ್ಪಟ್ಟುವು. ಪಿತೃಗಳಿಗೂ, ಕ್ಷತ್ರಿಯಧರ್ಮಕ್ಕೂ ಸಂಬಂಧಪಟ್ಟ ಋಣಗಳೆರಡನ್ನೂ ತೀರಿಸಿಕೊಂಡಿರುವೆನು ಇನ್ನು ವಾಸ್ತವದಲ್ಲಿ ನನಗೆ ಈ ಪ್ರಪಂಚದಲ್ಲಿ ಅನುಭವಿಸಬೇಕಾದ ಸುಖವೇನಿದೆ? ಮತ್ತು ಈ ಪ್ರಪಂಚದಲ್ಲಿ ಇನ್ನು ಮೇಲೆ ನನಗೆ ಸುಖವೆಲ್ಲಿ? ನನಗೆ ಇನ್ನು ರಾಜ್ಯವೆಲ್ಲಿ? ಕೀರ್ತಿಯೆಲ್ಲಿ? ಈ ಪ್ರಪಂಚದಲ್ಲಿ ಕೀರ್ತಿಯೊಂದೇ ಸಾಧಿಸತಕ್ಕುದು ಅದನ್ನೂ ಯುದ್ಧಮೂಲಕವಾಗಿ ಸಂಪಾದಿಸಬೇಕೇಹೊರತು ಬೇರೆ ಮಾರ್ಗದಿಂದಲ್ಲ ಕ್ಷತ್ರಿಯನಿಗೆ (ಯುದ್ಧಮಾಡದೆ) ವ್ಯರ್ಥಮರಣವು ಕೇವಲ ಅಧರ್ಮವು ಮನೆಯಲ್ಲಿ ಹಾಸಿಗೆಯಮೇಲೆ ರೋಗದಿಂದ ಮಲಗಿ, ಮಲಮೂತ್ರಗಳಲ್ಲಿ ಹೊರಳಿ, ಬ್ರಾಹ್ಮಣನಂತೆ ಸಾಯುವುದೆಂಬುದು ಕ್ಷತ್ರಿಯರಿಗೆ ದೊಡ್ಡ ಅಧರ್ಮವು ಯಾವ ರಾಜನು ಅರಣ್ಯದಲ್ಲಿಯಾಗಲಿ, ಯುದ್ಧದಲ್ಲಿಯಾಗಲಿ ಪ್ರಾಣವನ್ನು ಕಳೆದುಕೊಳ್ಳುವನೋ, ಆತನು ಮಹಾಯಜ್ಞಗಳನ್ನು ಮಾಡುವುದರಿಂದುಂಟಾಗುವ ಉತ್ತಮ ಫಲವನ್ನು ಪಡೆಯುವನು ಯಾವನು ವ್ಯಾಧಿಯಿಂದಲೂ, ಮುಪ್ಪಿನಿಂದಲೂ ಪೀಡಿತನಾಗಿ, ದೀನಸ್ವರದಿಂದ ಪ್ರಲಾಪಿಸುತ್ತ ಸುತ್ತಿ ಮುತ್ತಿ ಕುಳಿತು ತನಗಾಗಿ ಅಳುತ್ತಿರುವ ಜ್ಞಾತಿಗಳ ಮಧ್ಯದಲ್ಲಿ ಸಾಯುವನೋ ಆತನು ವೀರನಲ್ಲ ವಿವಿಧ ಭೋಗಗಳನ್ನೆಲ್ಲ ತೊರೆದು, ಯುದ್ಧ ಮರಣದಿಂದ ಉತ್ತಮಗತಿಯನ್ನು ಪಡೆದಿರುವವರೊಡನೆಯೇ ನಾನೂ ಈಗ ಸಾಲೋಕ್ಯವನ್ನು ಪಡೆಯುವೆನು ಶೂರರು, ಸದಾಚಾರಸಂಪನ್ನರು, ಯುದ್ಧದಲ್ಲಿ ಹಿಮ್ಮೆಟ್ಟದವರು, ಬುದ್ಧಿಶಾಲಿಗಳು, ಸತ್ಯಸಂಧರು, ಯಾಗಗಳಿಂದ ದೇವತೆಗಳನ್ನು ಪೂಜಿಸುವವರು, ಶತ್ರುಗಳಿಂದುಂಟಾದ ಅವಭೃಥದಿಂದ ಪರಿಶುದ್ಧರಾದ ವೀರರು, ಇವರೆಲ್ಲರಿಗೂ ಸ್ವರ್ಗವಾಸವು ನಿಶ್ಚಯವಾಗಿ ಲಭಿಸುವುದು. (ಯುದ್ಧದಲ್ಲಿ ಹೋರಾಡುವ ವೀರರನ್ನು) ಅಪ್ಸರ

ಸ್ತ್ರೀಯರು ಸಂತೋಷದಿಂದ ನೋಡುವರು ಪಿತೃಗಳೂ ಅವರನ್ನು ಗೌರವಿಸುವರು ಅವರು ಸ್ವರ್ಗದಲ್ಲಿ ಅಪ್ಸರಸ್ಸುಗಳಿಂದ ಪರಿವೃತರಾಗಿ ಸಂತೋಷಿಸುವರು ಅನೇಕದೇವತೆಗಳೂ, ಯುದ್ಧದಲ್ಲಿ ಹಿಮ್ಮೆಟ್ಟದ ಶೂರರೂ, ನಮ್ಮ ವೃದ್ಧ ಪಿತಾಮಹನೂ, ದ್ರೋಣಾಚಾರ್ಯನೂ, ಜಯದ್ರಥನೂ, ಕರ್ಣನೂ, ದುಶ್ಶಾಸನನೂ ಈಗ ಎಲ್ಲಿರುವರೋ ಅದೇ ಗತಿಗೆ ನಾನೂ ಏರುವೆನು ನನಗಾಗಿ ಈ ಯುದ್ಧದಲ್ಲಿ ಪ್ರಯತ್ನಪಟ್ಟ ಅನೇಕ ವೀರಕ್ಷತ್ರಿಯರು ಈಗ ಬಾಣಗಳಿಂದ ಗಾಯಪಟ್ಟು, ರಕ್ತದಿಂದ ತೊಯ್ದ ದೇಹದೊಡನೆ ಮೃತರಾಗಿ ಭೂಮಿಯಲ್ಲಿ ಮಲಗಿರುವರು ಉತ್ತಮಾಸ್ತ್ರಗಳನ್ನು ತಿಳಿದವರೂ, ಶಾಸ್ತ್ರವಿಹಿತರೀತಿಯಲ್ಲಿ ಯಾಗಗಳಿಂದ ದೇವತೆಗಳನ್ನಾರಾಧಿಸಿದವರೂ ಆದ ಶೂರರು ಈಗ ಈ ಯುದ್ಧದಲ್ಲಿ ಪ್ರಾಣವನ್ನು ಬಿಟ್ಟು ಸ್ವರ್ಗದಲ್ಲಿ ವಾಸಮಾಡುವರು ಅವರಿಂದ ಈಗಲೇ ಏರ್ಪಡಿಸಲ್ಪಟ್ಟಿರುವ ಹೊಸಮಾರ್ಗವು ಮುಂದೆ (ಯಾರೂ ಹೋಗದಿದ್ದರೆ) ದುರ್ಗಮವಾಗಿ ತಿರುಗಿ ಪ್ರವೇಶಿಸಲಸಾಧ್ಯವಾಗುವುದು ವೇಗದಿಂದ ಮೇಲೆ ಹಾರಿ ಹೋಗುತ್ತಿರುವ ಅವರೊಡನೆ, ನಾನೂ ಈಗಲೇ ಈ ಸ್ಥಳದಿಂದ ಹೊರಟು ಸದ್ಗತಿಯನ್ನು ಪಡೆಯುವೆನು ನನಗಾಗಿ ಯುದ್ಧದಲ್ಲಿ ಪ್ರಾಣವನ್ನೊಪ್ಪಿಸಿದವರ ಮಹೋಪಕಾರವನ್ನೆಣಿಸಿ, ಅವರ ಋಣವನ್ನು ತೀರಿಸಬೇಕಾದುದು ಈಗ ನನ್ನ ಕರ್ತವ್ಯವು ಈ ಸ್ಥಿತಿಯಲ್ಲಿ ನನಗೆ ರಾಜ್ಯದಲ್ಲಿ ಎಂದಿಗೂ ಮನಸ್ಸು ಪ್ರವರ್ತಿಸದು ಬಂಧುಗಳನ್ನೂ, ಸಹೋದರರನ್ನೂ, ಪಿತಾಮಹರನ್ನೂ ಮರಣಕ್ಕೀಡುಮಾಡಿ, ನಾನುಮಾತ್ರ ಪ್ರಾಣವನ್ನುಳಿಸಿಕೊಂಡರೆ, ಲೋಕವು ಖಂಡಿತವಾಗಿಯೂ ನನ್ನನ್ನು ನಿಂದಿಸದೆ ಬಿಡದು ಬಂಧುಮಿತ್ರರನ್ನೆಲ್ಲ ಕಳೆದುಕೊಂಡ ನನಗೆ ಧರ್ಮರಾಜನಿಗೆ ತಲೆಬಗ್ಗಿ ಪ್ರಾರ್ಥಿಸಿ ಪಡೆಯತಕ್ಕ ರಾಜ್ಯವು ಹೇಗಿರುವುದೋ ಯೋಚಿಸು ! ಈ ಲೋಕಕ್ಕೇ ಇಂತಹ ಅವಮಾನವನ್ನೇರ್ಪಡಿಸಿದ ನಾನು, ಯುದ್ಧದಲ್ಲಿ ಮರಣಗೊಂಡೇ ಸ್ವರ್ಗವನ್ನು ಸೇರುವೆನು ಬೇರೆ ರೀತಿಯಿಂದ ಈ ಕೋರಿಕೆಯು ನೆರವೇರದು ” ಎಂದನು

ಅಲ್ಲಿದ್ದ ಕ್ಷತ್ರಿಯರೆಲ್ಲರೂ ದುರ್ಯೋಧನನ ಈ ವಾಕ್ಯಗಳನ್ನು ಕೊಂಡಾಡಿ, ಆತನನ್ನು ಕುರಿತು “ ಭಲೆ ! ಭಲೆ ! ” ಎಂದರು ಆಗ ಎಲ್ಲರೂ

ತಮ್ಮ ಸೋಲಿಗಾಗಿ ವ್ಯಸನಪಡದೆ ಪರಾಕ್ರಮದಲ್ಲಿ ಮನಸ್ಸಿಟ್ಟು ಯುದ್ಧೋತ್ಸಾಹಿಗಳಾದರು ಇಷ್ಟರಲ್ಲಿ ಅತ್ತಲಾಗಿ ಯುದ್ಧರಂಗದಿಂದ ಓಡಿಹೋಗಿದ್ದ ಇತರ ಕೌರವಯೋಧರುಕೂಡ ಎರಡು ಯೋಜನಗಳಿಗೆ ಸ್ವಲ್ಪ ಕಡಿಮೆದೂರದವರೆಗೆ ಹೋಗಿ, ಉತ್ತಮವಾದ ದಾರಿಗಳಿಂದ ಕೂಡಿ ಮರಗಳಿಲ್ಲದೆ ಪರಿಶುದ್ಧವೂ, ಮಂಗಳಕರವೂ ಆಗಿ ಹಿಮಾಲಯಪರ್ವತದ ಬುಡದಲ್ಲಿ ಕೆಂಪುಬಣ್ಣವುಳ್ಳ ಸರಸ್ವತೀನದಿಯನ್ನು ಸೇರಿ, ಅದರಲ್ಲಿ ಸ್ನಾನಮಾಡಿ ಜಲಪಾನವನ್ನು ಮಾಡಿದರು ಆಮೇಲೆ ಕಾಲಪ್ರೇರಿತರಾದ ಆ ರಾಜರೆಲ್ಲರೂ, ನಿನ್ನ ಪುತ್ರನಿಂದ ಪ್ರೋತ್ಸಾಹಿಸಲ್ಪಟ್ಟವರಾಗಿ, ಮನಸ್ಸನ್ನು ಸಮಾಧಾನಕ್ಕೆತಂದುಕೊಂಡು ತಿರುಗಿ ಯುದ್ಧಕ್ಕಾಗಿ ಉತ್ಸಾಹಗೊಂಡರು·

ಇದು ನಾಲ್ಕನೆಯ ಅಧ್ಯಾಯವು

(ದುರ್ಯೋಧನನು ಅಶ್ವತ್ಥಾಮನನ್ನು ಸೇನಾಧಿಪತಿಯಾಗಿರುವಂತೆ ಕೇಳಲು, ಆತನು ಶಲ್ಯನನ್ನು ಸೇನಾಧಿಪತಿಯನ್ನಾಗಿ ಮಾಡಿಕೊಳ್ಳುವಂತೆ ಹೇಳಿದುದು ದುರ್ಯೋಧನನು ಶಲ್ಯನನ್ನು ಸೈನ್ಯಾಧಿಪತ್ಯಕ್ಕಾಗಿ ಪ್ರಾರ್ಥಿಸಿದುದು)

ಆಮೇಲೆ ಯುದ್ಧೋತ್ಸಾಹಗೊಂಡ ಆ ವೀರರೆಲ್ಲರೂ, ಹಿಮಾಚಲದ ಬುಡದವರಗೂ ಅಲ್ಲಲ್ಲ ಗುಂಪುಕೂಡಿದರು ಶಲ್ಯನು, ಚಿತ್ರಸೇನನು, ಶಕುನಿ, ಅಶ್ವತ್ಥಾಮನು, ಕೃಪನು, ಕೃತವರ್ಮನು, ಸುಷೇಣನು, ಅರಿಷ್ಟಸೇನನು, ಧೃತಸೇನನು, ಜಯತ್ಸೇನನು, ಮುಂತಾದ ಅರಸರೆಲ್ಲರೂ ಆ ರಾತ್ರಿ ಅಲ್ಲ ನೆರೆದರು ಕರ್ಣನು ಯುದ್ಧದಲ್ಲಿ ಹತನಾದಮೇಲೆ, ಅದರಿಂದ ಜಯೋತ್ಸಾಹವುಳ್ಳ ಪಾಂಡವರ ವಿಷಯದಲ್ಲಿ ಭೀತಿಗೊಂಡಿದ್ದ ನಿನ್ನ ಮಕ್ಕಳಿಗೆ, ಹಿಮಾಲಯಪರ್ವತದಲ್ಲಿ ಹೊರತು ಬೇರೆಲ್ಲಿಯೂ ಮನಸ್ಸಿಗೆ ನೆಮ್ಮದಿಯಿರಲಿಲ್ಲ ಇದಕ್ಕಾಗಿ ಅವರೆಲ್ಲ ಆ ಸ್ಥಳದಲ್ಲಿ ಒಟ್ಟುಗೂಡಿ, ಯುದ್ಧಪ್ರಯತ್ನಕ್ಕಾಗಿ ಶಲ್ಯನನ್ನು ಮುಂದಿಟ್ಟುಕೊಂಡು ರಾಜನಾದ ದುರ್ಯೋಧನನನ್ನು ಕುರಿತು ವಿನಯದಿಂದ ಹೀಗೆಂದು ಹೇಳುವರು "ಮಹಾರಾಜಾ! ಮುಂದೆ ಯಾರ ಬಲದಿಂದ ನಾವು ಯುದ್ಧದಲ್ಲಿ ನಿರ

ಪಾಯವಾಗಿ ಶತ್ರುಗಳನ್ನು ಜಯಿಸುವೆವೋ, ಅಂತಹ ಸೇನಾಧಿಪತಿಯೊಬ್ಬ ನನ್ನು ಏರ್ಪಡಿಸಿಕೊಂಡು, ಮುಂದಿನ ಯುದ್ಧವನ್ನು ಹೂಡುವನಾಗು" ಎಂದರು ಒಡನೆಯೇ ನಿನ್ನ ಮಗನಾದ ದುರ್ಯೋಧನನು ರಥವನ್ನೇರಿ ಅಶ್ವತ್ಥಾಮನ ಬಳಿಗೆ ಹೋದನು ಆ ಅಶ್ವತ್ಥಾಮನೇನು ಸಾಮಾನ್ಯನಲ್ಲ! ರಥಿಕಶ್ರೇಷ್ಠನು ಎಲ್ಲಾ ಯುದ್ಧಗಳ ರೀತಿಯನ್ನೂ ತಿಳಿದವನು ಯುದ್ಧದಲ್ಲಿ ಯಮನಿಗೆ ಸಮಾನನು! ಅವನ ಅಂದವಾದ ದೇಹಾವಯವಗಳೂ, ಅವನ ಮೃದುಮಧುರವಾದ ಮಾತುಗಳೂ ಎಂತವರನ್ನಾದರೂ ಆಕರ್ಷಿಸುವುವು ಅವನಿಗೆ ಜನ್ಮಸಿದ್ಧವಾದ ಮಣಿಯಿಂದ ಮೆರಸಿದ ಶಿರಸ್ಸು! ಶಂಖದಂತಿರುವ ಕೊರಲು! ಕಮಲದಳದಂತಿರುವ ಕಣ್ಣುಗಳು! ಹುಲಿಯ ಮುಖದಂತಿರುವ ಮುಖವೈಖರಿ! ಮೇರುವಿನಂತೆ ಧೀರೋನ್ನತಾಕೃತಿ! ಅವನ ತೋಳು, ಕಣ್ಣು, ನಡೆ, ನುಡಿ ಇವೆಲ್ಲ ಪರಮಶಿವನ ವಾಹನವಾದ ನಂದಿಯ ರೂಪವನ್ನು ಹೋಲುತ್ತಿರುವುವು ದುಂಡಗೆ ಉಬ್ಬಿ ನೀಡಿದ ಭುಜಗಳು! ವಿಶಾಲವಾದ ಎದೆ! ಅರುಣನ ತಮ್ಮನಾದ ಗರುಡನಿಗೆ ಸಮಾನವಾದ ದೇಹಶಕ್ತಿ! ವಾಯುವಿನಂತೆ ವೇಗವಾದ ಗತಿ! ಸೂರ್ಯಸಮಾನವಾದ ಕಾಂತಿ! ಶುಕ್ರಾಚಾರ್ಯನಿಗೆ ಸಮಾನವಾದ ಬುದ್ಧಿ! ಕಾಂತಿಯಲ್ಲಿಯೂ, ಸೌಮ್ಯಸ್ವರೂಪದಲ್ಲಿಯೂ ಚಂದ್ರನಿಗೆ ಸಮಾನನು! ಮೈಯಲ್ಲಿ ಸುವರ್ಣಛಾಯೆ! ಒತ್ತಾದ ಮೈಕೇಲುಗಳು! ಅಂದವಾದ ಮತ್ತು ಉರುಟಾದ ತೊಡೆ, ನಡು, ಮೊಳಕಾಲು, ಮುಂತಾದ ಅವಯವಗಳು! ದಟ್ಟವಾದ ಪಾದಗಳು! ಸುಂದರವಾದ ಬೆರಳುಗಳು! ಸೂಕ್ಷ್ಮ ನಖಗಳು! ಸೃಷ್ಟಿಕರ್ತನಾದ ಬ್ರಹ್ಮದೇವನು ಬಾರಿಬಾರಿಗೂ ತನ್ನಲ್ಲಿ ಆಲೋಚಿಸಿ ತನ್ನ ಸರ್ವ ಪ್ರಯತ್ನದಿಂದ ಸಮಸ್ತ ಲಕ್ಷಣಗಳನ್ನೂ ಈತನಲ್ಲಿ ತುಂಬಿದಂತಿರುವುದು ಮತ್ತು ಅವನು ಮಹಾಸಮರ್ಥನು! ವೇದಗಳಿಗೆ ಸಮುದ್ರಪ್ರಾಯನು! ಶತ್ರುದುರ್ಜಯನು! ಶತ್ರುಗಳನ್ನೆಲ್ಲ ಜಯಿಸತಕ್ಕವನು! ಪ್ರಯೋಗ, ಬಲ, ಉಪಸಂಹಾರ, ಪ್ರಾಯಶ್ಚಿತ್ತಾದಿಗಳನ್ನು ಬಲ್ಲವನು ಮಂಗಳಸ್ವರೂಪವುಳ್ಳವನು! ಮಂತ್ರಗಳ ಪ್ರಯೋಗ ವಿಸಿಯೊಗಚಿಂತನೆಗಳೇ ಅವನ ಸಹಜಗುಣಗಳು ಹತ್ತು ಅಂಗಗಳೂ, ನಾಲ್ಕು ಪಾದಗಳೂ ಉಳ್ಳ ಬಾಣಾಸ್ತ್ರಮಂತ್ರತತ್ವವನ್ನರಿತವನು ನಾಲ್ಕು ವೇದ

ಗಳನ್ನು ಅವುಗಳ ಅಂಗಗಳೊಡನೆಯೂ, ಐದನೆಯ ವೇದವಾದ ಇತಿಹಾಸದೊಡನೆಯೂ ಸಾಂಗವಾಗಿ ಅರಿತವನು ಅಯೋನಿಜನಾದ ದ್ರೋಣಾಚಾರ್ಯನ ಉಗ್ರವಾದ ವ್ರತಗಳಿಂದಲೂ, ಈಶ್ವರಾರಾಧನೆಯಿಂದಲೂ ಅಯೋನಿಜೆಯಾದ ಕೃಪಿಯಲ್ಲಿ ಜನಿಸಿದವನು! ಮಹಾತಪಸ್ವಿ! ಅತ್ಯಂತ ಚತುರನು! ಲೋಕದಲ್ಲಿ ಶೌರ್ಯದಿಂದಲೂ, ರೂಪದಿಂದಲೂ ಅಸಮಾನನು! ಎಲ್ಲಾ ವಿದ್ಯೆಗಳಲ್ಲಿಯೂ ಪಾರಂಗತನು ಗುಣಗಳಿಗೆ ಸಮುದ್ರಪ್ರಾಯನು! ಲೋಕಪ್ರಸಿದ್ಧನು! ಈ ಗುಣಗಳಿಂದ ಕೂಡಿದ ಅಶ್ವತ್ಥಾಮನನ್ನು ನೋಡಿ ದುರ್ಯೋಧನನು ಮುಂದೆ ಬಂದು "ಆಚಾರ್ಯಪುತ್ರಾ! ಈಗ ನಮ್ಮೆಲ್ಲರಿಗೂ ನೀನೇ ಪರಮಗತಿ! ಆದುದರಿಂದ ನಿನ್ನ ಅಭಿಪ್ರಾಯದಲ್ಲಿ ಈಗ ಯಾವನು ಸೇನಾಧಿಪತಿಯಾಗಬಹುದೋ ತಿಳಿಸು ನಾನು ಯಾರನ್ನು ಮುಂದೆಬಿಟ್ಟುಕೊಂಡು ಹೋಗಿ ಯುದ್ಧದಲ್ಲಿ ಪಾಂಡವರನ್ನು ಜಯಿಸಬಹುದೋ ಅದನ್ನು ನೀನೇ ತಿಳಿಸಬೇಕು" ಎಂದನು

ಆಗ ಅಶ್ವತ್ಥಾಮನು "ಓ ರಾಜಾ! ಬೇರೆ ಯಾರನ್ನು ಹುಡುಕಬೇಕು? ಇದೋ! ಈ ಶಲ್ಯನು ಕುಲದಲ್ಲಿಯೂ, ಕೀರ್ತಿಯಲ್ಲಿಯೂ, ರೂಪದಲ್ಲಿಯೂ, ಐಶ್ವರ್ಯದಲ್ಲಿಯೂ, ಇನ್ನೂ ಎಲ್ಲಾ ಸದ್ಗುಣಗಳಲ್ಲಿಯೂ ಮೇಲೆನಿಸಿರುವನು ಈ ಶಲ್ಯನೇ ನಮಗೆ ಸೈನ್ಯಾಧಿಪತಿಯಾಗಲಿ! ಮಹಾಜ್ಞಾನಿಯಾದ ಈ ಶಲ್ಯನು ತನ್ನ ವೈದಂದಿರನ್ನೆಲ್ಲ ಬಿಟ್ಟು ನಮ್ಮ ಕಡೆಗೆ ಬಂದು ಸೇರಿದನು ಇವನು ದೊಡ್ಡ ಸೇನೆಯುಳ್ಳವನು! ಮಹಾಬಾಹುವಾದ ಈತನು ದೇವಸೇನಾಧಿಪತಿಯಾದ ಸಾಕ್ಷಾತ್ ಷಣ್ಮುಖನಿಗೆ ಸಮಾನನು ದುರ್ಜಯನಾದ ಆ ಕುಮಾರಸ್ವಾಮಿಯನ್ನು ಸೇನಾಪತಿಯನ್ನಾಗಿ ಮಾಡಿಕೊಂಡು ದೇವತೆಗಳು ದೈತ್ಯರನ್ನು ಹೇಗೋ ಹಾಗೆ, ನಾವೂ ಈ ಮದ್ರಾಧಿಪತಿಯನ್ನು ಸೈನ್ಯಾಧಿಪತಿಯನ್ನಾಗಿಮಾಡಿಕೊಂಡು, ಜಯವನ್ನು ಪಡೆಯುವೆವು" ಎಂದನು ಒಡನೆಯೇ ಅಲ್ಲಿನ ರಾಜರೆಲ್ಲರೂ ಶಲ್ಯನನ್ನು ಸುತ್ತಿ ನಿಂತು ಜಯಘೋಷಗಳನ್ನು ಮಾಡಿದರು ಎಲ್ಲರಿಗೂ ಆಗ ಯುದ್ಧದಲ್ಲಿ ಅಧಿಕಾವೇಶವುಂಟಾಯಿತು ಆಮೇಲೆ ದುರ್ಯೋಧನನು, ಯುದ್ಧದಲ್ಲಿ ಭೀಷ್ಮದ್ರೋಣರಿಗೆ ಸಮಾನನೆನಿಸಿ ರಥಾರೂಢನಾ

ಗಿದ್ದ ಆ ಶಲ್ಯನ ಮುಂದೆ ನೆಲದಲ್ಲಿಯೇ ನಿಂತು ಕೈಜೋಡಿಸಿ ನಮ್ರಭಾವದಿಂದ "ಓ ಮಿತ್ರವತ್ಸಲಾ! ವಿದ್ವಾಂಸರು ಇತರರಲ್ಲಿ ಮಿತ್ರಾಮಿತ್ರತ್ವವನ್ನು ಪರೀಕ್ಷಿಸಿ ತಿಳಿಯುವ ಕಾಲವು ಈಗ ನಿನ್ನ ಮಿತ್ರರಾದ ನಮಗೆ ಪ್ರಾಪ್ತವಾಗಿರುವುದು ಶೂರನಾದ ನೀನು ನಮ್ಮ ಸೇನಾಮುಖದಲ್ಲಿದ್ದು ಅದಕ್ಕೆ ನಿಯಾಮಕನಾಗಿರಬೇಕು ನೀನು ಯುದ್ಧರಂಗಕ್ಕೆ ಕಾಲಿಟ್ಟೊಡನೆಯೇ ಪಾಂಡವರೂ, ಅವರ ಮಂತ್ರಿಗಳೂ ಎದೆಗುಂದುವರು ಪಾಂಚಾಲರೂ ಪ್ರಯತ್ನಹೀನರಾಗುವರು" ಎಂದನು ಆಗ ವಾಕ್ಚತುರನಾದ ಶಲ್ಯನು, ರಾಜಸಮೂಹದ ನಡುವೆ ನಿಂತಿರುವ ದುರ್ಯೋಧನನನ್ನು ಕುರಿತು "ಓ ಕುರುರಾಜಾ! ನೀನು ನನ್ನನ್ನು ಯಾವಕಾರ್ಯಕ್ಕೆ ನಿಯೋಗಿಸಿದರೂ ನಾನು ಅದಕ್ಕೆ ಸಿದ್ಧನಾಗಿರುವೆನು ನನ್ನ ಪ್ರಾಣಗಳೂ, ರಾಜ್ಯವೂ, ನನ್ನ ವಿಶಿಷ್ಟಸಂಪತ್ತುಗಳೂ ನಿನ್ನ ಪ್ರೀತಿಗಾಗಿಯೇ ಇರುವುವೆಂದು ತಿಳಿ" ಎಂದನು ಆಗ ದುರ್ಯೋಧನನು "ಮಾತುಲಾ! ಬೇರೇನಿದೆ? ಈಗ ನಿನ್ನನ್ನು ಸೇನಾಧಿಪತಿಯನ್ನಾಗಿ ಮಾಡಲೆಳಸುವೆನು ಹಿಂದೆ ಕುಮಾರಸ್ವಾಮಿಯು ದೇವಾಸುರ ಯುದ್ಧದಲ್ಲಿ ದೇವತೆಗಳನ್ನು ಹೇಗೋ ಹಾಗೆ, ನೀನು ನಮ್ಮನ್ನು ಈ ಯುದ್ಧದಲ್ಲಿ ರಕ್ಷಿಸಬೇಕು ರಾಜೇಂದ್ರಾ! ದೇವತೆಗಳಿಂದ ಕುಮಾರಸ್ವಾಮಿಯು ಹೇಗೋ ಹಾಗೆ ಈಗಲೇ ನೀನು ನಮ್ಮ ಸೇನಾಧಿಪತ್ಯದಲ್ಲಿ ಅಭಿಷೇಕಹೊಂದುವನಾಗು ದೇವೇಂದ್ರನು ಅಸುರರನ್ನು ಜಯಿಸಿದಂತೆ ನೀನೂ ಈಗಿನ ಯುದ್ಧದಲ್ಲಿ ನಮ್ಮ ಶತ್ರುಗಳನ್ನು ಕೊಲ್ಲಬೇಕು" ಎಂದನು

ಇದು ಐದನೆಯ ಅಧ್ಯಾಯವು



ದುರ್ಯೋಧನನು ಶಲ್ಯನನ್ನು ಸೈನ್ಯಾಧಿಪತ್ಯದಲ್ಲಿ ಅಭಿಷೇಕವಮಾಡಿದುದು ಕೃಷ್ಣನು ಯುಧಿಷ್ಠಿರನಿಗೆ ಶಲ್ಯನನ್ನಿದಿರಿಸಿ ಕೊಲ್ಲುವಂತೆ ಹೇಳಿದುದು

ಓ ರಾಜಾ! ಪ್ರತಾಪಶಾಲಿಯಾದ ಮದ್ರರಾಜನು ದುರ್ಯೋಧನನ ಈ ಮಾತನ್ನು ಕೇಳಿ "ದುರ್ಯೋಧನಮಹಾರಾಜಾ! ಓ ಮಹಾಬಾಹೂ!

ಕೇಳು ! ರಥಾರೂಢರಾಗಿರುವ ಯಾವ ಕೃಷ್ಣಾರ್ಜುನರನ್ನು ನೀನು ರಥಿಕಾಗ್ರಣಿಗಳೆಂದೆಣಿಸಿ ಹೆದರುತ್ತಿರುವೆಯೋ, ಅವರಿಬ್ಬರೂ ಬಾಹುಬಲದಲ್ಲಿ ನನಗೆ ಯಾವ ವಿಧದಿಂದಲೂ ಸಮಾನರಾಗಲಾರರು ನಾನು ಕೋಪಗೊಂಡರೆ ದೇವಾಸುರ ಮನುಷ್ಯರೊಡಗೂಡಿದ ಸಮಸ್ತ ಭೂಮಿಯನ್ನಾದರೂ ಏಕಾಕಿಯಾಗಿ ಯುದ್ಧದಲ್ಲಿದಿರಿಸಿ ಹೋರಾಡುವೆನು ಇನ್ನು ಈ ಪಾಂಡವರನ್ನಿದಿರಿಸಿ ಯುದ್ಧಮಾಡುವುದೇನು ದೊಡ್ಡದು ? ನಾನು ಈ ಯುದ್ಧದಲ್ಲಿ ಪಾಂಡವರನ್ನೂ, ಸೋಮಕರನ್ನೂ ಇದಿರಿಸಿ ಜಯಿಸುವೆನು ನೋಡು ! ನಾನೇ ಈಗ ನಿನ್ನ ಸೈನ್ಯಕ್ಕೆ ನಿಯಾಮಕನಾಗಿ ನಿಲ್ಲುವೆನು ನೀನು ಶಂಕಿಸಬೇಡ ! ಶತ್ರುಗಳು ಮೀರಿ ಬರಲಾರದ ಅಪೂರ್ವವ್ಯೂಹವನ್ನು ನಾನು ಏರ್ಪಡಿಸುವೆನು ನೋಡು ! ಓ ರಾಜಾ ! ನಾನು ಈದಿನವೇ ಎಲ್ಲಾ ಪಾಂಚಾಲರನ್ನೂ, ಪಾಂಡವರೊಡನೆ ಸೇರಿಸಿ ಸಂಹರಿಸಿಬರುವೆನು ಹಾಗಿಲ್ಲವೇ ವೀರಸ್ವರ್ಗವಾದರೂ ನನಗೆ ಲಭಿಸಲಿ ! ಶತ್ರುಭಯಂಕರನಾಗಿ ರಣರಂಗದಲ್ಲಿ ಸಂಚರಿಸುವ ನನ್ನನ್ನು ಲೋಕವೆಲ್ಲವೂ ನೋಡಲಿ ಈಗ ಎಲ್ಲಾ ಪಾಂಡವರೊಡನೆ, ಸಾತ್ಯಕಿ ವಾಸುದೇವ ಪಾಂಚಾಲರೂ, ಚೈದ್ಯರೂ, ದ್ರೌಪದೀ ಕುಮಾರರೂ, ಧೃಷ್ಟದ್ಯುಮ್ನನೂ, ಶಿಖಂಡಿಯೂ, ಎಲ್ಲಾ ಪ್ರಭದ್ರಕರೂ ನನ್ನ ಪರಾಕ್ರಮವನ್ನೂ, ನನ್ನ ಬಿಲ್ಲಿನ ಶಕ್ತಿಯನ್ನೂ, ನನ್ನ ಹಸ್ತಲಾಘವವನ್ನೂ, ಅಸ್ತ್ರವೀರ್ಯವನ್ನೂ, ನನ್ನ ಬಾಹುಬಲವನ್ನೂ ನೋಡಲಿ ! ನನ್ನ ಭುಜವೀರ್ಯವನ್ನೂ, ನನ್ನ ಅಸ್ತ್ರವಿದ್ಯಾಚತುರತೆಯನ್ನೂ ಇಲ್ಲಿ ಪಾಂಡವರೂ, ಆಕಾಶದಲ್ಲಿ ಚಾರಣರೊಡಗೂಡಿದ ಸಿದ್ಧರೂ ನೋಡಲಿ ! ಈದಿನದಲ್ಲಿ ಪಾಂಡವರು ನನ್ನ ಪರಾಕ್ರಮವನ್ನು ನೋಡಿ, ಅದಕ್ಕೆ ಪ್ರತಿಯಾಗಿ ಅವರೂ ಹಲವು ಸಾಹಸಕಾರ್ಯಗಳನ್ನು ಮಾಡುವರು ಆದರೇನು ? ಈದಿನವೇ ನಾನು ಪಾಂಡವರ ಸೈನ್ಯಗಳನ್ನೆಲ್ಲ ಚದರಿಸಿ ಓಡಿಸುವೆನು ಕೌರವರಾಜಾ ! ನಿನಗೆ ಪ್ರಿಯವನ್ನುಂಟುಮಾಡುವುದಕ್ಕಾಗಿ ಈದಿನ ನಾನು ದ್ರೋಣ, ಭೀಷ್ಮ, ಕರ್ಣರಿಗಿಂತಲೂ ಅಧಿಕಪರಾಕ್ರಮದಿಂದ ಯುದ್ಧರಂಗದಲ್ಲಿ ಸಂಚರಿಸುವೆನು '' ಎಂದನು ಧೃತರಾಷ್ಟ್ರಮಹಾರಾಜಾ ! ಚಿಂತಾಕುಲನಾಗಿದ್ದ ದುರ್ಯೋಧನನಿಗೆ ಶಲ್ಯನ ಈ ಮಾತುಗಳು ಕಿವಿಗೆ ಬಿದ್ದೊಡನೆ, ಉತಾ

ಹವು ಹುಟ್ಟಿತು ಶಾಸ್ತ್ರವಿಧಿಗನುಸಾರವಾಗಿ ಮದ್ರರಾಜನನ್ನು ಸೈನ್ಯದ ನಡುವೆ ನಿಲ್ಲಿಸಿ, ಸೇನಾಧಿಪತ್ಯದಲ್ಲಿ ಅಭಿಷೇಕಮಾಡಿದನು ಸೈನ್ಯದ ನಾನಾ ಕಡೆಗಳಿಂದ ಸಂತೋಷಸಿಂಹನಾದಗಳುಂಟಾದುವು. ನಿನ್ನ ಕಡೆಯ ಸೈನ್ಯದಲ್ಲಿ ನಾಲ್ಕು ಬಗೆಯ ವಾದ್ಯಗಳೂ ಮೊಳಗಿದುವು ಯುದ್ಧವೀರರೂ, ಮಹಾರಥಿಕರೂ ಆದ ಮದ್ರಕರೆಲ್ಲರಿಗೂ ಮಿತಿಮಿರಿದ ಸಂತೋಷವುಂಟಾಯಿತು ಆಗ ಅವರೆಲ್ಲರೂ ಸೇನಾಮುಖದಲ್ಲಿ ಪ್ರಕಾಶಿಸುತಿದ್ದ ಶಲ್ಯನನ್ನು ಕುರಿತು "ಪ್ರಭೂ! ಜಯಶೀಲನಾಗು! ದೀರ್ಘಾಯುಷ್ಮಂತನಾಗಿದ್ದು ಶತ್ರುಗಳನ್ನು ನಾಶಮಾಡು ನಿನ್ನ ಬಾಹುಬಲದ ಸಹಾಯದಿಂದ ದುರ್ಯೋಧನನು ಅಖಂಡಭೂಮಂಡಲವೆಲ್ಲವನ್ನೂ ಶತ್ರುಬಾಧೆಯಿಲ್ಲದೆ ನಿರಾತಂಕವಾಗಿ ಆಳುವಂತಾಗಲಿ! ಅಮರ್ತ್ಯರಾದ ದೇವಾಸುರರಿಂದ ಕೂಡಿದ ಪ್ರಪಂಚಗಳನ್ನೆಲ್ಲ ನೀನು ಯುದ್ಧದಲ್ಲಿ ಜಯಿಸಲು ಶಕ್ತನು ಹೀಗಿರುವಾಗ ಮರಣಸ್ವಭಾವವುಳ್ಳ ಸೃಂಜಯರನ್ನೂ, ಸೋಮಕರನ್ನೂ ಈಗಿನ ಯುದ್ಧದಲ್ಲಿ ಜಯಿಸಿ ಜಯಶಾಲಿಯಾಗುವುದರಲ್ಲಿ ಸಂದೇಹವೇನಿದೆ?" ಎಂದು ಸ್ತುತಿಸಿದರು ಆಗ ಶಲ್ಯನಿಗೆ ಭೀರುಜನಗಳಿಗೆ ದುರ್ಲಭವಾದ ವೀರ್ಯೋತ್ಸಾಹವು ಹುಟ್ಟಿತು. ಶಲ್ಯನು ಅಭಿಷಿಕ್ತನಾದೊಡನೆಯೇ ಆ ಯುದ್ಧಭೂಮಿಯಲ್ಲಿ ನಿಮ್ಮ ಕಡೆಯ ಸೈನಿಕರೆಲ್ಲರಿಗೂ ಕರ್ಣನ ಮರಣದಿಂದುಂಟಾದ ವ್ಯಸನವೇ ಮರತುಹೋದಂತಾಯಿತು ಇದರಿಂದ ಅವರಿಗೆ ಮನೋಧೈರ್ಯವೂ, ಉತ್ಸಾಹವೂ ಹುಟ್ಟಿ, "ಇನ್ನು ಪಾಂಡವರು ಮದ್ರರಾಜನ ಕೈಗೆ ಸಿಕ್ಕಿ ಹತರಾದಂತೆಯೇ" ಎಂದು ಭಾವಿಸಿದರು ಓ ಭರತಕುಲೋತ್ತಮಾ! ಒಡನೆಯೇ ಆ ನಮ್ಮ ಸೈನ್ಯವೆಲ್ಲ ಮಹಾಸಂತೋಷಗೊಂಡು, ಆ ರಾತ್ರಿ ಆನಂದದಿಂದ ಸುಖವಾಗಿ ಮಲಗಿತು

ಅತ್ತಲಾಗಿ ಯುಧಿಷ್ಠಿರನು ನಮ್ಮ ಸೈನ್ಯದಲ್ಲಿ ನಡೆದ ಆ ಸಂತೋಷಧ್ವನಿಯನ್ನು ಕೇಳಿದೊಡನೆ, ಎಲ್ಲಾ ಕ್ಷತ್ರಿಯರೂ ನೋಡುತ್ತಿರುವಂತೆಯೇ ವೃಷ್ಣಿಕುಲಜಾತನಾದ ಕೃಷ್ಣನನ್ನು ಕುರಿತು "ಮಾಧವಾ! ಅಸ್ತ್ರವಿದ್ಯಾನಿಪುಣನಾದ ಶಲ್ಯನನ್ನು ದುರ್ಯೋಧನನು ಸೈನ್ಯಾಧಿಪತಿಯನ್ನಾಗಿ ಮಾಡಿದಂತಿದೆ ಇನ್ನು ಈ ವಿಚಾರವಾಗಿ ಮುಂದೇನು ಮಾಡಬೇಕೋ

ಅದನ್ನು ಹಿಂದೆ ಮಾಡಿದಂತೆ ನೀನೇ ಆಲೋಚಿಸಿ, ಉಚಿತ ರೀತಿಯಲ್ಲಿ ಮಾಡಬೇಕು ನೀನೇ ನಮಗೆ ನಾಯಕನು ನೀನೇ ನಮಗೆ ರಕ್ಷಕನು ಮುಂದೆ ಮಾಡಬೇಕಾದ ಕೆಲಸಗಳನ್ನು ನಿರ್ಣಯಿಸಬೇಕು" ಎಂದನು ಓ ಮಹಾರಾಜಾ! ಆಗ ಕೃಷ್ಣನು ಯುಧಿಷ್ಠಿರನನ್ನು ಕುರಿತು "ಓ ಭರತಕುಲೋತ್ತಮಾ! ನನಗೆ ಕೃತವರ್ಮನ ಸ್ವಭಾವವು ಚೆನ್ನಾಗಿ ತಿಳಿದಿರುವುದು. ಅವನು ಮಹಾಬಲವೀರ್ಯಗಳುಳ್ಳವನು ಅಧಿಕ ತೇಜಸ್ವಿ! ಕಾರ್ಯಸಮರ್ಥನು! ವಿಚಿತ್ರರೀತಿಯಲ್ಲಿ ಯುದ್ಧಮಾಡಬಲ್ಲವನು! ಹಸ್ತಲಾಘವವುಳ್ಳವನು! ಆ ಶಲ್ಯನು ಭೀಷ್ಮ ದ್ರೋಣ ಕರ್ಣರಿಗೆ ಸಮಾನನೇ! ಅಥವಾ ಅವರಿಗಿಂತಲೂ ಒಂದು ಕೈ ಮೇಲೆಂದೇ ನನ್ನ ಭಾವನೆ ರಾಜಾ! ನಾನು ಆಲೋಚಿಸಿ ನೋಡಿದುದರಲ್ಲಿ, ಈಗ ನಮ್ಮಲ್ಲಿ ಆ ಮದ್ರರಾಜನಿಗೆ ಸಮವಾಗಿ ಯುದ್ಧಮಾಡುವ ಬೇರ ವೀರರನ್ನು ಕಾಣಲಿಲ್ಲ. ಆತನು ಬಲದಲ್ಲಿ ಭೀಮಾರ್ಜುನ ಸಾತ್ಯಕಿ ಧೃಷ್ಟದ್ಯುಮ್ನ ಶಿಖಂಡಿಗಳೆಲ್ಲರನ್ನೂ ಮೀರಿದವನು ಸಿಂಹಪರಾಕ್ರಮದಿಂದಲೂ, ಆನೆಯಂತೆ ದೇಹಶಕ್ತಿಯಿಂದಲೂ ಕೂಡಿದ ಆ ಮದ್ರರಾಜನು ಪ್ರಳಯಕಾಲದಲ್ಲಿ ಕೋಪಗೊಂಡ ಯಮನು, ಪ್ರಾಣಿಗಳ ನಡುವೆ ಸಂಚರಿಸುವಂತೆ ಯುದ್ಧರಂಗದಲ್ಲಿ ಮಹಾಭಯಂಕರನಾಗಿ ಸಂಚರಿಸುವನು ಓ ಪುರುಷಶ್ರೇಷ್ಠಾ! ವ್ಯಾಘ್ರಸಮಾನಬಲವುಳ್ಳ ನೀನೊಬ್ಬನು ಹೊರತು ಅವನನ್ನಿದಿರಿಸಿ ಯುದ್ಧಮಾಡಬಲ್ಲವನಾವನನ್ನೂ ನಾನು ಕಾಣಲಿಲ್ಲ ಓ ಕುರುನಂದನಾ! ಯುದ್ಧದಲ್ಲಿ ಕೋಪಗೊಂಡ ಮದ್ರರಾಜನನ್ನು ಕೊಲ್ಲಲು ಈ ಪ್ರಪಂಚದಲ್ಲಿ ನಿನ್ನಹೊರತು ಅದಕ್ಕೆ ಸಮರ್ಥನಾದವನು ಬೇರೊಬ್ಬನೂ ಇಲ್ಲ ಆದುದರಿಂದ ಇದುವರಗೂ ದಿನತಪ್ಪದ ಯುದ್ಧಮಾಡುತ್ತ ನಿನ್ನ ಸೈನ್ಯವನ್ನೆಲ್ಲ ಕಲಗಿಸುತಿದ್ದ ಆ ಶಲ್ಯನನ್ನು ಈಗ ನೀನೇ ಇದಿರಿಸಿ, ಹಿಂದೆ ದೇವೇಂದ್ರನು ಶಂಬರನನ್ನು ಹೇಗೋ ಹಾಗೆ ಅವನನ್ನು ಸಂಹರಿಸಬೇಕು ಕರ್ಣನಿಂದಾಚೆಗೆ ದುರ್ಯೋಧನನು ಶಲ್ಯನನ್ನೇ ಬಲವಾಗಿ ಆದರಿಸಿ ಗೌರವಿಸಿರುವನು ಯುದ್ಧದಲ್ಲಿ ಆ ಮದ್ರರಾಜನನ್ನು ಕೊಂದಲ್ಲದೆ ನಿನಗೆ ಜಯವು ಕೈಗೂಡದು ಆತನನ್ನು ಸಂಹರಿಸಿದರೆ ದುರ್ಯೋಧನನ ಸೈನ್ಯವೆಲ್ಲವನ್ನೂ ಕೊಂದಂತೆಯೇ. ಕುಂತೀನಂದನಾ! ನನ್ನ ಮಾತನ್ನು ಕೇಳಿ ಮದ್ರರಾಜನನ್ನು ಯುದ್ಧದಲ್ಲಿ

ದಿರಿಸು ದೇವೇಂದ್ರನು ನಮುಚಿಯನ್ನು ಕೊಂದಂತೆ ನೀನು ಆ ಶಲ್ಯನನ್ನು ಸಂಹರಿಸು. ಆತನು ನಿನಗೆ ಮಾವನೆಂದು ಅವನ ವಿಷಯದಲ್ಲಿ ನೀನು ದಯಾದಾಕ್ಷಿಣ್ಯಗಳನ್ನಿಡಬೇಡ ಕ್ಷತ್ರಿಯಧರ್ಮವನ್ನನುಸರಿಸಿ ಆ ಶಲ್ಯನನ್ನು ವಧಿಸು ದ್ರೋಣ ಭೀಷ್ಮರೆಂಬ ಮಹಾಸಮುದ್ರವನ್ನೂ, ಕರ್ಣನೆಂಬ ಅಗಾಧವಾದ ಮಡುವನ್ನೂ ದಾಟಿ ಬಂದ ನೀನು, ಈಗ ದಾಕ್ಷಿಣ್ಯಕ್ಕೊಳಪಟ್ಟು, ಆ ಶಲ್ಯನೆಂಬ ಗೋಷ್ಪದದಲ್ಲಿ (ಹಸುವಿನ ಹಜ್ಜೆಯಷ್ಟಿರುವ ಹಳ್ಳದಲ್ಲ) ನಿನ್ನ ಎಲ್ಲಾ ಪರಿವಾರಗಳೊಡನೆ ಮುಳುಗಿಹೋಗದಿರು ನಿನ್ನ ತಪೋಬಲವನ್ನೂ, ಕ್ಷತ್ರಿಯ ಬಲವನ್ನೂ ಯುದ್ಧದಲ್ಲ ಸಂಪೂರ್ಣವಾಗಿ ತೋರಿಸಿ, ಆ ಮಹಾರಥನನ್ನು ಸಂಹರಿಸು" ಎಂದನು ಕೃಷ್ಣನು ಹೀಗೆ ಹೇಳಿದಮೇಲೆ ಧರ್ಮರಾಜನು ಇತರ ಪಾಂಡವರಿಂದ ಪೂಜಿತನಾಗಿ, ಸಾಯಂಕಾಲದಲ್ಲಿ ತನ್ನ ಬಿಡಾರವನ್ನು ಸೇರಿದನು ಆಮೇಲೆ ಅವನು ತನ್ನ ಸಹೋದರರನ್ನೂ, ಪಾಂಚಾಲರನ್ನೂ, ಸೋಮಕರನ್ನೂ ಕಳುಹಿಸಿಬಿಟ್ಟು, ಆ ರಾತ್ರಿಯೆಲ್ಲಾ ನಿಶ್ಚಿಂತನಾಗಿ ಆನೆಯಂತೆ ಸುಖವಾಗಿ ಮಲಗಿದ್ದನು ಆ ರಾತ್ರಿ ಪಾಂಚಾಲರೂ, ಪಾಂಡವರೂ ಕರ್ಣನ ಮರಣಕ್ಕಾಗಿ ಸಂತೋಷಗೊಂಡು ಸುಖವಾಗಿ ಮಲಗಿದರು ಹಾಗೆಯೇ ಪಾಂಡವರ ಸೈನ್ಯವೆಲ್ಲವೂ ಸೂತಪುತ್ರನ ಮರಣದಿಂದುಂಟಾದ ಹರ್ಷದಿಂದ ನಿಶ್ಚಿಂತವಾಗಿ ನಿದ್ರಿಸಿತು

ಇದು ಆರನೆಯ ಅಧ್ಯಾಯವು



{ ಉಭಯಪಕ್ಷದ ಸೈನಿಕರೂ ವ್ಯೂಹರಚನೆಯಿಂದ ದ್ವಂದ್ವಯುದ್ಧವನ್ನು ಆರಂಭಿಸಿದುದು }

ರಾತ್ರಿಯು ಕಳೆದೊಡನೆ ದುರ್ಯೋಧನನು ತನ್ನ ಕಡೆಯವರೆಲ್ಲರನ್ನೂ ಕರೆಸಿ "ಮಹಾರಥರೇ! ಯುದ್ಧಕ್ಕೆ ಸಿದ್ಧರಾಗಿರಿ" ಎನಲು, ಸೇನೆಯು ಸಿದ್ಧವಾಯಿತು ಕೆಲವರು ರಥಗಳನ್ನು ಹೂಡಿ ಸಿದ್ಧಪಡಿಸಿದರು. ಕೆಲವರು ಅಲ್ಲಲ್ಲಿ ಇತರ ಸನ್ನಾಹಕ್ಕಾಗಿ ಓಡಾಡುತ್ತಿದ್ದರು ಆನೆಗಳನ್ನು ಅಲಂಕರಿಸಿದರು. ಕಾಲಾಳುಗಳು ಸನ್ನದ್ಧರಾದರು. ಅಶ್ವಿಕರು

ಕುದುರಗಳಿಗೆ ಜೀನುಹಾಕಿ ಸಿದ್ಧಪಡಿಸಿದರು. ಅಲ್ಲಲ್ಲಿ ನಾಲ್ಕು ಬಗೆಯ ವಾದ್ಯಗಳೂ ಮೊಳಗಿದುವು ಒಬ್ಬರನ್ನೊಬ್ಬರು ಇದಿರಿಸಿ ಗರ್ಜಿಸುವ ಶಬ್ದವೂ, ಸೈನಿಕರ ವೀರವಾದಗಳೂ ಹೊರಟುವು ಸತ್ತುಳಿದಿದ್ದ ಸೈನಿಕರಲ್ಲರೂ, ಸಾಯುವವರೆಗೂ ತಾವು ಹಿಂತಿರುಗುವುದಿಲ್ಲವೆಂದೇ ಸಂಕಲ್ಪಿಸಿ, ಉತ್ಸಾಹಗೊಂಡು ಶಲ್ಯನನ್ನು ತಮ್ಮ ಸೈನ್ಯಾಧಿಪತಿಯನ್ನಾಗಿ ಮಾಡಿ ಮುಂದಿಟ್ಟುಕೊಂಡು ಯುದ್ಧಸನ್ನದ್ಧರಾಗಿ ತಮ್ಮತಮ್ಮ ಸೈನ್ಯದೊಡನೆ ಹೊರಟರು ಆಮೇಲೆ ಎಲ್ಲಾ ಸೈನಿಕರೂ, ಕೃಪ, ಕೃತವರ್ಮ, ಅಶ್ವತ್ಥಾಮ, ಶಲ್ಯ, ಶಕುನಿ, ಮೊದಲಾಗಿ ಇನ್ನೂ ಉಳಿದಿದ್ದ ಇತರರಾಜರೂ ನಿನ್ನ ಮಗನೊಡನೆ ಸೇರಿ, ಮುಂದೆ ಹೇಳುವಂತೆ ತಮ್ಮಲ್ಲಿ ಕೆಲವು ಸಂಕೇತಗಳನ್ನು ಮಾಡಿಕೊಂಡರು ' ಇನ್ನುಮೇಲೆ ಆಚಾರ್ಯಕುಮಾರನಾದ ಅಶ್ವತ್ಥಾಮನಾದರೂ ತಾನು ಬೇರೆಯಾಗಿ ಶತ್ರುಗಳೊಡನೆ ಯುದ್ಧಕ್ಕೆ ನಿಲ್ಲಬಾರದು. ಹೇಗೂ ಪಾಂಡವರೊಡನೆ ನಮ್ಮಲ್ಲಿ ಯಾವನೊಬ್ಬನೂ ಒಂಟಿಯಾಗಿ ಯುದ್ಧಕ್ಕೆ ನಿಲ್ಲಲೇಬಾರದು ಈ ನಿಯಮವನ್ನು ಮೀರಿ ಯಾವನೊಬ್ಬನು ಏಕಾಕಿಯಾಗಿ ಯುದ್ಧಕ್ಕೆ ಹೋಗುವನೋ, ಅಥವಾ, ಯಾವನು ಯುದ್ಧ ಮಾಡುತ್ತಿರುವ ಭಟನನ್ನು ಬಿಟ್ಟು ಹೋಗುವನೋ, ಆತನು ಪಂಚಮಹಾಪಾತಕಗಳಿಗೂ, ಉಪಪಾತಕಗಳಿಗೂ ಪಾತ್ರನಾಗುವನು ನಮ್ಮ ಯುದ್ಧವೀರರೆಲ್ಲ ಒಟ್ಟುಗೂಡಿಯೇ ಒಬ್ಬರನ್ನೊಬ್ಬರು ರಕ್ಷಿಸುತ್ತ, ಯುದ್ಧ ಮಾಡಬೇಕು ' ಎಂದು ಪ್ರತಿಜ್ಞೆಮಾಡಿಕೊಂಡು ಶತ್ರುಗಳನ್ನಿದಿರಿಸಿ ಹೊರಟರು ಓ ರಾಜಾ! ಹಾಗೆಯೇ ಪಾಂಡವರೂ ಯುದ್ಧಕ್ಕೆ ಸೈನ್ಯವನ್ನು ಸಿದ್ಧಪಡಿಸಿಕೊಂಡು ಯುದ್ಧಭೂಮಿಯ ನಾಲ್ಕು ಕಡೆಗಳಿಂದಲೂ ಸಿದ್ಧರಾಗಿ ಹೊರಟರು ಆಮೇಲೆ ರಥಗಜಗಳಿಂದ ತುಂಬಿದ ಆ ದೊಡ್ಡ ಸೈನ್ಯಗಳೆಲ್ಲ ಸಮುದ್ರಘೋಷದಂತೆ ಕೂಗುತ್ತ, ಉಕ್ಕಿಬರುವ ಸಮುದ್ರದಂತೆ ಹೊರಟಿತು " ಎಂದನು

ಆಗ ಧೃತರಾಷ್ಟ್ರನು " ಸಂಜಯಾ! ನಾನು ನಿನ್ನ ಬಾಯಿಂದಲೇ ಭೀಷ್ಮನು ಹತನಾದುದನ್ನು ಕೇಳಿದೆನು. ದ್ರೋಣವಧವನ್ನೂ ಕೇಳಿದೆನು ಕರ್ಣನ ಸಾವನ್ನೂ ಕೇಳಿದುದಾಯಿತು ಇನ್ನು ಶಲ್ಯನ ಮತ್ತು

ನನ್ನ ಮಗನಾದ ದುರ್ಯೋಧನನ ಮರಣವನ್ನೂ ತಿಳಿಸಿಬಿಡು! ಧರ್ಮ ರಾಜನಿಂದ ಶಲ್ಯನು ಯುದ್ಧದಲ್ಲಿ ಕೊಲ್ಲಲ್ಪಟ್ಟದು ಹೇಗೆ? ಮಹಾಬಾಹು ಬಲವುಳ್ಳ ನಮ್ಮ ದುರ್ಯೋಧನನಾದರೂ ಆ ಭೀಮನಿಂದ ಹೇಗೆ ಮರಣ ಕ್ಕೀಡಾದನು?" ಎನಲು, ಸಂಜಯನು ಹೇಳುವನು

"ಓ ರಾಜೇಂದ್ರಾ! ಸರ್ವನಾಶಕರವಾದ ಆ ಯುದ್ಧವನ್ನೂ ವಿವರಿ ಸುವೆನು ಕೇಳು ಅಂತಹ ಶೂರಾಗ್ರಣಿಗಳಾದ ದ್ರೋಣ ಭೀಷ್ಮ ಕರ್ಣ ರು ಕೊಲ್ಲಲ್ಪಟ್ಟಮೇಲೆಯೂ, ನಿನ್ನ ಮಕ್ಕಳಿಗೆ ಎಲ್ಲಾ ಪಾಂಡವರನ್ನೂ ಶಲ್ಯನೇ ಕೊಲ್ಲುವನೆಂಬ ನಚ್ಚಾಸೆ ಹುಟ್ಟಿತು. ನಿನ್ನ ಮಗನು ಆ ಆಶೋ ತ್ತರದಿಂದಲೇ ಮನಸ್ಸಿಗೆ ಸಮಾಧಾನವನ್ನು ತಂದುಕೊಂಡು, ಆ ಶಲ್ಯನಿಂದ ಲೇ ತಾನು ಸನಾಥನಾದಂತೆ ಭಾವಿಸಿದನು. ಆದರೂ ಕರ್ಣನನ್ನು ಕೊಂದ ಉತ್ಸಾಹದಿಂದ ಪಾಂಡವರ ಕಡೆಯವರು ಸಿಂಹನಾದಮಾಡುತ್ತಿದ್ದಾಗಲೆಲ್ಲ ಕೌರವರನ್ನು ದೊಡ್ಡ ಭಯವು ಆವರಿಸಿತು ಆದರೂ ಮದ್ರರಾಜನು ಅವರನ್ನು ಸಮಾಧಾನಗೊಳಿಸಿ, ಸರ್ವತೋಭದ್ರವೆಂಬ ಹೆಸರುಳ್ಳ ದೃಢ ವ್ಯೂಹವೊಂದನ್ನೇರ್ಪಡಿಸಿದನು ಆಮೇಲೆ ತಾನು ಶತ್ರುಭಯಂಕರವಾದ ತನ್ನ ದೃಢಧನುಸ್ಸನ್ನು ಒದರುತ್ತ, ಸಿಂಧುದೇಶದಲ್ಲಿ ಹುಟ್ಟಿದ ಉತ್ತಮಾ ಶ್ವಗಳನ್ನು ಹೂಡಿದ ರಥವನ್ನೇರಿ ಯುದ್ಧಕ್ಕೆ ಹೊರಟನು ಶಲ್ಯನು ಹೀಗೆ ರಥಾರೂಢನಾಗಿ ನಿನ್ನ ಪುತ್ರರಿಗೆ ಧೈರ್ಯವನ್ನು ಹುಟ್ಟಿಸುತ್ತ, ವೀರರಾದ ಮದ್ರರೊಡನೆಯೂ, ಅಜೇಯನಾದ ಕರ್ಣಪುತ್ರನೊಡನೆಯೂ ಆ ವ್ಯೂಹ ಕ್ಕೆ ಮುಖಸ್ಥಾನದಲ್ಲಿ ನಿಂತನು ತ್ರಿಗರ್ತವೀರರಿಂದ ಪರಿವೃತನಾದ ಕೃತ ವರ್ಮನು ಅದರ ಎಡಭಾಗದಲ್ಲಿ ನಿಂತನು ಶಕ ಯವನರೊಡಗೂಡಿದ ಕೃಪಾಚಾರ್ಯನು ಬಲಭಾಗದಲ್ಲಿ ನಿಂತನು ಅಶ್ವತ್ಥಾಮನು ಕಾಂಭೋ ಜರಿಂದ ಪರಿವೃತನಾಗಿ ಹಿಂಭಾಗದಲ್ಲಿ ನಿಂತನು ಕೌರವವೀರರಿಂದ ರಕ್ಷಿತ ನಾದ ದುರ್ಯೋಧನನು ವ್ಯೂಹಮಧ್ಯದಲ್ಲಿ ನಿಂತನು ಮಹಾರಥನೂ, ದ್ಯೂತವಿದ್ಯಾನಿಪುಣನೂ ಆದ ಶಕುನಿಯು ದೊಡ್ಡ ಅಶ್ವಸೇನೆಯೊಡನೆ ಸಿದ್ಧನಾದನು ಓ ಮಹಾರಾಜಾ! ಅತ್ತಲಾಗಿ ಪಾಂಡವರೂ ಮೂರು ವಿಭಾಗವಾಗಿ ಸೈನ್ಯವನ್ನು ಸಿದ್ಧಪಡಿಸಿಕೊಂಡು, ನಮ್ಮ ಸೈನ್ಯದ ಸಮಾ

ಪಕ್ಕೆ ಬಂದರು ಧೃಷ್ಟದ್ಯುಮ್ನನೂ, ಶಿಖಂಡಿಯೂ, ಮಹಾರಥನಾದ ಸಾತ್ಯಕಿಯೂ ಮುಂದಾಳುಗಳಾಗಿ ಶಲ್ಯನ ಸೈನ್ಯವನ್ನಿದಿರಿಸಿ ಹೊರಟರು ಯುಧಿಷ್ಠಿರನು ತಾನೇ ಶಲ್ಯನನ್ನು ಕೊಲ್ಲುವ ಉದ್ದೇಶದಿಂದ ತನ್ನ ಸೈನ್ಯದೊಡನೆ ಪರಿವೃತನಾಗಿ ಅವನನ್ನು ಇದಿರಿಸಿ ಹೊರಟನು ಅರ್ಜುನನು ಅಸ್ತ್ರವಿದ್ಯಾನಿಪುಣನಾದ ಕೃತವರ್ಮನನ್ನೂ, ಸಂಶಪ್ತಕರನ್ನೂ ವೇಗದಿಂದಿದಿರಿಸಿ ಹೊರಟನು ಭೀಮಸೇನನು ಮಹಾರಥರಾದ ಸೋಮಕರೊಡಗೂಡಿ ಕೃಪನನ್ನಿದಿರಿಸಿದನು ಮಾದ್ರೀಪುತ್ರರಾದ ನಕುಲ ಸಹದೇವರು ತಮ್ಮ ಸೈನ್ಯಗಳೊಡನೆ ಸೇನಾಸಮೇತನಾಗಿ ನಿಂತಿದ್ದ ಶಕುನಿಯನ್ನೂ, ಮಹಾರಥನಾದ ಉಲೂಕನನ್ನೂ ಸಮೀಪಿಸಿದರು ರೌದ್ರಾವೇಶವನ್ನು ತಾಳಿ ಆಯುಧಪಾಣಿಗಳಾಗಿ ನಿಂತಿದ್ದ ನಿನ್ನ ಕಡೆಯ ಹತ್ತುಸಾವಿರಮಂದಿ ವೀರರು ಆ ಪಾಂಡವರನ್ನಿದಿರಿಸಿ ಯುದ್ಧಕ್ಕೆ ಸಿದ್ಧರಾದರು" ಎಂದನು

ಆಗ ಧೃತರಾಷ್ಟ್ರನು "ಓ ಸಂಜಯಾ! ಅಸ್ತ್ರವಿದ್ಯಾನಿಪುಣರಾದ ಭೀಷ್ಮದ್ರೋಣರೂ, ಕರ್ಣನೂ, ಜಯದ್ರಥನೂ ಕೊಲ್ಲಲ್ಪಟ್ಟು, ಕೌರವಪಾಂಡವಪಕ್ಷಗಳೆರಡರಲ್ಲಿಯೂ ಉಳಿದಿದ್ದ ಕೆಲವುಮಂದಿ ಮಾತ್ರವೇ ತಮ್ಮ ಪರಾಕ್ರಮಗಳನ್ನು ವ್ಯಕ್ತಪಡಿಸುತ್ತಿದ್ದರಷ್ಟೆ! ಆಗ ನಮ್ಮ ಸೈನ್ಯದಲ್ಲಿಯೂ, ನಮ್ಮ ಶತ್ರುಗಳ ಸೈನ್ಯದಲ್ಲಿಯೂ ಉಳಿದಿದ್ದ ಸೈನ್ಯದ ಸಂಖ್ಯೆಯೆಷ್ಟು?" ಎಂದನು ಅದಕ್ಕಾ ಸಂಜಯನು ಆಗ ಉಳಿದಿದ್ದ ಸೈನ್ಯದ ಸಂಖ್ಯೆಯೆಷ್ಟೆಂಬುದನ್ನು ತಿಳಿಸುವೆನು ಕೇಳು ನಮ್ಮ ಕಡೆಯಲ್ಲಿ ಹನ್ನೊಂದುಸಾವಿರ ರಥಗಳೂ, ಹನ್ನೊಂದುಸಾವಿರದೇಳುನೂರು ಆನೆಗಳೂ, ಎರಡು ಲಕ್ಷ ಕುದುರಗಳೂ, ಮೂರು ಕೋಟಿ ಕಾಲಾಳುಗಳೂ ಉಳಿದಿದ್ದರು ನಮ್ಮಲ್ಲಿ ಉಳಿದಿದ್ದ ಸೈನ್ಯವೆಲ್ಲವೂ ಇಷ್ಟೇ ಪಾಂಡವರ ಸೈನ್ಯದಲ್ಲಿ ಆರುಸಾವಿರ ರಥಗಳೂ, ಆರುಸಾವಿರ ಆನೆಗಳೂ, ಹತ್ತುಸಾವಿರ ಕುದುರಗಳೂ ಎರಡು ಕೋಟಿ ಕಾಲ್ಬಲವೂ ಇದ್ದುವು ರಾಜೇಂದ್ರಾ! ಈ ಸೈನಿಕರೆಲ್ಲ ಮದ್ರರಾಜನ ಸೇನಾಧಿಪತ್ಯದಲ್ಲಿ ಯುದ್ಧಕ್ಕೆ ಬಂದು ಸೇರಿದರು ಹಾಗೆಯೇ ಪಾಂಡವರೂ, ಪಾಂಚಾಲರೂ ತಮ್ಮ ಸೈನ್ಯಗಳೊಡನೆ ನಮ್ಮ ಸೈನ್ಯವನ್ನಿದಿ

ರಿಸಿ ಬಂದರು ಓ ರಾಜಾ! ಹೀಗೆ ಒಬ್ಬರನ್ನೊಬ್ಬರು ಕೊಲ್ಲುವುದಕ್ಕಾಗಿ ಕೂಡಿದ ವೀರಪುರುಷರಲ್ಲ, ಬೆಳಗಿನಜಾವದಲ್ಲಿಯೇ ತಮ್ಮ ಸೈನ್ಯಗಳೊಡನೆ ಸಿದ್ಧರಾಗಿಬಂದರು ಆಮೇಲೆ ನಿಮ್ಮ ಕಡೆಯವರಿಗೂ, ಶತ್ರುಪಕ್ಷದವರಿಗೂ ಭಯಂಕರಯುದ್ಧವು ಆರಂಭಿಸಿತು

ಇದು ಏಳನೆಯ ಅಧ್ಯಾಯವು

## { ಹದಿನೆಂಟನೆಯ ದಿನದ ಯುದ್ಧಾರಂಭವು ಸಂಕುಲ ಯುದ್ಧವು }

ಕೌರವರಿಗೆ ಸೃಂಜಯರೂಡನೆ ಘೋರಯುದ್ಧವು ಆರಂಭಿಸಿ, ದೇವಾಸುರಯುದ್ಧದಂತೆ ಪ್ರಬಲಿಸಿತು ರಥಗಳೂ, ಆನೆಗಳೂ, ಸಾವಿರಾರು ರಾವುತರೂ, ಕುದುರೆಗಳೂ ಒಂದಕ್ಕೊಂದು ಹೋರಾಡಿದುವು ಭಯಂಕರಾಕಾರದಿಂದ ಓಡುತ್ತಿದ್ದ ಆನೆಗಳ ಘೀಂಕಾರವು ಮಳೆಗಾಲದ ಮೇಘಗಳ ಧ್ವನಿಯಂತೆ ಕೇಳಿಸಿತು ಆನೆಗಳಿಂದ ಹೊಡೆಯಲ್ಪಟ್ಟ ಕೆಲವು ಮಂದಿ ರಥಿಕರು ರಥಸಮೇತರಾಗಿ ಕೆಳಗೆ ಬಿದ್ದರು ಕೆಲವರು ಭಯದಿಂದೋಡಿದರು ಕೆಲವು ರಥಿಕರು ಕುದುರೆಯ ಸಮೂಹಗಳನ್ನೂ, ಕಾಲಾಳುಗಳನ್ನೂ ಬಾಣಗಳಿಂದ ಹೊಡೆದು ಕೆಡಹಿದರು ಕುದುರೆಯ ವೀರರು ಯುದ್ಧದಲ್ಲಿ ಮಹಾರಥರನ್ನು ಎಲ್ಲಾ ಕಡೆಗಳಲ್ಲಿಯೂ ಸುತ್ತಿಕೊಂಡು, ಪ್ರಾಸಗಳು, ಶಕ್ತಿಗಳು, ರಿಷ್ಟಿಗಳು ಇವುಗಳಿಂದ ಹೊಡೆದರು ಧನುರ್ಧಾರಿಗಳು ಕೆಲವರು ಮಹಾರಥರಲ್ಲಿ ಒಬ್ಬೊಬ್ಬನಿಗೆ ಹಲವರಂತೆ ಸುತ್ತಿಕೊಂಡು ಕೊಂದರು ಕೆಲವು ಮಹಾರಥರು ಆನೆಗಳನ್ನೂ, ರಥಿಕರನ್ನೂ ಸುತ್ತಿಕೊಂಡು, ಅಲ್ಲಲ್ಲಿ ಭಯದಿಂದೋಡುತಿದ್ದ ಮಹಾರಥರನ್ನು ಬಿಡದೆ ಹಿಂಬಾಲಿಸಿ ಕೊಲ್ಲುತಿದ್ದರು ಆನೆಗಳು ತಮ್ಮಮೇಲೆ ಬೀಳುವ ಬಾಣಗಳನ್ನೂ ಲಕ್ಷ್ಯಮಾಡದೆ ರಥಿಕನನ್ನು ನಾಲ್ಕುಕಡೆಗಳಲ್ಲಿಯೂ ಸುತ್ತಿ ಬಡಿಯುತಿದ್ದುವು ಕೆಲವುಕಡೆ ಆನೆಗಳು ಆನೆಗಳನ್ನೂ, ರಥಿಕರು ರಥಿಕರನ್ನೂ ಇದಿರಿಸಿ, ಶಕ್ತಿ ತೋಮರ ನಾರಾಚಗಳಿಂದ ಹೊಡೆಯುತಿದ್ದರು ರಥ ಗಜ ತುರಗಗಳೆಲ್ಲ ಮುಂದೆ ನುಗ್ಗಿ, ಕಾಲಾಳುಗಳನ್ನು ರಣ

ರಂಗದಲ್ಲಿ ಕಾಲುಗಳಿಂದ ತಿಕ್ಕಿ ಕೊಲ್ಲುತ್ತ, ರಣರಂಗವನ್ನೆಲ್ಲ ಉಲ್ಲೋಲ ಕಲ್ಲೋಲವಾಗಿ ಮಾಡುವಂತೆ ಕಂಡುಬಂದುವು ಚಾಮರಾಲಂಕೃತಗಳಾದ ಬಿಳಿಯ ಕುದುರೆಗಳು, ಹಿಮಾಲಯದ ಪಾರ್ಶ್ವದಲ್ಲಿರುವ ಹಂಸಸಮೂಹದಂತೆ ತೋರುತ್ತ ಭೂಮಿಯನ್ನೇ ನುಂಗಿಬಿಡುವಂತೆ ಎಲ್ಲಾ ಕಡೆಗಳಲ್ಲಿಯೂ ವೇಗದಿಂದೋಡಿದುವು ಆ ಕುದುರೆಗಳ ಗೊರಸುಗಳ ಪೆಟ್ಟಿನಿಂದ ಚಿತ್ರಿತವಾದ ಭೂಮಿಯು, ನಖಕ್ಷತಗಳಿಂದ (ಗಂಡನ ಉಗುರಿನ ಗಾಯಗಳಿಂದ) ಒಪ್ಪುವ ಒಬ್ಬ ಸ್ತ್ರೀಯಂತೆ ಕಾಣಿಸಿತು.

ಓ ರಾಜಾ! ಕುದುರೆಗಳ ಗೊರಸುಗಳ ಧ್ವನಿ, ರಥಚಕ್ರಗಳ ಧ್ವನಿ, ಕಾಲಾಳುಗಳ ಕೂಗಾಟಗಳು, ಆನೆಗಳ ಘೀಂಕಾರಧ್ವನಿ, ನಾಲ್ಕುಬಗೆಯ ವಾದ್ಯಗಳ ಘೋಷಗಳು, ಶಂಖಧ್ವನಿ, ಇವೆಲ್ಲ ಸೇರಿ ಸಿಡಿಲಿನ ಧ್ವನಿಯಂತೆ ಕೇಳಿಸಿತು ಧನುಸ್ಸುಗಳ ಟಂಕಾರಧ್ವನಿಯಿಂದಲೂ, ಶಸ್ತ್ರಸಮೂಹಗಳ ಮತ್ತು ಕವಚಗಳ ಕಾಂತಿಗಳಿಂದ ನಮ್ಮ ಕಣ್ಣು ಕಿವಿಗಳೆರಡೂ ಪ್ರಯೋಜನಕ್ಕೆ ಬಾರದಂತಾದುವು ಮಹಾಗಜಗಳ ಸುಂಡಿಲುಗಳಿಗೆ ಸಮಾನಗಳಾದ ರಾಜರ ತೋಳುಗಳು ಬಾಣಗಳಿಂದ ಛೇದಿಸಲ್ಪಟ್ಟು ಮೇಲೆ ಹಾರುತ್ತ, ಆಕಾಶದಲ್ಲಿ ಒದರಾಡುತ್ತಲೂ, ಹೊರಳುತ್ತಲೂ ನಾನಾಚೇಷ್ಟೆಗಳನ್ನು ಮಾಡುತ್ತಿದ್ದುವು ರುಂಡಗಳು ತಾಳೆಯ ಮರಗಳಿಂದ ಬೀಳುವ ಹಣ್ಣುಗಳಂತೆ ಮಹಾಧ್ವನಿಯೊಡನೆ ಕೆಳಗೆ ಬೀಳುತಿದ್ದುವು ರಕ್ತದಿಂದ ತೊಯ್ದು ಕೆಳಗೆ ಬಿದ್ದ ಆ ತಲೆಗಳಿಂದ ರಣಭೂಮಿಯು, ಶರತ್ಕಾಲದಲ್ಲಿ ಸುವರ್ಣವರ್ಣವುಳ್ಳ ತಾವರೆಹೂಗಳಿಂದ ಕೊಳವು ಹೇಗೋ ಹಾಗೆ ಪ್ರಕಾಶಿಸಿತು ಕಣ್ಣಾಲೆಗಳು ಹೊರಳಿ, ಗಾಯಗೊಂಡು ನಿರ್ಜೀವವಾಗಿದ್ದ ಆ ಮುಖಗಳು, ರಣರಂಗಕ್ಕೆಲ್ಲ ಬಿಳಿದಾವರೆಯ ಹೂಗಳನ್ನು ಹರಡಿದಂತೆ ಕಾಣಿಸಿತು ರಾಜಾ! ಅಲ್ಲಲ್ಲಿ ಚಂದನಾನುಲೇಪಿತಗಳಾಗಿ, ಕೇಯೂರಾಂಗದಗಳೊಡನೆಯೂ, ಮಹಾಧನುಸ್ಸುಗಳೊಡನೆಯೂ ಕೂಡಿ ತುಂಡಾಗಿ ಬಿದ್ದಿದ್ದ ತೋಳುಗಳು, ಮುರಿದುಬಿದ್ದ ಇಂದ್ರಧ್ವಜಗಳಂತೆ ಕಾಣಿಸಿದುವು ಅಲ್ಲಲ್ಲಿ ಆನೆಗಳ ಸುಂಡಿಲುಗಳಿಗೆ ಸಮಾನವಾದ ತೊಡೆಗಳೂ, ತಲೆಯಿಲ್ಲದ ಮುಂಡಗಳೂ, ತುಂಡಾದ ಛತ್ರಚಾಮರಗಳೂ, ರಣಭೂಮಿಯ ಎಲ್ಲಾ ಕಡೆಗಳ

ಲ್ಲಿಯೂ ಬಿದ್ದು, ಆ ಸ್ಥಳವು ಪುಷ್ಪಗಳಿಂದ ತುಂಬಿದ ಕಾಡಿನಂತೆ ಪ್ರಕಾಶಿಸಿತು ಹೂಗಳಿಂದ ತುಂಬಿದ ಪಲಾಶವೃಕ್ಷಗಳಂತೆ ರಕ್ತದಿಗ್ಧಗಾತ್ರರಾದ ಅನೇಕಯೋಧರು ನಿರ್ಭಯವಾಗಿ ಸಂಚರಿಸುತಿದ್ದರು ಬಾಣಗಳಿಂದಲೂ, ತೋಮರಗಳಿಂದಲೂ ಹತವಾಗಿ ಕೆಳಗೆ ಬಿದ್ದ ಆನೆಗಳು ಆಕಾಶದಿಂದ ಬಿದ್ದ ಮೇಘಶಕಲಗಳಂತೆ ಕಾಣಿಸುತಿದ್ದುವು ಗಾಳಿಯಿಂದ ಚದರಿದ ಮೇಘಗಳಂತೆ ಆನೆಗಳು ದಿಕ್ಕುದಿಕ್ಕಿಗೆ ಓಡಿಸಲ್ಪಡುತಿದ್ದುವು ಅಲ್ಲಲ್ಲಿ ಕೆಲವು ಆನೆಗಳು ವಜ್ರಾಹತಗಳಾದ ಪರ್ವತಗಳಂತೆ ಕೆಳಗೆ ಬಿಳುತಿದ್ದುವು ತಮ್ಮಮೇಲಿದ್ದ ರಾವುತರೂಡನೆ ಅಲ್ಲಲ್ಲಿ ಸತ್ತುಬಿದ್ದ ಕುದುರೆಗಳ ಸಾಲುಗಳು ಪರ್ವತಶ್ರೇಣಿಗಳಂತೆ ಕಾಣುತಿದ್ದುವು ಮತ್ತು ಆಗ ಆ ಯುದ್ಧಭೂಮಿಯಲ್ಲಿ ರಕ್ತಮಯಪ್ರವಾಹದಿಂದಲೂ, ರಥಗಳೆಂಬ ಸುಳಿಗಳಿಂದಲೂ, ಧ್ವಜಗಳೆಂಬ ತೀರವೃಕ್ಷಗಳಿಂದಲೂ, ಅಸ್ಥಿಗಳೆಂಬ ಸೋಪಾನಗಳಿಂದಲೂ, ಬಾಹುಗಳೆಂಬ ಮೊಸಳೆಗಳಿಂದಲೂ, ಬಿಲ್ಲುಗಳೆಂಬ ಪ್ರವಾಹಶಾಖೆಗಳಿಂದಲೂ, ಆನೆಗಳೆಂಬ ನಡುಗುಡ್ಡಗಳಿಂದಲೂ, ಕುದುರೆಗಳೆಂಬ ಭಂಡಗಳಿಂದಲೂ, ರಕ್ತ ಮೇದೋ ಮಾಂಸಗಳೆಂಬ ಕೆಸರುಗಳಿಂದಲೂ, ಬಿಳೀಛತ್ರಗಳಂಬ ಹಂಸಗಳಿಂದಲೂ, ಗದೆಗಳೆಂಬ ತೆಪ್ಪಗಳಿಂದಲೂ, ಕವಚ ಶಿರೋವಸ್ತ್ರಗಳೆಂಬ ಮೇಲೆ ಮುಸುಕಿದ ಪಾಚಿಗಳಿಂದಲೂ, ಧ್ವಜಪತಾಕೆಗಳಂಬ ಮಧ್ಯವೃಕ್ಷಗಳಿಂದಲೂ, ಚಕ್ರಗಳೆಂಬ ಚಕ್ರವಾಕಗಳಿಂದಲೂ, ತ್ರಿವೇಣು (ಮೂಕಿ) ಗಳೆಂಬ ನೀರುಹಾವುಗಳಿಂದಲೂ ಭಯಂಕರವಾದ ರಕ್ತನದಿಯೊಂದು ಆ ಯುದ್ಧಭೂಮಿಯಲ್ಲಿ ತಲೆದೋರಿತು ಭೀರುಗಳಿಗ ಭಯವನ್ನೂ, ಶೂರರಿಗ ಉತ್ಸಾಹವನ್ನೂ ಹುಟ್ಟಿಸುತ್ತ, ಪರಲೋಕಕ್ಕೆ ಯುದ್ಧವೀರರನ್ನು ಸಾಗಿಸತಕ್ಕ ಆ ನದಿಯನ್ನು ಶೂರರು ತಮ್ಮವಾಹನಗಳೆಂಬ ತಪ್ಪಗಳಿಂದ ದಾಟುತಿದ್ದರು ದೇವಾಸುರ ಯುದ್ಧಕ್ಕೆ ಸಮಾನವಾದ ಆ ಯುದ್ಧವು ಕೊನೆಮೊದಲಿಲ್ಲದೆ ನಡಯುತ್ತಿರುವಾಗ, ಅಲ್ಲಿ ಕೆಲವರು ತಮ್ಮ ಬಂಧುಗಳ ಹೆಸರನ್ನು ಹಿಡಿದು ಮೊರಯಿಡುತಿದ್ದರು. ಕೆಲವರು ಭಯಪೀಡಿತರಾಗಿ ನಡುಗುತಿದ್ದರೂ, ತಮ್ಮ ಬಂಧುಗಳನ್ನು ಬಿಟ್ಟುಹೋಗಲಾರದೆ ಅಲ್ಲಿಯೇ ತಂಗಿದ್ದರು ಆ ಯುದ್ಧಸಮಯದಲ್ಲಿ ಭೀಮಾರ್ಜುನರಿಬ್ಬರೂ ತಮ್ಮ ಪರಾಕ್ರಮದಿಂದ ಶತ್ರುಗಳನ್ನು ಭ್ರಮೆಗೊಳಿ

ಸುತ್ತಿರಲು, ನಮ್ಮ ಮಹಾಸೇನೆಯು ಮತ್ತೇರಿದ ಸ್ತ್ರೀಯಂತೆ ಮಯಕ ಗೊಂಡಿದ್ದಿತು ಭೀಮಾರ್ಜುನರು ಜಯೋತ್ಸಾಹದಿಂದ ಆಗಾಗ ಸಿಂಹ ನಾದಮಾಡಿ ಶಂಖಗಳನ್ನೂದುತಿದ್ದರು. ಧೃಷ್ಟದ್ಯುಮ್ನ ಶಿಖಂಡಿಗಳಿಬ್ಬರೂ ಈ ಉತ್ಸಾಹಧ್ವನಿಯನ್ನು ಕೇಳಿದೊಡನೆ, ಧರ್ಮರಾಜನನ್ನು ಮುಂದೆ ಬಿಟ್ಟುಕೊಂಡು ಮದ್ರರಾಜನನ್ನಿದಿರಿಸಿ ಹೊರಟರು ಶಲ್ಯನದ್ನಿದಿರಿಸಿದಾಗ ಅವರು ಬೇರಬೇರೆಯಾಗಿ ನಿಂತು ನಡೆಸಿದ ಯುದ್ಧವು ನೋಡುವುದಕ್ಕೆ ಆಶ್ಚರ್ಯಕರವಾಯಿತು ಆಗಲೇ ನಕುಲಸಹದೇವರುಕೂಡ ನಮ್ಮ ಸೈನ್ಯವನ್ನು ಜಯಿಸುವ ಉದ್ದೇಶದಿಂದ ವೇಗವಾಗಿ ಇದಿರಿಸಿ ಬಂದರು ಜಯೋತ್ಸಾಹವುಳ್ಳ ಪಾಂಡವರ ಬಾಣಗಳಿಂದ ಹಲವು ರೀತಿಗಳಲ್ಲಿ ಹೊಡೆಯಲ್ಪಟ್ಟರೂ ನಮ್ಮ ಸೈನ್ಯವು ಕಡಲದ ನಿಂತಿದ್ದಿತು ಆದರ, ಕೊನೆಗೆ ನಮ್ಮ ಸೈನ್ಯವು, ಆ ಕೊಲೆಯನ್ನು ತಡೆಯಲಾರದೆ ನಿನ್ನ ಮಕ್ಕಳು ನೋಡುತ್ತಿರುವಂತೆಯೇ ತಿರುಗಿ ದಿಕ್ಕುದಿಕ್ಕುಗಳಿಗೆ ಚದರಿಹೋಯಿತು ಆಗ ನಮ್ಮಕಡೆಯ ವೀರರ ಗುಂಪಿನಲ್ಲಿ ದೊಡ್ಡ ಹಾಹಾಕಾರವು ಕೇಳಿಸತೊಡಗಿತು ಅಲ್ಲಲ್ಲಿ ಕೆಲವು ಕಡೆಗಳಿಂದ 'ನಿಲ್ಲು, ನಿಲ್ಲು!' ಎಂಬ ಶಬ್ದವೂ ಹೊರಡುತಿದ್ದಿತು ಆದರೇನು? ನಿನ್ನಕಡೆಯ ಸೈನಿಕರು ಪಾಂಡವರಿಂದ ಬಹಳವಾಗಿ ನೊಂದು, ಯುದ್ಧಪ್ರಯತ್ನವನ್ನು ಬಿಟ್ಟು, ಆತ್ಮರಕ್ಷಣೆಗಾಗಿ ತಮ್ಮ ಆನೆಗಳನ್ನೂ, ಕುದುರಗಳನ್ನೂ ವೇಗದಿಂದೋಡಿಸಿಕೊಂಡು, ಅಲ್ಲಿ ತಮಗೆ ಪ್ರೇಮಪಾತ್ರರಾಗಿದ್ದ ಮಕ್ಕಳನ್ನಾಗಲಿ, ಸಹೋದರರನ್ನಾಗಲಿ, ಅಜ್ಜಂದಿರು, ಮಾವಂದಿರು, ಮಿತ್ರರು, ಮುಂತಾದವರನ್ನಾಗಲಿ ಗಮನಿಸದೆ, ಅಲ್ಲಲ್ಲಯೇ ಬಿಟ್ಟು ಚದರಿ ಹೊರಟುಹೋದರು

ಇದು ಎಂಟನೆಯ ಅಧ್ಯಾಯವು



ನಕುಲನು ಕರ್ಣನ ಮೂರುಮಂದಿ ಮಕ್ಕಳನ್ನು ಕೊಂದುದು

ಸಂಪೂರ್ಣವಾಗಿ ಸೋತು ಓಡುತ್ತಿರುವ ಆ ಕೌರವಸೈನ್ಯವನ್ನು ಕಂಡು ಮದ್ರರಾಜನು ಆತುರದಿಂದ ತನ್ನ ಸಾರಥಿಯನ್ನು ಕುರಿತು "ಓ ಸಾರಥೀ! ಕುದುರೆಗಳನ್ನು ವೇಗದಿಂದ ಬಿಡು! ಅದೋ! ನೋಲಿ

ತ್ತಿದ ಪ್ರಕಾಶಮಾನವಾದ ಶ್ವೇತಚ್ಛತ್ರದೊಡನೆ ಧರ್ಮರಾಜನು ಅಲ್ಲಿ ನಿಂತಿರುವನು ನೋಡು ಆ ಸ್ಥಳಕ್ಕೆ ನನ್ನನ್ನು ತ್ವರೆಯಿಂದ ಸೇರಿಸು ನನ್ನ ಬಲವನ್ನು ನೋಡುತ್ತಿರು ಈದಿನದ ಯುದ್ಧದಲ್ಲಿ ನನ್ನ ಮುಂದೆ ನಿಲ್ಲುವುದಕ್ಕೆ ಪಾಂಡವರು ಎಂದಿಗೂ ಶಕ್ತರಲ್ಲ" ಎಂದನು ಒಡನೆಯೇ ಸಾರಥಿಯು ಧರ್ಮರಾಜನ ಸಮೀಪಕ್ಕೆ ರಥವನ್ನೋಡಿಸಿಕೊಂಡುಹೋಗಿ ನಿಲ್ಲಿಸಿದನು. ಆಗ ಶಲ್ಯನು ವೇಗದಿಂದಿದಿರಿಸಿ ಬರುತ್ತಿರುವ ಪಾಂಡವರ ದೊಡ್ಡ ಸೈನ್ಯವನ್ನು, ಸಮುದ್ರವನ್ನು ತೀರವು ಹೇಗೋ ಹಾಗೆ ತಾನೊಬ್ಬನೇ ತಡೆಯುತಿದ್ದನು ಪಾಂಡವರ ಸೇನಾಸಮೂಹವು ಆಗ ಶಲ್ಯನನ್ನಿದಿರಿಸಿ, ನದಿಯ ವೇಗವು ಬೆಟ್ಟವನ್ನು ಹಾದುಹೋಗಲಾರದಂತೆ ಅಲ್ಲಿಯೇ ನಿಂತಿತು ಮದ್ರರಾಜನ ಆ ಉತ್ಸಾಹವನ್ನು ಕಂಡು ಕೌರವರವೀರರೂ ಇನ್ನು ತಾವು ಸಾಯುವವರಗೂ ಹಿಂತಿರುಗುವುದಿಲ್ಲವೆಂದು ಸಂಕಲ್ಪಿಸಿ ಹಿಂತಿರುಗಿ ಬಂದರು ಚದರಿಹೋಗಿದ್ದ ಆ ಸೈನ್ಯವು ಹಿಂತಿರುಗಿದೊಡನೆಯೇ, ಭಯಂಕರವಾದ ರಕ್ತಪ್ರವಾಹವನ್ನುಂಟುಮಾಡುವ ಮಹಾಯುದ್ಧವು ನಡೆಯಲಾರಂಭಿಸಿತು ನಕುಲನು ಚಿತ್ರಸೇನನನ್ನಿದಿರಿಸಿದನು ಆ ವೀರರಿಬ್ಬರೂ ಒಬ್ಬರನ್ನೊಬ್ಬರು ಸಂಧಿಸಿ, ಅತ್ಯಾರ್ಭಟದಿಂದ ದಕ್ಷಿಣೋತ್ತರದಿಕ್ಕುಗಳಿಂದ ಮಳೆಯನ್ನು ಸುರಿಸುವ ಎರಡು ಮಹಾಮೇಘಗಳಂತೆ ಬಾಣವರ್ಷಗಳಿಂದ ಒಬ್ಬರನ್ನೊಬ್ಬರು ಮುಚ್ಚಿದರು ಆ ಯುದ್ಧದಲ್ಲಿ ನಕುಲನಿಗೂ, ಚಿತ್ರಸೇನನಿಗೂ ಬಲದಲ್ಲಿ ವ್ಯತ್ಯಾಸವೇನೂ ತಿಳಿಯಲಿಲ್ಲ ಇಬ್ಬರೂ ಅಸ್ತ್ರವಿದ್ಯಾನಿಪುಣರು! ಮಹಾಚತುರರು! ರಥಗಳನ್ನು ನಡೆಸುವುದರಲ್ಲಿ ಸಮರ್ಥರು! ಒಬ್ಬರನ್ನೊಬ್ಬರು ಕೊಲ್ಲುವ ಹಟವುಳ್ಳವರು! ಸಮಯನಿರೀಕ್ಷೆಯುಳ್ಳವರು! ಆಗ ಚಿತ್ರಸೇನನು ತೀಕ್ಷ್ಣವಾದ ಕತ್ತಿಯಿಂದ ನಕುಲನ ಬಿಲ್ಲನ್ನು ಮುಷ್ಟಿಸ್ಥಾನದಲ್ಲಿ ಕತ್ತರಿಸಿ, ಚಾಪಹೀನನಾದ ಆ ನಕುಲನನ್ನು ಮೂರು ತೀಕ್ಷ್ಣಬಾಣಗಳಿಂದ ನೆತ್ತಿಯಮೇಲೆ ಹೊಡೆದನು ಆತನ ಕುದುರೆಗಳನ್ನು ಕೊಂದು, ಆತನ ಧ್ವಜವನ್ನೂ, ಸಾರಥಿಯನ್ನೂ ಮೂರುಮೂರು ಬಾಣಗಳಿಂದ ಮುರಿದು ಕೆಡಹಿದನು. ಓ ರಾಜಾ! ನೆತ್ತಿಯಲ್ಲಿ ನಾಟಿದ್ದ ಆ ಮೂರು ಬಾಣಗಳಿಂದ ನಕುಲನು ಮೂರು ಶಿಖರಗಳೊಡಗೂಡಿದ ಬೆಟ್ಟದಂತೆ ಕಾಣಿಸಿದನು ಬಿಲ್ಲೂ, ರಥ

ವೂ ಹೋದಮೇಲೆ ನಕುಲನು, ತನ್ನ ಖಡ್ಗ ಖೇಟಕಗಳನ್ನೆತ್ತಿಕೊಂಡು, ಬೆಟ್ಟದಮೇಲಿಂದಿಳಿಯುವ ಸಿಂಹದಂತೆ ರಥದಿಂದಿಳಿದು ಮುಂದೆ ಬಂದನು ನಡದುಬರುತ್ತಿರುವಾಗಲೇ ನಕುಲನಮೇಲೆ ಚಿತ್ರಸೇನನು ಬಾಣವರ್ಷಗಳನ್ನು ಸುರಿಸಲು, ಮಹಾಪರಾಕ್ರಮಿಯಾದ ನಕುಲನು ತನ್ನ ಹಸ್ತಲಾಘವದಿಂದ ಆ ಬಾಣವರ್ಷವನ್ನೆಲ್ಲ ಖೇಟಕದಿಂದಲೇ ತಡೆದನು ವಿಚಿತ್ರಯೋಧಿಯೂ, ಶ್ರಮಸಹಿಷ್ಣುವೂ, ಮಹಾಬಾಹುಬಲವುಳ್ಳವನೂ ಆದ ನಕುಲನು, ಎಲ್ಲಾ ಸೈನ್ಯವೂ ನೋಡುತ್ತಿರುವಂತೆಯೇ ಧೈರ್ಯದಿಂದ ಚಿತ್ರಸೇನನ ರಥದಬಳಿಗೆ ಹೋಗಿ ಅದನ್ನೇರಿದನು ಅಲ್ಲಿ ನಕುಲನು, ಕಿರೀಟ ಕುಂಡಲಗಳಿಂದಲಂಕೃತವಾಗಿ, ಎಸಳಾದ ಮೂಗಿನಿಂದಲೂ, ವಿಶಾಲ ನೇತ್ರಗಳಿಂದಲೂ ಸುಂದರವಾಗಿದ್ದ ಚಿತ್ರಸೇನನ ತಲೆಯನ್ನು ತನ್ನ ಕತ್ತಿಯಿಂದ ಕತ್ತರಿಸಿ ಅವನ ದೇಹದಿಂದ ಬೇರ್ಪಡಿಸಿದನು ಸೂರ್ಯತೇಜಸ್ಸುಳ್ಳ ಚಿತ್ರಸೇನನ ತಲೆಯು ರಥದಿಂದ ಕೆಳಗೆ ಬಿದ್ದುದನ್ನು ನೋಡಿ, ಪಾಂಡವಪಕ್ಷದ ಮಹಾರಥರೆಲ್ಲರೂ 'ಭಲೆ! ಭಲೆ' ಎಂದು ಕೂಗುತ್ತ ದೊಡ್ಡ ಸಿಂಹನಾದವನ್ನು ಮಾಡಿದರು ಓ ರಾಜಾ! ಆಗ ತಮ್ಮ ಸಹೋದರನು ಕೊಲ್ಲಲ್ಪಟ್ಟುದನ್ನು ಕಂಡು, ಮಹಾರಥರಾದ ಸುಶರ್ಮ, ಸತ್ಯಸೇನರೆಂಬ ಕರ್ಣಪುತ್ರರಿಬ್ಬರೂ ದೊಡ್ಡ ಕಾಡಿನಲ್ಲಿ ಎರಡು ಹುಲಿಗಳು ಮದದಾನೆಯನ್ನಿದಿರಿಸುವಂತೆ ನಕುಲನನ್ನು ಕೊಲ್ಲಬೇಕೆಂದು ಬಾಣಗಳನ್ನು ಬಿಡುತ್ತ ವೇಗದಿಂದಿದಿರಿಸಿ ಹೊರಟರು ಮಹಾಭುಜಬಲವುಳ್ಳವರೂ, ಮಹಾರಥರೂ ಆದ ಅವರಿಬ್ಬರೂ, ಮೇಘಗಳು ನೀರನ್ನು ಸುರಿಸುವಂತೆ ಬಾಣಸಮೂಹಗಳನ್ನು ವರ್ಷಿಸುತಿದ್ದರು ಆ ಬಾಣವರ್ಷದಲ್ಲಿಯೇ ಮಹಾವೀರನಾದ ನಕುಲನು, ಆತುರದಿಂದ ಬಂದು, ತನ್ನ ರಥದ ಮೇಲೇರಿ, ಬಿಲ್ಲನ್ನು ಕೈಗೆತ್ತಿಕೊಂಡು, ಕೋಪಗೊಂಡ ಯಮನಂತೆ ಯುದ್ಧಕ್ಕಿದಿರಾಗಿ ನಿಂತನು. ಕರ್ಣಪುತ್ರರಾದ ಸಹೋದರರಿಬ್ಬರೂ ದಿವ್ಯಬಾಣಗಳಿಂದ ನಕುಲನ ಆ ರಥವನ್ನು ತುಂಡುತುಂಡಾಗಿ ಭೇದಿಸಲು ಪ್ರಯತ್ನಿಸಿದರು ನಕುಲನು ಅಟ್ಟಹಾಸಮಾಡುತ್ತ ತೀಕ್ಷ್ಣವಾದ ನಾಲ್ಕು ಬಾಣಗಳಿಂದ ಸತ್ಯಸೇನನ ನಾಲ್ಕು ಕುದುರೆಗಳನ್ನು ಕೊಂದನು. ಒಂದು ಬಾಣದಿಂದ ಸತ್ಯಸೇನನ ಬಿಲ್ಲನ್ನು ಕತ್ತರಿಸಿದನು ಆಮೇಲೆ ಸತ್ಯಸೇನನೂ

ಸುಶರ್ಮನೂ ಬೇರಬೇರೆ ರಥದಮೇಲೇರಿ ಪ್ರತ್ಯೇಕವಾಗಿ ಬಾಣಗಳಿಂದ ನಕುಲನನ್ನಿದಿರಿಸಿ ಹೊರಟರು ನಕುಲನು ಅವರಿಬ್ಬರನ್ನೂ ಎರಡೆರಡು ಬಾಣಗಳಿಂದ ಹೊಡೆದನು ಆಗ ಕೋಪಗೊಂಡ ಮಹಾರಥನಾದ ಸುಶರ್ಮನು, ಅಟ್ಟಹಾಸದಿಂದ ನಗುತ್ತ ಒಂದು ಬಾಣದಿಂದ ಆ ನಕುಲನ ದೊಡ್ಡ ಬಿಲ್ಲನ್ನು ಕತ್ತರಿಸಿದನು ಕೂಡಲೇ ನಕುಲನು ಬೇರ ಬಿಲ್ಲನ್ನು ಕೈಗೆತ್ತಿಕೊಂಡು, ಸುಶರ್ಮನನ್ನು ಐದು ಬಾಣಗಳಿಂದ ಹೊಡೆದು, ಆತನ ಧ್ವಜವನ್ನು ಒಂದು ಬಾಣದಿಂದ ಭೇದಿಸಿದನು ಸತ್ಯಸೇನನ ಬಿಲ್ಲನ್ನೂ, ಕೈಚೀಲವನ್ನೂ ಕತ್ತರಿಸಿದನು ಆಗ ಜನರಲ್ಲಿ ಹಾಹಾಕಾರವು ಹೊರಟಿತು ಸತ್ಯಸೇನನು ರಿಪುಭಯಂಕರವಾದ ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ಪಾಂಡುಪುತ್ರನನ್ನು ಬಾಣಗಳಿಂದ ನಾಲ್ಕುಕಡೆಗಳಲ್ಲಿಯೂ ಮುಚ್ಚಿದನು ನಕುಲನು ಆ ಬಾಣಗಳನ್ನೆಲ್ಲ ತಡೆದು, ಎರಡೆರಡು ಬಾಣಗಳಿಂದ ಸತ್ಯಸೇನನನ್ನೂ, ಸುಶರ್ಮನನ್ನೂ ಹೊಡದನು ಅವರಿಬ್ಬರೂ ನಕುಲನನ್ನು ಬೇರಬೇರಯಾಗಿ ಬಾಣಗಳಿಂದ ಹೊಡದರು ಆತನ ಸಾರಥಿಯಮೇಲೆ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿದರು ಸತ್ಯಸೇನನು ನಕುಲನ ರಥದ ಇರಿಚಿಯನ್ನೂ, ಆತನ ಬಿಲ್ಲನ್ನೂ ಎರಡು ಬಾಣಗಳಿಂದ ತುಂಡುಮಾಡಿದನು ರಥಾಸೀನನಾಗಿದ್ದಹಾಗೆಯೇ ನಕುಲನು ಒಂದು ಶಕ್ತ್ಯಾಯುಧವನ್ನೆತ್ತಿ ಸತ್ಯಸೇನನಮೇಲೆ ಬೀಸಿದನು ಸುವರ್ಣಮಯವಾದ ಹಿಡಿಗಳಿಂದಲೂ, ಎಣ್ಣೆಹಾಕಿ ತೀಡಿದ ಹರಿತವಾದ ಮತ್ತು ಪ್ರಕಾಶಮಾನವಾದ ಅಲಗುಗಳಿಂದಲೂ ಕೂಡಿ, ಅಡಿಗಡಿಗ ನಾಲಗೆಯನ್ನು ನೀಡುತ್ತಿರುವ ಮಹಾವಿಷಸರ್ಪಕ್ಕೆ ಸಮಾನವಾದ ಆ ಶಕ್ತಿಯು, ಆತನ ಎದೆಯನ್ನು ನೂರುಭಾಗವಾಗಿ ಭೇದಿಸಿತು ಆ ಸತ್ಯಸೇನನು ಗತಪ್ರಾಣನಾಗಿ ರಥದಿಂದ ನಲಕ್ಕೆ ಬಿದ್ದನು ಸಹೋದರನ ವಧೆಯನ್ನು ನೋಡಿ ಕೋಪಗೊಂಡ ಸುಶರ್ಮನು, ಕಾಲಾಳಾಗಿ ನಿಂತಿರುವ ನಕುಲನ ಮೇಲೆ ವೇಗದಿಂದ ಬಾಣಪ್ರಯೋಗಮಾಡಿದನು ನಾಲ್ಕು ಬಾಣಗಳಿಂದ ನಕುಲನ ನಾಲ್ಕು ಕುದುರೆಗಳನ್ನೂ, ಐದು ಬಾಣಗಳಿಂದ ಆತನ ಧ್ವಜವನ್ನೂ ಬೇಧಿಸಿ, ಮೂರು ಬಾಣಗಳಿಂದ ಸಾರಥಿಯನ್ನೂ ಕೊಂದು ಸಿಂಹನಾದಮಾಡಿದನು ಆಗ ಮಹಾರಥನಾದ ನಕುಲನು ರಥಹೀನನಾಗಿರು

ವುದನ್ನು ಕಂಡು, ದ್ರೌಪದೀಪುತ್ರನಾದ ಸುತಸೋಮನು ಅವನ ರಕ್ಷಣೆ ಗಾಗಿ ಓಡಿಬಂದನು ಒಡನೆಯೇ ನಕುಲನು ಬೆಟ್ಟವನ್ನೇರಿದ ಸಿಂಹ ದಂತೆ ಸುತಸೋಮನ ರಥದಮೇಲೇರಿ, ಬೇರೊಂದು ಬಿಲ್ಲನ್ನೆತ್ತಿ ಸುಶ ರ್ಮನನ್ನಿದಿರಿಸಿದನು ಆ ಮಹಾರಥರಿಬ್ಬರೂ ಒಬ್ಬರನ್ನೊಬ್ಬರು ಬಾಣ ವರ್ಷಗಳಿಂದ ಕೊಲ್ಲಲು ಪ್ರಯತ್ನಿಸುತ್ತಿದ್ದರು ಆಗ ಸುಶರ್ಮನು ಮಹಾಕೋಪದಿಂದ ನಕುಲನನ್ನು ಮೂರು ಬಾಣಗಳಿಂದಲೂ, ಸುತಸೋ ಮನನ್ನು ಇಪ್ಪತ್ತು ಬಾಣಗಳಿಂದಲೂ ಅವರ ಕೈಗಳಿಗೂ, ಎದೆಗೂ ಗುರಿ ಯಿಟ್ಟು ಹೊಡೆದನು ಆಗ ಶತ್ರುನಾಶಕನೂ, ವೀರ್ಯವಂತನೂ ಆದ ನಕುಲನು ಕೋಪಗೊಂಡು, ಬಾಣವರ್ಷಗಳಿಂದ ಆ ಸುಶರ್ಮನನ್ನು ಎಲ್ಲಾ ಕಡೆಯೂ ಮುಚ್ಚಿದುದಲ್ಲದ, ಚೆನ್ನಾಗಿ ತೀಡಿ ಸೂರ್ಯನಂತೆ ಜ್ವಲಿಸುವ ಅರ್ಧಚಂದ್ರಬಾಣವೊಂದನ್ನು ಕೈಗೆತ್ತಿಕೊಂಡು, ಕಿವಿಯುವರಗೂ ಎಳೆದು, ಆ ಕರ್ಣಪುತ್ರನಮೇಲೆ ಪ್ರಯೋಗಿಸಿ, ಸೈನಿಕರಲ್ಲರೂ ನೋಡುತ್ತಿರು ವಂತೆಯೇ ಆ ಅರ್ಧಚಂದ್ರಬಾಣದಿಂದ ಸುಶರ್ಮನ ತಲೆಯನ್ನು ದೇಹ ದಿಂದ ಕೆಡಹಿದನು ನೋಡುವವರಿಗೆ ಅದು ಬಹಳ ಆಶ್ಚರ್ಯಕರವಾ ಗಿದ್ದಿತು ಸುಶರ್ಮನು ನದಿಯ ವೇಗದಿಂದ ಕೆಡಹಲ್ಪಟ್ಟ ದೊಡ್ಡ ಮರ ದಂತೆ ಕೆಳಗೆ ಬಿದ್ದನು ಕರ್ಣಪುತ್ರನ ವಧೆಯನ್ನೂ, ನಕುಲನ ಪರಾಕ್ರ ಮವನ್ನೂ ಕಂಡು ನಿಮ್ಮ ಸೈನ್ಯವು ಭಯದಿಂದೋಡಿತು ಸೇನಾಪತಿ ಯಾದ ಮದ್ರರಾಜನು ಆ ಸೈನ್ಯವನ್ನೆಲ್ಲ ತಡೆದು ನಿಲ್ಲಿಸಿ, ದೊಡ್ಡ ಸಿಂಹ ನಾದವನ್ನೂ, ಭಯಂಕರವಾದ ಧನುಷ್ಟಂಕಾರವನ್ನೂ ತೋರಿಸಿದನು ಆಗ ಅವನಿಂದ ನಿನ್ನವರಿಗೆ ರಕ್ಷಣೆಯುಂಟಾಗಲು, ಅವರು, ಭಯ ವನ್ನು ಬಿಟ್ಟು ಎಲ್ಲಾ ಕಡೆಗಳಿಂದಲೂ ಮದ್ರರಾಜನನ್ನು ಹಿಂಬಾಲಿಸಿ ತಿರುಗಿ ಯುದ್ಧಕ್ಕೆ ಸಿದ್ಧರಾಗಿ ನಿಂತರು ಸಾತ್ಯಕಿ, ಭೀಮಸೇನನು, ಮಾದ್ರೀ ಪುತ್ರರಾದ ನಕುಲಸಹದೇವರು, ಇವರೆಲ್ಲ ಯುಧಿಷ್ಠಿರನನ್ನು ಮುಂದೆ ಬಿಟ್ಟುಕೊಂಡು ಯುದ್ಧಭೂಮಿಯಲ್ಲಿ ಸಿಂಹನಾದಮಾಡಿದರು ತೀವ್ರ ವಾದ ಧನುಷ್ಟಂಕಾರವನ್ನೂ, ಶಂಖನಾದ ಸಿಂಹನಾದಗಳನ್ನೂ ಮಾಡಿ ದರು ಹಾಗೆಯೇ ನಿಮ್ಮಕಡೆಯುವರೂ ವೇಗದಿಂದ ಮದ್ರರಾಜನನ್ನು ಮುಂದಿಟ್ಟುಕೊಂಡು ಮಹಾಕೋಪದಿಂದ ಯುದ್ಧೋದ್ಯತರಾದರು ಮರ

ಣಕ್ಕೆ ಸಿದ್ಧರಾಗಿ ನಿಂತು ಯುದ್ಧಮಾಡುವ ನಿಮ್ಮ ಕಡೆಯವರಿಗೂ, ಇತರರಿಗೂ ನಡೆದ ಆಗಿನ ಯುದ್ಧವು ಭೀರುಗಳಿಗೆ ಭಯಂಕರವಾಗಿದ್ದಿತು ಹಿಂದೆ ದೇವಾಸುರಯುದ್ಧವು ಹೇಗೋ ಹಾಗೆ ಯಮರಾಜ್ಯವನ್ನು ವೃದ್ಧಿಮಾಡುವ ಮಹಾಯುದ್ಧವು ನಡೆಯಿತು ಅತ್ತಲಾಗಿ ಅರ್ಜುನನು ಸಂಶಪ್ತಕರನ್ನು ಜಯಿಸಿ, ಕೌರವಸೇನೆಯನ್ನಿದಿರಿಸಿದನು ಪಾಂಡವರೆಲ್ಲರೂ ಧೃಷ್ಟದ್ಯುಮ್ನನಿಗೆ ಅಧೀನರಾಗಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತ ಕೌರವಸೇನೆಯನ್ನಿದಿರಿಸಿ ಓಡಿದರು ಆ ಬಾಣವರ್ಷದಿಂದ ಕೌರವರಿಗೆ ದಿಗ್ಭ್ರಮೆ ಹಿಡಿದಂತಾಯಿತು ಅವರಿಗ ಸೈನ್ಯವಾಗಲಿ, ದಿಕ್ಕಾಗಲಿ, ವಿದಿಕ್ಕುಗಳಾಗಲಿ ತಿಳಿಯದಂತಾಯಿತು ಪಾಂಡವರು ಪ್ರಯೋಗಿಸಿದ ತೀಕ್ಷ್ಣಬಾಣಗಳಿಂದ ಕೌರವಸೇನೆಯು ನಾಲ್ಕು ಕಡೆಗಳಲ್ಲಿಯೂ ತಡೆಯಲ್ಪಟ್ಟಿತು ಮಹಾವೀರರು ಹತರಾದರು ಅನೇಕ ಸೈನ್ಯವು ನಾಶವಾಗುತ್ತಿದ್ದಿತು ಅದೇ ರೀತಿಯಲ್ಲಿ ಪಾಂಡವಸೈನ್ಯವೂ ನಿಮ್ಮ ಪುತ್ರರಿಂದ ನೂರು ಸಾವಿರ ಲೆಕ್ಕದಲ್ಲಿ ಎಲ್ಲಾ ಕಡೆಗಳಲ್ಲಿಯೂ ಬಾಣಗಳಿಂದ ಹತವಾಗುತ್ತ ತತ್ತಳಿಸುತಿದ್ದಿತು ಹೀಗೆ ಒಂದನ್ನೊಂದು ಕೊಲ್ಲುತ್ತಿರುವ ಉಭಯಪಕ್ಷದ ಸೈನ್ಯಗಳೂ, ವರ್ಷಾಕಾಲದಲ್ಲಿ ಪ್ರವಾಹವು ಬಂದಿರುವ ಎರಡು ನದಿಗಳಂತೆ ಕಲಗಿದುವು ಆ ಮಹಾಯುದ್ಧದಲ್ಲ ನಿಮ್ಮ ಕಡೆಯವರೂ, ಪಾಂಡವರೂ ಅಧಿಕವಾಗ ನೊಂದುಹೋದರು

ಇದು ಒಂಭತ್ತನೆಯ ಅಧ್ಯಾಯವು



 ಸಂಕುಲಯುದ್ಧವು 

ಓ ರಾಜಾ ! ಆಗಿನ ಯುದ್ಧವನ್ನು ಕೇಳಬೇಕೆ ? ಸೈನ್ಯಗಳು ಒಂದನ್ನೊಂದು ಕೊಲ್ಲುತ್ತಿರುವುವು ಒಂದುಕಡೆಯಲ್ಲಿ ಯುದ್ಧವೀರರು ಓಡುತ್ತಿರುವರು ! ಮತ್ತೊಂದುಕಡೆ ಆನೆಗಳು ಚದರಿ ಪಲಾಯನಮಾಡುತ್ತಿರುವುವು ಅಲ್ಲಲ್ಲಿ ಕುದುರೆಗಳು ಸಾಯುತ್ತಿರುವುವು ಕಾಲಾಳುಗಳು ಕೂಗಿಕೊಳ್ಳುತ್ತಿರುವರು ಕೆಲವರು ವೀರವಾದಗಳನ್ನು ಮಾಡುವರು ಅನೇಕಪ್ರಾಣಿಗಳು ಸಾಯುತ್ತಿರುವುವು ವಿವಿಧಶಸ್ತ್ರಾಸ್ತ್ರಗಳು ಹಾರಾಡುತ್ತಿರುವುವು.

ಗಜಯೋಧರೂ, ರಥಿಕರೂ ಪರಸ್ಪರವಾಗಿ ಯುದ್ಧಮಾಡುತ್ತಿರುವರು ವೀರರಿಗೆ ಹರ್ಷವನ್ನೂ, ಭೀರುಗಳಿಗೆ ಭಯವನ್ನೂ ಹುಟ್ಟಿಸುತ್ತ ಭಯಂಕರವಾಗಿ, ಯಮರಾಜ್ಯವನ್ನು ವೃದ್ಧಿಗೊಳಿಸತಕ್ಕ ಆ ಯುದ್ಧವೆಂಬ ದ್ಯೂತದಲ್ಲಿ, ಪಾಂಡವರು ನಿನ್ನ ಕಡೆಯ ಸೈನ್ಯವನ್ನೆಲ್ಲ ಬಹಳಮಟ್ಟಿಗೆ ನಾಶಮಾಡಿದರು ಹಾಗೆಯೇ ನಿಮ್ಮ ಕಡೆಯ ವೀರರೂ ಪಾಂಡವವೀರರನ್ನು ಕೊಂದರು ಸೂರ್ಯೋದಯವಾಗುತ್ತಿರುವ ಪ್ರಾತಃಕಾಲಸಮಯದಲ್ಲಿ, ಮಹಾತ್ಮನಾದ ಯುಧಿಷ್ಠಿರನಿಂದ ರಕ್ಷಿತರಾದ ಶತ್ರುವೀರರು ಮರಣದಿಂದಲ್ಲದೆ ತಮಗೆ ಯುದ್ಧದಿಂದ ನಿವೃತ್ತಿಯಿಲ್ಲವೆಂದು ನಿಶ್ಚಯಿಸಿ ನಿಮ್ಮ ಸೈನ್ಯವನ್ನಿದಿರಿಸಿ ನಿಂತರು ಬಲಾಢ್ಯರೂ, ಶಸ್ತ್ರಾಸ್ತ್ರಗಳಲ್ಲಿ ಸುಶಿಕ್ಷಿತರೂ ಆದ ಆ ಪಾಂಡವರಿಂದ ಕೌರವಸೇನೆಯು, ಕಾಡುಗಿಚ್ಚಿಗೆ ಸಿಕ್ಕಿ ತತ್ತಳಿಸುವ ಹೆಣ್ಣುಜಿಂಕೆಯಂತೆ ತಪಿಸುತ್ತಿತ್ತು ಕೆಸರಿನಲ್ಲಿ ಸಿಕ್ಕಿಬಿದ್ದ ದುರ್ಬಲವಾದ ಹಸುವಿನಂತೆ ಅಶಕ್ತವಾದ ಆ ಸೈನ್ಯವನ್ನು ಕಂಡು ಶಲ್ಯನು, ಅದನ್ನುದ್ಧರಿಸುವ ಆತುರದಿಂದ ಪಾಂಡುಪುತ್ರರನ್ನಿದಿರಿಸಿ ಹೊರಟನು ಜಯಶಾಲಿಗಳಾದ ಪಾಂಡವರೂ ಮದ್ರರಾಜನನ್ನಿದಿರಿಸಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದರು ಮಹಾರಥನಾದ ಆ ಮದ್ರರಾಜನು ಧರ್ಮರಾಜನು ನೋಡುತ್ತಿರುವಂತೆಯೇ ಅನೇಕಬಾಣಗಳಿಂದ ಆ ಸೈನ್ಯವನ್ನು ಪೀಡಿಸಿದನು ಇಷ್ಟರಲ್ಲಿ ನಾನಾಬಗೆಯ ದುರ್ನಿಮಿತ್ತಗಳು ತೋರಿದುವು ಪರ್ವತಸಮೇತವಾಗಿ ಭೂಮಿಯು ಮಹಾಧ್ವನಿಯೊಡನೆ ನಡುಗಿತು ದಂಡಶೂಲದೊಡನೆ ಕೂಡಿ ಜ್ವಲಿಸುವ ಶಿಖೆಯುಳ್ಳ ಉಲ್ಕೆ (ಆಕಾಶದ ಕೊಳ್ಳಿ) ಗಳು ಸೂರ್ಯಮಂಡಲವನ್ನು ಭೇದಿಸಿಕೊಂಡು ಆಕಾಶದಿಂದ ನೆಲಕ್ಕೆ ಬಿದ್ದುವು ಮೃಗಗಳೂ, ಎಮ್ಮೆಗಳೂ, ಪಕ್ಷಿಗಳೂ ನಮ್ಮ ಸೇನೆಯನ್ನು ಅಪ್ರದಕ್ಷಿಣವಾಗಿ ಸುತ್ತಿಸುತ್ತಿ ಬರುತ್ತಿದ್ದುವು ಪಾಂಡವರೇ ಮುಂದಕ್ಕೆ ಸಮಸ್ತಭೂಮಿಯನ್ನೂ ಅನುಭವಿಸುವುದನ್ನು ಸೂಚಿಸುವಂತೆ, ಅವರಲ್ಲಿ ಜ್ಯೇಷ್ಠನಾದ ಧರ್ಮರಾಜನನ್ನು ಕುರಿತು ಶುಕ್ರಾಂಗಾರಕಬುಧಗ್ರಹಗಳು ಮೂರೂ ಏಳನೆಯ ಸ್ಥಾನದಲ್ಲಿದ್ದು ಶುಭಫಲವನ್ನು ತೋರಿಸುತ್ತಿದ್ದುವು (ಶುಕ್ರಾಂಗಾರಕಬುಧರೆಂಬ ಮೂರು ಗ್ರಹಗಳೂ ಪಾಂಡವರಿಗೆ ಹಿಂಭಾಗದಲ್ಲಿಯೂ, ಕೌರವರಿಗೆ ಮುಂಭಾಗದಲ್ಲಿಯೂ ಕಾಣಿಸಿದುವು) ಶಸ್ತ್ರಗಳ ತುದಿಯಲ್ಲಿ

ಜ್ವಾಲೆಯು ತಲೆದೋರಿ ಕಣ್ಣುಗಳನ್ನು ಕೋರೈಸುತ್ತ ಭೂಮಿಯಕಡೆಗೆ ಇಳಿಯಿತು ಕಾಗೆಗಳೂ, ಗೂಗೆಗಳೂ ನಮ್ಮಕಡೆಯವರ ತಲೆಗಳಮೇಲೆಯೂ, ನಮ್ಮ ಧ್ವಜಗಳಮೇಲೆಯೂ ಆಗಾಗ ಕುಳಿತುಕೊಂಡುವು ಆಮೇಲೆ ಉಗ್ರವಾದ ಯುದ್ಧವು ಆರಂಭಿಸಿ, ಎಲ್ಲಾ ಸೈನ್ಯಗಳೂ ತುಮುಲ ಯುದ್ಧಮಾಡಿದುವು ಕೌರವರಾಜನು ಪಾಂಡವರ ಸೇನೆಯನ್ನು ಇದಿರಿಸಿ ಹೊಡೆದನು ಧರ್ಮಾತ್ಮನಾದ ಶಲ್ಯನು, ಇಂದ್ರನು ಮಳೆಯನ್ನು ಸುರಿಸುವಂತೆ ಯುಧಿಷ್ಠಿರನಮೇಲೆ ಬಾಣವರ್ಷವನ್ನು ಸುರಿಸಿ, ಭೀಮಸೇನನಮೇಲೆಯೂ ಸಾಣೆಹಿಡಿದ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿದನು ಮಹಾಬಲಶಾಲಿಯಾದ ಆ ಶಲ್ಯನು ಉಪಪಾಂಡವರು, ನಕುಲಸಹದೇವರು, ಧೃಷ್ಟದ್ಯುಮ್ನನು, ಸಾತ್ಯಕಿ, ಶಿಖಂಡಿ, ಇವರಲ್ಲಿ ಒಬ್ಬೊಬ್ಬನನ್ನೂ ಹತ್ತುಹತ್ತು ಬಾಣಗಳಿಂದ ಹೊಡೆದುದಲ್ಲದೆ, ಶರತ್ಕಾಲದಲ್ಲಿ ಇಂದ್ರನು ಮಳೆಯನ್ನು ಸುರಿಸುವಂತೆ ಸುತ್ತಲೂ ಬಾಣವರ್ಷವನ್ನು ಕರೆದನು ಆಗ ಶಲ್ಯನ ಬಾಣಗಳಿಂದ ಅನೇಕ ಪ್ರಭದ್ರಕರೂ, ಸೋಮಕರೂ ಸಾವಿರಲೆಕ್ಕದಲ್ಲಿ ಹತರಾಗಿ ಬಿದ್ದರು ಬೀಳುತ್ತಲೂ ಇದ್ದರು ಆಗ ಶಲ್ಯನ ಬಾಣಗಳು ಭ್ರಮರಗಳಂತೆಯೂ, ಶಲಭಸಮೂಹದಂತೆಯೂ, ಮೇಘಗಳಿಂದ ಬೀಳುವ ಸಿಡಲಿನಂತೆಯೂ ಅಪರಿಮಿತವಾಗಿ ಬಿದ್ದುವು ಆತನ ಬಾಣಗಳಿಂದ ಗಜ ರಥ ತುರಗ ಪದಾತಿಸೈನ್ಯಗಳೆಲ್ಲವೂ ಬಹಳವಾಗಿ ನೊಂದು ತಲೆತಿರುಗಿ ಬೀಳುತಿದ್ದುವು ಆಗ ಶಲ್ಯನು ಆವೇಶಹಿಡಿದಂತೆ ಕೋಪಗೊಂಡು, ಕಾಲಮಹಿಮೆಯಿಂದ ಸೃಷ್ಟಿಸಲ್ಪಟ್ಟ ಯಮನಂತೆ ಕಾಣುತ್ತ, ಶತ್ರುಗಳನ್ನು ಬಾಣವರ್ಷಗಳಿಂದ ಮುಚ್ಚಿ ಮೇಘದಂತೆ ಗರ್ಜಿಸುತ್ತಿದ್ದನು ಅವನ ಕೊಲೆಯನ್ನು ತಡೆಯಲಾರದೆ ಪಾಂಡವಸೈನ್ಯವು ಧರ್ಮರಾಜನಬಳಿಗೆ ಓಡಿತು ಹಸ್ತಲಾಘವವುಳ್ಳ ಶಲ್ಯನು ನೂರಾರು ಬಾಣಗಳಿಂದ ಆ ಸೈನ್ಯವನ್ನು ಹೊಡೆದು, ದೊಡ್ಡ ಬಾಣವರ್ಷವನ್ನು ಯುಧಿಷ್ಠಿರನಮೇಲೆ ಸುರಿಸಿದನು ಉತ್ತಮಾಶ್ವಗಳೊಡನೆ ಬರುತ್ತಿರುವ ಆ ಶಲ್ಯನನ್ನು ನೋಡಿ ಯುಧಿಷ್ಠಿರನು, ದೊಡ್ಡ ಆನೆಯೊಂದನ್ನು ಅಂಕುಶದಿಂದ ತಡೆಯುವಂತೆ ತನ್ನ ತೀಕ್ಷ್ಣಬಾಣಗಳಿಂದ ತಡೆದನು ಆಗ ಶಲ್ಯನು, ಯುಧಿಷ್ಠಿರನಮೇಲೆ ಸರ್ಪಸಮಾನವಾದ ಬಾಣವೊಂದನ್ನು ಬಿಡಲು, ಅದು ಯುಧಿ

ಷ್ಠಿರನ ಮೈಯನ್ನು ಗಾಯಪಡಿಸಿಕೊಂಡುಹೋಗಿ ಭೂಮಿಗೂ ಪ್ರವೇಶಿಸಿತು ಆಗ ಭೀಮನು ಏಳು ಬಾಣಗಳನ್ನೂ, ಸಹದೇವನು ಐದು ಬಾಣಗಳನ್ನೂ, ದ್ರೌಪದೀಪುತ್ರರು ಅನೇಕಬಾಣಗಳನ್ನೂ ಮೇಘಗಳು ಬೆಟ್ಟದ ಮೇಲೆ ಮಳೆಯನ್ನು ಸುರಿಸುವಂತೆ ಶಲ್ಯನಮೇಲೆ ಸುರಿಸಿದರು ಹೀಗೆ ಎಲ್ಲಾ ಕಡೆಗಳಲ್ಲಿಯೂ ತಡೆಯಲ್ಪಡುತ್ತಿರುವ ಶಲ್ಯನನ್ನು ಕಂಡು, ಕೃತವರ್ಮನೂ, ಕೃಪನೂ ಅಧಿಕಕೋಪದಿಂದ ಪಾಂಡವರನ್ನಿದಿರಿಸಿ ಹೊರಟರು ಆಮೇಲೆ ಮಹಾವೀರ್ಯವುಳ್ಳ ಉಲೂಕನೂ, ಸೌಬಲಕುಮಾರನಾದ ಶಕುನಿಯೂ, ಮಹಾಬಲಶಾಲಿಯಾದ ಅಶ್ವತ್ಥಾಮನೂ ನಿನ್ನ ಪುತ್ರರೆಲ್ಲರೂ ಒಟ್ಟುಗೂಡಿ ಬಂದು ಶಲ್ಯನನ್ನು ರಕ್ಷಿಸಿದರು ಕೃತವರ್ಮನು ಭೀಮಸೇನನನ್ನು ಮೂರು ಬಾಣಗಳಿಂದ ಹೊಡೆದು, ಆ ಭೀಮನನ್ನೂ, ಧೃಷ್ಟದ್ಯುಮ್ನನನ್ನೂ ಬಾಣವರ್ಷಗಳಿಂದ ತಡೆದನು ಶಕುನಿಯು ದ್ರೌಪದೀಪುತ್ರರನ್ನೂ, ದ್ರೋಣಪುತ್ರರು ನಕುಲಸಹದೇವರನ್ನೂ ಇದಿರಿಸಿದರು ದುರ್ಯೋಧನನು ಕೃಷ್ಣಾರ್ಜುನರನ್ನಿದಿರಿಸಿ ಬಾಣಗಳನ್ನು ಪ್ರಯೋಗಿಸಿದನು. ಆಗ ಶತ್ರುಗಳೊಡನೆ ನಿನ್ನವರಿಗೆ ಅತಿಘೋರವಾದ ಅನೇಕ ದ್ವಂದ್ವಯುದ್ಧಗಳು ನಡೆದುವು ಕೃತವರ್ಮನು ಕರಡಿಯಂತೆ ಕೇಸರವುಳ್ಳ ಭೀಮನ ಕುದುರೆಗಳನ್ನು ಕೊಂದನು ಆಗ ಭೀಮನು ರಥದಮೇಧ್ಯದಿಂದ ಕೆಳಕ್ಕೆ ಧುಮುಕಿ, ಕಾಲದಂಡವನ್ನು ಕೈಯಲ್ಲಿ ಹಿಡಿದು ಯುದ್ಧಮಾಡುವ ಯಮನಂತೆ, ಗದಾಯುಧವನ್ನು ಕೈಯಲ್ಲಿ ಹಿಡಿದು ನಿಂತನು ಮದ್ರರಾಜನು ಸಹದೇವನ ಕುದುರೆಗಳನ್ನು ಆತನಿಗಿದಿರಾಗಿಯೇ ಕೊಂದನು ಕೃಪಾಚಾರ್ಯನು ಧೃಷ್ಟದ್ಯುಮ್ನನನ್ನಿದಿರಿಸಿ ಯುದ್ಧಮಾಡಿದನು. ಅಶ್ವತ್ಥಾಮನು ವೀರರಾದ ದ್ರೌಪದೀಪುತ್ರರಲ್ಲಿ ಒಬ್ಬೊಬ್ಬನನ್ನೂ ಹತ್ತುಹತ್ತು ಬಾಣಗಳಿಂದ ಹೊಡೆದು ತಿರುಗಿ ಭೀಮಸೇನನ ಕುದುರೆಗಳನ್ನೂ ಕೊಂದನು ಕುದುರೆಗಳು ಹತವಾದೊಡನೆಯೇ ಭೀಮನು ತಿರುಗಿ ರಥದಿಂದ ಕೆಳಗಿಳಿದು, ಯಮನು ತನ್ನ ದಂಡವನ್ನು ಹೇಗೋ ಹಾಗೆ ಗದೆಯನ್ನು ಕೈಯಲ್ಲಿ ಹಿಡಿದು ಕೃತವರ್ಮನ ಕುದುರೆಗಳನ್ನೂ, ರಥವನ್ನೂ ನೆಗ್ಗಿದನು ಒಡನೆ ಕೃತವರ್ಮನು ಆ ರಥದಿಂದ ಧುಮುಕಿ ಹಿಂದಕ್ಕೆ ಸರಿದನು ಶಲ್ಯನು ಕೋಪಾವೇಶದಿಂದ ಸೋಮಕರನ್ನೂ, ಪಾಂಡವ

ರನ್ನೂ ಬಹಳವಾಗಿ ಬಾಣಗಳಿಂದ ನೋಯಿಸಿ, ತಿರುಗಿ ಯುಧಿಷ್ಠಿರನ ಮೇಲೆ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿದನು ಆಗ ಭೀಮನು ಕೋಪ ದಿಂದ ತುಟಿಗಳನ್ನು ಕಚ್ಚಿಕೊಳ್ಳುತ್ತ, ಶಲ್ಯನನ್ನು ಕೊಲ್ಲುವುದಾಗಿಯೇ ನಿಶ್ಚಯಿಸಿ, ತನ್ನ ಗದೆಯನ್ನು ಕೈಗೆತ್ತಿಕೊಂಡನು ಯಮದಂಡಕ್ಕೂ, ಕಾಳರಾತ್ರಿಗೂ ಸಮಾನವಾಗಿ ಮೇಲೆತ್ತಿದ ಆ ಗದೆಯಾದರೋ, ಗಜ ರಥ ತುರಗ ಪದಾತಿಗಳನ್ನೆಲ್ಲ ಆಹುತಿಯಾಗಿ ತೆಗೆದುಕೊಳ್ಳತಕ್ಕುದು ಚಿನ್ನದ ಕಟ್ಟುಗಳುಳ್ಳುದು! ಉರಿಯುವ ಕೊಳ್ಳಿಯಂತೆ ಜ್ವಲಿಸುವುದು! ಮುಳ್ಳು ಗಳಿಂದ ತುಂಬಿ ಕ್ರೂರಸರ್ಪದಂತಿರುವುದು! ವಜ್ರಾಯುಧಸಮಾನವಾಗಿ ಅಂಗೋಮಯವಾದುದು! ಭೀಮನ ಪ್ರಿಯತರುಣಿಯಂತೆ ಅಗರುಚಂದನ ದಿಂದ ಲೇಪಿತವಾಗಿ ರಕ್ತ ಮೇದೋ ಮಾಂಸಗಳ ಗುರುತುಳ್ಳುದು. ಕಾಲ ಯಮನ ನಾಲಗೆಯಂತಿರುವುದು ಇಂದ್ರನ ವಜ್ರಾಯುಧದಂತೆ ಕಾಣು ತ್ತ ಅನೇಕಘಂಟೆಗಳ ಘಣಘಣಧ್ವನಿಯಿಂದ ಕೂಡಿದುದು! ಪರೆಯನ್ನು ಸುಲಿದ ಹಾವಿನಂತ ಉಗ್ರವಾದುದು ಆನಯ ಮದಜಲದಿಂದ ತೊಯ್ದು ದು! ಎಲ್ಲಾ ಪ್ರಾಣಿಗಳಿಗೂ ಭಯಂಕರವಾಗಿ ತನ್ನ ಸೈನ್ಯವನ್ನು ಸಂತೋ ಷಗೊಳಿಸತಕ್ಕುದು ಮನುಷ್ಯಲೋಕದೊಳಗೆಲ್ಲ ಹೆಸರುಗೊಂಡುದು. ಬೆಟ್ಟದ ಶಿಖರಗಳನ್ನೂ ಭೇದಿಸತಕ್ಕುದು ಮತ್ತು ಯಾವುದರಿಂದ ಭೀಮನು ಕೈಲಾಸಶಿಖರದಲ್ಲಿ ಮಹೇಶ್ವರನಿಗೆ ಪ್ರಿಯಮಿತ್ರನಾದ ಕುಬೇರ ನನ್ನೇ ಧೈರ್ಯದಿಂದ ಯುದ್ಧಕ್ಕೆ ಕರೆದನೋ, ದ್ರೌಪದಿಗೆ ಪ್ರಿಯವನ್ನುಂ ಟುಮಾಡಲು ಮಂದಾರಪುಷ್ಪವನ್ನು ತರುವುದಕ್ಕಾಗಿ ಕುಬೇರನ ವಾಸಸ್ಥಳ ವಾದ ಅಳಕಾಪುರಿಯಲ್ಲಿ ಮಾಯಾವಿಗಳೂ, ಕೊಬ್ಬಿದವರೂ ಆದ ಅನೇಕ ಯಕ್ಷರನ್ನು ಯಾವುದರಿಂದ ಕೊಂದನೋ, ವಜ್ರಖಚಿತವೂ, ನಾನಾ ವರ್ಣಗಳಿಂದ ಚಿತ್ರಿತವೂ, ವಜ್ರಾಯುಧದಂತೆ ವೇಗವುಳ್ಳುದೂ ಆದ ಆ ಗದೆಯನ್ನೆತ್ತಿಕೊಂಡು, ಭೀಮನು ಶಲ್ಯನನ್ನಿದಿರಿಸಿ ಯುದ್ಧಕ್ಕೆ ಹೊರ ಟನು ಮೊದಲು ಆ ಗದೆಯಿಂದ ಶಲ್ಯನ ನಾಲ್ಕು ಕುದುರೆಗಳನ್ನೂ ಬಡಿದು ಕೆಡಹಿದನು ಆಗ ಶಲ್ಯನು ಗರ್ಜಿಸುತ್ತ, ಭೀಮನ ಎದೆಗೆ ಒಂದು ತೋಮರವನ್ನು ಬೀಸಲು, ಅದು ಅವನ ಕವಚವನ್ನು ಭೇದಿಸಿ ಎದೆಗೆ ನಾಟಿತು ಆಗಲೂ ಭೀಮನು ಸ್ವಲ್ಪವೂ ಎದೆಗುಂದದೆ, ಆ ತೋಮರ

ವನ್ನೇ ಕಿತ್ತು, ಮದ್ರರಾಜನ ಸಾರಥಿಯ ಎದೆಗೆ ಗುರಿಯಿಟ್ಟು ಬೀಸಿದನು ಅದರಿಂದ ಸಾರಥಿಯ ಕವಚವು ಹರಿದು, ಆತನು ರಕ್ತವನ್ನು ಕಕ್ಕುತ್ತ ಭೀಮನಿದಿರಾಗಿಯೇ ಬಿದ್ದನು ಆಗ ಮದ್ರರಾಜನು ಹಿಂದಕ್ಕೆ ಸರಿಯುತ್ತ ಮುಯ್ಯಿಗೆ ಮುಯ್ಯಿ ತೀರಿಸಿದ ಭೀಮನ ಪರಾಕ್ರಮಕ್ಕೆ ಮನಸ್ಸಿನಲ್ಲಿ ಅತ್ಯಾಶ್ಚರ್ಯಗೊಂಡನು ಧರ್ಮಾತ್ಮನಾದ ಭೀಮನು ಗದೆಯನ್ನು ಕೈಯಲ್ಲಿ ಹಿಡಿದು ಶತ್ರುವನ್ನಿದಿರಿಸುತ್ತಿದ್ದಾಗ, ಆ ಭೀಮನ ಅಮಾನುಷ ಕೃತ್ಯಗಳನ್ನು ಕಂಡು ಅಲ್ಲಿ ನೆರೆದಿದ್ದವರೆಲ್ಲರೂ ಸಂತೋಷಗೊಂಡು ಆತನನ್ನು ಸ್ತುತಿಸುತ್ತಿದ್ದರು

ಇದು ಹತ್ತನೆಯ ಅಧ್ಯಾಯವು

## ಶಲ್ಯ ಭೀಮರ ಗದಾಯುದ್ಧವು

ಧೃತರಾಷ್ಟ್ರಮಹಾರಾಜಾ! ಕೇಳು! ಸಾರಥಿಯು ಬಿದ್ದುದನ್ನು ನೋಡಿ ಶಲ್ಯನು, ಮುಳ್ಳುಗಳುಳ್ಳ ಉಕ್ಕಿನ ಗದೆಯನ್ನು ಕೈಗೆತ್ತಿಕೊಂಡು, ನಿಶ್ಚಲವಾದ ಬೆಟ್ಟದಂತೆ ನಿಂತನು ಉರಿಯುವ ಕಾಲಾಗ್ನಿಯಂತೆಯೂ, ಪಾಶಹಸ್ತನಾದ ಯಮನಂತೆಯೂ, ಶಿಖರದಿಂದ ಕೂಡಿದ ಕೈಲಾಸದಂತೆಯೂ, ವಜ್ರಪಾಣಿಯಾದ ಇಂದ್ರನಂತೆಯೂ, ಶೂಲಹಸ್ತನಾದ ರುದ್ರನಂತೆಯೂ, ಚಕ್ರಪಾಣಿಯಾದ ವಿಷ್ಣುವಿನಂತೆಯೂ, ಶಕ್ತಿಯನ್ನು ಹಿಡಿದ ಷಣ್ಮುಖನಂತೆಯೂ ಗದಾಪಾಣಿಯಾಗಿ, ಕೊಬ್ಬಿದ ಕಾಡಾನೆಯಂತೆ ತನಗಿದಿರಾಗಿ ನಿಂತಿದ್ದ ಆ ಶಲ್ಯನನ್ನು ನೋಡಿ ಭೀಮನೂ ದೊಡ್ಡದೊಂದು ಗದೆಯನ್ನು ಕೈಗೆತ್ತಿಕೊಂಡು ಅವನನ್ನಿದಿರಿಸಿ ಓಡಿದನು ಈ ಭೀಮನ ಆವೇಶವನ್ನು ನೋಡಿ ಪಾಂಡವರ ಕಡೆಯಲ್ಲಿ ಸಾವಿರಾರು ಕಡೆಗಳಿಂದ ಶೂರರಿಗೆ ಉತ್ಸಾಹಜನಕವಾದ ಶಂಖ ತೂರ್ಯ ಧ್ವನಿಗಳೂ, ಸಿಂಹನಾದಗಳೂ ಮೇಲೆಮೇಲೆ ಹೊರಟುವು ಕೊಬ್ಬಿದ ಕಾಡಾನೆಗಳಂತೆ ಇಬ್ಬರೂ ಯುದ್ಧಕ್ಕೆ ನಿಂತುದನ್ನು ನಿನ್ನವರೂ, ಪಾಂಡವಯೋಧರೂ ಆಶ್ಚರ್ಯದಿಂದ ನೋಡುತ್ತ 'ಭಲೆ, ಭಲೆ!' ಎಂದು ಇಬ್ಬರನ್ನೂ ಪ್ರೋತ್ಸಾಹಿಸುತ್ತಿದ್ದರು ರಾಜಾ! ಗದಾಪಾಣಿಯಾದ ಭೀಮಸೇನ

ವೇಗವನ್ನು ಬಲರಾಮನೊಬ್ಬನು, ಶಲ್ಯನೊಬ್ಬನು, ಇವರಿಬ್ಬರುಹೊರತು ಬೇರೆ ಯಾರೂ ತಡೆದು ನಿಲ್ಲಲಾರರು ಅದರಂತೆಯೇ ಶಲ್ಯನ ಗದಾವೇಗ ವನ್ನು ಭೀಮಸೇನನುಹೊರತು ಬೇರೊಬ್ಬನು ತಡೆಯಲಾರನು ಅವರಿಬ್ಬ ರೂ ಗದಾಪಾಣಿಗಳಾಗಿ ನಿಂತು ಗೂಳಿಗಳಂತೆ ಗರ್ಜಿಸುತ್ತಲೂ, ಮಂಡಲ ಗತಿಯಿಂದ ಸುಳಿಸುಳಿದು ಬರುತ್ತಲೂ, ವಿಚಿತ್ರರೀತಿಗಳಿಂದ ಗದೆಗಳನ್ನು ತಿರುಗಿಸುತ್ತಲೂ ಹೋರಾಡತೊಡಗಿದರು ಅವರಿಬ್ಬರಲ್ಲಿ ಒಬ್ಬರಿಗೊಬ್ಬರಿಗೆ ಬಲವಲ್ಲಿ ವಿಶೇಷವೇನೂ ತಿಳಿಯದಂತೆ ಸಮಾನ ಯುದ್ಧವು ನಡೆಯಿತು ಅಗ್ನಿಜ್ವಾಲೆಗಳಂತಿರುವ ಚಿನ್ನದ ಕಟ್ಟುಗಳಿಂದ ಕೂಡಿದ ಆ ಶಲ್ಯನ ಗದೆ ಯೇ ನೋಡುವವರಿಗೆ ಭಯವನ್ನು ಹುಟ್ಟಿಸುವಂತಿದ್ದಿತು ಹಾಗೆಯೇ ಮಂಡಲಗತಿಯಿಂದ ಸುತ್ತುತ್ತಿರುವ ಮಹಾಬಲಾಢ್ಯನಾದ ಭೀಮನ ಗದೆಯೂಕೂಡ ಮಿಂಚಿನಂತೆ ಹೊಳೆಯುತ್ತಿತ್ತು ಇಷ್ಟರಲ್ಲಿಯೇ ಭೀಮನ ಗದೆಯಿಂದ ತಾಡಿತವಾದ ಶಲ್ಯನ ಗದೆಯಿಂದ ಬೆಂಕಿಯ ಕಿಡಿ ಗಳು ಹೊರಟು ಆಕಾಶದಲ್ಲಿ ಆ ಗದೆಯು ಅಗ್ನಿಯಿಂದ ದಹಿಸಲ್ಪಡುವಂತೆ ತೋರಿತು ಅದರಂತೆಯೇ ಮತ್ತೊಮ್ಮೆ ಶಲ್ಯನಗದೆಯಿಂದ ತಾಡಿತವಾದ ಭೀಮನ ಗದೆಯಲ್ಲಿ ಕೆಂಡದ ಮಳೆಯು ಸುರಿಯುವಂತೆ ಬೆಂಕಿಯ ಕಿಡಿ ಗಳು ಸುರಿಯುತ್ತಿದ್ದುವು ಮಹಾಗಜಗಳು ತಮ್ಮ ದಂತಗಳಿಂದಲೂ, ಮಹಾವೃಷಭಗಳು ತಮ್ಮ ಕೊಂಬುಗಳಿಂದಲೂ ತಿವಿದಾಡುವಂತೆ, ಗದೆಗ ಳಿಂದ ಒಬ್ಬರನ್ನೊಬ್ಬರು ತಿವಿದಾಡುತಿದ್ದರು ಅದರಿಂದಾದ ಗಾಯಗಳಿಂದ ಇಬ್ಬರ ಮೈಯಲ್ಲಿಯೂ ರಕ್ತವು ಸುರಿಯುತ್ತಿತ್ತು ಇಬ್ಬರೂ ಪುಷ್ಪಿತ ಗಳಾದ ಮರಗಳಂತೆ ಕಾಣಿಸಿದರು. ಭೀಮನು ಮದ್ರರಾಜನ ಗದೆಯಿಂದ ಎಡಬಲಪಾರ್ಶ್ವಗಳಲ್ಲಿ ನಾನಾವಿಧವಾಗಿ ಹೊಡೆಯಲ್ಪಡುತಿದ್ದರೂ ಕದಲದೆ ಬೆಟ್ಟದಂತೆ ನಿಶ್ಚಲನಾಗಿದ್ದನು ಅದರಂತೆಯೇ ಶಲ್ಯನು ಬಾರಿಬಾರಿಗೂ ಭೀಮನ ಗದಾಪ್ರಹಾರಕ್ಕೆ ಸಿಕ್ಕಿದರೂ ಕದಲದಿದ್ದನು ಇವರ ಗದಾಪ್ರ ಹಾರದಿಂದುಂಟಾದ ಧ್ವನಿಯು, ಎರಡು ವಜ್ರಾಯುಧಗಳ ತಾಡನದಿಂ ದುಂಟಾದ ಧ್ವನಿಯಂತೆ ದಿಕ್ಕುದಿಕ್ಕುಗಳಿಗೆಲ್ಲ ವ್ಯಾಪಿಸಿತು ಹೀಗೆ ಸ್ವಲ್ಪ ಹೊತ್ತು ಯುದ್ಧಮಾಡಿದಮೇಲೆ, ಅವರಿಬ್ಬರೂ ಸ್ವಲ್ಪ ಹಿಂದಕ್ಕೆ ಸರಿದು ಗದೆಯನ್ನು ಮೇಲೆಕ್ಕೆತ್ತಿ ವಿಚಿತ್ರಮಂಡಲಗತಿಗಳಿಂದ ಸಂಚರಿಸುತಿ

ದ್ದರು ಆಮೇಲೆ ತಿರುಗಿ ಎಂಟುಹಜ್ಜೆಗಳ ದೂರಕ್ಕೆ ಇಬ್ಬರೂ ಮುಂದೆ ನಡೆದುಬಂದು ಯುದ್ಧವನ್ನಾರಂಭಿಸಿದರು ಅತಿಮಾನುಷಪರಾಕ್ರಮವುಳ್ಳ ಅವರಿಬ್ಬರೂ, ಲೋಹಮಯವಾದ ಗದಾದಂಡಗಳನ್ನೆತ್ತಿ ಮಂಡಲಗತಿಗಳಿಂದ ಸುತ್ತಿಸುತ್ತಿ ಒಬ್ಬರನ್ನೊಬ್ಬರು ಹೊಡೆಯುತ್ತ ತಮ್ಮ ಗತಿಚಮತ್ಕಾರಗಳನ್ನೆಲ್ಲ ತೋರಿಸುತ್ತಿದ್ದರು ಹೀಗೆ ಒಬ್ಬರನ್ನೊಬ್ಬರು ಪ್ರಹರಿಸುತ್ತಿರುವಾಗ, ನಡುವೆ ಇಬ್ಬರಿಗೂ ಏಕಕಾಲದಲ್ಲಿ ಪ್ರಬಲವಾದ ಪೆಟ್ಟು ಬಿದ್ದು, ಇಬ್ಬರೂ ಇಂದ್ರ ಬಲಿಗಳಂತೆ ಏಕಕಾಲದಲ್ಲಿ ಕೆಳಗೆ ಬಿದ್ದರು ಅದನ್ನು ನೋಡಿ ಉಭಯಸೈನ್ಯಗಳಲ್ಲಿಯೂ ಹಾಹಾಕಾರಗಳು ಹೊರಟುವು ಇಬ್ಬರಿಗೂ ಮರ್ಮಸ್ಥಾನಗಳಲ್ಲಿ ಪೆಟ್ಟುಬಿದ್ದುದರಿಂದ ಮೈಮೇಲೆ ಪ್ರಜ್ಞೆತಪ್ಪಿದಂತಾಯಿತು ಇದನ್ನು ನೋಡಿ ಕೃಪಾಚಾರ್ಯನು ಧಟ್ಟನೆ ಮುಂದೆ ಬಂದು, ಶಲ್ಯನನ್ನು ತನ್ನ ರಥದಲ್ಲಿ ಏರಿಸಿಕೊಂಡು ಯುದ್ಧಭೂಮಿಯಿಂದ ಹಿಂದಕ್ಕೆ ಸಾಗಿಸಿಬಿಟ್ಟನು ಇತ್ತಲಾಗಿ ಭೀಮಸೇನನಾದರೋ ಸ್ವಲ್ಪಹೊತ್ತು ಮೂರ್ಛಿತನಂತಿದ್ದು, ನಿಮಿಷಮಾತ್ರದಲ್ಲಿಯೇ ಚೇತರಿಸಿಕೊಂಡು ಮೇಲೆದ್ದು, ಗದಾಪಾಣಿಯಾಗಿ ನಿಂತು ಶಲ್ಯನನ್ನು ತಿರುಗಿ ಯುದ್ಧಕ್ಕೆ ಕೂಗಿಕರೆದನು ಆದರೆ ಶಲ್ಯನು ಬರುವಷ್ಟರಲ್ಲಿ ದುರ್ಯೋಧನನ ಕಡೆಯ ಶೂರರು ವಿವಿಧಶಸ್ತ್ರಗಳನ್ನೆತ್ತಿಕೊಂಡು ರಣವಾದ್ಯಗಳೊಡನೆ ಪಾಂಡವಸೈನ್ಯವನ್ನು ಇದಿರಿಸಿ ಹೊಡೆಯಲಾರಂಭಿಸಿದರು ದುರ್ಯೋಧನಾದಿಗಳೆಲ್ಲ ಶಸ್ತ್ರಗಳನ್ನೆತ್ತಿಕೊಂಡು ವೀರವಾದಗಳೊಡನೆ ಬರುವುದನ್ನು ಕಂಡು, ಅತ್ತಲಿಂದ ಪಾಂಡವರೂ ಕೋಪದಿಂದ ಗರ್ಜಿಸುತ್ತ, ದುರ್ಯೋಧನನನ್ನು ಕೊಂದೇಬಿಡಬೇಕೆಂಬ ವೀರಾವೇಶದಿಂದ ಮುಂದೆ ಬಂದರು ಹೀಗೆ ಬರುತ್ತಿರುವ ಸೈನ್ಯವನ್ನು ನೋಡಿದೊಡನೆ ದುರ್ಯೋಧನನು ತನ್ನ ಪ್ರಾಸಾಯುಧದಿಂದ ಚೇಕಿತಾನನ ಎದೆಯಮೇಲೆ ವೇಗದಿಂದ ಅಪ್ಪಳಿಸಿದನು ಆ ಪ್ರಹಾರವನ್ನು ತಡೆಯಲಾರದೆ ಚೇಕಿತಾನನು ರಕ್ತದಿಂದ ತೊಯ್ದು ಮೈಯೊಡನೆ ಮೂರ್ಛಿತನಾಗಿ ರಥದಮೇಲೆಯೇ ಬಿದ್ದುಬಿಟ್ಟನು ಚೇಕಿತಾನನು ಬಿದ್ದುದನ್ನು ನೋಡಿ ಪಾಂಡವರಕಡೆಯ ಮಹಾರಥರೆಲ್ಲರೂ ಕೋಪದಿಂದ ಎಡೆಬಿಡದೆ ಬಾಣವರ್ಷಗಳನ್ನು ಸುರಿಯಲಾರಂಭಿಸಿದರು ಪಾಂಡವರೆಲ್ಲರೂ ಒಟ್ಟಾಗಿ ನಿನ್ನ ಸೈನ್ಯದಲ್ಲಿ ನುಗ್ಗಿ, ಯಥೇಚ

ವಾಗಿ ತಿರುಗುತ್ತ, ಸೈನ್ಯಗಳನ್ನೆಲ್ಲ ಧ್ವಂಸಮಾಡುತ್ತ ಬಂದರು ಕೃಪನೂ, ಕೃತವರ್ಮನೂ, ಶಕುನಿಯೂ ಧರ್ಮರಾಜನನ್ನು ಇದಿರಿಸಿ ನಿಂತರು ದ್ರೋಣಾಚಾರ್ಯರನ್ನು ಕೊಂದ ಧೃಷ್ಟದ್ಯುಮ್ನನನ್ನು ದುರ್ಯೋಧನನು ತಾನಾಗಿಯೇ ಇದಿರಿಸಿದನು ನಿನ್ನ ಪುತ್ರನಿಂದ ಪ್ರೇರಿತರಾದ ಮೂರು ಸಾವಿರಮಂದಿ ತ್ರಿಗರ್ತದೇಶದ ಮಹಾರಥರು ಅರ್ಜುನನಿಗಿದಿರಾದರು. ಆಗ ನಿನ್ನವರು ತಮ್ಮ ಪ್ರಾಣವನ್ನಾದರೂ ಲಕ್ಷ್ಯಮಾಡದೆ ಯುದ್ಧಮಾಡಿ ಜಯವನ್ನು ಪಡೆಯಬೇಕೆಂಬ ದೃಢಸಂಕಲ್ಪವುಳ್ಳವರಾಗಿ, ಹಂಸಗಳು ಸರೋವರವನ್ನು ಪ್ರವೇಶಿಸುವಂತೆ ಶತ್ರುಸೈನ್ಯದಲ್ಲಿ ಸುಲಭವಾಗಿ ಪ್ರವೇಶಿಸಿಬಿಟ್ಟರು ಈ ಉಭಯಪಕ್ಷದವರಿಗೂ ಭಯಂಕರ ಯುದ್ಧವು ಆರಂಭಿಸಿತು ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಹಟದಿಂದ ಆರಂಭಿಸಿದ ಆ ಯುದ್ಧವು, ಇಬ್ಬರಿಗೂ ಮೇಲೆಮೇಲೆ ವೀರಾವೇಶವನ್ನು ಹೆಚ್ಚಿಸುತ್ತಿತ್ತು ಅನೇಕ ಪ್ರಾಣನಾಶಕವಾದ ಆ ಯುದ್ಧದಲ್ಲಿ ಬಿರುಗಾಳಿಯೆದ್ದರ ಹೇಗೋ ಹಾಗೆ ಪ್ರಬಲವಾದ ಧೂಳು ಮೇಲಕ್ಕೆದ್ದಿತು ರಾಜರ ಹೆಸರನ್ನು ಹಿಡಿದು ಕರೆಯುವುದರಿಂದಲೂ, ಸ್ತುತಿಪಾಠಗಳಿಂದಲೂ ಇವರು ಇಂತವರೆಂದು ತಿಳಿಯಬಹುದಾಗಿದ್ದಿತೇಹೊರತು, ಆ ಧೂಳಿನಲ್ಲಿ ಯಾವುದೊಂದೂ ಕಣ್ಣಿಗೆ ಕಾಣಿಸುತ್ತಿರಲಿಲ್ಲ ಇಬ್ಬರೂ ನಿರ್ಭಯವಾಗಿ ಯುದ್ಧಮಾಡುತ್ತಿದ್ದರು ಇಷ್ಟರಲ್ಲಿಯೇ ರಕ್ತಸ್ರಾವದಿಂದ ಆ ಧೂಳು ಸ್ವಲ್ಪಮಟ್ಟಿಗೆ ಶಾಂತವಾಗಿ, ದಿಕ್ಕುಗಳೆಲ್ಲ ಸ್ವಚ್ಛವಾದುವು ಆ ಯುದ್ಧದಲ್ಲಿ ನಮ್ಮವರಲ್ಲಿಯಾಗಲಿ, ಶತ್ರುಪಕ್ಷದವರಲ್ಲಿಯಾಗಲಿ, ಯಾವನೊಬ್ಬನೂ ಯುದ್ಧದಿಂದ ವಿಮುಖನಾಗಲಿಲ್ಲ ಯುದ್ಧದಲ್ಲಿ ಜಯವನ್ನಾಗಲಿ, ಸ್ವರ್ಗವನ್ನಾಗಲಿ ಕೋರುತ್ತ, ಅದರಿಂದಲೇ ತಮಗೆ ಬ್ರಹ್ಮಲೋಕಪ್ರಾಪ್ತಿಯೆಂಬ ದೃಢಸಂಕಲ್ಪದಿಂದ ಒಬ್ಬೊಬ್ಬರೂ ತಮ್ಮ ಪರಾಕ್ರಮವನ್ನು ತೋರಿಸುತ್ತಿದ್ದರು ಪ್ರತಿಯೊಬ್ಬಯೋಧನೂ ತನ್ನ ಯಜಮಾನನ ಉಪ್ಪಿನಿಂದ ಋಣವನ್ನು ತೀರಿಸಬೇಕೆಂಬ ದೃಢಬುದ್ಧಿಯಿಂದ, ಸ್ವಾಮಿಕಾರ್ಯತತ್ಪರನಾಗಿ ಸ್ವರ್ಗದಲ್ಲಿ ದೃಷ್ಟಿಯಿಟ್ಟು ಯುದ್ಧಮಾಡುತ್ತಿದ್ದನು ಮಹಾರಥರೆಲ್ಲರೂ ವೀರವಾದಗಳೊಡನೆ ನಾನಾಬಗೆಯ ಶಸ್ತ್ರಗಳಿಂದ ಒಬ್ಬರನ್ನೊಬ್ಬರು ಹೊಡೆಯುತಿದ್ದರು ಆಗ ಉಭಯಪಕ್ಷದಲ್ಲಿಯೂ 'ಕೊಲ್ಲಿರಿ! ಕಡಿಯಿರಿ! ಹಿಡಿಯಿರಿ! ಬಡಿ

ಯಿರಿ! ಕತ್ತರಿಸಿರಿ!' ಎಂಬ ಮಾತುಗಳೇ ಎಲ್ಲೆಲ್ಲಿಯೂ ಕೇಳಿಸಿತು ಆಮೇಲೆ ಶಲ್ಯನು ಸೈನ್ಯದಲ್ಲಿದ್ದ ಯುಧಿಷ್ಠಿರನಿಗೆ ಗುರಿಯಿಟ್ಟು ತೀಕ್ಷ್ಣಬಾಣಗಳನ್ನು ಪ್ರಯೋಗಿಸಿದನು ಇದನ್ನು ನೋಡುತ್ತಿದ್ದಾಗಲೇ ಅರ್ಜುನನು ಹದಿನಾಲ್ಕು ಬಾಣಗಳನ್ನು ತೆಗೆದು, ಮುಗುಳ್ನಗೆಯೊಡನೆ ಶಲ್ಯನ ಮರ್ಮಸ್ಥಾನಗಳಿಗೆ ಗುರಿಯಿಟ್ಟು ಹೊಡೆದನು ಶಲ್ಯನೂ ಕೋಪದಿಂದ ತನ್ನ ಬಾಣಗಳಿಂದ ಅರ್ಜುನನ ಬಾಣಗಳನ್ನು ತಡೆಯುತ್ತ ಅವನನ್ನು ಗರಿಗಟ್ಟಿದ ಅನೇಕಬಾಣಗಳಿಂದ ಹೊಡೆದನು ಆಮೇಲೆ ಶಲ್ಯನು ಧರ್ಮರಾಜನಮೇಲೆ ದೃಷ್ಟಿಯಿಟ್ಟು, ಋಜುವಾದ ಬಾಣದಿಂದ ಪಾಂಡವಸೈನ್ಯವೆಲ್ಲವೂ ನೋಡುತ್ತಿರುವಾಗಲೇ ಅವನನ್ನು ಹೊಡೆದನು ಯುಧಿಷ್ಠಿರನು ತೀಕ್ಷ್ಣಬಾಣಗಳಿಂದ ಶಲ್ಯನನ್ನು ಪ್ರಹರಿಸಿದನು ಅಲ್ಲದೆ ಚಂದ್ರಸೇನನನ್ನು ಎಪ್ಪತ್ತು ಬಾಣಗಳಿಂದಲೂ, ಸಾರಥಿಯನ್ನು ಒಂಭತ್ತು ಬಾಣಗಳಿಂದಲೂ, ದ್ರುಮಸೇನನೆಂಬವನನ್ನು ಅರುವತ್ತುನಾಲ್ಕು ಬಾಣಗಳಿಂದಲೂ ಹೊಡೆದನು. ಚಕ್ರರಕ್ಷಕರಾದ ಚಂದ್ರಸೇನ ದ್ರುಮಸೇನರಿಬ್ಬರೂ ಹತರಾಗಿ ಬಿದ್ದುದನ್ನು ನೋಡಿ ಶಲ್ಯನು ಕೋಪದಿಂದ ಬಾಣಗಳನ್ನು ಬಿಟ್ಟು ಪಾಂಡವರಕಡೆಯಲ್ಲಿದ್ದ ಇಪ್ಪತ್ತೈದುಮಂದಿ ಚೇದಿವೀರರನ್ನು ಕೊಂದುಬಿಟ್ಟುದಲ್ಲದೆ, ಇಪ್ಪತ್ತೈದು ಬಾಣಗಳಿಂದ ಸಾತ್ಯಕಿಯನ್ನೂ ಐದು ಬಾಣಗಳಿಂದ ಭೀಮಸೇನನನ್ನೂ, ನೂರು ಬಾಣಗಳಿಂದ ನಕುಲ ಸಹದೇವರನ್ನೂ ಎಡೆಬಿಡದೆ ಹೊಡೆದು ನೋಯಿಸಿದನು. ಹೀಗೆ ಸಿರಕುಶವಾಗಿ ಯುದ್ಧದಲ್ಲಿ ಸಂಚರಿಸುತ್ತಿರುವ ಶಲ್ಯನನ್ನು ನೋಡಿ ಕೋಪಗೊಂಡ ಧರ್ಮರಾಜನು, ಸರ್ಪದಂತಿರುವ ತೀಕ್ಷ್ಣಬಾಣಗಳಿಂದ ಶಲ್ಯ ಕಣ್ಣೆದಿರಾಗಿಯೇ ಅವನ ಧ್ವಜವನ್ನು ಕಡಿದು ಕೆಡಹಿದನು ಪರ್ವತಶಿಖರವು ಮುರಿದುಬಿದ್ದಂತೆ ಆ ಮಹಾಧ್ವಜವು ಕೆಳಗೆ ಬಿದ್ದುದನ ನಾವೆಲ್ಲರೂ ನೋಡಿದೆವು ಧ್ವಜವು ಮುರಿದುದರಿಂದ ಅತಿಕೋಪಾಷ್ಟನಾದ ಶಲ್ಯನು, ತಿರುಗಿ ಮೇಘವು ಮಳೆಯನ್ನು ಕರೆಯುವಂತೆ ಪಾಂವರಮೇಲೆ ಅಪರಿಮಿತವಾಗಿ ಬಾಣವನ್ನು ವರ್ಷಿಸಿದನು ಧರ್ಮರಾಜನಿ ಸಹಾಯಕರಾಗಿ ಬಂದಿದ್ದ ಸಾತ್ಯಕಿ, ಭೀಮ, ನಕುಲ, ಸಹದೇವರೆಂ ನಾಲ್ವರನ್ನೂ ಐದೈದು ಬಾಣಗಳಿಂದ ಹೊಡೆದು, ಧರ್ಮರಾಜನಮೆ

ಯೂ ಅನೇಕಬಾಣಗಳನ್ನು ಬಿಟ್ಟನು ಶಲ್ಯನ ಬಾಣಗಳು ಧರ್ಮರಾಜನ ಎದೆಯಮೇಲೆ ಬಲೆಯನ್ನು ಹೆಣೆದಂತೆ ಆವರಿಸಿಕೊಂಡುವು ಮೇಘಗಳು ಆಕಾಶವನ್ನು ಮರೆಸುವಂತೆ ಅವನನ್ನು ಮರಸಿದುವು ಶಲ್ಯನ ಬಾಣಗಳಿಂದ ದಿಕ್ಕುವಿದಿಕ್ಕುಗಳೆಲ್ಲವೂ ಮರಸಿಹೋದುವು ಇಂದ್ರನಿಂದ ಪೀಡಿತನಾದ ಜಂಭಾಸುರನಂತೆ, ಶಲ್ಯನ ಬಾಣದಿಂದ ನೊಂದ ಧರ್ಮರಾಜನ ಪರಾಕ್ರಮವೇನೂ ಮುಂದ ಸಾಗದೆಹೋಯಿತು ಧರ್ಮರಾಜನ ವೀರ್ಯೋತ್ಸಾಹವು ತಗ್ಗಿತು

ಇದು ಹನ್ನೊಂದನೆಯ ಅಧ್ಯಾಯವು

ಶಲ್ಯಪರಾಕ್ರಮವರ್ಣನೆ

ಧೃತರಾಷ್ಟ್ರಮಹಾರಾಜಾ ! ಕೇಳು ! ಶಲ್ಯನಿಂದ ಧರ್ಮರಾಜನಿಗೆ ಭಂಗವುಂಟಾಗಿ, ಅವನು ನೊಂದುಹೋದುದನ್ನು ನೋಡಿ ಸಾತ್ಯಕಿಯೂ, ಭೀಮನೂ, ನಕುಲಸಹದೇವರೂ, ತಮ್ಮತಮ್ಮ ರಥಗಳನ್ನು ಮುಂದೆ ಬಿಟ್ಟುಕೊಂಡು ಬಂದು ಶಲ್ಯನನ್ನು ಸುತ್ತಿಮುತ್ತಿ ಹೊಡೆಯಲಾರಂಭಿಸಿದರು ಹೀಗೆ ಅನೇಕ ಮಹಾರಥರ ನಡುವೆ ಸಿಕ್ಕಿ ಬಾಣದಿಂದ ಪೀಡಿತನಾದ ಶಲ್ಯನನ್ನು ನೋಡಿ, ಜನಗಳಲ್ಲ 'ಭಲೆ, ಭಲೆ!' ಎಂಬ ಶಬ್ದಗಳು ಹೊರಟುವು ಸಿದ್ಧರೂ, ಮಹರ್ಷಿಗಳೂ ಆಕಾಶದಲ್ಲಿ ಆ ಯುದ್ಧವನ್ನು ಸಂತೋಷದಿಂದ ನೋಡುತ್ತ 'ಈ ಯುದ್ಧವು ಆಶ್ಚರ್ಯಕರವಾದುದು' ಎಂದು ಆಡಿಕೊಳ್ಳುತಿದ್ದರು ಇಷ್ಟರಲ್ಲಿಯೇ ಭೀಮನು ಪರಾಕ್ರಮದಲ್ಲಿ ತನಗೆ ಸಾಟಿಯಾದ ಶಲ್ಯನನ್ನು ಮೊದಲು ಒಂದು ಬಾಣದಿಂದ ಹೊಡೆದು ತಿರುಗಿ ಅವನಮೇಲೆ ಏಳು ಬಾಣಗಳನ್ನು ಬಿಟ್ಟನು ಆಗಲೇ ಸಾತ್ಯಕಿಯೂ ನೂರು ಬಾಣಗಳನ್ನು ಶಲ್ಯನಮೇಲೆ ಬಿಟ್ಟು ಸಿಂಹನಾದವನ್ನು ಮಾಡಿದನು ನಕುಲಸಹದೇವರಿಬ್ಬರೂ ಐದೈದು ಬಾಣಗಳನ್ನು ಪ್ರಯೋಗಿಸಿದರು ಸಹದೇವನು ತಿರುಗಿ ಏಳು ಬಾಣಗಳನ್ನು ಅವನಮೇಲೆ ಬಿಟ್ಟನು ಆದರೇನು ? ಇಷ್ಟುಮಂದಿ ಮಹಾರಥರು ತನ್ನನ್ನು ಏಕಕಾಲದಲ್ಲಿ ಹೊಡೆಯುತ್ತಿದ್ದರೂ, ಶಲ್ಯನು ಸ್ವಲ್ಪಮಾತ್ರವೂ ಎದೆಗುಂದದೆ ಮಹಾವೇಗ

ವುಳ್ಳ ಭಯಂಕರವಾದ ತನ್ನ ಬಿಲ್ಲನ್ನೆಳೆದು, ಇಪ್ಪತ್ತೈದು ಬಾಣಗಳಿಂದ ಸಾತ್ಯಕಿಯನ್ನೂ, ಎಪ್ಪತ್ತು ಬಾಣಗಳಿಂದ ಭೀಮನನ್ನೂ, ಏಳು ಬಾಣಗಳಿಂದ ನಕುಲನನ್ನೂ ಹೊಡೆದನು ಆಮೇಲೆ ಸಹದೇವನ ಕೈಯಲ್ಲಿದ್ದ ಬಿಲ್ಲನ್ನು ಒಂದು ಭಲ್ಲಾಯುಧದಿಂದ ಕತ್ತರಿಸಿ, ಇಪ್ಪತ್ತೊಂದು ಬಾಣಗಳನ್ನು ಅವನಮೇಲೆ ಪ್ರಯೋಗಿಸಿದನು ಇಷ್ಟರಲ್ಲಿ ಒಡನೆಯೇ ಸಹದೇವನು ಬೇರೊಂದು ಬಿಲ್ಲಿಗೆ ನಾಣೇರಿಸಿ, ತನ್ನ ಮಾವನಾದ ಶಲ್ಯನನ್ನು ಉರಿಯುವ ಬೆಂಕಿಗೂ, ವಿಷಸರ್ಪಗಳಿಗೂ ಸಮಾನವಾದ ಐದು ಬಾಣಗಳಿಂದ ಹೊಡೆದನು ಮತ್ತು ಶಲ್ಯನ ಸಾರಥಿಯನ್ನು ಒಂದು ಬಾಣದಿಂದ ಪ್ರಹರಿಸಿದನು ತಿರುಗಿ ಶಲ್ಯನಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿದನು ಇದೇಕಾಲದಲ್ಲಿ ಭೀಮನು ಎಪ್ಪತ್ತು ಬಾಣಗಳಿಂದಲೂ, ಸಾತ್ಯಕಿಯು ಒಂಭತ್ತು ಬಾಣಗಳಿಂದಲೂ, ಧರ್ಮರಾಜನು ಅರುವತ್ತು ಬಾಣಗಳಿಂದಲೂ ಶಲ್ಯನನ್ನು ಹೊಡೆದರು ಹೀಗೆ ಮಹಾರಥರೆಲ್ಲರೂ ಸೇರಿ ಸುತ್ತಿಮುತ್ತಿ ಹೊಡೆಯುತ್ತಿದ್ದ ಪ್ರಹಾರದಿಂದ ಶಲ್ಯನ ದೇಹದ ನಾನಾಭಾಗದಿಂದಲೂ ರಕ್ತವು ಕಿತ್ತುಕೊಂಡು, ಅವನು ಕೆಮ್ಮಣ್ಣಿನಿಂದಕೂಡಿದ ಪರ್ವತದಂತೆ ಕಾಣಿಸಿದನು ಆಗಲೂ ಅವನು ಧೈರ್ಯಗೆಡದೆ ಒಬ್ಬೊಬ್ಬರನ್ನೂ ಐದೈದು ಬಾಣಗಳಿಂದ ಬಲವಾಗಿ ನೋಯಿಸಿದನು ಆಗ ಶಲ್ಯನ ಪರಾಕ್ರಮವು ಅತ್ಯಾಶ್ಚರ್ಯಕರವಾಗಿ ತೋರಿತು ಆಮೇಲೆ ಶಲ್ಯನು ಬೇರೊಂದು ಭಲ್ಲಾಯುಧವನ್ನು ಪ್ರಯೋಗಿಸಿ, ಧರ್ಮಪುತ್ರನ ಕೈಯಲ್ಲಿದ್ದ ಬಿಲ್ಲನ್ನು ತುಂಡುಮಾಡಿದನು ಒಡನೆಯೇ ಧರ್ಮರಾಜನು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ಎಡೆಬಿಡದೆ ಬಾಣಗಳನ್ನು ಬಿಡುತ್ತ, ಶಲ್ಯನನ್ನೂ, ಅವನ ರಥ ರಥಾಶ್ವ ಧ್ವಜ ಸಾರಥಿಗಳನ್ನೂ ಪೂರ್ಣವಾಗಿ ಮರೆಸಿಬಿಟ್ಟನು ಹೀಗೆ ಬಾಣಗಳಿಂದ ಮುಚ್ಚಲ್ಪಟ್ಟಾಗಲೂ ಶಲ್ಯನು ಅವನ್ನೆಲ್ಲ ತಪ್ಪಿಸಿಕೊಂಡು, ಅತಿತೀವ್ರವಾದ ಹತ್ತು ಬಾಣಗಳಿಂದ ಧರ್ಮರಾಜನನ್ನು ಬಹಳವಾಗಿ ನೋಯಿಸಿದನು ಧರ್ಮಪುತ್ರನು ಬಾಣದಿಂದ ನೊಂದುದನ್ನು ನೋಡಿ ಸಾತ್ಯಕಿಯು ಶಲ್ಯನಮೇಲೆ ಐದು ಬಾಣಗಳನ್ನು ಪ್ರಯೋಗಿಸಿದನು ಆಗ ಶಲ್ಯನು ಸಾತ್ಯಕಿಯ ಕಡೆಗೆ ತಿರುಗಿ ಒಂದು ಕ್ಷುರಪ್ರಾಯುಧದಿಂದ ಅವನ ಕೈಯಲ್ಲಿದ್ದ ದೊಡ್ಡ ಧನುಸ್ಸನ್ನು ಕತ್ತರಿಸಿ, ಭೀಮ

ಸೇನನೇ ಮೊದಲಾದವರೆಲ್ಲರನ್ನೂ ಮೂರುಮೂರು ಬಾಣಗಳಿಂದ ಹೊಡೆದನು ಇದನ್ನು ನೋಡಿ ಸಾತ್ಯಕಿಯು ಮತ್ತಷ್ಟು ಕೋಪಗೊಂಡು ಚಿನ್ನದಹಿಡಿಯುಳ್ಳ ಒಂದು ತೋಮರಾಯುಧವನ್ನು ಶಲ್ಯನಮೇಲೆ ಪ್ರಯೋಗಿಸಿದನು ಇದೇ ಸಮಯದಲ್ಲಿ ಭೀಮಸೇನನು ಸರ್ಪದಂತಿರುವ ಒಂದು ನಾರಾಚವನ್ನೂ, ನಕುಲನು ಶಕ್ತ್ಯಾಯುಧವನ್ನೂ, ಸಹದೇವನು ಗದೆಯನ್ನೂ, ಧರ್ಮರಾಜನು ಶತಘ್ನಿಯನ್ನೂ ಏಕಕಾಲದಲ್ಲಿ ಶಲ್ಯನ ಮೇಲೆ ಪ್ರಯೋಗಿಸಿದರು ಈ ಐದುಮಂದಿಯೂ ಆ ಶಲ್ಯನನ್ನು ಕೊಲ್ಲುವ ಉದ್ದೇಶದಿಂದ ಏಕಕಾಲದಲ್ಲಿ ಇಷ್ಟು ಆಯುಧಗಳನ್ನು ಪ್ರಯೋಗಿಸಿದರೂ, ಶಲ್ಯನು ಅವನ್ನೆಲ್ಲ ತನ್ನ ಬಾಣಗಳಿಂದ ಅರ್ಧದಾರಿಯಲ್ಲಿಯೇ ತಡೆದು ಕೆಡಹಿದನು, ಸಾತ್ಯಕಿಯ ತೋಮರವನ್ನು ಭಲ್ಲಗಳಿಂದ ಭೇದಿಸಿದನು ಭೀಮನ ಬಾಣವನ್ನು ಒಂದೇ ಬಾಣದಿಂದ ಎರಡು ತುಂಡಾಗಿ ಮಾಡಿದನು ನಕುಲನು ಪ್ರಯೋಗಿಸಿದ ಭಯಂಕರವಾದ ಶಕ್ತಿಯನ್ನು ಹಲವು ಬಾಣಗಳಿಂದ ನಿವಾರಿಸಿದನು ಧರ್ಮರಾಜನು ಬಿಟ್ಟ ಶತಘ್ನಿಯನ್ನು ಎರಡು ಬಾಣಗಳಿಂದ ತುಂಡುಮಾಡಿದನು ಹೀಗೆ ಶಲ್ಯನು, ಐದುಮಂದಿಯ ಪ್ರಯತ್ನವನ್ನೂ ವಿಫಲಮಾಡಿ, ಪಾಂಡವರೆಲ್ಲರೂ ನೋಡುತ್ತಿದ್ದ ಹಾಗೆಯೇ ಜಯೋತ್ಸಾಹದಿಂದ ಸಿಂಹನಾದಮಾಡಿದನು ಆಗ ಸಾತ್ಯಕಿಯು ತನ್ನ ಶತ್ರುವಿಗೆ ಉಂಟಾದ ಜಯವನ್ನು ನೋಡಿ ಸಹಿಸಲಾರದೆ, ಕೋಪದಿಂದ ಬೇರೊಂದು ಧನುಸ್ಸನ್ನು ತೆಗೆದು ಶಲ್ಯನನ್ನು ಎರಡು ಬಾಣಗಳಿಂದಲೂ, ಅವನ ಸಾರಥಿಯನ್ನು ಮೂರು ಬಾಣಗಳಿಂದಲೂ ನೋಯಿಸಿದನು ಆಗ ಶಲ್ಯನು ಕೋಪದಿಂದ ಹತ್ತು ಬಾಣಗಳನ್ನು ಪ್ರಯೋಗಿಸಿ, ಆನೆಗಳನ್ನು ಅಂಕುಶದಿಂದ ತಿವಿಯುವಂತೆ ಬೇರೆ ಹತ್ತು ಬಾಣಗಳಿಂದ ತನಗಿದಿರಾದವರಲ್ಲರನ್ನೂ ಬಲವಾಗಿ ನೋಯಿಸಿದನು ಆಗ ಪಾಂಡವರಲ್ಲಿ ಯಾರಿಗೂ ಶಲ್ಯನಿಗಿದಿರಾಗಿ ನಿಲ್ಲಲು ಸಾಧ್ಯವಾಗಲಿಲ್ಲ. ಶಲ್ಯನ ಪರಾಕ್ರಮವನ್ನು ನೋಡಿ ದುರ್ಯೋಧನನಿಗೆ ಬಹಳ ಸಂತೋಷವಾಯಿತು ಪಾಂಡವರೂ, ಪಾಂಚಾಲರೂ, ಸೃಂಜಯರೂ ಆ ಯುದ್ಧದಲ್ಲಿ ಹತರಾದರೆಂದೇ ನಿನ್ನವರು ನಿಶ್ಚಯಿಸಿದರು ಆಗಿನ ಯುದ್ಧದಲ್ಲಿ ಶಲ್ಯನ ಪರಾಕ್ರಮವು ಮನುಷ್ಯರಲ್ಲಿ ಯಾರಿಗೂ ದುಸ್ಸಹವಾಯಿತು

ಇಷ್ಟರಲ್ಲಿಯೇ ಭೀಮನು ಕೋಪವನ್ನು ತಡೆಯಲಾರದೆ, ಪ್ರಾಣದಾಸೆಯನ್ನು ಬಿಟ್ಟು ಆ ಶಲ್ಯನಮೇಲೆ ಬೀಳುವುದಕ್ಕೆ ಸಿದ್ಧನಾದನು ಹಾಗೆಯೇ ಸಾತ್ಯಕಿ ನಕುಲ ಸಹದೇವರೂ, ಶಲ್ಯನನ್ನು ಸುತ್ತಿಮುತ್ತಿ ಬಾಣಗಳಿಂದ ಹೊಡೆಯಲಾರಂಭಿಸಿದರು ಆಗಲೂ ಶಲ್ಯನು ಆ ನಾಲ್ಕುಮಂದಿಯೊಡನೆಯೂ ಸಮಾನವಾಗಿ ಯುದ್ಧವನ್ನು ಮಾಡುತ್ತಿದ್ದನು ಆಗ ಧರ್ಮರಾಜನು ಒಂದು ಕ್ಷುರಪ್ರಾಯುಧದಿಂದ ಶಲ್ಯನ ಚಕ್ರರಕ್ಷಕರನ್ನು ಕೊಂದನು ಶಲ್ಯನು ಕೋಪದಿಂದ ಪಾಂಡವಸೈನಿಕರನ್ನೆಲ್ಲ ತನ್ನ ಬಾಣಗಳಿಂದ ಮುಚ್ಚಿಬಿಟ್ಟನು ಆಗ ಧರ್ಮರಾಜನು ತನ್ನ ಸೈನ್ಯಕ್ಕುಂಟಾದ ಅಪಾಯವನ್ನು ನೋಡಿ ಭಯಪಟ್ಟು ತನ್ನಲ್ಲಿ ತಾನು 'ಅಹಾ! ಮಹಾತ್ಮನಾದ ಕೃಷ್ಣನು ಹೇಳಿದ ಮಾತು ಎಂದಿಗೂ ಸುಳ್ಳಾಗಲಾರದು ಶಲ್ಯನು ಕೋಪಗೊಂಡರ ನಮ್ಮ ಸೈನ್ಯವನ್ನು ಸಂಪೂರ್ಣವಾಗಿ ತೀರಿಸಿಬಿಡುವನು ಇದು ನಿಶ್ಚಯವು ಈಗ ನಾನೂ, ನನ್ನ ಸಹೋದರರೂ, ಮಹಾರಥನಾದ ಸಾತ್ಯಕಿಯೂ, ಪಾಂಚಾಲರೂ, ಸೃಂಜಯರೂ ಒಂದಾಗಿಸೇರಿಯೂ ಇವನನ್ನು ತಡೆಯಲಾರದೆಹೋದೆವಲ್ಲ? ಮಹಾಬಲಾಢ್ಯನಾದ ಈ ನಮ್ಮ ಮಾವನು ಈಗಲೇ ನಮ್ಮನ್ನಲ್ಲ ತೀರಿಸಿಬಡುವಂತೆ ತೋರುವುದು ಕೃಷ್ಣನ ಮಾತು ಸತ್ಯವು ಅಯ್ಯೋ! ಇದು ಹೇಗಾಗುವುದೋ? ಏನೂ ತಿಳಿಯಲಿಲ್ಲವಲ್ಲ?' ಎಂದು ಯೋಚಿಸುತ್ತಿದ್ದನು ಒಡನೆಯೇ ಪಾಂಡವರು ತಮ್ಮ ತಮ್ಮ ರಥ ಗಜ ತುರಗಗಳೊಡನೆ ಶಲ್ಯನನ್ನು ಸುತ್ತಲೂ ಆವರಿಸಿಕೊಂಡು ಶಸ್ತ್ರವರ್ಷವನ್ನು ಕರೆಯಲಾರಂಭಿಸಿದರು ಆದರೇನು? ಶಲ್ಯನು ಬಿರುಗಾಳಿಯು ಮೇಘಗಳನ್ನು ಚದರಿಸುವಂತೆ ಆ ಬಾಣವರ್ಷಗಳನ್ನೆಲ್ಲ ಚದರಿಸಿದನು ಶಲ್ಯನು ಪ್ರಯೋಗಿಸಿದ ಬಾಣಗಳು ಆಕಾಶದಲ್ಲಿ ಶಲಭಗಳ ಗುಂಪಿನಂತೆ ಹಾರಾಡುತ್ತಿದ್ದುವು ಸುವರ್ಣಾಲಂಕೃತಗಳಾದ ಶಲ್ಯನ ಬಾಣಗಳಿಂದ ಆಕಾಶವೆಲ್ಲವೂ ಎಡೆಬಿಡದೆ ಮರೆಸಿಹೋಯಿತು ಆ ಬಾಣಗಳಿಂದುಂಟಾದ ಕತ್ತಲೆಯಲ್ಲಿ ನಮಗಾಗಲಿ, ಪಾಂಡವರಿಗಾಗಲಿ ಯಾವುದೂ ಕಣ್ಣಿಗೆ ಕಾಣಿಸದಂತಾಯಿತು ಸಮುದ್ರದಂತೆ ಅಪಾರವಾದ ಪಾಂಡವರ ಸೈನ್ಯವು ಶಲ್ಯನ ಬಾಣವರ್ಷಗಳಿಂದ ಕದಲಿಹೋದುದನ್ನು ನೋಡಿ, ಆಕಾಶದಲ್ಲಿ ದೇವ ದಾನವ ಗಂಧರ್ವರೆಲ್ಲರೂ ಆಶ್ಚರ್ಯ

ಪಟ್ಟರು ಶಲ್ಯನ ಬಾಣಗಳಿಂದ ಪಾಂಡವರ ಕಡೆಯ ಮಹಾರಥರೂ, ಅವರ ಸೈನ್ಯಗಳೂ ಮರೆಸಲ್ಪಟ್ಟುವು. ಶಲ್ಯನೂ ಉತ್ಸಾಹದಿಂದ ಸಿಂಹ ನಾದಮಾಡುತ್ತಿದ್ದನು ಆಗ ಶಲ್ಯನನ್ನಿದಿರಿಸುವುದಕ್ಕೆ ಪಾಂಡವರಲ್ಲಿ ಯಾರೂ ಶಕ್ತರಾಗಲಿಲ್ಲ ಆದರೂ ಧರ್ಮರಾಜ ಭೀಮಾದಿಗಳೆಲ್ಲರೂ ತಮ್ಮಿಂದಾದವರಗೆ ಅವನನ್ನಿದಿರಿಸಿ ಬಾಣದಿಂದ ಹೊಡೆಯುತ್ತಿದ್ದರು

ಇದು ಹನ್ನೆರಡನೆಯ ಅಧ್ಯಾಯವು



 ಸಂಕುಲಯುದ್ಧವು 

ಮಹಾರಾಜಾ! ಮತ್ತೊಂದುಕಡೆಯಲ್ಲಿ ಅರ್ಜುನನು ಅಶ್ವತ್ಥಾಮ ನೊಡನೆ ಯುದ್ಧಮಾಡುವಾಗ, ಅವನ ತೀಕ್ಷ್ಣವಾದ ಉಕ್ಕಿನ ಬಾಣಗಳಿಂದ ಲೂ, ಅವನಿಗೆ ಬೆಂಬಲವಾಗಿ ಬಂದಿದ್ದ ತ್ರಿಗರ್ತದೇಶದ ಮಹಾರಥರಿಂದ ಲೂ ಬಹಳವಾಗಿ ನೊಂದು, ಕೋಪದಿಂದ ಅಶ್ವತ್ಥಾಮನಮೇಲೆ ಮೂರು ಬಾಣಗಳನ್ನು ಬಿಟ್ಟು, ಅವನಕಡೆಯ ಮಹಾರಥರಲ್ಲಿ ಒಬ್ಬೊಬ್ಬರನ್ನೂ ಎರಡೆರಡು ಬಾಣಗಳಿಂದ ಹೊಡೆದನು ಅಲ್ಲದೆ ಮೇಲೆಮೇಲೆ ಬಾಣವ ರ್ಷಗಳನ್ನು ಅವರಮೇಲೆ ಕರಯುತ್ತಿದ್ದನು ಮೈಯಲ್ಲೆಲ್ಲ ಬಾಣಗಳು ನಾಟಿದ್ದಾಗಕೂಡ ಹಿಂಜರಿಯದೆ ಅವರು ಅಶ್ವತ್ಥಾಮನನ್ನು ಮುಂದಿಟ್ಟು ಕೊಂಡು ಅರ್ಜುನನನ್ನು ಸುತ್ತಿಮುತ್ತಿ ಹೊಡೆಯುತ್ತಿದ್ದರು ಸುವರ್ಣಾ ಲಂಕೃತಗಳಾದ ಅವರ ಬಾಣಗಳು ಅರ್ಜುನನ ರಥವನ್ನೆಲ್ಲ ಆವರಿಸಿಕೊಂ ಡುವು ರಥದಲ್ಲಿದ್ದ ಕೃಷ್ಣಾರ್ಜುನರಿಬ್ಬರೂ ಆ ತೀವ್ರಬಾಣಗಳಿಂದ ಬಹಳ ವಾಗಿ ನೊಂದರು ಅರ್ಜುನನ ರಥದ ಮೂಕಿ, ರಥಚಕ್ರಗಳು, ಕುದು ರೆಯ ಹಗ್ಗಗಳು, ಇರಿಚಿ, ನೊಗ, ರಥದ ಹಿಂದೆ ಬಾಣಸಾಮಗ್ರಿಗಳನ್ನು ತುಂಬಿದ ಸಣ್ಣ ಬಂಡಿ, ಇವೆಲ್ಲವೂ ಕೇವಲ ಬಾಣಮಯವಾಗಿಯೇ ಕಾಣಿ ಸಿತು ಆಗ ನಿನ್ನವರು ಅರ್ಜುನನಮೇಲೆ ಬಾಣಪ್ರಯೋಗದಲ್ಲಿ ತೋರಿ ಸಿದ ಹಸ್ತಲಾಘವವನ್ನು ಇದುವರೆಗೆ ಹಿಂದೆ ನಾವು ಬೇರಲ್ಲಿಯೂ ಕಂಡು ಕೇಳಿರಲಿಲ್ಲ ಆಗ ಅರ್ಜುನನ ರಥವು ವಿಚಿತ್ರವಾದ ಹಿಡಿಗಳುಳ್ಳ ಬಾಣಗಳಿಂದ ಮುಚ್ಚಲ್ಪಟ್ಟು, ಆಕಾಶದ ಕೊಳ್ಳಿಗಳಿಂದ ಉರಿಸಲ್ಪಟ್ಟ

ದೇವವಿಮಾನದಂತೆ ಕಾಣಿಸಿತು ಆಮೇಲೆ ಅರ್ಜುನನು ಕೋಪಗೊಂಡು ಮೇಘವು ಪರ್ವತದಮೇಲೆ ಮಳೆಯನ್ನು ಕರೆಯುವಂತೆ ನಮ್ಮ ಸೈನ್ಯದ ಮೇಲೆ ಬಾಣವರ್ಷವನ್ನು ಕರೆದನು ಅರ್ಜುನನ ನಾಮಾಂಕಿತಗಳಾದ ಬಾಣಗಳಿಂದ ನಿನ್ನ ಸೈನ್ಯವೆಲ್ಲವೂ ಆವರಿಸಲ್ಪಟ್ಟು, ನೋಡುವವರಿಗೆ ಎಲ್ಲವೂ ಆ ಅರ್ಜುನಮಯವಾಗಿಯೇ ಇರುವಂತೆ ತೋರುತ್ತಿತ್ತು ಬಾಣಗಳೆಂಬ ದಳ್ಳುರಿಗಳಿಂದಲೂ, ಧನುಷ್ಟಂಕಾರವೆಂಬ ವಾಯುವೇಗದಿಂದಲೂ ಕೂಡಿದ ಅರ್ಜುನನೆಂಬ ಬೆಂಕಿಗೆ ನಿನ್ನ ಸೈನ್ಯವೆಲ್ಲವೂ ಕಟ್ಟಿಗೆಯಂತಾಯಿತು ಆಗ ಅರ್ಜುನನು ತನ್ನ ರಥವನ್ನು ಬಿಡಿಸಿಕೊಂಡುಹೋಗುವ ಮಾರ್ಗಗಳಲ್ಲಿ, ಎಲ್ಲಿ ನೋಡಿದರೂ ಮುರಿದ ರಥಚಕ್ರಗಳು, ತುಂಡಾದ ನೊಗಗಳು, ಹರಿದುಹೋದ ಬತ್ತಳಿಕೆಗಳು, ಮುರಿದುಬಿದ್ದ ಧ್ವಜಪತಾಕೆಗಳು, ಉರುಳಿಬಿದ್ದ ರಥಗಳು, ಹಾಗೆಯೇ ಅಲ್ಲಲ್ಲಿ ಇರಚಿಗಳು, ಬಾಣದ ಬಂಡಿಗಳು, ಮೂಕಿಗಳು, ಅಚ್ಚುಮರಗಳು, ಚಾಟಿಗಳು, ಕುದುರೆಯ ಹಗ್ಗಗಳು, ಇವೆಲ್ಲವೂ ರಾಶಿರಾಶಿಯಾಗಿ ಬಿದ್ದಿದ್ದುವು ಮತ್ತು ಕಡುಕುಗಳಿಂದಲೂ, ತಲೆಪಾಗುಗಳಿಂದಲೂಕೂಡಿದ ವೀರರ ತಲೆಗಳೂ, ಕೈಬಳೆ ತೋಳ್ಬಳೆಗಳಿಂದ ಕೂಡಿದ ಭುಜಗಳೂ, ತೋಳುಗಳೂ, ಛತ್ರಚಾಮರಗಳೂ, ಮುರಿದ ಕಿರೀಟಗಳೂ ಅಲ್ಲಲ್ಲಿ ರಾಶಿಯಾಗಿ ಬಿದ್ದಿದ್ದುವು ರಕ್ತಮಾಂಸಗಳ ಕೆಸರಿನಿಂದ ದಾರಿಯೆಲ್ಲವೂ ದುರ್ಗಮವಾಗಿ, ಕಾಲರುದ್ರನ ಕ್ರೀಡಾಸ್ಥಳದಂತೆ ಭೀರುಗಳಿಗೆ ಭಯವನ್ನೂ, ಶೂರರಿಗೆ ಉತ್ಸಾಹವನ್ನೂ ಹುಟ್ಟಿಸುವಂತೆ ಇದ್ದಿತು ಆ ಯುದ್ಧದಲ್ಲಿ ಅರ್ಜುನನು ಎರಡುಸಾವಿರ ರಥಿಕರನ್ನು ಕೊಂದು, ಪ್ರಳಯಕಾಲದಲ್ಲಿ ಅಗ್ನಿಯು ಚರಾಚರಾತ್ಮಕವಾದ ಲೋಕವನ್ನೆಲ್ಲ ದಹಿಸಿ ಹೊಗೆಯಿಲ್ಲದೆ ಶಾಂತವಾಗಿ ನಿಲ್ಲುವಂತೆ ಶೋಭಿಸುತ್ತಿದ್ದನು ಅರ್ಜುನನ ಈ ಪರಾಕ್ರಮವನ್ನು ನೋಡಿ ಸಹಿಸಲಾರದೆ, ಅಶ್ವತ್ಥಾಮನು ವೇಗದಿಂದ ಬಂದು ಅವನನ್ನು ಇದಿರಿಸಿದನು ಅವರಿಬ್ಬರೂ ಬಿಳೀಕುದುರೆಗಳಮೇಲೆ ಹೂಡಿದ ರಥದಲ್ಲಿ ಕುಳಿತು, ಒಬ್ಬೊಬ್ಬರನ್ನೊಬ್ಬರು ಕೊಲ್ಲುವ ಹಟದಿಂದ ಇದಿರಾಗಿ, ಬೇಸಗೆಯು ಕಳೆದಮೇಲೆ ಎರಡು ಮಹಾಮೇಘಗಳು ಮಳೆಯನ್ನು ಕರೆಯುವಂತೆ ಬಾಣವರ್ಷವನ್ನು ಕರದರು ಮಹಾವೃಷಭಗಳೆರಡೂ ಕೊಂಬುಗಳಿಂದ ಒಂದನ್ನೊಂದು

ತಿವಿಯುವಂತೆ ಬಾಣಗಳಿಂದ ಒಬ್ಬರನ್ನೊಬ್ಬರು ನೋಯಿಸಿದರು ಬಹಳ ಹೊತ್ತಿನವರಗೆ ಅವರಿಬ್ಬರ ಯುದ್ಧವೂ ಸಮವಾಗಿಯೇ ಕಾಣಿಸಿತು ಶಸ್ತ್ರಗಳು ಒಂದನ್ನೊಂದು ಭಯಂಕರವಾಗಿ ತಾಡಿಸುತ್ತಿದ್ದುವು ಇಷ್ಟರಲ್ಲಿ ಅಶ್ವತ್ಥಾಮನು ಹನ್ನೆರಡು ಬಾಣಗಳಿಂದ ಅರ್ಜುನನನ್ನೂ, ಹತ್ತು ಬಾಣಗಳಿಂದ ಕೃಷ್ಣನನ್ನೂ ಹೊಡೆದನು ಇದನ್ನು ನೋಡಿ ಅರ್ಜುನನು ನಗುತ್ತ ಸ್ವಲ್ಪಹೊತ್ತಿನವರಗೆ ಗುರುಪುತ್ರನೆಂಬ ಗೌರವವನ್ನು ತೋರಿಸುತ್ತಿದ್ದು, ಆಮೇಲೆ ತನ್ನ ಗಾಂಡೀವವನ್ನು ವೇಗದಿಂದೆಳೆದು, ಮೊದಲು ಆ ಅಶ್ವತ್ಥಾಮನ ಸಾರಥಿಯನ್ನೂ, ರಥಾಶ್ವಗಳನ್ನೂ ಕೆಡಹಿಬಿಟ್ಟನು ಆಮೇಲೆ ಆ ಅಶ್ವತ್ಥಾಮನಿಗೆ ನೋವಾಗದಂತೆ ಮೃದುವಾಗಿ ಅವನಮೇಲೆ ಬಾರಿಬಾರಿಗೂ ಬಾಣಗಳನ್ನು ಬಿಡುತಿದ್ದನು ಆಗ ಅಶ್ವತ್ಥಾಮನು ಕುದುರಗಳಿಲ್ಲದ ತನ್ನ ರಥದಮೇಲೆ ಕುಳಿತಿದ್ದಂತೆಯೇ ಹೆಬ್ಬಾಗಿಲಿನ ಅಗುಳಿಯಂತೆ ದೊಡ್ಡದಾಗಿಯೂ, ಲೋಹಮಯವಾಗಿಯೂ ಇರುವ ಒಂದು ಮುಸಲವನ್ನು ತೆಗೆದು ಅರ್ಜುನನಮೇಲೆ ಬೀಸಿದನು ಚಿನ್ನದ ಪಟ್ಟಿಗಳಿಂದಲಂಕೃತವಾದ ಆ ಮುಸಲಾಯುಧವು ಅರ್ಧದಾರಿಯಲ್ಲಿ ಬರುವಾಗಲೇ ಅರ್ಜುನನು ತನ್ನ ಬಾಣಗಳಿಂದ ಅದನ್ನು ಏಳು ತುಂಡಾಗಿ ಕತ್ತರಿಸಿ ಕೆಡಹಿದನು ಅಶ್ವತ್ಥಾಮನು ಕೋಪಗೊಂಡು ಒಂದು ಪರಿಘಾಯುಧವನ್ನು ಅರ್ಜುನನಮೇಲೆ ಪ್ರಯೋಗಿಸಿದನು ಕೋಪಗೊಂಡ ಯಮನಂತೆ ಬರುತ್ತಿರುವ ಆ ಪರಿಘವನ್ನು ಕೂಡ ಅರ್ಜುನನು ಐದುಬಾಣಗಳಿಂದ ತುಂಡುಮಾಡಿಬಿಟ್ಟನು ಹೀಗೆ ಆ ಪರಿಘವು ತುಂಡಾಗಿ ಕೆಳಕ್ಕೆ ಬಿಳುವಾಗ, ಅದರಿಂದುಂಟಾದ ಶಬ್ದವೇ ಎಲ್ಲಾ ರಾಜರ ಮನಸ್ಸನ್ನೂ ನಡುಗಿಸುವಂತಿದ್ದಿತು ಆಮೇಲೆ ಅರ್ಜುನನು ಮೂರು ಭಲ್ಲಾಯುಧಗಳನ್ನು ಅಶ್ವತ್ಥಾಮನಮೇಲೆ ಅತಿವೇಗದಿಂದ ಬೀಸಿದನು ಅದರಿಂದ ನೊಂದರೂ ಅಶ್ವತ್ಥಾಮನು ತನ್ನ ಪೌರುಷವನ್ನು ಬಿಡದೆ ನಿಶ್ಚಲವಾಗಿ ನಿಂತಿದ್ದನು ಆಮೇಲೆ ಆ ದ್ರೋಣಪುತ್ರನು ಮಹಾರಥನಾದ ಸುರಥನನ್ನು ಎಲ್ಲಾ ಕ್ಷತ್ರಿಯರೂ ನೋಡುತ್ತಿರುವಾಗಲೇ ಬಾಣವರ್ಷಗಳಿಂದ ಮುಚ್ಚಿದನು ಪಾಂಚಾಲರಲ್ಲಿ ಮಹಾರಥನೆನಿಸಿಕೊಂಡ ಸುರಥನು ಮೇಘಧ್ವನಿಯುಳ್ಳ ತನ್ನ ರಥದೊಡನೆ ಮುಂದೆ ಬಂದು, ಮಹತ್ತಾದ ತನ್ನ ಧನುಸ್ಸನ್ನೆಳೆದು, ಅಗ್ನಿಗೂ, ಸರ್ಪಕ್ಕೂ

ಸಮಾನವಾದ ಬಾಣಗಳನ್ನು ಅಶ್ವತ್ಥಾಮನಮೇಲೆ ಪ್ರಯೋಗಿಸಿದನು ಸುರಥನ ಬಾಣಗಳಿಂದ ನೊಂದ ಅಶ್ವತ್ಥಾಮನು ದಂಡಾಹತವಾದ ಸರ್ಪ ದಂತೆ ಕೋಪದಿಂದ ಕಡೆಬಾಯಿಗಳನ್ನು ನಕ್ಕುತ್ತ, ಹುಬ್ಬುಗಂಟಿಕ್ಕಿ ಸುರಥ ನನ್ನು ದುರದುರನೆ ನೋಡಿ, ಯಮದಂಡಕ್ಕೆ ಸಮಾನವಾದ ಒಂದು ತೀಕ್ಷ್ಣಬಾಣವನ್ನು ನಾಣಿನಲ್ಲಿ ಸೇರಿಸಿ, ವೇಗದಿಂದೆಳೆದು, ಅದನ್ನು ಅವನ ಮೇಲೆ ಪ್ರಯೋಗಿಸಿದನು ಈ ಬಾಣವು ಇಂದ್ರನ ವಜ್ರಾಯುಧದಂತೆ ತೀವ್ರವೇಗದಿಂದ ಬಂದು ಆ ಸುರಥನ ಎದೆಯನ್ನು ಭೇದಿಸಿಕೊಂಡು ಹೋಗಿ ಭೂಮಿಯಲ್ಲಿಕೂಡ ನಾಟಿಕೊಂಡಿತು ವಜ್ರಾಹತವಾದ ಪರ್ವತ ದಂತೆ ಅವನು ಕೆಳಗೆ ಬಿದ್ದುಬಿಟ್ಟನು ಅವನು ಸತ್ತೊಡನೆ ಅಶ್ವತ್ಥಾ ಮನು ವೇಗದಿಂದ ಬಂದು, ಮೊದಲಿನ ಆ ರಥವನ್ನೇ ಏರಿ, ಸಂಶಪ್ತಕ ಸೈನ್ಯದಿಂದ ಕೂಡಿದವನಾಗಿ, ಸರ್ವಸನ್ನಾಹಗಳನ್ನೂ ಮಾಡಿಕೊಂಡು, ಅರ್ಜುನನನ್ನು ಇದಿರಿಸಿದನು ಸೂರ್ಯನು ನಡುಹಗಲಲ್ಲಿರುವಾಗ ಅರ್ಜು ನನಿಗೆ ನಮ್ಮವರೊಡನೆ ದೊಡ್ಡ ಯುದ್ಧವು ಆರಂಭಿಸಿತು ಆಗ ಅರ್ಜು ನನು ತಾನೊಬ್ಬನಾಗಿಯೇ ಇದ್ದು, ನಮ್ಮಲ್ಲಿ ಅನೇಕವೀರರನ್ನಿದಿರಿಸಿ ಯುದ್ಧಮಾಡಿದ ರೀತಿಯು ನಮಗೆಲ್ಲ ಬಹಳ ಆಶ್ಚರ್ಯವಾಗಿದ್ದಿತು ಪೂರ್ವದಲ್ಲಿ ಇಂದ್ರನಿಗೆ ದೈತ್ಯಸೈನ್ಯದೊಡನೆ ನಡೆದ ಮಹಾಯುದ್ಧದಂತೆ ಆ ಯುದ್ಧವು ಬಹಳ ಪ್ರಬಲವಾಗಿ ನಡೆಯುತ್ತಿದ್ದಿತು

ಇದು ಹದಿಮೂರನೆಯ ಅಧ್ಯಾಯವು



## ಸಂಕುಲಯುದ್ಧವು

ಮಹಾರಾಜಾ ! ಆಮೇಲೆ ದುರ್ಯೋಧನನೂ, ಧೃಷ್ಟದ್ಯುಮ್ನನೂ ಅನ್ಯೋನ್ಯವಾಗಿ ಬಾಣಗಳನ್ನೂ, ಶಕ್ತಿಗಳನ್ನೂ ಪ್ರಯೋಗಿಸುತ್ತ ಪ್ರಬಲ ಯುದ್ಧವನ್ನು ನಡೆಸಿದರು ಮಳೆಗಾಲದಲ್ಲಿ ಮೇಘಗಳಿಂದ ಜಲಧಾರೆ ಗಳು ಬಿಳುವಂತೆ ಬಾಣಪರಂಪರೆಗಳು ಸಾವಿರಾರು ಸಂಖ್ಯೆಯಿಂದ ಬೀಳು ತ್ತಿದ್ದುವು ಧೃಷ್ಟದ್ಯುಮ್ನನು ದ್ರೋಣನನ್ನು ಕೊಂದ ಕೋಪವನ್ನು ಮನಸ್ಸಿನಲ್ಲಿಟ್ಟುಕೊಂಡು, ದುರ್ಯೋಧನನು ಮೊದಲು ಐದು ಬಾಣಗಳಿಂ

ದಲೂ, ಆಮೇಲೆ ಏಳು ಬಾಣಗಳಿಂದಲೂ ಅವನನ್ನು ಬಲವಾಗಿ ಹೊಡೆದನು ಧೃಷ್ಟದ್ಯುಮ್ನನು ಅದಕ್ಕೆ ಪ್ರತಿಯಾಗಿ ದುರ್ಯೋಧನನನ್ನು ಎಪ್ಪತ್ತು ಬಾಣಗಳಿಂದ ಬಲವಾಗಿ ನೋಯಿಸಿದನು ತಮ್ಮ ಸಹೋದರನಿಗೆ ಉಂಟಾದ ನೋವನ್ನು ಸಹಿಸಲಾರದೆ ಆ ದುರ್ಯೋಧನನ ಸಹೋದರರು ತಮ್ಮತಮ್ಮ ದೊಡ್ಡ ಸೈನ್ಯಗಳೊಡನೆ ಧೃಷ್ಟದ್ಯುಮ್ನನನ್ನು ಸುತ್ತಿಮುತ್ತಿ ಹೊಡೆಯಲಾರಂಭಿಸಿದರು ಅಷ್ಟುಮಂದಿ ಅತಿರಥರಾದ ಕೌರವರು ಸುತ್ತಿಮುತ್ತಿ ಹೊಡೆಯುತ್ತಿರುವಾಗಲೂ, ಧೃಷ್ಟದ್ಯುಮ್ನನು ಹೆದರದೆ ತನ್ನ ಅಸ್ತ್ರಚಾತುರ್ಯದಿಂದ ಅವರನ್ನೆಲ್ಲ ತಡೆಯುತಿದ್ದನು ಮತ್ತೊಂದುಕಡೆ ಶಿಖಂಡಿಯು ಪ್ರಭದ್ರಕರೊಡನೆ ಸೇರಿ ಕೃಪ ಕೃತವರ್ಮರಿಬ್ಬರನ್ನೂ ಇದಿರಿಸಿ ಯುದ್ಧಮಾಡುತ್ತಿದ್ದನು ಅವರ ಯುದ್ಧವೂ ಕೂಡ ಭಯಂಕರವಾಗಿದ್ದಿತು ಪ್ರಾಣಗಳನ್ನೇ ಒತ್ತೆಯಾಗಿಟ್ಟು ಅವರು ಯುದ್ಧವೆಂಬ ದ್ಯೂತವನ್ನಾಡುತ್ತಿದ್ದರು ಮತ್ತೊಂದುಕಡೆ ಶಲ್ಯನು ಬಾಣವರ್ಷಗಳಿಂದ ಸಾತ್ಯಕಿ ಭೀಮಸೇನರೊಡನೆ ಪಾಂಡವರನ್ನೆಲ್ಲ ಸೇರಿಸಿ, ಬಾಣಗಳಿಂದ ಹೊಡೆಯುತ್ತಿದ್ದನು ಯಮನಿಗೆ ಸಮಾನವಾದ ಪರಾಕ್ರಮವುಳ್ಳ ನಕುಲಸಹದೇವರಿಬ್ಬರೂ ಶಲ್ಯನ ಬಾಣಗಳಿಗೆ ಸಿಕ್ಕಿ ಬಹಳವಾಗಿ ನೊಂದರು ಆಗ ಶಲ್ಯನ ಬಾಣಗಳಿಂದ ಪೀಡಿತರಾದ ಪಾಂಡವರನ್ನು ರಕ್ಷಿಸಬಲ್ಲ ಮಹಾರಥರಾರೂ ಅಲ್ಲಿ ಕಾಣಿಸಲಿಲ್ಲ ಶಲ್ಯನ ಬಾಣದಿಂದ ಧರ್ಮರಾಜನು ಬಹಳವಾಗಿ ನೊಂದುದನ್ನು ನೋಡಿ ನಕುಲನು ವೇಗದಿಂದ ಬಂದು ತನ್ನ ಮಾವನನ್ನಿದಿರಿಸಿ, ಅವನ ಎದೆಗೆ ಗುರಿಯಿಟ್ಟು ಹತ್ತುಬಾಣಗಳನ್ನು ಹೊಡೆದನು ಸಂಪೂರ್ಣವಾಗಿ ಉಕ್ಕಿನಿಂದ ಮಾಡಲ್ಪಟ್ಟು, ಚೆನ್ನಾಗಿ ಸಾಣೆಹಿಡಿದು, ಚಿನ್ನದ ಹಿಡಿಗಳುಳ್ಳ ಆ ಬಾಣಗಳಿಂದ ಪೀಡಿತನಾದ ಶಲ್ಯನು, ತನ್ನ ಸೋದರಳಿಯನಾದ ಆ ನಕುಲನ ಪರಾಕ್ರಮವನ್ನು ಸಹಿಸದೆ, ಅವನಮೇಲೆ ಪ್ರತಿಯಾಗಿ ತೀವ್ರಬಾಣಗಳನ್ನು ಬಿಡುತಿದ್ದನು ಇಷ್ಟರಲ್ಲಿಯೇ ಧರ್ಮರಾಜನೂ, ಭೀಮನೂ, ಸಾತ್ಯಕಿಯೂ, ಸಹದೇವನೂ ಒಂದಾಗಿಸೇರಿ ಬಂದು ಶಲ್ಯನನ್ನಿದಿರಿಸಿದರು ಇವರು ಬರುವ ವೇಗದಲ್ಲಿ, ತಮ್ಮ ರಥಧ್ವನಿಗಳಿಂದ ದಿಕ್ಕು ವಿದಿಕ್ಕುಗಳನ್ನೂ, ನೆಲವನ್ನೂ ನಡುಗಿಸುತ್ತಿದ್ದರು ಇದನ್ನು ನೋಡಿ, ಶಲ್ಯನು ಸ್ವಲ್ಪವೂ ಹೆದ

ರದೆ ಅವರಿಗಿದಿರಾಗಿ ನಿಂತು, ಧರ್ಮರಾಜನನ್ನು ಮೂರುಬಾಣಗಳಿಂದಲೂ, ಭೀಮನನ್ನು ಐದು ಬಾಣಗಳಿಂದಲೂ, ಸಾತ್ಯಕಿಯನ್ನು ನೂರು ಬಾಣಗಳಿಂದಲೂ, ಸಹದೇವನನ್ನು ಮೂರು ಬಾಣಗಳಿಂದಲೂ ಹೊಡೆದುದಲ್ಲದೆ, ನಕುಲನ ಕೈಯಲ್ಲಿದ್ದ ಧನುರ್ಬಾಣಗಳೆರಡನ್ನೂ ಒಂದು ಕ್ಷುರಪ್ರಾಯುಧದಿಂದ ಕತ್ತರಿಸಿಬಿಟ್ಟನು ಒಡನೆಯೇ ನಕುಲನು ಬೇರ ಧನುಸ್ಸನ್ನು ತೆಗೆದುಕೊಂಡು ಅನೇಕಬಾಣಗಳಿಂದ ಶಲ್ಯನ ರಥವನ್ನು ಮುಚ್ಚಿದನು ಇದೇ ಸಮಯದಲ್ಲಿ ಯುಧಿಷ್ಠಿರನೂ, ಸಹದೇವನೂ ಹತ್ತುಹತ್ತು ಬಾಣಗಳನ್ನು ಶಲ್ಯನ ಎದೆಗೆ ಹೊಡೆದರು ಭೀಮನು ಅರುವತ್ತು ಬಾಣಗಳಿಂದಲೂ, ಸಾತ್ಯಕಿಯು ಹತ್ತು ಬಾಣಗಳಿಂದಲೂ ಅವನನ್ನು ಏಕಕಾಲದಲ್ಲಿ ಹೊಡೆದರು ಇದರಿಂದ ಶಲ್ಯನು ಕ್ರುದ್ಧನಾಗಿ ಸಾತ್ಯಕಿಯನ್ನು ಮೊದಲು ಒಂಭತ್ತು ಬಾಣಗಳಿಂದಲೂ, ಆಮೇಲೆ ಎಪ್ಪತ್ತು ಬಾಣಗಳಿಂದಲೂ ಹೊಡೆದು, ಅವನ ಕೈಯಲ್ಲಿದ್ದ ಧನುಸ್ಸನ್ನೂ, ಬಾಣಗಳನ್ನೂ ಮುಷ್ಟಿಸ್ಥಾನದಲ್ಲಿ ಕತ್ತರಿಸಿಬಿಟ್ಟನು ಅವನ ರಥದ ನಾಲ್ಕು ಕುದುರೆಗಳನ್ನೂ ಕೊಂದು, ಅವನನ್ನು ವಿರಥನನ್ನಾಗಿ ಮಾಡಿದುದಲ್ಲದೆ, ಆ ಸಾತ್ಯಕಿಯಮೇಲೆಯೂ ನೂರು ಬಾಣಗಳನ್ನು ಪ್ರಯೋಗಿಸಿದನು ನಕುಲ ಭೀಮ ಯುಧಿಷ್ಠಿರರನ್ನು ಹತ್ತುಹತ್ತು ಬಾಣಗಳಿಂದ ಹೊಡೆದನು ಅಷ್ಟುಮಂದಿಯನ್ನೂ ಏಕಕಾಲದಲ್ಲಿ ಇದಿರಿಸುತ್ತಿರುವ ಶಲ್ಯನ ಪರಾಕ್ರಮವು ನಮಗೆ ಅತ್ಯಾಶ್ಚರ್ಯಕರವಾಗಿ ಕಾಣಿಸಿತು ಒಡನೆಯೇ ಸಾತ್ಯಕಿಯು ಶಲ್ಯನ ಬಾಣಕ್ಕೆ ಗುರಿಯಾಗಿರುವ ಪಾಂಡವರನ್ನು ನೋಡಿ, ಬೇರೊಂದು ರಥವನ್ನೇರಿ ವೇಗದಿಂದ ಶಲ್ಯನನ್ನಿದಿರಿಸಿ ಬಂದನು ಇದಿರಾಗಿ ಬರುತ್ತಿರುವ ಸಾತ್ಯಕಿಯ ರಥವನ್ನು ನೋಡಿದೊಡನೆ, ಶಲ್ಯನು ಮದದಾನೆಯು ಮದದಾನೆಯನ್ನಿದಿರಿಸುವಂತೆ ತನ್ನ ರಥದಿಂದ ಅವನಿಗಿದಿರಾದನು ಆಗ ಶಲ್ಯ ಸಾತ್ಯಕಿಗಳಿಬ್ಬರಿಗೂ ಹಿಂದೆ ಇಂದ್ರ ಶಂಬರರಿಗೆ ನಡೆದಂತೆ ಪ್ರಬಲಯುದ್ಧವು ಆರಂಭಿಸಿತು. ಸಾತ್ಯಕಿಯು ' ನಿಲ್ಲು, ನಿಲ್ಲು! ' ಎಂದು ಹೇಳುತ್ತ, ಹತ್ತು ಬಾಣಗಳಿಂದ ಶಲ್ಯನನ್ನು ಹೊಡದನು ಶಲ್ಯನು ಪ್ರತಿಯಾಗಿ ಸಾತ್ಯಕಿಯನ್ನು ಅನೇಕಬಾಣಗಳಿಂದ ಹೊಡೆದನು ಒಡನೆಯೇ ಪಾಂಡವರೆಲ್ಲರೂ ಧನುರ್ಧಾರಿಗಳಾಗಿ ಮಾವನಾದ ಶಲ್ಯನಿಗೆ ಇದಿರಾದರು. ರಕ್ತಪ್ರವಾಹಜನಕ

ವಾದ ದೊಡ್ಡ ತುಮುಲಯುದ್ಧವು ಆರಂಭಿಸಿತು ಮಾಂಸಕ್ಕಾಗಿ ಹೋರಾಡುವ ಸಿಂಹಗಳ ಗರ್ಜನೆಯಂತೆ ಅಲ್ಲಿ ವೀರರ ವೀರವಾದಗಳೂ, ಇತರರನ್ನು ಧಿಕ್ಕರಿಸುವ ಶಬ್ದಗಳೂ ಪ್ರಬಲವಾದುವು ಅವರ ಬಾಣಗಳಿಂದ ಭೂವ್ಯಾಕಾಶಗಳೆಲ್ಲವೂ ಕೇವಲ ಬಾಣಮಯವಾದಂತೆ ತೋರಿತು ಬಾಣಗಳಿಂದ ಉಂಟಾದ ಕತ್ತಲೆಯು ಮೇಘದಂತೆ ಆಕಾಶವನ್ನೆಲ್ಲ ಆವರಿಸಿತು ಪೊರೆಯನ್ನು ಸುಲಿದ ಹಾವುಗಳಂತೆ ಬಾಣಗಳು ದಿಕ್ಕುಗಳನ್ನೆಲ್ಲ ವ್ಯಾಪಿಸಿದುವು ಶಲ್ಯನು ಏಕಾಕಿಯಾಗಿದ್ದುಕೊಂಡು ಅನೇಕರನ್ನು ಇದಿರಿಸಿ ಯುದ್ಧಮಾಡಿದ ರೀತಿಯು ನಮಗೆ ಅತ್ಯಾಶ್ಚರ್ಯಕರವಾಯಿತು ಭೂಮಿಯಮೇಲೆಲ್ಲಾ ಶಲ್ಯನ ಬಾಣಗಳೇ ಹರಡಿದ್ದುವು ಹಿಂದೆ ದಾನವಯುದ್ಧದಲ್ಲಿ ಇಂದ್ರನ ರಥವು ಹೇಗೋ ಹಾಗೆ ಆ ರಣರಂಗದಲ್ಲಿ ಶಲ್ಯನ ರಥವೇ ನಿರಂಕುಶವಾಗಿ ತಿರುಗುತಿದ್ದುದನ್ನೂ ನೋಡಿದೆವು

ಇದು ಹದಿನಾಲ್ಕನೆಯ ಅಧ್ಯಾಯವು



## ಶಲ್ಯನಿಗೂ, ಯುಧಿಷ್ಠಿರನಿಗೂ ಯುದ್ಧವು

ಮಹಾರಾಜಾ! ಕೇಳು! ಆಮೇಲೆ ನಿನ್ನ ಸೇನೆಯು ಶಲ್ಯನನ್ನು ಮುಂದಿಟ್ಟುಕೊಂಡು ತಿರುಗಿ ಮಹಾರಭಸದಿಂದ ಪಾಂಡವರನ್ನು ಇದಿರಿಸಿತು ಪಾಂಡವರಿಂದ ಬಹಳವಾಗಿ ನೊಂದಿದ್ದ ನಿನ್ನವರೆಲ್ಲರೂ ಯುದ್ಧಾವೇಶದಿಂದ ಮುಂದೆ ಬಿದ್ದರು ಇವರ ಸಂಖ್ಯೆಯು ಹೆಚ್ಚಾಗಿದ್ದುದರಿಂದ ಕ್ಷಣಮಾತ್ರದಲ್ಲಿ ಪಾಂಡವರ ಸೈನ್ಯವನ್ನು ಕಲಗಿಸಿಬಿಟ್ಟರು ಅವರ ಕೊಲೆಗೆ ಸಿಕ್ಕಿ ನೊಂದ ಪಾಂಡವಸೈನಿಕರು, ಕೃಷ್ಣಾರ್ಜುನರಿಬ್ಬರೂ ನೋಡುತ್ತಿದ್ದ ಹಾಗೆಯೇ ಕ್ಷಣಮಾತ್ರದಲ್ಲಿ ಯುದ್ಧಕ್ಕೆ ಎದೆಗೊಟ್ಟು ನಿಲ್ಲಲಾರದೆ ಹಿಂತಿರುಗುತಿದ್ದರು ಆಗ ಅರ್ಜುನನು ಕೋಪಗೊಂಡು ಕೃಪನನ್ನೂ, ಕೃತವರ್ಮನನ್ನೂ, ಅವರ ಅನುಚರರನ್ನೂ ಬಾಣಸಮೂಹದಿಂದ ಮುಚ್ಚಿದನು ಸಹದೇವನು ಶಕುನಿಯನ್ನೂ, ಅವನ ಸೈನ್ಯಗಳನ್ನೂ ಬಾಣಗಳಿಂದ ತಡೆಯುತ್ತಿದ್ದನು ನಕುಲನೂ ಅವನ ಪಕ್ಕದಲ್ಲಿಯೇ ಇದ್ದು ಶಲ್ಯನನ್ನಿದಿರಿಸಿದನು. ಉಪಪಾಂಡವರೂ, ಇತರ ರಾಜರೂ ನಮ್ಮ

ಪಕ್ಷದ ಬೇರೆ ಅನೇಕರಾಜರನ್ನಿದಿರಿಸಿದರು ಶಿಖಂಡಿಯು ಅಶ್ವತ್ಥಾಮನನ್ನೂ, ಭೀಮನು ಗದಾಪಾಣಿಯಾಗಿ ದುರ್ಯೋಧನನನ್ನೂ ಇದಿರಿಸಿದರು ಕುಂತೀಪುತ್ರನಾದ ಯುಧಿಷ್ಠಿರನು ಸೇನಾಸಮೇತನಾದ ಶಲ್ಯನೊಡನೆ ಯುದ್ಧಕ್ಕೆ ನಿಂತನು ಹೀಗೆ ಅಲ್ಲಲ್ಲಿ ಬೇರೆಬೇರೆಯಾಗಿ ಒಬ್ಬರಿಗೊಬ್ಬರು ಕೈಕಲೆತರು ನಮ್ಮವರೂ, ನಮ್ಮ ಶತ್ರುಗಳಕಡೆಯವರೂ, ಆ ಯುದ್ಧದಿಂದ ಹಿಂತಿರುಗಬಾರದೆಂದು ಸಂಕಲ್ಪಿಸಿ, ಪ್ರಬಲಯುದ್ಧಕ್ಕೆ ತೊಡಗಿದರು ಆಗ ಶಲ್ಯನು ಏಕಾಕಿಯಾಗಿದ್ದೇ ಪಾಂಡವರ ಎಲ್ಲಾ ಸೈನ್ಯಗಳನ್ನೂ ಇದಿರಿಸಿ ತೋರಿಸಿದ ಸಾಹಸವು ಅತಿಮಹತ್ತಾಗಿ ತೋರಿತು ಆಗ ಶಲ್ಯನು ಚಂದ್ರನ ಬಳಿಯಲ್ಲಿರುವ ಶನಿಗ್ರಹದಂತೆ ಧರ್ಮರಾಜನಿಗೆ ಸಮೀಪವಾಗಿರುತ್ತಿದ್ದನು. ವಿಷಸರ್ಪಗಳಿಗೆ ಸಮಾನವಾದ ಬಾಣಗಳಿಂದ ಶಲ್ಯನು ಧರ್ಮರಾಜನನ್ನು ಪೀಡಿಸಿದಮೇಲೆ, ಭೀಮನನ್ನಿದಿರಿಸಿ, ಅವನಮೇಲೆ ಬಾಣವರ್ಷಗಳನ್ನು ಕರೆದನು ಆಗ ಶಲ್ಯನು ತೋರಿಸಿದ ಅಸ್ತ್ರಚಾತುರ್ಯವನ್ನೂ, ಅವನ ಹಸ್ತಲಾಘವವನ್ನೂ ನಿನ್ನ ಮತ್ತು ಪಾಂಡವರ ಸೈನ್ಯಗಳೆಲ್ಲ ಆಶ್ಚರ್ಯದಿಂದ ಕೊಂಡಾಡಿದುವು ಶಲ್ಯನ ಬಾಣಗಳಿಂದ ಬಹಳವಾಗಿ ನೊಂದ ಪಾಂಡವಸೈನ್ಯಗಳು ರಣರಂಗವನ್ನು ಬಿಟ್ಟು ಓಡಲಾರಂಭಿಸಿದುವು ಧರ್ಮರಾಜನು ಎಷ್ಟೇ ವಿಧದಿಂದ ಕೂಗಿ ಕರೆದರೂ ಅವು ಹಿಂತಿರುಗಲಿಲ್ಲ ಹೀಗೆ ತನ್ನ ಸೈನ್ಯಗಳಿಗೆ ಶಲ್ಯನಿಂದುಂಟಾದ ಕೊಲೆಯನ್ನು ನೋಡಿ ಧರ್ಮರಾಜನಿಗೆ ಮೈತಿಳಿಯದಷ್ಟು ಕೋಪವುಂಟಾಯಿತು ಆಗ ಅವನು ಈ ಯುದ್ಧದಲ್ಲಿ ತನಗೆ ಜಯವಾದರೂ ಆಗಲಿ, ವಧವಾದರೂ ಆಗಲಿ, ಎಂಬ ಒಂದೇ ದೃಢಬುದ್ಧಿಯಿಂದ ಪೌರುಷವನ್ನವಲಂಬಿಸಿ, ಶಲ್ಯನನ್ನು ಬಾಣಗಳಿಂದ ಹೊಡೆಯುತ್ತ, ಇತ್ತಲಾಗಿ ತನ್ನ ಸಹೋದರರನ್ನೂ, ಕೃಷ್ಣನನ್ನೂ ಕುರಿತು ಹೀಗೆಂದು ಹೇಳುವನು "ಓ ಸಹೋದರರೇ ! ಇದಕ್ಕೆ ಮೊದಲು ಕೌರವನಿಗಾಗಿ ನಮ್ಮನ್ನು ಇದಿರಿಸಿದ ಭೀಷ್ಮ ದ್ರೋಣ ಕರ್ಣರೂ, ಇತರ ರಾಜರೂ ನಮ್ಮಿಂದ ಹತರಾದರು. ಆಗ ನೀವೆಲ್ಲರೂ ನಿಮ್ಮನಿಮ್ಮ ಪಾಲಿಗೂ, ಉತ್ಸಾಹಕ್ಕೂ ತಕ್ಕಂತೆ ನಿಮ್ಮ ಪೌರುಷಗಳನ್ನು ತೋರಿಸಿದಿರಿ. ನಿಮ್ಮನಿಮ್ಮ ಪಾಲಿಗೆ ಬಿದ್ದ ಕಾರ್ಯಗಳನ್ನೆಲ್ಲ ನೀವು ನೆರವೇರಿಸಿದಿರಿ ಈಗ ನನ್ನ ಪಾಲಿಗೆ ಉಳಿದಿರುವವನು

ಮಹಾರಥನಾದ ಈ ಶಲ್ಯನೊಬ್ಬನೇ! ಈಗ ನಾನು ಯುದ್ಧದಲ್ಲಿ ಈ ಮದ್ರರಾಜನನ್ನು ಕೊಲ್ಲಬೇಕಾಗಿರುವುದು ಈ ಕಾರ್ಯವನ್ನು ನಡೆಸುವ ವಿಷಯದಲ್ಲಿ ನನ್ನ ಉದ್ದೇಶವೇನೊ' ಅದನ್ನೆಲ್ಲ ಈಗ ನಿಮಗೆ ತಿಳಿಸು ವೆನು ಯುದ್ಧದಲ್ಲಿ ದೇವೇಂದ್ರನಿಗೂ ಅಜೇಯರೆನಿಸಿದ ಈ ನಕುಲ ಸಹದೇವರಿಬ್ಬರೂ ನನಗೆ ಚಕ್ರರಕ್ಷಕರಾಗಿರಲಿ ಇವರು ಕ್ಷತ್ರಧರ್ಮ ವನ್ನು ಮುಂದಿಟ್ಟುಕೊಂಡು ಶಲ್ಯನನ್ನು ತಮ್ಮ ಮಾವನೆಂಬ ದಾಕ್ಷಿ ಣ್ಯವನ್ನಿಡದ ಅವನನ್ನು ಇದಿರಿಸಿ ನನಗಾಗಿ ಮನಸ್ಸಿಟ್ಟು ಯುದ್ಧಮಾಡ ಬೇಕು ಈ ಯುದ್ಧದಲ್ಲಿ ಶಲ್ಯನಾದರೂ ನನ್ನನ್ನು ಕೊಲ್ಲಲಿ! ನನ್ನಿಂದಾ ದರೂ ಅವನು ಸಾಯಲಿ! ಎಲೈ ವೀರರೇ! ನಿಮ್ಮೆಲ್ಲರಿಗೂ ಮಂಗಳವಾ ಗಲಿ ಸತ್ಯವಾದ ಈ ನನ್ನ ಮಾತನ್ನು ನೀವು ಕಿವಿಗೊಟ್ಟು ಕೇಳಿರಿ ನಾನು ಕ್ಷತ್ರಧರ್ಮವನ್ನು ಅನುಸರಿಸಿ ಈಗ ನನ್ನ ಮಾವನೊಡನೆ ಯುದ್ಧ ಕ್ಕೆ ನಿಲ್ಲುವೆನು ಈ ಕಾರ್ಯವು ನನ್ನ ಪಾಲಿಗೆ ಸೇರಿರುವುದು ಜಯ ವಾದರೂ, ಅಥವಾ ಪರಾಜಯವಾದರೂ ಆಗಲಿ! ನಾನೇನೋ ಇದನ್ನು ಮಾಡಿಯೇ ತೀರಬೇಕು ನನಗೂ, ಅವನಿಗೂ ವಿಶೇಷವಾದ ಶಸ್ತ್ರಸಮೃದ್ಧಿ ಯುಂಟು ಎಲ್ಲಾ ಯುದ್ಧೋಪಕರಣಗಳೂ ಸಮೃದ್ಧವಾಗಿರುವುವು ರಥಗಳನ್ನು ಸಿದ್ಧಪಡಿಸತಕ್ಕವರು ಶಾಸ್ತ್ರೀಯವಾಗಿ ಎಲ್ಲಾ ಸಾಮಗ್ರಿಗಳ ನ್ನೂ ಸಿದ್ಧಪಡಿಸಿಡಲಿ ಸಾತ್ಯಕಿಯು ನನ್ನ ಬಲಪಾರ್ಶ್ವದಲ್ಲಿಯೂ, ಧೃಷ್ಟ ದ್ಯುಮ್ನನು ಎಡಪಾರ್ಶ್ವದಲ್ಲಿಯೂ, ಅರ್ಜುನನು ನನ್ನ ಹಿಂಭಾಗದಲ್ಲಿಯೂ ನನಗೆ ರಕ್ಷಕರಾಗಿರಲಿ ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ ಭೀಮನು ನನ್ನ ಮುಂಭಾಗದಲ್ಲಿ ನಿಲ್ಲಲಿ! ಹೀಗೆ ನೀವೆಲ್ಲರೂ ಸಿದ್ಧರಾದರೆ, ಶಲ್ಯನಿಗಿಂತಲೂ ನಾನು ಎಷ್ಟೋಪಾಲು ಮೇಲೆನಿಸುವೆನು" ಎಂದನು ಒಡನೆಯೇ ಧರ್ಮ ರಾಜನ ಇಷ್ಟದಂತೆ ಅವರವರು ತಮ್ಮ ಸೈನ್ಯಗಳೊಡನೆ ಸಿದ್ಧರಾದರು ತಿರುಗಿ ಸೈನ್ಯಗಳಿಗೆಲ್ಲ ಮಹತ್ತಾದ ಹರ್ಷೋತ್ಸಾಹಗಳುಂಟಾದುವು ಆದ ರಲ್ಲಿಯೂ ಪಾಂಚಾಲರೂ, ಸೋಮಕರೂ, ಮತ್ಸ್ಯರೂ ಬಹಳ ಸಂತೋಷ ಗೊಂಡರು ಧರ್ಮರಾಜನ ಪ್ರತಿಜ್ಞೆಯನ್ನು ಎಲ್ಲರೂ ಕೊಂಡಾಡಿದರು. ಶಂಖ ಭೇರೀ ಪುಷ್ಕರಾದಿವಾದ್ಯಗಳು ನಾನಾಕಡೆಗಳಿಂದ ಮೊಳಗಿದುವು. ಪಾಂಚಾಲರು ಸಿಂಹನಾದವನ್ನು ಮಾಡಿದರು. ಎಲ್ಲರೂ ಆತುರದಿಂದ

ಶಲ್ಯನನ್ನು ಇದಿರಿಸಿ ಹೊರಟರು ಅತ್ತಲಾಗಿ ಕೌರವರೂಕೂಡ ಉತ್ಸಾಹದಿಂದ ಸಿಂಹನಾದಗಳನ್ನು ಮಾಡುತ್ತ ಬಂದರು ಆನೆಗಳ ಘಂಟಾಧ್ವನಿ, ತೂರ್ಯಧ್ವನಿ, ಶಂಖಧ್ವನಿ, ಇವೆಲ್ಲ ಸಮಸ್ತಪ್ರದೇಶವನ್ನೂ ತುಂಬಿ ಪ್ರತಿಧ್ವನಿಯನ್ನುಂಟುಮಾಡುತ್ತಿದ್ದುವು ಪಾಂಡವರ ಪ್ರಬಲಸೈನ್ಯಗಳು ಬರುವುದನ್ನು ನೋಡಿಯೂ, ನಿನ್ನ ಮಗನೂ, ಶಲ್ಯನೂ ಎದೆಗುಂದದೆ ಸಂತೋಷದಿಂದ ಅವರನ್ನು ಇದಿರಿಸಿದರು ಅವರಿಬ್ಬರೂ ಉದಯಾಸ್ತಪರ್ವತಗಳೆರಡೂ ಮಹಾಮೇಘಗಳಿಗೆ ಇದಿರಾಗಿ ನಿಲ್ಲುವಂತೆ ಸೈನ್ಯಗಳಿಗಿದಿರಾಗಿ ನಿಶ್ಚಲವಾಗಿ ನಿಂತಿದ್ದರು ಆಗ ಶಲ್ಯನು ಶಂಬರಾಸುರನನ್ನು ಇಂದ್ರನು ಹೇಗೋ ಹಾಗೆ ಧರ್ಮರಾಜನನ್ನು ಬಾಣಗಳಿಂದ ಮುಚ್ಚಿದನು ಅದರಂತೆಯೇ ದುರ್ಯೋಧನನು ಧನುಸ್ಸನ್ನು ಕೈಗೆತ್ತಿಕೊಂಡು, ತನಗೆ ದ್ರೋಣಾಚಾರ್ಯನಿಂದ ಉಪದಿಷ್ಟವಾದ ನಾನಾಬಗೆಯ ಶಸ್ತ್ರಚಮತ್ಕಾರಗನ್ನೆಲ್ಲ ತೋರಿಸುತ್ತ, ಪಾಂಡವರಮೇಲೆ ವಿಧವಿಧವಾದ ಹಸ್ತಲಾಘವದಿಂದ ಚಮತ್ಕಾರವಾಗಿ ಬಾಣವರ್ಷವನ್ನು ಕರೆಯುತ್ತಿದ್ದನು ದುರ್ಯೋಧನನು ರಣರಂಗದಲ್ಲಿ ಸಂಚರಿಸುತ್ತಿರುವಾಗ ಅವನ ಸುಖವನ್ನು ಕಂಡರಿಯುವುದೇ ಶತ್ರುಗಳಿಗೆ ಕಷ್ಟವಾಯಿತು ಧರ್ಮರಾಜ ಶಲ್ಯರಿಬ್ಬರೂ ವಿವಿಧಬಾಣಗಳಿಂದ ಒಬ್ಬರನ್ನೊಬ್ಬರು ಹೊಡೆಯುತ್ತ ಮಾಂಸಕ್ಕಾಗಿ ಹೋರಾಡುವ ಎರಡು ಹುಲಿಗಳಂತೆ ಪರಾಕ್ರಮವನ್ನು ತೋರಿಸುತ್ತಿದ್ದರು ಭೀಮನು ನಿನ್ನ ಮಗನೊಡನೆ ಕೈಕಲೆತು ಯುದ್ಧಮಾಡುತ್ತಿದ್ದನು ಧೃಷ್ಟದ್ಯುಮ್ನನೂ, ಸಾತ್ಯಕಿಯೂ, ನಕುಲಸಹದೇವರೂ ಶಕುನಿ ಮೊದಲಾದ ನಮ್ಮ ಕಡೆಯ ವೀರರನ್ನು ಇದಿರಿಸಿ ಹೊಡೆಯುತ್ತಿದ್ದರು ರಾಜಾ! ನಿನ್ನ ದುರಾಲೋಚನೆಯ ಫಲವಾಗಿ ನಮಗೂ, ಆ ಪಾಂಡವರಿಗೂ ತಿರುಗಿ ಪ್ರಬಲಯುದ್ಧವು ಆರಂಭಿಸಿತು ದುರ್ಯೋಧನನು ಭೀಮನ ಧ್ವಜವನ್ನು ಬಾಣದಿಂದ ಕತ್ತರಿಸಿ ಕೆಡಹಿದನು ಚಿನ್ನದ ಕಟ್ಟುಗಳಿಂದಲೂ, ಕಿರುಗೆಜ್ಜೆಗಳಿಂದಲೂ, ಮನೋಹರವಾದ ಭೀಮನ ಸಿಂಹಧ್ವಜವು ಅವನ ಕಣ್ಣಿದಿರಾಗಿಯೇ ಮುರಿದು ಕೆಳಗೆ ಬಿದ್ದಿತು ಇಷ್ಟರಲ್ಲಿಯೇ ನಿನ್ನ ಮಗನು ಆನೆಯ ಸುಂಡಿಲಿನಂತೆ ದೊಡ್ಡದಾದ ಭೀಮನ ಕೈಯಲ್ಲಿದ್ದ ಧನುಸ್ಸನ್ನು ಒಂದು ಕ್ಷುರಾಯುಧದಿಂದ ತುಂಡುಮಾಡಿದನು ಧನುಸ್ಸು ಮು

ರಿದೊಡನೆ ಭೀಮನು ರಥದಲ್ಲಿದ್ದ ಒಂದು ಶಕ್ತ್ಯಾಯುಧವನ್ನು ತೆಗೆದು ನಿನ್ನ ಮಗನ ಎದೆಗೆ ಗುರಿಯಿಟ್ಟು ಬೀಸಿದನು ಒಡನೆಯೇ ನಿನ್ನ ಮಗನು ಮೂರ್ಛಿತನಾಗಿ ರಥದಲ್ಲಿಯೇ ಮಲಗಿಬಿಟ್ಟನು ಹೀಗೆ ದುರ್ಯೋಧನನು ಮೂರ್ಛಿತನಾದ ಸಮಯದಲ್ಲಿ, ಭೀಮನು ಆ ಸಾರಥಿಯ ತಲೆಯನ್ನು ಒಂದು ಬಾಣದಿಂದ ಕತ್ತರಿಸಿ ಕೆಡಹಿದನು ಸಾರಥಿಯು ಸತ್ತೊಡನೆ ಕುದುರಗಳು ನಿನ್ನ ಮಗನ ರಥವನ್ನೆಳೆದುಕೊಂಡು ದಿಕ್ಕುಗೆಟ್ಟು ಓಡಲಾರಂಭಿಸಿದವು ಆಗ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು ಆಗ ಅಶ್ವತ್ಥಾಮನೂ, ಕೃಪನೂ, ಕೃತವರ್ಮನೂ, ನಿನ್ನ ಮಗನನನ್ನು ರಕ್ಷಿಸುವುದಕ್ಕಾಗಿ ಆ ರಥವನ್ನು ಹಿಂಬಾಲಿಸಿ ಓಡಿದರು ಹೀಗೆ ನಮ್ಮ ಸೈನ್ಯಗಳು ಕದಲಿಹೋಗಿ, ಪದಾತಿಗಳೆಲ್ಲರೂ ಭಯಗೊಂಡಿರುವಾಗ ಅರ್ಜುನನು ಧನುಷ್ಟಂಕಾರವಮಾಡುತ್ತ ಬಂದು ಆ ಸೈನ್ಯಗಳನ್ನೆಲ್ಲ ಬಾಣಗಳಿಂದ ಹೊಡೆಯುತ್ತಬಂದನು ಆಗ ಯುಧಿಷ್ಠಿರನು ದಂತದಂತೆ ಬಿಳುಪಾದ ತನ್ನ ರಥಾಶ್ವಗಳನ್ನು ತಾನೇ ನಡೆಸುತ್ತ ಅತಿಕೋಪದಿಂದ ಶಲ್ಯನನ್ನಿದಿರಿಸಿ ಹೋದನು ಆಗ ಆ ಯುಧಿಷ್ಠಿರನ ಸ್ಥಿತಿಯು ನಮಗೆ ಆಶ್ಚರ್ಯಕರವಾಗಿ ಕಂಡಿತು ಮೊದಲು ಎಷ್ಟೋ ಮೃದುವಾಗಿಯೂ, ಶಾಂತನಾಗಿಯೂ ಇದ್ದ ಆ ಯುಧಿಷ್ಠಿರನು ಆಗ ಅತಿಕ್ರೂರನಾಗಿ ತೋರುತ್ತಿದ್ದನು ಆಗ ಯುಧಿಷ್ಠಿರನು ಕೋಪದಿಂದ ಕಣ್ಣುಗಳನ್ನರಳಿಸಿ, ನಡುಗುತ್ತಿರುವ ದೇಹದೊಡನೆ ನೂರುಸಾವಿರಸಂಖ್ಯೆಯ ಬಾಣಗಳನ್ನು ಬಿಟ್ಟು, ನಮ್ಮ ಕಡೆಯ ಯೋಧರನ್ನೆಲ್ಲ ಭೇದಿಸುತ್ತಬಂದನು ಆಗ ಆ ಧರ್ಮರಾಜನು ಯಾವಯಾವ ಸೈನ್ಯವು ತನಗಿದಿರಾದರು, ಒಡನೆಯೇ ಆ ಸೈನ್ಯವನ್ನು ವಜ್ರಾಯುಧದಿಂದ ಪರ್ವತಗಳನ್ನು ಕೆಡಹುವಂತೆ ತನ್ನ ಬಾಣಗಳಿಂದ ಕೆಡಹುತಿದ್ದನು ಆಗ ಅವನು, ರಥ ರಥಾಶ್ವ ಧ್ವಜಗಳೊಡನೆ ಅನೇಕ ರಥಗಳನ್ನೂ, ರಥಿಕರನ್ನೂ ಬಿರುಗಾಳಿಯು ಮೇಘಗಳನ್ನು ಹೇಗೋ ಹಾಗೆ ತನ್ನ ಬಾಣಗಳಿಂದ ತೂರಿಬಿಡುತಿದ್ದನು ಕೋಪಗೊಂಡ ಕಾಲರುದ್ರನಂತೆ ರಾವುತರೊಡನೆ ಕುದುರಗಳನ್ನೂ, ಕಾಲಾಳುಗಳನ್ನೂ ಸಾವಿರಾರು ಸಂಖ್ಯೆಯಿಂದ ಕೊಂದುಕೆಡಹಿದನು ಹೀಗೆ ಧರ್ಮರಾಜನು ಬಾಣವರ್ಷಗಳಿಂದ ರಣರಂಗವನ್ನೆಲ್ಲ ಶೂನ್ಯಪ್ರಾಯವಾಗಿ ಮಾಡಿ,

"ನಿಲ್ಲುನಿ"ಲ್ಲೆಂದು ಹೇಳುತ್ತ ಶಲ್ಯನನ್ನಿದಿರಿಸಿಹೋದನು ಆಗ ಧರ್ಮ ರಾಜನ ಆರ್ಭಟವನ್ನು ನೋಡಿ ನಮ್ಮವರೆಲ್ಲರಿಗೂ ಮಹಾಭಯವುಂ ಟಾಯಿತು ಆದರೂ ಹೆದರದೆ ಶಲ್ಯನು ಎದೆಗೊಟ್ಟು ನಿಂತನು ಇಬ್ಬ ರೂ ಇದಿರಾಗಿ ಕೋಪದಿಂದ ಒಬ್ಬರನ್ನೊಬ್ಬರು ಮೂದಲಿಸಿ ಕರೆಯು ತ್ತಲೂ, ಒಬ್ಬರನ್ನೊಬ್ಬರು ಹೆದರಿಸುತ್ತಲೂ, ಯುದ್ಧಸೂಚಕವಾಗಿ ತಮ್ಮ ತಮ್ಮ ಶಂಖಗಳನ್ನೂದಿದರು ಒಬ್ಬರಮೇಲೊಬ್ಬರು ಬಾಣವರ್ಷಗಳನ್ನು ಕರೆದರು ಇಬ್ಬರ ಮೈಯಲ್ಲಿಯೂ ಬಾಣಗಳು ನಾಟಿಕೊಂಡುವು ಇಬ್ಬರ ಮೈಯಲ್ಲಿಯೂ ರಕ್ತವು ಸುರಿಯುತ್ತಿತ್ತು ಅವರಿಬ್ಬರೂ ಪುಷ್ಪಿತಗಳಾದ ಬೂರಗದ ಮತ್ತು ಮುತ್ತುಗದ ಮರಗಳಂತೆ ಕಾಣಿಸುತ್ತಿದ್ದರು ತಮ್ಮ ತಮ್ಮ ಪ್ರಾಣಗಳನ್ನೇ ಪಣವಾಗಿಟ್ಟು, ಯುದ್ಧವೆಂಬ ದ್ಯೂತವನ್ನಾಡುತ್ತಿ ರುವ ಅವರ ಪರಾಕ್ರಮವನ್ನು ನೋಡಿ, ಅವರಲ್ಲಿ ಯಾರಿಗೆ ಜಯವೆಂಬು ದನ್ನು ನಿರ್ಧರಿಸಲಾರದೆ, ಸಮಸ್ತಸೈನ್ಯಗಳೂ ಕಳವಳಿಸುತಿದ್ದುವು ಆಗ ಅಲ್ಲಲ್ಲಿ ಸೈನಿಕರು ತಮ್ಮಲ್ಲಿತಾವು "ಈಗ ಧರ್ಮರಾಜನು ಶಲ್ಯನನ್ನು ಕೊಂದು ಸಮಸ್ತಭೂಮಿಯನ್ನೂ ತಾನೇ ಅನುಭವಿಸುವನೋ, ಅಥವಾ ಶಲ್ಯನೇ ಧರ್ಮರಾಜನನ್ನು ಕೊಂದು ದುರ್ಯೋಧನನಿಗೆ ರಾಜ್ಯವನ್ನು ಕೊಡುವನೋ ಯಾವುದೂ ನಿಶ್ಚಯವಿಲ್ಲ" ಎಂದು ಸಂದೇಹಿಸುತ್ತಿದ್ದರು. ಆಗ ಧರ್ಮರಾಜನಿಗೆ ಶುಭಸೂಚಕವಾಗಿಯೇ ಹಲವು ನಿಮಿತ್ತಗಳು ಕಂಡುಬಂದುವು ಪ್ರಾಣಿಗಳೆಲ್ಲವೂ ಪ್ರದಕ್ಷಿಣವಾಗಿ ಸುತ್ತಿಬಂದುವು ಇಷ್ಟರಲ್ಲಿಯೇ ಶಲ್ಯನು ಯುಧಿಷ್ಠಿರನಮೇಲೆ ನೂರಾರು ಬಾಣಗಳನ್ನು ಬಿಟ್ಟು, ಒಂದು ಬಾಣದಿಂದ ಅವನ ಧನುಸ್ಸನ್ನು ತುಂಡುಮಾಡಿದನು ಒಡನೆಯೇ ಯುಧಿಷ್ಠಿರನು ಬೇರೆ ಬಿಲ್ಲನ್ನು ತೆಗೆದುಕೊಂಡು ಮುನ್ನೂರು ಬಾಣಗಳಿಂದ ಶಲ್ಯನನ್ನು ಹೊಡೆದು, ಒಂದು ಕ್ಷುರಾಯುಧದಿಂದ ಅವನ ಬಿಲ್ಲನ್ನು ಕತ್ತರಿಸಿದನು ಮತ್ತು ನಾಲ್ಕು ಬಾಣಗಳಿಂದ ಶಲ್ಯನ ನಾಲ್ಕು ಕುದುರೆಗಳನ್ನೂ, ಎರಡು ತೀಕ್ಷ್ಣಬಾಣಗಳಿಂದ ಶಲ್ಯನ ಉಭಯಪಕ್ಷದ ಲ್ಲಿದ್ದ ಇಬ್ಬರು ಸಾರಥಿಗಳನ್ನೂ, ಒಂದು ಭಲ್ಲಾಯುಧದಿಂದ ಆ ಶಲ್ಯನ ಧ್ವಜವನ್ನೂ ಕೆಡಹಿಬಿಟ್ಟನು ಆಗ ಶಲ್ಯನಿಗೆ ಉಂಟಾದ ಆ ಭಂಗವನ್ನು ನೋಡಿ ಭಯಪಟ್ಟು ದುರ್ಯೋಧನನ ಸೈನ್ಯಗಳೆಲ್ಲವೂ ಚದರಲಾರಂಭಿಸಿ

ದುವು ಇಷ್ಟರಲ್ಲಿಯೇ ಅಶ್ವತ್ಥಾಮನು ಶಲ್ಯನ ಬಳಿಗೆ ಓಡಿಬಂದು ಅವನನ್ನು ತನ್ನ ರಥಕ್ಕೇರಿಸಿಕೊಂಡು ಬೇಗನೆ ಹಿಂತಿರುಗಿಸಿ ಕರೆದುಕೊಂಡು ಹೋದನು ಇತ್ತಲಾಗಿ ಧರ್ಮರಾಜನು ಜಯೋತ್ಸಾಹದಿಂದ ಆರ್ಭಟಿಸಿ ಕೂಗುತ್ತಿರುವಾಗಲೇ ಅವರಿಬ್ಬರೂ ಒಂದು ಮುಹೂರ್ತಕಾಲದವರೆಗೆ ಬೇರೆ ಕಡೆಗೆ ಹೋಗಿ ಮರೆಯಾಗಿಬಿಟ್ಟರು ಆಮೇಲೆ ಸ್ವಲ್ಪಹೊತ್ತಿನೊಳಗಾಗಿಯೇ ಶಲ್ಯನು ಬೇರೊಂದು ರಥವನ್ನೇರಿಕೊಂಡು ಯುದ್ಧಕ್ಕಾಗಿ ಬಂದನು ಶಾಸ್ತ್ರರೀತಿಯಿಂದ ನಿರ್ಮಿತವಾಗಿಯೂ, ಅಚ್ಚಬಿಳುಪಾಗಿಯೂ, ಮೇಘದಂತೆ ಧ್ವನಿಯುಳ್ಳದಾಗಿಯೂ, ಯಂತ್ರಸಾಮಗ್ರಿಗಳಿಂದ ಕೂಡಿದುದಾಗಿಯೂ, ನೋಡುವಾಗಲೇ ಶತ್ರುಗಳಿಗೆ ರೋಮಾಂಚವನ್ನೆಬ್ಬಿಸತಕ್ಕುದಾಗಿಯೂ ಇದ್ದ ಆ ರಥವನ್ನೇರಿ, ದೃಢವಾದ ಮತ್ತು ವೇಗವುಳ್ಳ ಹೊಸಧನುಸ್ಸನ್ನು ಕೈಯಲ್ಲಿ ಹಿಡಿದು, ರಣರಂಗಕ್ಕೆ ಒಂದೊಡನೆ ಧರ್ಮರಾಜನನ್ನು ಒಂದು ತೀವ್ರಬಾಣದಿಂದ ಹೊಡೆದು ಸಿಂಹನಾದಮಾಡಿದನು ಮತ್ತು ಪಾಂಡವಸೈನ್ಯದಲ್ಲಿದ್ದ ರಾಜರಮೇಲೆ ಮೇಘವು ಮಳೆಯನ್ನು ಕರೆಯುವಂತೆ ಬಾಣವರ್ಷದಿಂದ ಮುಚ್ಚಿದನು ಹತ್ತು ಬಾಣಗಳಿಂದ ಸಾತ್ಯಕಿಯನ್ನೂ, ಮೂರುಮೂರು ಬಾಣಗಳಿಂದ ಭೀಮ ಸಹದೇವರನ್ನೂ ಹೊಡೆದು, ಧರ್ಮರಾಜನನ್ನೂ ಬಹಳವಾಗಿ ನೋಯಿಸಿದನು ಮತ್ತು ಧನುರ್ಧಾರಿಗಳಾದ ಆಯಾ ರಥಿಕರನ್ನೆಲ್ಲ ಅವರ ರಥ ರಥಾಶ್ವ ಸಾರಥಿಗಳೊಡನೆ ಭೇದಿಸುತ್ತ, ಕೊಳ್ಳಿಗಳಿಂದ ಆನೆಗಳನ್ನು ತಿವಿಯುವಂತೆ ಅವರನ್ನೆಲ್ಲ ನೋಯಿಸಿದನು ಅವರ ರಥದ ಮೂಕಿಗಳನ್ನೆಲ್ಲ ಬಾಣಗಳಿಂದ ತುಂಡುಮಾಡಿದನು ಮಾವುತರೊಡನೆ ಆನೆಗಳನ್ನೂ, ರಾವುತರೊಡನೆ ಕುದುರೆಗಳನ್ನೂ, ರಥಿಕರೊಡನೆ ರಥಗಳನ್ನೂ ಕೆಳಕ್ಕುರುಳಿಸಿದನು ಅನೇಕಧ್ವಜಗಳನ್ನು ಮುರಿದನು ಆಯುಧಸಹಿತವಾಗಿದ್ದ ತೋಳುಗಳನ್ನು ತುಂಡಾಗಿಸಿದನು ಯಜ್ಞವೇದಿಗೆ ಹರಡಿದ ದರ್ಭೆಗಳಂತೆ ನೆಲಕ್ಕೆಲ್ಲ ಯುದ್ಧಭಟರ ಶವಗಳನ್ನೇ ಹರಡಿಬಿಟ್ಟನು ಪ್ರಳಯಕಾಲದ ಮೃತ್ಯುವಿನಂತೆ ಶಲ್ಯನು ಸೈನ್ಯಗಳನ್ನೆಲ್ಲ ಕೊಲ್ಲುತ್ತಿರುವುದನ್ನು ನೋಡಿ, ಪಾಂಡವರೆಲ್ಲ ಪಾಂಚಾಲ ಸೋಮಕರಲ್ಲ ಒಂದಾಗಿಸೇರಿ ಅವನನ್ನು ಮುತ್ತಿಕೊಂಡರು

ಇದು ಹದಿನೈದನೆಯ ಅಧ್ಯಾಯವು

## ಯುಧಿಷ್ಠಿರನು ಶಲ್ಯನನ್ನೂ, ಅವನ ತಮ್ಮನನ್ನೂ ವಧಿಸಿದುದು

ಧೃತರಾಷ್ಟ್ರಮಹಾರಾಜಾ! ಆಗ ಆ ಶಲ್ಯನನ್ನು ಭೀಮನೂ, ಸಾತ್ಯಕಿಯೂ, ನಕುಲಸಹದೇವರೂ ನಾಲ್ಕು ಕಡೆಗಳಿಂದಲೂ ಸುತ್ತಿಕೊಂಡು ಒಬ್ಬರನ್ನೊಬ್ಬರು ಮೂದಲಿಸಿ ಯುದ್ಧಕ್ಕೆ ಕರೆಯುತ್ತಿದ್ದರು. ಹೀಗೆ ಅನೇಕ ಶೂರರು ಯುದ್ಧಶೂರನಾದ ಶಲ್ಯನೊಬ್ಬನನ್ನೇ ಸುತ್ತಿಕೊಂಡು, ವೇಗವುಳ್ಳ ತೀಕ್ಷ್ಣಬಾಣಗಳಿಂದ ಅವನನ್ನು ನಾನಾಕಡೆಗಡೆಗಳಿಂದ ಹೊಡೆಯಲಾರಂಭಿಸಿದರು ಯುಧಿಷ್ಠಿರನು ಭೀಮನಿಂದಲೂ, ನಕುಲಸಹದೇವರಿಂದಲೂ, ಸಾತ್ಯಕಿಯಿಂದಲೂ ರಕ್ಷಿಸಲ್ಪಡುತ್ತ ಮುಂದೆ ಹೋಗಿ, ಶಲ್ಯನ ಎದೆಗೆ ಗುರಿಯಿಟ್ಟು ಬಾಣಗಳನ್ನು ಪ್ರಯೋಗಿಸಿದನು ಹೀಗೆ ಶಲ್ಯನು ಬಾಣಗಳಿಂದ ಪ್ರಹರಿಸಲ್ಪಡುತ್ತಿರುವುದನ್ನು ನೋಡಿ ದುರ್ಯೋಧನಾಜ್ಞೆಯಿಂದ ನಿಮ್ಮ ಕಡೆಯ ರಥಿಕರು ಆ ಶಲ್ಯನ ಬೆಂಬಲಕ್ಕಾಗಿ ಬಂದು ಅವನನ್ನು ಸುತ್ತಿನಿಂತರು ಆಮೇಲೆ ಶಲ್ಯನು ಏಳು ಬಾಣಗಳಿಂದ ಯುಧಿಷ್ಠಿರನನ್ನು ಬಲವಾಗಿ ಪ್ರಹರಿಸಿದನು ಅದಕ್ಕೆ ಪ್ರತಿಯಾಗಿ ಧರ್ಮರಾಜನು ಒಂಭತ್ತು ಬಾಣಗಳಿಂದ ಅವನನ್ನು ಹೊಡೆದನು ಆಗ ಶಲ್ಯ ಧರ್ಮರಾಜರಿಬ್ಬರೂ ಎಣ್ಣೆಹಾಕಿ ತೀಡಿದ ತೀಕ್ಷ್ಣಬಾಣಗಳನ್ನು ಕಿವಿಯವರೆಗೆ ಎಳೆದು, ಒಬ್ಬರನ್ನೊಬ್ಬರು ವೇಗದಿಂದ ಹೊಡೆಯುತಿದ್ದರು ಇಬ್ಬರೂ ಸಮಯನಿರೀಕ್ಷಣೆಯಿಂದ ಒಬ್ಬರನ್ನೊಬ್ಬರು ಕೊಲ್ಲುವುದಕ್ಕೆ ಅವಕಾಶವನ್ನು ನೋಡುತ್ತ ಮೇಲೆಮೇಲೆ ಬಾಣಗಳನ್ನು ಬಿಡುತಿದ್ದರು ಅವರು ಧನುಸ್ಸನ್ನು ತಟ್ಟುವ ಧ್ವನಿಯು ಸಿಡಿಲಿನಂತೆ ಕಿವಿಗೆ ಬಿಳುತಿದ್ದುವು ಒಬ್ಬೊಬ್ಬರೂ ಎಡೆಬಿಡದೆ ಬಾಣಗಳನ್ನು ಸುರಿಸುತಿದ್ದರು. ಕಾಡಿನಲ್ಲಿ ಮಾಂಸದಾಸೆಯಿಂದ ಹೋರಾಡುತ್ತಿರುವ ಕುರಿಯ ಮರಿಗಳಂತೆಯೂ, ಕೊಂಬಿನಿಂದ ತಿವಿದಾಡುತ್ತಿರುವ ಮಹಾಗಜಗಳಂತೆಯೂ ಒಬ್ಬರನ್ನೊಬ್ಬರು ಮೇಲೆ ಬಿದ್ದು ಪೀಡಿಸುತ್ತಿದ್ದರು ಇಷ್ಟರಲ್ಲಿಯೇ ಶಲ್ಯನು ಸೂರ್ಯಾಗ್ನಿಗಳಿಗೆ ಸಮಾನಕಾಂತಿಯುಳ್ಳ ಒಂದು ಬಾಣದಿಂದ ಆ ಯುಧಿಷ್ಠಿರನ ಎದೆಗೆ ಗುರಿಯಿಟ್ಟು ಹೊಡೆದನು ಆದರೇನು? ಧರ್ಮರಾಜನು ಅದಕ್ಕೆ ಪ್ರತಿಯಾಗಿ ಒಂದು ಬಾಣವನ್ನು ಶಲ್ಯನ ಎದೆಗೆ ಗುರಿಯಿಟ್ಟು ಹೊಡೆದನು.

ಇದರಿಂದ ಶಲ್ಯನಿಗೆ ಸ್ವಲ್ಪಹೊತ್ತಿನವರಗೆ ಮೂರ್ಛೆಬಂದಂತಾಯಿತು ಮುಹೂರ್ತಮಾತ್ರದಲ್ಲಿಯೇ ಶಲ್ಯನು ಚೇತರಿಸಿಕೊಂಡು ಕೋಪದಿಂದ ಕೆಂಪಾದ ಕಣ್ಣುಗಳೊಡನೆ ಧರ್ಮರಾಜನಮೇಲೆ ವೇಗದಿಂದ ಬಾಣಗಳನ್ನು ಬಿಡಲಾರಂಭಿಸಿದನು ಇದನ್ನು ನೋಡಿ ಸಹಿಸಲಾರದೆ ಯುಧಿಷ್ಠಿರನು ಒಂಭತ್ತು ಬಾಣಗಳನ್ನು ಆ ಶಲ್ಯನ ಎದೆಗೆ ಗುರಿಯಿಟ್ಟು ಹೊಡೆದು, ಆರು ಬಾಣಗಳಿಂದ ಅವನ ಕವಚವನ್ನು ಭೇದಿಸಿದನು ಒಡನೆಯೇ ಶಲ್ಯನು ತನ್ನ ಬಿಲ್ಲಿಗೆ ವೇಗವುಳ್ಳ ಎರಡು ಬಾಣಗಳನ್ನು ಜೋಡಿಸಿ ಅವುಗಳಿಂದ ಧರ್ಮರಾಜನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿದನು ಒಡನೆಯೇ ಧರ್ಮರಾಜನು ಬೇರ ಬಿಲ್ಲನ್ನು ತೆಗೆದುಕೊಂಡು ಇಂದ್ರನು ನಮುಚಿಯನ್ನು ಹೇಗೋ ಹಾಗೆ ಅನೇಕಬಾಣಗಳಿಂದ ಆ ಶಲ್ಯನನ್ನು ನೋಯಿಸಿದನು ಆಗ ಶಲ್ಯನು ಒಂಭತ್ತು ಬಾಣಗಳಿಂದ ಭೀಮ ಯುಧಿಷ್ಠಿರರಿಬ್ಬರ ಮೈಮೇಲಿದ್ದ ಸುವರ್ಣಕವಚಗಳನ್ನೂ ಭೇದಿಸಿ, ಅವರ ತೋಳುಗಳಿಗೂ ಬಾಣಗಳನ್ನು ನಾಟಿದನು ಬೇರೂಂದು ಕ್ಷುರಾಯುಧದಿಂದ ಧರ್ಮರಾಜನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿದನು ಇಷ್ಟರಲ್ಲಿಯೇ ಕೃಪನು ಆರು ಬಾಣಗಳಿಂದ ಧರ್ಮರಾಜನ ಸಾರಥಿಯನ್ನು ಕೊಂದುಕೆಡಹಿದನು ಶಲ್ಯನು ನಾಲ್ಕು ಬಾಣಗಳಿಂದ ಧರ್ಮರಾಜನ ನಾಲ್ಕು ಕುದುರೆಗಳನ್ನೂ ಕೊಂದು ಅವನ ಸುತ್ತಮುತ್ತಲೂ ಇದ್ದ ಸೈನ್ಯಗಳನ್ನೆಲ್ಲ ನಾಶಮಾಡುತ್ತ ಬಂದನು ಓ ಮಹಾರಾಜಾ! ಹೀಗೆ ಶಲ್ಯನು ಬೇರಯಾರಿಗೂ ಸಾಧ್ಯವಲ್ಲದ ಕಾರ್ಯವನ್ನು ಮಾಡುತ್ತಿರಲು ಅದನ್ನು ನೋಡಿ ಮೃದಂಗಧ್ವಜವುಳ್ಳ ಧರ್ಮರಾಜನ ಮನಸ್ಸಿಗೆ ಒಂದು ವಿಧವಾದ ಚಿಂತೆ ಹುಟ್ಟಿತು ಆಗ ಅವನು ಚಿಂತಾಕುಲನಾಗಿ ತನ್ನಲ್ಲಿ ತಾನು "ಏನಿದು? ದೈವಬಲವು ಆ ಕೃಷ್ಣನ ಮಾತನ್ನೂ ಸುಳ್ಳಾಗಿಸುವುದೇನು? ಹಿಂದೆ ಕೃಷ್ಣನು ನೀನೇ ಶಲ್ಯನನ್ನು ಕೊಲ್ಲಬೇಕೆಂದು ಹೇಳಿದ್ದನು ಲೋಕನಾಯಕನಾದ ಅವನ ವಾಕ್ಯವು ತಪ್ಪಿಹೋಗಲಾರದು ಹೀಗಿದ್ದರೂ ಈ ಶಲ್ಯನ ಪರಾಕ್ರಮವೇನೋ ದುಸ್ಸಹವಾಗಿದೆಯಲ್ಲಾ?" ಎಂದು ಚಿಂತಿಸುತ್ತಿದ್ದನು ಹೀಗೆ ಧರ್ಮರಾಜನು ಶಲ್ಯನಿಂದ ಬಹಳವಾಗಿ ನೊಂದುದನ್ನು ನೋಡಿ ಭೀಮನು ಕೋಪದಿಂದ ಮುಂದೆ ಬಂದು, ಒಂದು ಬಾಣದಿಂದ ಆ ಶಲ್ಯನ ಕೈಯಲ್ಲಿದ್ದ

ಧನುಸ್ಸನ್ನು ಕತ್ತರಿಸಿ ಬೇರೆ ಎರಡು ಬಾಣಗಳಿಂದ ಆ ಶಲ್ಯನನ್ನು ಹೊಡೆದನು ಮತ್ತೊಂದು ಬಾಣದಿಂದ ಶಲ್ಯನ ಸಾರಥಿಯ ಶಿರಸ್ಸನ್ನು ಶರೀರದಿಂದ ಬೇರ್ಪಡಿಸಿದನು ಕೋಪಾವೇಶದಿಂದ ಆ ಶಲ್ಯನ ನಾಲ್ಕು ಕುದುರೆಗಳನ್ನೂ ಕೊಂದು ಕೆಡಹಿದನು ಧನುರ್ಧಾರಿಗಳೊಳಗೆಲ್ಲ ಮೇಲೆನಿಸಿಕೊಂಡ ಆ ಭೀಮಸೇನನು ರಣರಂಗದಲ್ಲಿ ತಾನೇ ತಾನಾಗಿ ಸಂಚರಿಸುತಿದ್ದ ಆ ಶಲ್ಯನಮೇಲೆ ನೂರಾರು ಬಾಣಗಳನ್ನು ಬಿಡುತ್ತಿದ್ದನು ಇದೇ ಸಮಯದಲ್ಲಿ ಸಹದೇವನು ಶಲ್ಯನಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸುತ್ತ ಬಂದನು ಇವರಬ್ಬರ ಬಾಣಗಳಿಂದ ಹಿಂದುಮುಂದು ತೋರದೆ ಶಲ್ಯನು ಕಳವಳಿಸುತ್ತಿದ್ದ ಸಮಯದಲ್ಲಿಯೇ, ಭೀಮನು ತನ್ನ ಬಾಣಗಳಿಂದ ಅವನ ಕವಚವನ್ನು ಕತ್ತರಿಸಿದನು ಆ ಕವಚವು ಹರಿದಮೇಲೆ ಶಲ್ಯನು ಸಾವಿರ ನಕ್ಷತ್ರಗಳ ಗುರುತುಳ್ಳ ಒಂದು ಗುರಾಣಿಯನ್ನೂ, ಕತ್ತಿಯನ್ನೂ ಕೈಗೆತ್ತಿಕೊಂಡು, ರಥದಿಂದ ಹಾರಿ ಕೆಳಕ್ಕಿಳಿದು ಪಾಂಡವರನ್ನೆಲ್ಲ ಏಕಕಾಲದಲ್ಲಿ ಇದಿರಿಸಿ ಬಂದನು ನಕುಲನ ರಥದ ಮೂಕಿಯನ್ನು ಆ ಕತ್ತಿಯಿಂದ ಕತ್ತರಿಸಿ ನೆಟ್ಟಗೆ ಯುಧಿಷ್ಠಿರನಿಗಿದಿರಾಗಿ ಹೊರಟನು. ಕೋಪಗೊಂಡ ಕಾಲಯಮನಂತೆ ಧರ್ಮರಾಜನಿಗಿದಿರಾಗಿ ಶಲ್ಯನು ಬರುವುದನ್ನು ನೋಡಿದೊಡನೆ ಧೃಷ್ಟದ್ಯುಮ್ನನೂ, ಉಪಪಾಂಡವರೂ, ಶಿಖಂಡಿಯೂ, ಸಾತ್ಯಕಿಯೂ, ಅವನನ್ನು ಇದಿರಿಸಿ ತಡೆದರು ಭೀಮನು ಒಂಭತ್ತು ಬಾಣಗಳಿಂದ ಆ ಶಲ್ಯನ ಕೈಯಲ್ಲಿದ್ದ ಗುರಾಣಿಯನ್ನೂ, ಬೇರೆ ಕೆಲವು ಭಲ್ಲಾಯುಧಗಳಿಂದ ಅವನ ಕೈಯಲ್ಲಿದ್ದ ಕತ್ತಿಯನ್ನೂ ಭೇದಿಸಿ ಕೆಡಹಿ, ಎಲ್ಲಾ ಸೈನ್ಯಗಳ ನಡುವೆ ಸಂತೋಷದಿಂದ ಸಿಂಹನಾದ ಮಾಡಿದನು ಭೀಮನ ಈ ಸಾಹಸವನ್ನು ನೋಡಿ ಪಾಂಡವರ ಕಡೆಯವರಲ್ಲರೂ ಸಂತೋಷದಿಂದ ಸಿಂಹನಾದ ಮಾಡಿದರು ಶಂಖಗಳನ್ನೂದಿದರು ಈ ಮಹಾಧ್ವನಿಯು ಕಿವಿಗೆ ಬಿದ್ದಾಗ ನಮ್ಮ ಸೈನ್ಯವೆಲ್ಲವೂ ಭಯದಿಂದ ನಡುಗಿತು ಎಂತವರಿಗೂ ದುರ್ಜಯವಾದ ನಮ್ಮ ಸೈನ್ಯಕ್ಕೆ ಆಗ ಆ ಶಬ್ದದಿಂದಲೇ ಮೈಯಲ್ಲಿ ಬೆವರು ಕಿತ್ತುಕೊಂಡಿತು ಅನೇಕರಿಗೆ ಬಾಣದ ಪೆಟ್ಟಿನಿಂದ ಮೈಯಲ್ಲಿ ರಕ್ತವು ಸುರಿಯುತ್ತಿತ್ತು ಆಗ ಪ್ರಾಯಕವಾಗಿ ನಮ್ಮ ಸೈನ್ಯಗಳೆಲ್ಲವೂ ಭಯದಿಂದ ಪ್ರಜ್ಞೆತಪ್ಪಿದಂತೆಯೇ ಆಗಿದ್ದಿತು ಹೀಗೆ ಭೀಮನೇ ಮೊದ

ಲಾದ ಪಾಂಡವರಕಡೆಯ ವೀರರಿಂದ ಶಲ್ಯನು ಬಹಳವಾಗಿ ನೊಂದಿದ್ದಾಗ ಲೂ ಲಕ್ಷ್ಯಮಾಡದೆ, ಒಂದು ಜಿಂಕೆಯಮೇಲೆ ಹಾರುವ ಸಿಂಹದಂತೆ ಧರ್ಮ ರಾಜನಿಗೆ ಇದಿರಾಗಿ ವೇಗದಿಂದ ಓಡಿದನು ಆಗ ಧರ್ಮರಾಜನು ರಥ ರಥಾಶ್ವಸಾರಥಿಗಳನ್ನೆಲ್ಲ ಕಳೆದುಕೊಂಡಿದ್ದರೂ ಹಿಂಜರಿಯದೆ, ಕೋಪ ದಿಂದ ಬೆಂಕಿಯಂತೆ ಉರಿಯುತ್ತ, ತನಗಿದಿರಾಗಿ ಬರುತ್ತಿರುವ ಶಲ್ಯನನ್ನು ತಾನೂ ಇದಿರಿಸಿದನು ಹಿಂದೆ ಕೃಷ್ಣನು ಹೇಳಿದ್ದ ಮಾತಿನಲ್ಲಿ ಅವನಿಗೆ ಪೂರ್ಣವಾದ ನಂಬಿಕೆಯಿದ್ದುದರಿಂದ, ಆ ಮಾತನ್ನು ಜ್ಞಾಪಿಸಿಕೊಂಡು ಹೇಗಾದರೂ ಆ ಶಲ್ಯನನ್ನು ಕೊಂದೇಬಿಡಬೇಕೆಂದು ಸಂಕಲ್ಪಿಸಿಕೊಂಡನು. ಕುದುರಗಳೂ, ಸಾರಥಿಯೂ ಇಲ್ಲದ ರಥದಲ್ಲಿ ಕುಳಿತಹಾಗೆಯೇ ಧರ್ಮ ರಾಜನು ಒಂದು ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡನು ಆಗ ಧರ್ಮ ರಾಜನು ಶಲ್ಯನ ವೀರಾವೇಶವನ್ನೂ, ಆ ಶಲ್ಯನನ್ನು ಕೊಲ್ಲುವ ಕಾರ್ಯಭಾ ಗವು ತನ್ನ ಪಾಲಿಗೆ ಬಿದ್ದಿರುವುದನ್ನೂ, ಅದೇ ವಿಚಾರವಾಗಿ ಕೃಷ್ಣನು ತನಗೆ ನಿರ್ಧರಿಸಿ ಹೇಳಿದುದನ್ನೂ ಚೆನ್ನಾಗಿ ಭಾವಿಸಿ, ಶಲ್ಯನನ್ನು ಆ ಶಕ್ತಿ ಯಿಂದಲೇ ಕೊಂದು, ಕೃಷ್ಣನ ವಾಕ್ಯವನ್ನು ಸತ್ಯವಾಗಿ ಮಾಡಬೇಕೆಂದು ನಿಶ್ಚಯಿಸಿದನು ಹೀಗೆ ನಿಶ್ಚಯಿಸಿ ಧರ್ಮರಾಜನು ರತ್ನಖಚಿತವಾದ ಸುವರ್ಣದಂಡವುಳ್ಳುದಾಗಿ ಸುವರ್ಣದಂತೆ ಥಳಥಳಿಸುವ ಶಕ್ತಿಯನ್ನು ಹಿಡಿದು, ಕೋಪದಿಂದ ತೊಳಲುವ ಕಣ್ಣಾಲೆಗಳೊಡನೆ ಶಲ್ಯನನ್ನು ದುರ ದುರನೆ ನೋಡಿದನು. ರಾಜಾ! ಶುದ್ಧಾತ್ಮನೂ, ಪಾಪರಹಿತನೂ ಆದ ಯುಧಿಷ್ಠಿರನು ಹಾಗೆ ಕೋಪದಿಂದ ದುರದುರನೆ ನೋಡುವಾಗ, ಅದ ರಿಂದಲೇ ಶಲ್ಯನು ದಗ್ಧನಾಗಿ ಭಸ್ಮವಾಗಿರಬೇಕು ಹಾಗಿಲ್ಲದೆ ಆಗಲೂ ಆ ಶಲ್ಯನು ಬದುಕಿದ್ದುದೇ ನಮ್ಮೆಲ್ಲರಿಗೂ ಆಶ್ಚರ್ಯಕರವಾಗಿದ್ದಿತು ಆಮೇಲೆ ಧರ್ಮರಾಜನು ಅಂದವಾಗಿಯೂ, ಶತ್ರುಭಯಂಕರವಾಗಿಯೂ ಇರುವ ಹಿಡಿಯುಳ್ಳುದಾಗಿ, ರತ್ನಕಾಂತಿಯಿಂದ ಜ್ವಲಿಸುವಂತಿರುವ ಆ ಶಕ್ತಿಯನ್ನು ಅತ್ಯುಗ್ರವೇಗದಿಂದ ಶಲ್ಯನಮೇಲೆ ಬೀಸಿದನು ಕಿಡಿಗಳನ್ನೆ ರಚುತ್ತ ವೇಗದಿಂದ ಬರುವ ಆ ಶಕ್ತಿಯನ್ನು ನೋಡುವಾಗಲೇ ಕೌರವರಿ ಗೆಲ್ಲ ಅದು ಪ್ರಳಯಕಾಲದಲ್ಲಿ ಆಕಾಶದಿಂದ ಬೀಳುವ ಮಹೋಗ್ರವಾದ ಉಲ್ಕೆ (ಆಕಾಶದ ಕೊಳ್ಳಿ) ಯಂತೆ ಭಯವನ್ನುಂಟುಮಾಡಿತು ಧರ್ಮ

ರಾಜನಿಂದ ಪ್ರೇರಿತವಾದ ಆ ಶಕ್ತಿಯು, ಕಾಳರಾತ್ರಿಯಂತೆಯೂ, ಪಾಶವನ್ನು ಹಿಡಿದು ಭಯಂಕರರೂಪದಿಂದ ಬರುವ ಯಮನ ದಾದಿಯಂತೆಯೂ, ಬ್ರಹ್ಮದಂಡದಂತೆಯೂ ಕಾಣಿಸುವುದು ಅದು ಪ್ರತಿದಿನವೂ ಪಾಂಡವರಿಂದ ಗಂಧಪುಷ್ಪಾಸನ ಪಾನ ಭೋಜನಾದಿ ವಿವಿಧೋಪಚಾರಗಳಿಂದ ಪೂಜಿಸಲ್ಪಡುತ್ತಿದ್ದುದು ಪ್ರಳಯಕಾಲಾಗ್ನಿಯಂತೆ ಜ್ವಲಿಸುವುದು ಅಥರ್ವಾಂಗಿರಸರಿಂದ ನಿರ್ಮಿತವಾದ ಶೂನ್ಯದೇವತೆಯಂತೆ ಉಗ್ರರೂಪವಾಗಿರುವುದು ಅದು ಸಾಕ್ಷಾತ್ ಪರಮಶಿವನಿಗಾಗಿ ವಿಶ್ವಕರ್ಮನಿಂದ ನಿರ್ಮಿತವಾದುದು ಶತ್ರುಗಳ ಪ್ರಾಣವನ್ನು ಹೀರತಕ್ಕುದು ಭೂವ್ಯಾಕಾಶಗಳಲ್ಲಿಯೂ, ಸ್ವರ್ಗದಲ್ಲಯೂ, ಜಲದಲ್ಲಯೂ ಇರುವ ಸಮಸ್ತಭೂತಗಳನ್ನೂ ಕೊಲ್ಲುವ ಸಾಮರ್ಥ್ಯವುಳ್ಳುದು ಘಂಟೆಗಳಿಂದಲೂ, ಪತಾಕೆಗಳಿಂದಲೂ ಅಲಂಕೃತವಾದುದು ವಜ್ರ ವೈಡೂರ್ಯಾದಿಗಳಿಂದ ವಿಚಿತ್ರವಾಗಿ ಕೆತ್ತಲ್ಪಟ್ಟ ಸುವರ್ಣಮಯವಾದ ದಂಡವುಳ್ಳುದು ಬಹಳ ನಿಯಮಪೂರ್ವಕವಾಗಿ ವಿಶ್ವಕರ್ಮನಿಂದ ನಿರ್ಮಿತವಾದುದು ಬ್ರಹ್ಮದ್ವೇಷಿಗಳನ್ನು ನಿರ್ಮೂಲವಮಾಡತಕ್ಕುದು ಎಂತಹ ಬಲ ಸಾಹಸಗಳಿಂದಲೂ ಇತರರಿಂದ ತಡೆಯಲಸಾಧ್ಯವಾದ ಮಹಾವೇಗವುಳ್ಳುದು ಅಂತಹ ಮಹಾಶಕ್ತಿಯನ್ನು ಯುಧಿಷ್ಠಿರನು ಘೋರಮಂತ್ರಗಳಿಂದ ಅಭಿಮಂತ್ರಿಸಿ, ಶಲ್ಯನನ್ನು ಕೊಲ್ಲುವ ಸಂಕಲ್ಪದಿಂದ ಆಕಾಶಮಾರ್ಗದಲ್ಲಿ ಪ್ರಯೋಗಿಸಿದನು ಅದನ್ನು ಪ್ರಯೋಗಿಸುವಾಗ ಧರ್ಮರಾಜನು ಕೋಪದಿಂದ ಕುಣಿಯುತ್ತ, ದೃಢಮುಷ್ಟಿಯುಳ್ಳ ತೋಳನ್ನು ನೀಡಿ, “ಇದೋ! ಇದರಿಂದ ಇವನು ಹತನಾದಂತೆಯೇ” ಎಂದು ಗರ್ಜಿಸಿ, ಅಂಧಕಾಸುರನ ಸಂಹಾರಕ್ಕಾಗಿ ರುದ್ರನು ಬಾಣವನ್ನು ಪ್ರಯೋಗಿಸಿದಂತೆ ಅದನ್ನು ಬೀಸಿದನು ಆ ಶಕ್ತಿಯನ್ನು ಬೀಸುವ ಕಾಲದಲ್ಲಿ ಧರ್ಮರಾಜನ ರೂಪವು ಹಿಂದೆ ತ್ರಿಪುರ ಸಂಹಾರಕಾಲದಲ್ಲಿ ಮಹೇಶ್ವರನ ರೂಪದಂತೆ ಕಾಂತಿವಿಶೇಷದಿಂದ ಜ್ವಲಿಸುವಂತಿದ್ದಿತು ಮತ್ತು ವಿಶಾಲವಾದ ಎದೆಯಿಂದಲೂ, ವರ್ತುಲವಾದ ಸಣ್ಣ ನಡುವಿನಿಂದಲೂಕೂಡಿದ ರುದ್ರನು, ತನ್ನ ತೋಳನ್ನು ವಲಯಾಕಾರವಾಗಿ ತಿರುಗಿಸುತ್ತ, ಸಂಧ್ಯಾಕಾಲದ ನರ್ತನದಿಂದ ವಿನೋದಿಸುವಂತೆ ಆಗ ಧರ್ಮರಾಜನ ರೂಪವು ನೋಡುವವರಿಗೆ ದುಸ್ಸಹವಾದ ತೇಜಸ್ಸಿ

ನಿಂದ ಬೆಳಗುತ್ತಿದ್ದಿತು ಹೀಗೆ ಧರ್ಮರಾಜನು ತನ್ನ ಸರ್ವಶಕ್ತಿಯಿಂದ ಪ್ರಯೋಗಿಸಿದ ಮಹಾಶಕ್ತಿಯು, ತನಗಿದಿರಾಗಿ ಬರುವುದನ್ನು ನೋಡಿ ಶಲ್ಯನು, ಅಗ್ನಿಯು ಪವಿತ್ರವಾದ ಆಜ್ಯಧಾರೆಯನ್ನು ಹೇಗೋ ಹಾಗೆ ಸಂತೋಷದಿಂದ ಆ ಶಕ್ತಿಯ ಮೂಲಕವಾಗಿ ತನ್ನ ನಾವನ್ನು ನಿರೀಕ್ಷಿಸುತ್ತಿದ್ದನೇಹೊರತು ಎದೆಗುಂದಲಿಲ್ಲ ಆ ಶಕ್ತಿಯು ಬಂದೊಡನೆ, ಶಲ್ಯನ ಕವಚವನ್ನು ಹರಿದು, ಅವನ ವಿಶಾಲವಾದ ಎದೆಯನ್ನೂ ಭೇದಿಸಿಕೊಂಡು, ನೆಲದ ಮಣ್ಣಿನಲ್ಲಿ ನೀರು ಇಂಗಿಹೋಗುವಂತೆ ಆ ಮದ್ರರಾಜನ ಕೀರ್ತಿಯನ್ನೂ ಎಳೆದುಕೊಂಡು ಭೂಮಿಯಲ್ಲಿ ನಾಟಿತು ಅದರಿಂದ ಶಲ್ಯನ ಕಣ್ಣು, ಕಿವಿ, ಮೂಗು, ಬಾಯಿಗಳಿಂದಲ್ಲ ರಕ್ತವು ಸುರಿಯುತ್ತಿರಲು, ಆ ರಕ್ತದಿಂದ ತೊಯ್ದು ಮೈಯುಳ್ಳವನಾಗಿ ಅವನು ಹಿಂದ ಷಣ್ಮುಖನಿಂದ ಭೇದಿಸಲ್ಪಟ್ಟ ಕ್ರೌಂಚಪರ್ವತದಂತೆ ಕಾಣಿಸುತ್ತಿದ್ದನು ಇಂದ್ರವಾಹನವಾದ ಐರಾವತಕ್ಕೆ ಸಮಾನನೂ, ಮಹಾಬಲಶಾಲಿಯೂ ಆದ ಶಲ್ಯನು, ವಜ್ರಾಹತವಾದ ಪರ್ವತಶಿಖರದಂತೆ ರಥದಿಂದ ಕೆಳಕ್ಕೆ ಬಿದ್ದು, ತೋಳುಗಳನ್ನು ನೀಡಿ ದೀರ್ಘನಿದ್ರೆಯಲ್ಲಿ ಮಲಗಿಬಿಟ್ಟನು ಆಕಾಶದಿಂದ ಬಿದ್ದ ಇಂದ್ರಧ್ವಜದಂತೆ ಧರ್ಮರಾಜನ ಕಣ್ಣಿದಿರಾಗಿ ಕೈಕಾಲುಗಳನ್ನು ಬೀಸಿ ಮಲಗಿದ್ದ ಆ ಶಲ್ಯನಿಗೆ, ಮೈಯೆಲ್ಲ ಹರಿದು, ಸರ್ವಾಂಗವೂ ರಕ್ತದಿಂದ ತೊಯ್ದು ಹೋಗಿದ್ದಿತು ಆಗ ಅವನು ತನಗೆ ಪ್ರಿಯಕಾಂತೆಯಾದ ಭೂಮಿಯಿಂದ ಆಲಿಂಗಿಸಲ್ಪಡುವಂತೆಯೂ, ಬಹುಕಾಲದಿಂದ ಅನುಭವಿಸಿದ ಭೂಕಾಂತೆಯನ್ನು ತಾನೂ ತನ್ನ ಸರ್ವಾಂಗಗಳಿಂದಲೂ ಆಲಂಗಿಸುತ್ತಿರುವಂತೆಯೂ ಕಾಣಿಸಿದನು ಧರ್ಮಾತ್ಮನಾದ ಯುಧಿಷ್ಠಿರನಿಂದ ಧರ್ಮಯುದ್ಧದಲ್ಲಿ ಹತನಾದ ಶಲ್ಯನು, ಮೊದಲು ಯಾಗದಲ್ಲಿ ಆಹುತಿಗಳಿಂದ ಚೆನ್ನಾಗಿ ಜ್ವಲಿಸಿ, ಆಗಲೇ ಶಾಂತವಾದ ಅಗ್ನಿಯಂತೆ ತೋರಿದನು ಧರ್ಮರಾಜನ ಶಕ್ತಿಯಿಂದ ಎದೆಯು ಸೀಳಿ, ಆಯುಧ ಧ್ವಜಗಳೆಲ್ಲವೂ ಕೈಯಿಂದ ಕದಲಿ ಬಿದ್ದು, ಗತಪ್ರಾಣನಾಗಿದ್ದರೂ, ಆಗಲೂ ಆ ರಾಜತೇಜಸ್ಸು ಶಲ್ಯನನ್ನು ಬಿಟ್ಟು ಅಗಲಲಿಲ್ಲ ಆಮೇಲೆ ಯುಧಿಷ್ಠಿರನು ತನಗಿದಿರಾಗಿಬಂದ ಇತರ ಸೈನ್ಯಗಳನ್ನೆಲ್ಲ ಗರುಡನು ಸರ್ಪಗಳನ್ನು ಹೇಗೋ ಹಾಗೆ ಬಾಣಗಳಿಂದ ನಿಗ್ರಹಿಸುತ್ತ ಬಂದನು ಧರ್ಮರಾಜನ ಬಾಣಗಳಿಂದ ಹೊಡೆಯು

ಲ್ಪಟ್ಟ ನಿನ್ನ ಸೈನಿಕರು ರಕ್ತದಿಂದ ತೊಯ್ದು ದೇಹದೊಡನೆ ಬಹಳವಾಗಿ ನೊಂದು ಕಣ್ಣುಗಳನ್ನೇ ತೆರೆಯಲಾರದೆ, ತಾವು ಹಿಡಿದಿದ್ದ ಶಸ್ತ್ರಾಸ್ತ್ರಗಳನ್ನೆಲ್ಲ ಬಿಟ್ಟೋಡಿದರು ಅನೇಕರು ಪ್ರಾಣಗಳನ್ನೂ ಬಿಟ್ಟರು

ಮಹಾರಾಜಾ! ಶಲ್ಯನು ಸತ್ತುಬಿದ್ದೊಡನೆ, ಎಲ್ಲಾ ವಿಧವಲ್ಲಿಯೂ ಅವನಿಗೆ ಸಮಾನ ಗುಣವುಳ್ಳವನೂ, ಯುವಕನೂ ಆದ ಅವನ ತಮ್ಮನೊಬ್ಬನು ರಥಾರೂಢನಾಗಿ ಧರ್ಮರಾಜನಮೇಲೆ ಹಗೆತೀರಿಸಿಕೊಳ್ಳುವುದಕ್ಕಾಗಿ ವೇಗದಿಂದ ಬಂದನು ಅವನನ್ನು ಕಂಡೊಡನೆ ಧರ್ಮರಾಜನು ಆರು ಬಾಣಗಳಿಂದ ಅವನನ್ನು ಹೊಡೆದು, ಬೇರೆ ಎರಡು ಕ್ಷುರಾಯುಧಗಳಿಂದ ಅವನ ಬಿಲ್ಲನ್ನೂ, ಧ್ವಜವನ್ನೂ ಕತ್ತರಿಸಿಬಿಟ್ಟನು ಆಮೇಲೆ ತೀಕ್ಷ್ಣವಾದ ಒಂದು ಭಲ್ಲಾಯುಧದಿಂದ ಅವನ ತಲೆಯನ್ನು ಕಡಿದನು ಇದರಿಂದ ಕುಂಡಲಸಹಿತವಾದ ಅವನ ತಲೆಯು ಕೆಳಕ್ಕುರುಳಿತು ಪುಣ್ಯಕ್ಷಯವಾದಮೇಲೆ ಸ್ವರ್ಗದಿಂದ ಬೀಳುವಂತೆ ಆ ಶಲ್ಯಾನುಜನ ಮುಂಡವು ರಥದಿಂದ ಕೆಳಕ್ಕುರುಳಿ, ಅದರಿಂದ ರಕ್ತವು ಸುರಿಯುತ್ತಿರುವುದನ್ನು ನೋಡಿ, ನಮ್ಮ ಇತರ ಸೈನ್ಯಗಳೆಲ್ಲವೂ ಭಯಪಟ್ಟೋಡಿದುವು ಕುರುಸೈನ್ಯದಲ್ಲಿ ದೊಡ್ಡ ಹಾಹಾಕಾರವುಂಟಾಯಿತು ಪಾಂಡವರ ಭಯದಿಂದ ಎಲ್ಲರೂ ತತ್ತಳಿಸಿ ಚದರಿಹೋಗುತ್ತಿದ್ದರು ಹೀಗೆ ಚದರಿ ಓಡುತ್ತಿರುವ ನಮ್ಮ ಸೈನ್ಯಗಳನ್ನು ನೋಡಿ ಸಾತ್ಯಕಿಯು ಅವುಗಳನ್ನು ಆಗಲೂ ಬಿಡದೆ ಬೆನ್ನಟ್ಟಿ ಬಾಣಗಳಿಂದ ಹೊಡೆಯುತ್ತಿದ್ದನು ಮಹಾಧನುರ್ಧರನೂ, ಶತ್ರುದುಸ್ಸಹನೂ ಆದ ಸಾತ್ಯಕಿಯು ಹೀಗೆ ಬೆನ್ನಟ್ಟಿಬರುವುದನ್ನು ನೋಡಿ ಕೃತವರ್ಮನು ವೇಗದಿಂದ ಬಂದು ಅವನನ್ನಿದಿರಿಸಿದನು ಮಹಾಬಲವುಳ್ಳ ಆ ವೃಷ್ಣಿಕುಲದವರಿಬ್ಬರೂ ಬಲದಿಂದ ಕೊಬ್ಬಿದ ಎರಡು ಸಿಂಹಗಳಂತೆ ಯುದ್ಧಕ್ಕೆ ನಿಂತು, ಸೂರ್ಯನು ಕಿರಣಗಳಿಂದ ಹೇಗೋ ಹಾಗೆ ಬಾಣಗಳಿಂದ ಒಬ್ಬರನ್ನೊಬ್ಬರು ಮುಚ್ಚುತ್ತಬಂದರು ಆ ವೃಷ್ಣಿಕುಲವೀರರಿಬ್ಬರ ಬಾಣಗಳೂ ಆಕಾಶದಲ್ಲಿ ಶಲಭಗಳಂತೆ ಎಲ್ಲೆಲ್ಲಿಯೂ ವ್ಯಾಪಿಸಿದುದನ್ನುಮಾತ್ರ ನಾವು ಕಾಣುತಿದ್ದೆವು ಆಗ ಕೃತವರ್ಮನು ಸಾತ್ಯಕಿಯನ್ನು ಹತ್ತು ಬಾಣಗಳಿಂದಲೂ, ಅವನ ಕುದುರೆಗಳನ್ನು ಮೂರು ಬಾಣಗಳಿಂದ

ಲೂ ಹೊಡೆದು, ಬೇರೊಂದು ಬಾಣದಿಂದ ಆ ಸಾತ್ಯಕಿಯು ಕೈಯಲ್ಲಿದ್ದ ಬಿಲ್ಲನ್ನು ತುಂಡುಮಾಡಿದನು ಒಡನೆಯೇ ಸಾತ್ಯಕಿಯು ಮುರಿದ ಬಿಲ್ಲನ್ನು ಬಿಸುಟು, ಬೇರೊಂದು ದೃಢವಾದ ಬಿಲ್ಲನ್ನು ತೆಗೆದುಕೊಂಡು, ಕೃತವರ್ಮನ ಎದೆಗೆ ಗುರಿಯಿಟ್ಟು ಹತ್ತು ಬಾಣಗಳನ್ನು ವೇಗದಿಂದ ಹೊಡೆದನು ಆಮೇಲೆ ತಿರುಗಿ ಬೇರೆ ಬಾಣಗಳನ್ನು ಬಿಟ್ಟು ಅವನ ರಥದ ನೊಗವನ್ನೂ, ಮೂಕಿಯನ್ನೂ, ರಥಾಶ್ವಗಳನ್ನೂ, ಅವನ ಉಭಯಪಾರ್ಶ್ವಗಳಲ್ಲಿರುವ ಅಂಗರಕ್ಷಕರನ್ನೂ, ಅವನ ಸಾರಥಿಯನ್ನೂ ಕ್ರಮವಾಗಿ ಭೇದಿಸಿದನು ಕೃತವರ್ಮನು ರಥಹೀನನಾಗಿರುವುದನ್ನು ನೋಡಿ ಕೃಪನು ವೇಗದಿಂದ ಬಂದು, ಅವನನ್ನು ತನ್ನ ರಥದಮೇಲೇರಿಸಿಕೊಂಡು ಬೇರೆ ಕಡೆಗೆ ಕರೆದುಕೊಂಡು ಹೊರಟುಹೋದನು ಓ ರಾಜೇಂದ್ರಾ! ಸೇನಾಧಿಪತಿಯಾದ ಶಲ್ಯನು ಸತ್ತು, ಕೃತವರ್ಮನೂ ವಿರಥನಾಗಿ, ರಣರಂಗವನ್ನು ಬಿಟ್ಟುಹೋದುದನ್ನು ನೋಡಿ, ನಿನ್ನ ಸೈನ್ಯಗಳೆಲ್ಲವೂ ಇನ್ನು ತಮಗೆ ಉಳಿಗಾಲವಿಲ್ಲವೆಂದು ಯುದ್ಧರಂಗದಿಂದ ಹಿಂತಿರುಗಿ ಓಡುವುದಕ್ಕಾರಂಭಿಸಿತು ಈ ಸೈನ್ಯಗಳೆಲ್ಲವೂ ಚದರಿ ಓಡುತ್ತಿರುವಾಗ ಸೇನಾಧೂಳಿಯಿಂದ ದಿಕ್ಕುಗಳೆಲ್ಲವೂ ಮುಚ್ಚಿಹೋಗಿ, ತನ್ನವರೆಂದೂ, ಶತ್ರುಗಳೆಂದೂ ಕಂಡುಹಿಡಿಯುವುದೇ ಅಸಾಧ್ಯವಾಯಿತು ಆ ಯುದ್ಧದಲ್ಲಿ ಕೌರವಸೈನ್ಯವೆಲ್ಲವೂ ಬಹಳಮಟ್ಟಿಗೆ ನಷ್ಟವಾಗಿ, ಉಳಿದ ಸ್ವಲ್ಪ ಸೈನ್ಯವೂ ಹಿಂತಿರುಗಿ ಓಡಿತು ನೆಲದಿಂದೆದ್ದ ಧೂಳಿಯು ಕ್ರಮಕ್ರಮವಾಗಿ, ರಕ್ತಧಾರೆಯಿಂದಲೇ ಪ್ರಶಾಂತವಾಗುತ್ತಬಂದಿತು ಆಗ ದುರ್ಯೋಧನನು ತನ್ನ ಸೈನ್ಯವು ಭಂಗಹೊಂದಿ ಹಿಂತಿರುಗುತ್ತಿರುವುದನ್ನೂ, ಪಾಂಡವರೆಲ್ಲರೂ ವೇಗದಿಂದ ಬೆನ್ನಟ್ಟಿಬರುವುದನ್ನೂ ನೋಡಿ ತಾನೇ ಅವರನ್ನು ಇದಿರಿಸಿ ತಡೆದನು ಐದುಮಂದಿ ಪಾಂಡವರೂ, ಧೃಷ್ಟದ್ಯುಮ್ನನೂ ಆನರ್ತದೇಶಾಧಿಪತಿಯೂ ರಥಾರೂಢರಾಗಿ ಬರುತ್ತಿದ್ದಾಗ, ತನ್ನ ತೀಕ್ಷ್ಣಬಾಣಗಳಿಂದ ಅವರನ್ನೂ ಹೊಡೆದು ತಡೆದನು ಆಗ ದುರ್ಯೋಧನನ ಕೋಪಾವೇಶವನ್ನು ನೋಡಿ ಮೃತ್ಯುವನ್ನು ಕಂಡ ಮನುಷ್ಯರಂತೆ ಪಾಂಡವಸೈನಿಕರೆಲ್ಲರೂ ಭಯಪಟ್ಟು ಇದಿರಿಸಲು ಹಿಂಜರಿಯುತಿದ್ದರು ಇಷ್ಟರಲ್ಲಿಯೇ ಕೃತವರ್ಮನು ಬೇರೊಂದು ರಥವನ್ನೇರಿ, ದುರ್ಯೋಧನನ ಸಹಾಯಕ್ಕಾಗಿ

ಬಂದನು ಇದನ್ನು ಕಂಡು ಯುಧಿಷ್ಠಿರನು ಕೃತವರ್ಮನ ರಥಾಶ್ವಗಳನ್ನು ನಾಲ್ಕು ಬಾಣಗಳಿಂದ ಕೊಂದುಕೆಡಹಿದನು ಕೃಪನನ್ನು ಆರು ಭಲ್ಲಗಳಿಂದ ನೋಯಿಸಿನು ಕೃಪವರ್ಮನು ರಥಹೀನನಾಗಿರುವುದನ್ನು ಕಂಡು ಅಶ್ವತ್ಥಾಮನು ಅವನನ್ನು ತನ್ನ ರಥದಮೇಲೇರಿಸಿಕೊಂಡು ಹಿಂತಿರುಗಿದನು ಇಷ್ಟರಲ್ಲಿ ಕೃಪನು ಆರು ಬಾಣಗಳಿಂದ ಧರ್ಮರಾಜನನ್ನು ಹೊಡೆದು ಬೇರೆ ಎಂಟು ಬಾಣಗಳಿಂದ ಅವನ ರಥದ ನಾಲ್ಕು ರಥಾಶ್ವಗಳನ್ನೂ ನೋಯಿಸಿದನು ಓ ಧೃತರಾಷ್ಟ್ರಮಹಾರಾಜಾ ! ನಿನ್ನ ಮತ್ತು ನಿನ್ನ ಮಗನ ದುರಾಲೋಚನೆಯ ಬಲದಿಂದ ಆ ದಿನದ ಯುದ್ಧವು ಆ ವಿಧವಾಗಿ ಮುಗಿಯಿತು ಮಹಾಧನುರ್ಧರನಾದ ಶಲ್ಯನು ಯುದ್ಧದಲ್ಲಿ ಧರ್ಮರಾಜನಿಂದ ಹತನಾದಮೇಲೆ ಪಾಂಡವರೆಲ್ಲರೂ ಪರಮಸಂತೋಷದಿಂದ ಶಂಖಗಳನ್ನೂದಿದರು ವೃತ್ರವಧವಾದಮೇಲೆ ದೇವತೆಗಳು ದೇವೇಂದ್ರನನ್ನು ಹೇಗೋ ಹಾಗೆ ಪಾಂಡವಪಕ್ಷದವರೆಲ್ಲರೂ ಧರ್ಮರಾಜನನ್ನು ಬಹಳವಾಗಿ ಕೊಂಡಾಡಿದರು. ಸಂತೋಷದಿಂದ ನಾನಾವಿಧ ವಾದ್ಯಘೋಷಗಳನ್ನು ಮಾಡಿದರು ಆ ವಾದ್ಯಧ್ವನಿಯಿಂದ ಭೂವ್ಯಾಕಾಶಗಳೆಲ್ಲವೂ ಮೊಳಗುತ್ತಿದ್ದಿತು.

ಇದು ಹದಿನಾರನೆಯ ಅಧ್ಯಾಯವು



## ಸಂಕುಲಯುದ್ಧವು

ಓ ಮಹಾರಾಜಾ ! ಕೇಳು ! ಶಲ್ಯನು ಹತನಾದೊಡನೆ, ಅವನಿಗೆ ಬೆಂಬಲವಾಗಿ ಬಂದಿದ್ದ ಏಳುನೂರುಮಂದಿ ರಥವೀರರು ಬಲಾತ್ಕಾರದಿಂದ ಮುಂದೆ ನುಗ್ಗಿದರು ಆಗ ದುರ್ಯೋಧನನು ಪರ್ವತದಂತೆ ಮಹೋನ್ನತವಾದ ಆನೆಯಮೇಲೆ ತನ್ನ ರಾಜಚಿಹ್ನಗಳಾದ ಛತ್ರಚಾಮರಗಳೊಡನೆ ಕುಳಿತುಕೊಂಡು, "ವೀರರೇ ! ಈಗ ಹೋಗಬೇಡಿರಿ ! ಹೋಗಬೇಡಿರಿ ! ನಿಲ್ಲಿರಿ !" ಎಂದು ತಡೆಯುತ್ತಿದ್ದನು ಹೀಗೆ ದುರ್ಯೋಧನನು ಅಡಿಗಡಿಗೆ ಕೂಗಿ ಕರೆದರೂ, ಆ ರಥಿಕರೆಲ್ಲರೂ ಯುಧಿಷ್ಠಿರನನ್ನು ಕೊಂದು ಹಗೆ ತೀರಿಸಿಕೊಳ್ಳುವ ಆತುರದಿಂದ ಪಾಂಡವಸೈನ್ಯದೊಳಗೆ ಪ್ರವೇಶಿಸಿಬಿಟ್ಟರು ಅವ

ರಲ್ಲರೂ ಯುದ್ಧಕ್ಕೆ ನಿಶ್ಚಯಮಾಡಿಕೊಂಡು, ಧನುಷ್ಟಂಕಾರಮಾಡುತ್ತ, ಪಾಂಡವಸೈನಿಕರನ್ನು ಹೊಡೆಯಲಾರಂಭಿಸಿದರು ಇಷ್ಟರಲ್ಲಿ ಬೇರಕಡೆಯಲ್ಲಿದ್ದ ಅರ್ಜುನನು, ಶಲ್ಯನು ತನ್ನಣ್ಣನಿಂದ ಹತನಾದುದನ್ನೂ, ಆ ಶಲ್ಯನ ಅನುಚರರಾದ ಮಹಾರಥರು ಹಗೆತೀರಿಸಿಕೊಳ್ಳುವುದಕ್ಕಾಗಿ ತನ್ನಣ್ಣನಾದ ಧರ್ಮರಾಜನನ್ನು ಸುತ್ತಿಕೊಂಡಿರುವುದನ್ನೂ ಕೇಳಿ ಕೋಪದಿಂದ ತನ್ನ ಗಾಂಡೀವವನ್ನು ಧ್ವನಿಮಾಡುತ್ತ ದಿಕ್ಕುಗಳನ್ನೆಲ್ಲ ಮೊಳಗಿಸುವ ರಥಘೋಷದೊಡನೆ ವೇಗದಿಂದ ಓಡಿಬಂದನು ಅರ್ಜುನನೂ, ಭೀಮನೂ, ನಕುಲಸಹದೇವರೂ, ಸಾತ್ಯಕಿಯೂ, ಐದುಮಂದಿ ಉಪಪಾಂಡವರೂ, ಧೃಷ್ಟದ್ಯುಮ್ನನೂ, ಶಿಖಂಡಿಯೂ ಇವರಲ್ಲರೂ ಪಾಂಚಾಲಸೋಮಕಸೈನ್ಯಗಳೊಡನೆ ಕಲೆತು, ಧರ್ಮರಾಜನನ್ನು ಅಪಾಯದಿಂದ ರಕ್ಷಿಸುವುದಕ್ಕಾಗಿ ಅವನ ಸುತ್ತಲೂ ಆವರಿಸಿಕೊಂಡು, ಆ ಮದ್ರಸೈನಿಕರನ್ನೆಲ್ಲ ಹೊಡೆಯಲಾರಂಭಿಸಿದರು ಹೀಗೆ ಎಲ್ಲರೂ ಸುತ್ತಿಕೊಂಡು ಧರ್ಮರಾಜನನ್ನು ರಕ್ಷಿಸುತ್ತಿರುವಾಗಲೂ, ಮಹಾಮಕರಗಳು ಸಮುದ್ರವನ್ನು ಹೇಗೋಹಾಗೆ ಆ ಮದ್ರವೀರರು ಪಾಂಡವಸೈನ್ಯವನ್ನು ಕಲಗಿಸುತ್ತಿದ್ದರು. ಬಿರುಗಾಳಿಯು ಮರಗಳನ್ನು ನಡುಗಿಸುವಂತೆ ನಿನ್ನಕಡೆಯವರು ಪಾಂಡವಸೈನ್ಯಗಳನ್ನೆಲ್ಲ ನಡುಗಿಸಿಬಿಟ್ಟರು ಇದಿರುಗಾಳಿಯಿಂದ ಕಲಕಲ್ಪಡುವ ಗಂಗಾನದಿಯ ಪ್ರವಾಹದಂತೆ ಪಾಂಡವಸೈನ್ಯವು ತತ್ತಳಿಸುತಿತ್ತು ಮಹಾಬಲಶಾಲಿಗಳಾದ ಆ ಮದ್ರವೀರರು ಬಹುಮಂದಿ ಸೇರಿ ಪಾಂಡವಸೈನ್ಯವನ್ನು ಚದರಿಸುತ್ತ “ಎಲ್ಲಿ? ರಾಜನಾದ ಯುಧಿಷ್ಠಿರನೆಲ್ಲಿ? ಶೂರರಾದ ಅವನ ತಮ್ಮಂದಿರಾದರೂ ಈಗ ಎಲ್ಲಿರುವರು? ಅವರು ಯಾರೂ ಈಗ ಕಾಣುವುದಿಲ್ಲವಲ್ಲಾ? ಧೃಷ್ಟದ್ಯುಮ್ನನೆಲ್ಲಿ? ಸಾತ್ಯಕಿಯೆಲ್ಲಿ? ದ್ರೌಪದಿಯ ಮಕ್ಕಳೆಲ್ಲಿ? ಮಹಾವೀರ್ಯಶಾಲಿಗಳೆಂದು ಹೇಳಿಕೊಳ್ಳುತ್ತಿದ್ದ ಆ ಪಾಂಚಾಲರಲ್ಲಿ? ಮಹಾರಥನಾದ ಆ ಶಿಖಂಡಿಯೆಲ್ಲಿ?” ಎಂದು ಮೂದಲಿಸಿ ಕರಯುತ್ತಿದ್ದರು ಹೀಗೆ ಕೂಗುತ್ತಿರುವ ಆ ಮದ್ರರಾಜನ ಕಡೆಯವರನ್ನು ನೋಡಿ, ಮೊದಲು ಆ ಐದುಮಂದಿ ಉಪಪಾಂಡವರೂ, ಯುಯುಧಾನನೂ ಬಾಣಗಳಿಂದ ತಡೆದರು ಇವರ ಬಾಣಗಳಿಂದ ಆಗಲೇ ಅನೇಕ ರಥಿಕರಿಗೆ ರಥಚಕ್ರಗಳು ಮುರಿದುಬಿದ್ದುವು ಕೆಲವರಿಗೆ ಧ್ವಜಗಳು

ಭಗ್ನವಾದುವು. ಅನೇಕ ರಥಿಕರು ರಥಧ್ವಜಗಳನ್ನೆಲ್ಲ ಕಳೆದುಕೊಂಡು ಭಂಗಹೊಂದಿದುದನ್ನು ನಾವು ನೋಡಿದೆವು ರಾಜೇಂದ್ರಾ! ಇಷ್ಟರಲ್ಲಿ ನಿನ್ನ ಮಗನಾದ ದುರ್ಯೋಧನನು ಪಾಂಡವರ ವೇಗವನ್ನು ನೋಡಿ, ತನ್ನ ಸೈನ್ಯಗಳನ್ನು ಹಿಂತಿರುಗದಂತೆ ಸಮಾಧಾನ ಹೇಳಿ ತಡೆದನು ಆಗಲೂ ದುರ್ಯೋಧನನ ಮಾತಿಗೆ ಯಾರೂ ಲಕ್ಷ್ಯಕೊಟ್ಟು ನಡೆಸಲಿಲ್ಲ ಆಗ ಶಕುನಿಯು ನಿನ್ನ ಮಗನನ್ನು ನೋಡಿ "ಕೌರವೇಂದ್ರಾ! ಏನಿದು? ನಮ್ಮ ಕಣ್ಣೆದಿರಾಗಿಯೇ ಪಾಂಡವರಿಂದ ಮದ್ರಸೈನ್ಯವು ಕೊಲ್ಲಲ್ಪಡುತ್ತಿರುವುದಲ್ಲಾ? ನೀನೂ ಕಣ್ಣೆದಿರಿಗಿದ್ದುಕೊಂಡಿರುವಾಗ, ಹೀಗೆ ಯುದ್ಧದಲ್ಲಿ ಅವರನ್ನು ಬಿಟ್ಟುಕೊಡುವುದು ಸರಿಯಲ್ಲ ಹಿಂದೆ ಈ ದಿನದ ಯುದ್ಧಕ್ಕೆ ಹೊರಡುವ ಮೊದಲು, ನಾವೆಲ್ಲರೂ ಒಂದಾಗಿ ಒಬ್ಬರಿಗೊಬ್ಬರು ಬೆಂಬಲವಾಗಿದ್ದುಕೊಂಡು ಒಬ್ಬರನ್ನೊಬ್ಬರು ರಕ್ಷಿಸುತ್ತ ಯುದ್ಧಮಾಡಬೇಕೆಂದು ಹೇಳಿದೆಯಲ್ಲವೆ? ಅದು ನಿನಗೆ ಜ್ಞಾಪಕವಿಲ್ಲವೆ? ಹಾಗೆ ನೆನಪಿನಲ್ಲಿದ್ದೂ ಪಾಂಡವರು ನಮ್ಮವರನ್ನು ಕೊಲ್ಲುತ್ತಿರುವಾಗ ನೀನೇಕೆ ಹೀಗೆ ಉದಾಸೀನನಾಗಿರುವೆ?" ಎಂದನು ಅದಕ್ಕಾ ದುರ್ಯೋಧನನು "ಮಾವಾ! ಹಿಂದೆ ನಾನು ಎಷ್ಟೆಷ್ಟುವಿಧವಾಗಿ ಹೇಳಿ ತಡೆದರೂ ನನ್ನ ಮಾತನ್ನು ಇವರು ಲಕ್ಷ್ಯಮಾಡಲಿಲ್ಲ ಇವರೇ ಪಾಂಡವಸೈನ್ಯಕ್ಕೆ ನುಗ್ಗಿ ಅವರಿಂದ ಬಹಳಮಟ್ಟಿಗೆ ನಾಶಹೊಂದಿದರು" ಎಂದನು ಅದಕ್ಕಾ ಶಕುನಿಯು "ದುರ್ಯೋಧನಾ! ಯುದ್ಧದಲ್ಲಿ ಇದು ಸಹಜವೇ! ಯುದ್ಧಕಾಲದಲ್ಲಿ ವೀರರಿಗೆ ವೀರಾವೇಶವು ಹುಟ್ಟಿದಾಗ, ಅವರು ತಮ್ಮ ಪ್ರಭುವಿನ ಆಜ್ಞೆಯನ್ನು ಲಕ್ಷ್ಯಮಾಡದೆ, ಅವನ ಮಾತಿಗೆ ಕಟ್ಟುಬೀಳದ ಮುಂದೆ ಬಿಳುವರು ಆದುದರಿಂದ ಅವರಮೇಲೆ ಈಗ ನೀನು ಕೋಪಿಸಬಾರದು ಅವರನ್ನುಪೇಕ್ಷಿಸುವುದಕ್ಕೂ ಇದು ಕಾಲವಲ್ಲ ನಮ್ಮ ಚತುರಂಗಸೈನ್ಯಗಳೊಡನೆ ಎಲ್ಲರೂ ಒಂದಾಗಿ ಸೇರಿ, ಆ ಮದ್ರವೀರರನ್ನು ರಕ್ಷಿಸಿಕೊಳ್ಳುವುದಕ್ಕೆ ಆದಷ್ಟು ಪ್ರಯತ್ನವನ್ನು ಮಾಡಬೇಕು. ನಡೆ ಹೋಗುವೆವು. ಒಬ್ಬರನ್ನೊಬ್ಬರು ಪ್ರಯತ್ನದಿಂದ ರಕ್ಷಿಸುತ್ತಿರಬೇಕು" ಎಂದು ಆಲೋಚಿಸಿಕೊಂಡು ಆ ಸೈನಿಕರಿದ್ದಲ್ಲಿಗೆ ಹೊರಟರು

ಧೃತರಾಷ್ಟ್ರಮಹಾರಾಜಾ! ಆಗ ನಿನ್ನ ಮಗನೂ ದೊಡ್ಡ ಸೈನ್ಯದೊಡಗೂಡಿ, ಸಿಂಹನಾದದಿಂದಲೇ ಭೂಮಿಯನ್ನು ನಡುಗಿಸುವಂತೆ ಹೊರಟನು ಆಗ ನಿನ್ನ ಸೈನ್ಯದಲ್ಲಿ "ಹಿಡಿಯಿರಿ! ಹೊಡೆಯಿರಿ! ಬಡಿಯಿರಿ! ಕೊಲ್ಲಿರಿ! ಕತ್ತರಿಸಿರಿ!" ಎಂಬೀ ಕೂಗಾಟವು ಪ್ರಬಲವಾಯಿತು ಪಾಂಡವರಾದರೋ, ಶಲ್ಯನ ಅನುಚರರಲ್ಲರೂ ಗುಂಪಾಗಿ ಬಂದಿರುವುದನ್ನು ನೋಡಿ, ಅವರ ಸೇನಾಗುಲ್ಮದ ನಡುಭಾಗವನ್ನು ಪ್ರವೇಶಿಸಿ, ಅವರನ್ನೆಲ್ಲ ಹೊಡೆಯಲಾರಂಭಿಸಿದರು ಒಂದು ಮುಹೂರ್ತಕಾಲದವರಗೆ ಉಭಯ ಪಕ್ಷದ ವೀರರಿಗೂ ಕೈಕಲೆತು ಯುದ್ಧವಾಯಿತು ಅದರಲ್ಲಿ ಮದ್ರರಾಜನ ಕಡೆಯ ವೀರರೆಲ್ಲರೂ ಹತರಾದರು ಹೀಗೆ ನಮ್ಮ ಕಡೆಯಿಂದ ಹೊರಟವರಲ್ಲಿ ಮದ್ರರಾಜನ ಪರಿವಾರಗಳೆಲ್ಲ ಸತ್ತುಹೋದಮೇಲೆ, ಶತ್ರುಗಳಾದ ಪಾಂಡವರು ಜಯೋತ್ಸಾಹದಿಂದ ಒಟ್ಟಾಗಿ ಸೇರಿ ಕೋಲಾಹಲ ಮಾಡುತ್ತಿದ್ದರು ಇಷ್ಟರಲ್ಲಿಯೇ ಯುದ್ಧರಂಗದ ನಾನಾಕಡೆಗಳಲ್ಲಿ ತಲೆಯಿಲ್ಲದ ಮುಂಡಗಳು ಎದ್ದೆದ್ದು ಕುಣಿದಾಡುವಂತೆ ಕಾಣಿಸಿತು ಸೂರ್ಯಮಂಡಲವನ್ನು ಭೇದಿಸಿಕೊಂಡು ದೊಡ್ಡ ಉಲ್ಕೆಯೊಂದು ಆಕಾಶದಿಂದ ಭೂಮಿಗೆ ಬಿದ್ದಿತು ಆಗ ರಣರಂಗದಲ್ಲಿ ಎಲ್ಲಿ ನೋಡಿದರೂ ನೊಗಗಳು ಮುರಿದು ಅಚ್ಚುಡಿದ ರಥಗಳೂ, ಸತ್ತುಬಿದ್ದ ಮಹಾರಥರೂ, ಕೊಂದುಕೆಡಹಲ್ಪಟ್ಟ ಕುದುರಗಳೂ ಅಸಂಖ್ಯಾತವಾಗಿದ್ದುವು ವಾಯುವೇಗವುಳ್ಳ ಕೆಲವು ಕುದುರೆಗಳು ನೊಗಕ್ಕೆ ಕಟ್ಟಿದ್ದಂತೆಯೇ ರಥಿಕರೊಡಗೂಡಿದ ರಥಗಳನ್ನು ಎಳೆದುಕೊಂಡು ಓಡುತಿದ್ದುವು ಕೆಲವು ಕುದುರಗಳು ಚಕ್ರಗಳು ಮುರಿದ ರಥಗಳನ್ನೆಳೆದುಕೊಂಡೋಡಿದುವು ಬೇರೆ ಕೆಲವು ಕುದುರೆಗಳು ಎರಡು ಪಾಲಾಗಿ ಸೀಳಿ ಅರ್ಧಾವಶಿಷ್ಟವಾದ ರಥಗಳನ್ನೇ ಎಳೆದುಕೊಂಡು ಹೋಗುತಿದ್ದುವು ಕೆಲವು ಕುದುರೆಗಳು ಬರೀ ಕಡಿವಾಣದ ಹಗ್ಗಗಳೊಡನೆ ಓಡಿದುವು ಆ ಗದ್ದಲದಲ್ಲಿ ಎಷ್ಟೋ ಜನರು ಕೆಳಗೆ ಬಿದ್ದೂ, ಬೀಳುತ್ತಲೂ, ಪುಣ್ಯಕ್ಷಯವಾದಮೇಲೆ ಆಕಾಶದಿಂದ ಕೆಳಗೆ ಬಿದ್ದ ಸಿದ್ಧರಂತೆ ಕಾಣಿಸಿದರು ಹೀಗೆ ಮದ್ರರಾಜನ ಅನುಚರರೆಲ್ಲ ಹತರಾದ ಮೇಲೆಯೂ ನಮ್ಮವರು ಯುದ್ಧಕ್ಕಿದಿರಾಗುತ್ತಿರುವುದನ್ನು ನೋಡಿ, ಮಹಾರಥರಾದ ಪಾರ್ಥರೂ ಜಯಾಶೆಯಿಂದ ಶಸ್ತ್ರಧಾರಿಗಳಾಗಿ ಇದಿರಿಸಿ

ಬಂದರು ಶಂಖಧ್ವನಿಗಳನ್ನೂ, ಬಾಣಧ್ವನಿಗಳನ್ನೂ, ಸಿಂಹನಾದಗಳನ್ನೂ ತೋರಿಸಿ ಬಿಲ್ಲುಗಳನ್ನೊದರುತ್ತ ನಮಗಿದಿರಾದರು ಮಹಾಶೂರನಾದ ಶಲ್ಯನೂ, ಅವನ ದೊಡ್ಡ ಸೈನ್ಯವೂ ಹತವಾದುದನ್ನು ನೋಡಿ ದುರ್ಯೋಧನನ ಸೈನ್ಯವೆಲ್ಲ ಭಯಪಟ್ಟು ತಿರುಗಿ ಯುದ್ಧಕ್ಕೆ ಹಿಂಜರಿದು ಓಡಲಾರಂಭಿಸಿತು ಪಾಂಡವರಿಂದ ಕೊಲೆಮಾಡಲ್ಪಡುತಿದ್ದ ಆ ಕೌರವಸೈನ್ಯವು ಭಯಭ್ರಾಂತವಾಗಿ ನಾನಾದಿಕ್ಕಿಗೆ ಚದರಿಹೋಯಿತು

ಇದು ಹದಿನೇಳನೆಯ ಅಧ್ಯಾಯವು

ಸಂಕುಲಯುದ್ಧವರ್ಣನವು

ಮಹಾರಾಜಾ! ಯುದ್ಧದಲ್ಲಿ ಜಯಿಸಲಸಾಧ್ಯನೂ, ಮಹಾರಥನೂ ಆದ ಶಲ್ಯನು ಬಿದ್ದುಹೋದಮೇಲೆ, ನಿನ್ನ ಮಕ್ಕಳೂ, ನಿನ್ನಕಡೆಯ ಇತರರೂ ಪ್ರಾಯಕವಾಗಿ ಉತ್ಸಾಹಹೀನರಾದರು ಸಮುದ್ರವ್ಯಾಪಾರಿಗಳಿಗೆ ಅಪಾರವಾದ ಮಹಾಸಮುದ್ರಮಧ್ಯದಲ್ಲಿ ಹಡಗು ಮುರಿದುಹೋದರೆ, ದಡವು ಕಾಣದ ನಡುನೀರಿನಲ್ಲಿ ದಡವನ್ನು ಸೇರಲು ಆತುರಪಡುವಂತೆ, ಮಹಾಬಲಾಢ್ಯನಾದ ಶಲ್ಯನು ಹತನಾದಮೇಲೆ ಅವರು ನಿರಾಶ್ರಯರಾಗಿ, ತಮಗೆ ಆಶ್ರಯವು ಹೇಗೆಂದು ತತ್ತಳಿಸುತಿದ್ದರು ಸಿಂಹದ ಕೈಗೆ ಸಿಕ್ಕಿದ ಮೃಗಗಳಂತಾದರು ಧರ್ಮರಾಜನಿಂದ ಪರಾಜಿತರಾಗಿ ನಮ್ಮವರೆಲ್ಲರೂ ಕೊಂಬು ಮುರಿದ ವೃಷಭಗಳಂತೆಯೂ, ದಂತಗಳು ಭಗ್ನವಾದ ಆನೆಗಳಂತೆಯೂ ಆಶಾಭಂಗದಿಂದ ಹಿಂತಿರುಗಿದರು ರಾಜೇಂದ್ರಾ! ಶಲ್ಯನು ಸತ್ತ ನಮ್ಮ ಸೈನ್ಯಗಳಲ್ಲಿ ಯಾವನೊಬ್ಬನಿಗೂ ಆಗ ಸುಮ್ಮನೆ ನಿಲ್ಲುವುದಕ್ಕಾಗಲಿ, ತಿರುಗಿ ಯುದ್ಧಕ್ಕೆ ಹೋಗಿ ಪರಾಕ್ರಮವನ್ನು ತೋರಿಸುವುದಕ್ಕಾಗಲಿ ಬುದ್ಧಿಯು ತೋರಲಿಲ್ಲ ಹಿಂದೆ ಭೀಷ್ಮನೂ, ದ್ರೋಣನೂ, ಮತ್ತು ಸೂತಪುತ್ರನೂ ಹತನಾದಾಗ, ನಿನ್ನ ಮಕ್ಕಳಿಗೆ ಎಂತಹ ದುಃಖವೂ, ಭಯವೂ ಉಂಟಾಗಿದ್ದಿತೋ, ಶಲ್ಯನು ಹತನಾದಾಗಲೂ ಅದೇ ವಿಧವಾದ ಭೀತಿಯೂ, ದುಃಖವೂ ತಿರುಗಿ ನಮ್ಮವರನ್ನು ಆವರಿಸಿತು ಮಹಾರಥನಾದ ಶಲ್ಯನ ಸಾವಿನಿಂದ ನಮ್ಮ ಸೈನ್ಯಗಳಿಗೆ ಜಯದಾಸೆಯು ಸಂಪೂರ್ಣ

ವಾಗಿ ಬಿಟ್ಟುಹೋಯಿತು. ವೀರರಲ್ಲರೂ ಹತರಾಗಿ, ಬಾಣಪ್ರಹಾರಗ ಳಿಂದ ಬಹಳವಾಗಿ ನೊಂದುಹೋಗಿದ್ದ ನಮ್ಮ ಸೈನ್ಯಗಳು, ಶಲ್ಯನು ಬಿದ್ದೊ ಡನೆ ಭೀತಿಯಿಂದ ಓಡಲಾರಂಭಿಸಿದುವು ಕೆಲವರು ಆನೆಗಳನ್ನೂ, ಬೇರೆ ಕೆಲವರು ಕುದುರೆಗಳನ್ನೂ, ಮಹಾರಥರನಿಸಿದ ಕೆಲವರು ರಥಗಳನ್ನೂ ಏರಿಕೊಂಡು ವೇಗದಿಂದ ಓಡಿಹೋದರು ಕಾಲಾಳುಗಳೂ ತಲೆತಪ್ಪಿಸಿ ಕೊಂಡು ಚದರಿದರು ಶಲ್ಯನು ಹತನಾದೊಡನೆ ಗಜಯೋಧರು ಬೆಟ್ಟ ಗಳಂತಿದ್ದ ಎರಡುಸಾವಿರ ಆನೆಗಳನ್ನು ಅಂಕುಶಗಳಿಂದಲೂ, ಕಾಲುಗಳಿಂದ ಲೂ ತಿವಿದೋಡಿಸುತ್ತ, ರಣರಂಗವನ್ನು ಬಿಟ್ಟೋಡಿದರು ಇನ್ನೂ ಅನೇಕ ಸೈನಿಕರು ಪಾಂಡವರ ಬಾಣಗಳಿಂದ ಬಹಳವಾಗಿ ನೊಂದು, ಮೇಲುಸಿರು ಬಿಡುತ್ತ ಓಡುತ್ತಿರುವುದನ್ನೂ ನಾವು ಕಂಡೆವು ಅಲ್ಲಲ್ಲಿ ಪೆಟ್ಟುತಿಂದ ವರೂ, ಸತ್ತವರೂ, ಉತ್ಸಾಹಹೀನರೂ, ಪರಾಜಿತರೂ ಆದ ಸೈನಿಕರಷ್ಟೋ ಮಂದಿ ಕಾಣಿಸುತಿದ್ದರು ಇವರನ್ನು ನೋಡಿ ಪಾಂಡವರೂ, ಪಾಂಚಾ ಲರೂ ಜಯೋತ್ಸಾಹದಿಂದ ಸಿಂಹನಾದಗಳನ್ನೂ, ಬಾಣಧ್ವನಿಗಳನ್ನೂ ತೋರಿಸುತಿದ್ದರು ಶೂರರ ಶಂಖಧ್ವನಿಗಳು ಪ್ರಬಲವಾಗಿ ಕೇಳಿಸಿದುವು ಹೀಗೆ ಕೌರವಸೈನ್ಯವೆಲ್ಲವೂ ಭಯದಿಂದ ಚದರಿ ಓಡಿಹೋದುದನ್ನು ನೋಡಿ, ಪಾಂಚಾಲರೂ, ಪಾಂಡವರೂ ಅನ್ಯೋನ್ಯವಾಗಿ ಹೀಗೆಂದು ಸಂಭಾಷಣಮಾಡತೊಡಗಿದರು "ಸತ್ಯಸಂಧನೆನಿಸಿದ ಧರ್ಮರಾಜನು ಈಗ ಶತ್ರುಗಳನ್ನೆಲ್ಲ ನಿಗ್ರಹಿಸಿ ನಿಷ್ಕಂಟಕನಾದನು ಈಗಲೇ ದುರ್ಯೋ ಧನನನ್ನು ರಾಜಲಕ್ಷ್ಮಿಯು ಕೈಬಿಟ್ಟಂತಾಯಿತು ಈಗ ಧೃತರಾಷ್ಟ್ರನೂ ತನ್ನ ಮಗನು ಹತನಾದಂತೆಯೇ ಭಾವಿಸಿ ದುಃಖದಿಂದ ಪ್ರಜ್ಞೆತಪ್ಪಿ ಬೀಳು ವುದರಲ್ಲಿ ಸಂದೇಹವಿಲ್ಲ ಈಗಲೇ ಆ ಧೃತರಾಷ್ಟ್ರನಿಗೆ ಲೋಕದಲ್ಲಿ ಅರ್ಜುನನೇ ಧನುರ್ಧಾರಿಗಳಿಗೆಲ್ಲ ಮೇಲೆಂಬ ವಾಸ್ತವಾಂಶವು ಚೆನ್ನಾಗಿ ಮನಸ್ಸಿಗೆ ಹತ್ತುವುದು ಬುದ್ಧಿಹೀನನಾಗಿ ಪಾಪಕಾರ್ಯಕ್ಕೆ ಪ್ರವರ್ತಿಸಿದ ಆತನು, ಈಗ ತನ್ನನ್ನು ತಾನೇ ನಿಂದಿಸಿಕೊಂಡು ಪಶ್ಚಾತ್ತಾಪಗೊಳ್ಳುವನು ಈಗಲಾದರೂ ಆ ಧೃತರಾಷ್ಟ್ರನು, ವಿದುರನು ತನಗೆ ಹೇಳಿದ ಹಿತವಾದಗ ಳೆಲ್ಲವೂ ನಿಜವೆಂಬುದನ್ನು ಮನಸ್ಸಿಗೆ ತಂದುಕೊಳ್ಳಲಿ! ಆ ಧೃತರಾಷ್ಟ್ರ ನು ತನ್ನ ದುರ್ಬುದ್ಧಿಗೆ ಫಲವಾಗಿ, ಇಂದುಮೊದಲುಗೊಂಡು ಧರ್ಮರಾಜ

ನಿಗೆ ಸೇವಕನಂತಿದ್ದು, ಹಿಂದೆ ಪಾಂಡವರು ಪಟ್ಟ ಕಷ್ಟವನ್ನೆಲ್ಲ ಈಗ ತಾನೂ ಅನುಭವದಿಂದ ತಿಳಿಯಲಿ! ಶ್ರೀಕೃಷ್ಣನ ಮಹಿಮೆಯೆಂತದೆಂಬುದು ಈಗ ಅವನಿಗೆ ಚೆನ್ನಾಗಿ ತೋರಲಿ! ಅರ್ಜುನನ ಧನುರ್ಘೋಷವು ಎಷ್ಟು ಭಯಂಕರವೆಂಬುದು ಈಗ ಅವನ ಮನಸ್ಸಿಗೆ ಚೆನ್ನಾಗಿ ಹತ್ತಲಿ! ಅರ್ಜುನನ ಅಸ್ತ್ರಬಲವೂ, ಬಾಹುಬಲವೂ ಎಂತದೆಂದು ಅವನಿಗೆ ಈಗಲಾದರೂ ಚೆನ್ನಾಗಿ ತಿಳಿಯಲಿ! ಇನ್ನು ಶೀಘ್ರದಲ್ಲಿಯೇ ಧೃತರಾಷ್ಟ್ರನು ಭೀಮನಿಂದ ತನ್ನ ಎಲ್ಲಾ ಪುತ್ರರ ಸಾವನ್ನೂ ಪೂರ್ಣವಾಗಿ ಕೇಳುವುದು ನಿಜವು ಇಂದ್ರನಿಂದ ಶಂಬರಾಸುರನು ಹೇಗೋ ಹಾಗೆ ಭೀಮನಿಂದ ದುರ್ಯೋಧನನು ಹತನಾದಮೇಲೆ, ಆಗ ಅವನಿಗೆ ಆ ಭೀಮನ ಬಲವು ಎಷ್ಟು ಭಯಂಕರವೆಂಬುದು ಚೆನ್ನಾಗಿ ತಿಳಿಯುವುದು ಹಿಂದೆ ದುಶ್ಶಾಸನನನ್ನು ಕೊಲ್ಲುವಾಗ ಭೀಮನು ನಡೆಸಿದ ಕಾರ್ಯವನ್ನು, ಆ ಭೀಮನೊಬ್ಬನು ಹೊರತು ಲೋಕದಲ್ಲಿ ಬೇರೆ ಯಾವನು ತಾನೇ ಮಾಡಬಲ್ಲನು? ದೇವತೆಗಳಿಗೂ ದುಸ್ಸಹವಾದ ಪರಾಕ್ರಮವುಳ್ಳ ಶಲ್ಯನು ಹತನಾದುದನ್ನು ಕೇಳಿದಮೇಲೆ, ಆ ಧೃತರಾಷ್ಟ್ರನಿಗೆ ಕೇವಲ ಶಾಂತಮೂರ್ತಿಯಂತೆ ಕಾಣುತಿದ್ದ ಆ ಧರ್ಮರಾಜನ ಪರಾಕ್ರಮವೆಂತದೆಂದು ಚೆನ್ನಾಗಿ ತಿಳಿಯುವುದು ಇನ್ನುಮುಂದೆ ಗಾಂಧಾರವೀರನೆನಿಸಿಕೊಂಡ ಶಕುನಿಯೂ ಸತ್ತಮೇಲೆ, ಆ ನಕುಲಸಹದೇವರ ಪರಾಕ್ರಮವೆಂತದೆಂಬುದೂ ಅವನಿಗೆ ಚೆನ್ನಾಗಿ ಗೊತ್ತಾಗುವುದು ಯಾರ ಪಕ್ಷದಲ್ಲಿ ಧನಂಜಯನೂ, ಸಾತ್ಯಕಿಯೂ, ಭೀಮಸೇನನೂ, ಧೃಷ್ಟದ್ಯುಮ್ನನೂ, ದ್ರೌಪದಿಯ ಐದು ಮಂದಿ ಮಕ್ಕಳೂ, ನಕುಲಸಹದೇವರೂ, ಮಹಾಧನುರ್ಧರನೆನಿಸಿದ ಶಿಖಂಡಿಯೂ, ರಾಜನಾದ ಯುಧಿಷ್ಠಿರನೂ ಒಂದಾಗಿ ಸೇರಿರುವರೋ ಅಂತಹ ಪಕ್ಷಕ್ಕೆ ಹೇಗೆತಾನೇ ಜಯವಿಲ್ಲದೆಹೋಗುವುದು? ಜಗತ್ಪತಿಯಾದ ಕೃಷ್ಣನೇ ಯಾರಪಕ್ಷಕ್ಕೆ ನಾಥನೆನಿಸಿ ನಿಯಾಮಕನಾಗಿರುವನೋ, ಮತ್ತು ಯಾರಿಗೆ ಧರ್ಮವೇ ಬೆಂಬಲವಾಗಿರುವುದೋ, ಅಂತವರಿಗೆ ಹೇಗೆತಾನೇ ಜಯವಿಲ್ಲದೆಹೋಗುವುದು? ಸರ್ವಲೋಕೇಶ್ವರನೆನಿಸಿದ ಹೃಷೀಕೇಶನೇ ಯಾರಿಗೆ ನಾಥನೆನಿಸಿರುವನೋ ಯಾವಾಗಲೂ ಅವರಿಗೇ ಲಾಭವು! ಅವರಿಗೇ ಜಯವು! ಅವರಿಗೆ ಪರಾಭವವೆಂದರೇನು? ಕುಂತೀಪುತ್ರನಾದ ಆ ಯುಧಿ

ಷ್ಠಿರನು ಹೊರತು ಬೇರೆ ಯಾವನು ತಾನೇ ಅಂತಹ ಭೀಷ್ಮನನ್ನೂ, ದ್ರೋಣನನ್ನೂ, ಕರ್ಣಶಲ್ಯರನ್ನೂ, ಇನ್ನೂ ನೂರುಸಾವಿರ ಸಂಖ್ಯೆಯುಳ್ಳ ಇತರ ರಾಜರನ್ನೂ ಯುದ್ಧದಲ್ಲಿ ಜಯಿಸಲು ಸಮರ್ಥನಾಗುವನು ? ಸತ್ಯಕ್ಕೂ, ಯಶಸ್ಸಿಗೂ ನಿಧಿಯಾದ ಆ ಶ್ರೀಕೃಷ್ಣನೇ ಯಾರಿಗೆ ಸಾಧನೆನಿಸಿರುವನೋ ಅಂತವನನ್ನು ಬೇರೆ ಯಾರುತಾನೇ ಜಯಿಸಬಲ್ಲರು ? ” ಎಂದು ತಮ್ಮೊಳಗೆ ಅತ್ಯಂತ ಸಂತೋಷದಿಂದ ಸಂಭಾಷಿಸುತ್ತ, ಯುದ್ಧದಲ್ಲಿ ಭಂಗ ಹೊಂದಿ ಓಡುತ್ತಿರುವ ನಿನ್ನ ಕಡೆಯ ಸೈನಿಕರನ್ನೆಲ್ಲ ಕಂಡಕಂಡಕಡೆಯಲ್ಲಿ ಬೆನ್ನಟ್ಟಿ ಬೆದರಿಸಿ ಓಡಿಸುತಿದ್ದರು ಅರ್ಜುನನು ಅಲ್ಲಲ್ಲಿ ಕಂಡ ರಥಿಕರನ್ನು ಬೆನ್ನಟ್ಟಿ ಹೊಡೆಯುತಿದ್ದನು ಮಾದ್ರೀಪುತ್ರರೂ, ಸಾತ್ಯಕಿಯೂ, ಶಕುನಿಯನ್ನು ಬೆನ್ನಟ್ಟಿ ಹೊಡೆಯಲಾರಂಭಿಸಿದರು ಹೀಗೆ ಭೀಮನ ಭಯದಿಂದ ದಿಕ್ಕುದಿಕ್ಕಿಗೆ ಚದರಿ ಓಡಿಹೋಗುತ್ತಿರುವ ತನ್ನ ಸೈನಿಕರನ್ನು ನೋಡಿ ದುರ್ಯೋಧನನಿಗೆ ದಿಗ್ಭ್ರಮೆಹಿಡಿದಂತಾಯಿತು ಆಗ ಅವನು ಸಾರಥಿಯನ್ನು ಕುರಿತು “ ಸೂತಾ ! ಅದೋ ! ನೋಡಿದೆಯಾ ! ನಾನು ಧನುರ್ಧಾರಿಯಾಗಿ ನಿಂತಿರುವಾಗಲೂ ಅರ್ಜುನನು ನನ್ನನ್ನು ಅತಿಕ್ರಮಿಸಿ ಮುಂದೆ ಹೋಗುತ್ತಿರುವುದನ್ನು ನೋಡು ! ಆದರೇನು ? ಈಗಲೇ ನೀನು ಎಲ್ಲಾ ಸೈನ್ಯಗಳ ಹಿಂಭಾಗಕ್ಕೆ ಮೆಲ್ಲಗೆ ನನ್ನ ರಥವನ್ನು ಬಿಡು ಆಗ ಅರ್ಜುನನು, ಸಮುದ್ರವು ದಡವನ್ನು ಹೇಗೋ ಹಾಗೆ ನನ್ನನ್ನು ಮೀರಿ ಹೋಗಲಾರನು ಇದರಲ್ಲಿ ಸಂದೇಹವಿಲ್ಲ ಸೂತಾ ! ಅದೋ ! ಪಾಂಡವರಿಂದ ಚದರಿಸಲ್ಪಟ್ಟು ಓಡಿಹೋಗುತ್ತಿರುವ ನಮ್ಮ ಸೈನ್ಯಗಳನ್ನು ನೋಡು ದಿಕ್ಕುಗಳನ್ನೆಲ್ಲ ಮುಚ್ಚುವಂತೆ ಆ ಸೈನ್ಯದಿಂದ ಮೇಲೆದ್ದಿರುವ ದೊಡ್ಡ ಧೂಳನ್ನು ನೋಡು ಅಲ್ಲಿ ಪಾಂಡವರಕಡೆಯಿಂದ ಹೊರಡುತ್ತಿರುವ ದೊಡ್ಡ ಸಿಂಹನಾದಗಳನ್ನೂ, ಕೋಲಾಹಲಗಳನ್ನೂ ಕೇಳುತ್ತಿರುವೆಯಲ್ಲವೆ ? ಆದುದರಿಂದ ಸಾರಥೀ ! ಮೆಲ್ಲಗೆ ರಥವನ್ನು ಬಿಟ್ಟುಕೊಂಡುಹೋಗಿ ನಮ್ಮ ಸೈನ್ಯದ ಹಿಂಭಾಗವನ್ನು ರಕ್ಷಿಸು ! ನಾನು ಹೋಗಿ ಪಾಂಡವರನ್ನಿದಿರಿಸಿ ಅವರನ್ನು ತಡೆದು ನಿಲ್ಲಿಸಿದೊಡನೆ, ನಮ್ಮ ಸೈನ್ಯಗಳೆಲ್ಲ ಒಡನೆಯೇ ಹಿಂತಿರುಗಿ ಬಂದುಬಿಡುವುವು ಕುದುರೆಗಳನ್ನು ಬಿಡು ” ಎಂದನು ಶೂರಯೋಗ್ಯನಾದ ದುರ್ಯೋಧನನ ಈ ವಾಕ್ಯವನ್ನು ಕೇಳಿದೊಡನೆ ಸಾರ

ಥಿಯು ಮೆಲ್ಲಗೆ ಕುದುರೆಗಳನ್ನು ಮುಂದೆ ಬಿಟ್ಟನು ಇದನ್ನು ಕಂಡೊಡನೆ ರಥ ಗಜ ತುರಗಗಳೊಂದೂ ಇಲ್ಲದ ಬರೀ ಇಪ್ಪತ್ತೊಂದುಸಾವಿರ ಕಾಲಾಳುಗಳು ಪ್ರಾಣದಾಸೆಯನ್ನು ಬಿಟ್ಟು ತಿರುಗಿ ಯುದ್ಧಕ್ಕಾಗಿ ಬಂದು ನಿಂತರು ನಾನಾದೇಶದಿಂದ ಬಂದು, ನಾನಾವರ್ಣದ ಉಡುಪುಗಳನ್ನು ಧರಿಸಿದ ಆ ಯೋಧರು, ಯಶಃಕಾಂಕ್ಷಿಗಳಾಗಿ ಸರ್ವಸನ್ನಾಹಗಳಿಂದ ಯುದ್ಧಕ್ಕೆ ಅಣಿಯಾದರು ತಿರುಗಿ ಭಯಂಕರವಾದ ಅನ್ಯೋನ್ಯಯುದ್ಧಕ್ಕೆ ಮೊದಲಾಯಿತು ಆಗ ದುರ್ಯೋಧನನು ಭೀಮ ಧೃಷ್ಟದ್ಯುಮ್ನರನ್ನೂ, ಅವರೊಡನೆ ಬಂದಿದ್ದ ಇನ್ನೂ ಅನೇಕ ವೀರರನ್ನೂ ತನ್ನ ಸೇನೆಯಿಂದ ಇದಿರಿಸಿ ತಡೆದನು ಆ ಪದಾತಿಗಳೆಲ್ಲ ಸಿಂಹನಾದಮಾಡುತ್ತಲೂ, ತೋಳುಗಳನ್ನು ತಟ್ಟುತ್ತಲೂ ಭೀಮನೊಬ್ಬನನ್ನೇ ಇದಿರಿಸಿ ನಿಂತರು ಯುದ್ಧದಲ್ಲಿ ಹೆಮ್ಮೆಗೊಂಡ ಅನೇಕ ವೀರರು, ವೀರಸ್ವರ್ಗದಲ್ಲಿ ದೃಷ್ಟಿಯಿಟ್ಟು, ಭೀಮನನ್ನು ಸಮೀಪಿಸಿ ಗರ್ಜಿಸಿದರು ಅವರು ಬೇರೆ ಮಾತುಕಥೆಗಳನ್ನೇ ಬಿಟ್ಟು, ಭೀಮನನ್ನು ಸುತ್ತಲೂ ಆವರಿಸಿಕೊಂಡು ನಾನಾಕಡೆಗಳಿಂದ ಹೊಡೆಯಲಾರಂಭಿಸಿದರು ಹೀಗೆ ಕಾಲಾಳ್ಪಡೆಯೆಲ್ಲವೂ ಒಂದಾಗಿಸೇರಿ ತನ್ನನ್ನು ಸುತ್ತಿ ನಿಂತು ನಾನಾಕಡೆಗಳಿಂದ ಹೊಡೆಯುತ್ತಿದ್ದಾಗಲೂ, ಭೀಮನು ಮೈನಾಕದಂತೆ ನಿಶ್ಚಲನಾಗಿ ಧೈರ್ಯದಿಂದ ನಿಂತಿದ್ದನು ಅವರೂ ಮಹಾಕೋಪದಿಂದ ಭೀಮನ ಮಹಾರಥವನ್ನಾವರಿಸಿಕೊಂಡು ಅವನನ್ನು ನಿಗ್ರಹಿಸುವ ಪ್ರಯತ್ನದಲ್ಲಿದ್ದರು ಶತ್ರುಯೋಧರನ್ನೆಲ್ಲ ನಿವಾರಿಸಿ ಹೊಡೆಯುತಿದ್ದರು ಇದನ್ನು ನೋಡಿ ಭೀಮನಿಗೆ ದುಸ್ಸಹವಾದ ಕೋಪವುಂಟಾಯಿತು ಅವನೂ ಬೇಗನೆ ರಥದಿಂದಿಳಿದು ಪದಾತಿಯಾಗಿಯೇ ನಿಂತು, ದಂಡಪಾಣಿಯಾದ ಯಮನಂತೆ ತನ್ನ ದೊಡ್ಡ ಗದೆಯನ್ನು ಕೈಗೆತ್ತಿಕೊಂಡು ಅದರಿಂದ ನಿನ್ನಕಡೆಯ ಯೋಧರನ್ನೆಲ್ಲ ಬಡಿದು ಕೊಲ್ಲುತ್ತ ಬಂದನು ಆನೆ ಕುದುರೆ ತೇರುಗಳೊಂದೂ ಇಲ್ಲದ ಕೇವಲ ಪದಾತಿಮಯವಾದ ಆ ಇಪ್ಪತ್ತೊಂದುಸಾವಿರಕಾಲಾಳ್ಬಲವನ್ನೂ ಕ್ಷಣಮಾತ್ರದಲ್ಲಿ ಕೊಂದು ತೀರಿಸಿಬಿಟ್ಟು ಒಡನೆಯೇ ಧೃಷ್ಟದ್ಯುಮ್ನನನ್ನೂ ಕರೆದುಕೊಂಡು ಅದೃಶ್ಯನಾಗಿ ಹೊರಟುಹೋದನು ಆ ಪದಾತಿಸೈನ್ಯವೆಲ್ಲ ರಕ್ತದಿಂದ ತೊಯ್ದ ಮೈಯೊಡನೆ ರಣಾಂಗಣದಲ್ಲಿ ಸತ್ತು ಬಿದ್ದಿದ್ದಾಗ, ಪುಷ್ಪಭರಿತವಾಗಿ

ಮುರಿದುಬಿದ್ದ ಕರ್ಣಿಕಾರವೃಕ್ಷಗಳಂತೆ ಕಾಣಿಸುತಿದ್ದುವು ಕೈಯಲ್ಲಿ ನಾನಾ ವಿಧ ಶಸ್ತ್ರಗಳನ್ನೂ, ಕಿವಿಯಲ್ಲಿ ನಾನಾತರದ ಕುಂಡಲಗಳನ್ನೂ ಧರಿಸಿ, ನಾನಾದೇಶಗಳಿಂದ ಬಂದ ನಾನಾಜಾತಿಯ ಸೈನಿಕರ ಶವಗಳು ಅಲ್ಲಿ ಬಿದ್ದಿದ್ದುವು ಧ್ವಜಪತಾಕೆಗಳಿಂದ ಶೋಭಿತವಾಗಿದ್ದ ಆ ದೊಡ್ಡ ಪದಾತಿ ಸೈನ್ಯದ ಶವಗಳಿಂದ ಆ ರಣಭೂಮಿಯು ಬಹಳ ಭಯಂಕರವಾಗಿ ಕಾಣಿಸಿತು ಇಷ್ಟಾದಮೇಲೆ ಯುಧಿಷ್ಠಿರನೇ ಮೊದಲಾದ ಮಹಾರಥರು, ತಮ್ಮ ಸೇನಾಸಮೇತರಾಗಿ ನಿನ್ನ ಮಗನಾದ ದುರ್ಯೋಧನನನ್ನು ಇದಿರಿಸಿ ಹೊರಟರು ಪಾಂಡವರಕಡೆಯವರೆಲ್ಲರೂ ಆಗ, ನಿನ್ನಕಡೆಯಲ್ಲಿ ಧನುರ್ಧಾರಿಗಳಾರೂ ನಿಲ್ಲದೆ ಯುದ್ಧದಿಂದೋಡಿಹೋದ ಸಮಯವನ್ನು ನೋಡಿ ದುರ್ಯೋಧನನನ್ನು ನಿಗ್ರಹಿಸುವುದಕ್ಕಾಗಿ ಪ್ರಯತ್ನಿಸಿ ಬಂದರೂ ಸಮುದ್ರವು ತೀರವನ್ನು ಹೇಗೋ ಹಾಗೆ ಅವನನ್ನು ಮೀರಲಾರದೆ ಹೋದರು ಪಾಂಡವರಕಡೆಯಲ್ಲಿ ಅಷ್ಟುಮಂದಿ ಒಂದಾಗಿ ಸೇರಿ ಬಂದಾಗಲೂ, ಏಕಾಕಿಯಾಗಿದ್ದ ನಿನ್ನ ಮಗನ ಪರಾಕ್ರಮವನ್ನು ತಡೆಯಲಾರದೆಹೋದರು ಆಗ ನಿನ್ನ ಮಗನು ತೋರಿಸಿದ ಪೌರುಷವು ನಮಗೆ ಮಹಾಶ್ಚರ್ಯಕರವಾಗಿ ಕಂಡಿತು ಆಗ ನಿನ್ನ ಮಗನು, ಪಾಂಡವರಿಂದ ತನ್ನ ಸೈನ್ಯವೆಲ್ಲ ಭಂಗಹೊಂದಿ, ಸತ್ತುಳಿದ ಕೆಲವರೂ ರಣರಂಗದಿಂದ ಓಡಿಹೋಗುತ್ತಿರಲು ಅವರು ಬಹಳ ದೂರಕ್ಕೆ ಹೋಗುವಷ್ಟರಲ್ಲಿಯೇ ಅವರನ್ನೆಲ್ಲ ಕೂಗಿ ಕರೆಯುತ್ತ "ಅಯ್ಯೋ! ಸೈನಿಕರೇ! ನೀವೇಕೆ ಹೀಗೆ ಭಯಪಟ್ಟೋಡುವಿರಿ? ನೀವು ಓಡಿಹೋಗಿತಾನೇ ಫಲವೇನು? ನೀವು ಓಡಿಹೋದಮಾತ್ರಕ್ಕೆ ಪಾಂಡವರ ಕೈಗೆ ಸಿಕ್ಕದೆ ತಲೆತಪ್ಪಿಸಿಕೊಂಡು ಹೋಗುವ ಸ್ಥಳವು ನಿಮಗೆ ಭೂಮಿಯಲ್ಲಿಯಾಗಲಿ, ಪರ್ವತಗುಹೆಗಳಲ್ಲಿಯಾಗಲಿ ದೊರೆಯುವುದೆಂದು ನನಗೆ ತೋರಲಿಲ್ಲ ನೀವೆಲ್ಲಿಹೋದರೂ ಅವರು ನಿಮ್ಮನ್ನು ಹಿಡಿದು ಕೊಲ್ಲದೆ ಬಿಡುವುದಿಲ್ಲ ಆದುದರಿಂದ ಹಿಂತಿರುಗಿ ಬಂದು ಯುದ್ಧಮಾಡಿರಿ! ಈಗ ಪಾಂಡವರ ಬಲವೂ ಸ್ವಲ್ಪವಾಗಿದೆ ಕೃಷ್ಣಾರ್ಜುನರೂ ಈಗ ಬಹಳವಾಗಿ ಗಾಯಪಟ್ಟು ನೊಂದಿರುವರು ಈ ಸಮಯದಲ್ಲಿ ನಾವೆಲ್ಲರೂ ಒಂದಾಗಿ ಸೇರಿ ಯತ್ನಿಸಿದರೆ, ನಮಗೆ ಜಯವು ನಿಶ್ಚಯವೇ ಹಾಗಿಲ್ಲದೆ ನೀವು ಓಡಿಹೋದರೆ, ಪಾಂಡವರು ನಿಮ್ಮನ್ನು ಬೆನ್ನಟ್ಟಿ ಕೊಂದೇ ಕೊಲ್ಲುವರು

ಹಾಗೆ ಸಾಯುವುದಕ್ಕಿಂತ ಯುದ್ಧದಲ್ಲಿ ಸಾಯುವುದು ನಿಮಗೆ ಶ್ರೇಯಸ್ಕರ ವಲ್ಲವೆ? ಇಲ್ಲಿ ನೆರೆದ ಕ್ಷತ್ರಿಯರೆಲ್ಲರೂ ಸಾವಧಾನವಾಗಿ ಕೇಳಿರಿ! ಯಮ ನಾದರೋ ಶೂರನನ್ನಾಗಲಿ, ಭೀರುವನ್ನಾಗಲಿ ಬಿಡದೆ ಸಮಾನವಾಗಿಯೇ ಅವರನ್ನು ಕೊಲ್ಲುವುದು ನಿಜವು ಹೀಗಿರುವಾಗ ಕ್ಷತ್ರಿಯಕುಲದಲ್ಲಿ ಹು ಟ್ಟಿದ ಎಂತಹ ಮೂಢನುತಾನೇ ಇಂತಹ ಯುದ್ಧದಲ್ಲಿ ಮರಣವನ್ನು ಆಶಿ ಸದೆ ಬಿಡುವನು? ಆದುದರಿಂದ ಈಗ ನಮಗೆ ಭೀಮನನ್ನಿದಿರಿಸಿ ನಿಲ್ಲು ವುದೇ ಶ್ರೇಯಸ್ಕರವು ಅಲ್ಲದೆ ಜರಾರೋಗಾದಿಗಳಿಂದ ಬಹುಕಾಲ ನರಳಿ ಸಾಯುವುದಕ್ಕಿಂತಲೂ ಯುದ್ಧದಲ್ಲ ಸಾಯುವುದು ಸುಖವು ಮನುಷ್ಯ ನಾಗಿ ಹುಟ್ಟಿದವನು ಮನೆಯಲ್ಲಿ ಅವಿತುಕೊಂಡೇ ಇದ್ದರೂ ಎಂದಾದರೂ ಸಾಯಲೇಬೇಕು ಹೀಗಿರುವಾಗ ಕ್ಷತ್ರಿಯಧರ್ಮವನ್ನು ಹಿಡಿದು ಯುದ್ಧ ದಲ್ಲಿ ಸಾಯುವುದು ಉತ್ತಮ ಧರ್ಮವಲ್ಲವೆ? ಯುದ್ಧದಲ್ಲ ಶತ್ರುಗಳನ್ನು ಕೊಂದರ ಇಹಲೋಕದಲ್ಲಿ ಸುಖವುಂಟು ಸತ್ತರೆ ಸ್ವರ್ಗದಲ್ಲಿ ಇನ್ನೂ ಅತಿಶಯವಾದ ಸುಖವುಂಟು ಸ್ವರ್ಗಪ್ರಾಪ್ತಿಗೆ ಯುದ್ಧಧರ್ಮಕ್ಕಿಂತಲೂ ನಮಗೆ ಮೇಲೆನಿಸಿದ ಬೇರೆ ಮಾರ್ಗವು ದೊರೆಯದು! ಯುದ್ಧದಲ್ಲ ಸತ್ತ ವನಿಗೆ ಬಹುಶೀಘ್ರದಲ್ಲ ಉತ್ತಮಲೋಕಗಳು ಲಭಿಸುವುವು" ಎಂದನು

ರಾಜಾ! ಈ ಮಾತನ್ನು ಕೇಳಿದಮೇಲೆ ನಿನ್ನ ಸೈನಿಕರಿಗೆ ಬುದ್ಧಿಯು ತಿರುಗಿತು ಆ ಮಾತುಗಳನ್ನು ಅಭಿನಂದಿಸುತ್ತ, ತಿರುಗಿ ಅವರು ಯುದ್ಧ ಕ್ಕಾಗಿ ಹಿಂತಿರುಗಿದರು ನಿನ್ನಕಡೆಯವರು ಹಿಂತಿರುಗಿದುದನ್ನು ಕಂಡು ಪಾಂಡವರೂ ಕೋಪಾವೇಶದಿಂದ ಶಸ್ತ್ರಾಸ್ತ್ರಸನ್ನಾಹಗಳೊಡನೆ ಇದಿರಾ ದರು ಧನಂಜಯನು ತ್ರಿಲೋಕವಿಖ್ಯಾತವಾದ ತನ್ನ ಗಾಂಡೀವವನ್ನು ಧ್ವನಿಮಾಡುತ್ತ ರಥವನ್ನು ಮುಂದುವರಿಸಿದನು ಹಾಗೆಯೇ ನಕುಲ ಸಹದೇವರೂ, ಸಾತ್ಯಕಿಯೂ ಶಕುನಿಯನ್ನು ಮಹಾವೇಗದಿಂದ ಇದಿರಿಸಿ ನಿಂತರು

ಇದು ಹದಿನೆಂಟನೆಯ ಅಧ್ಯಾಯವು



## ಸಾತ್ಯಕಿಯು ಸಾಲ್ವನನ್ನು ಕೊಂದುದು

ಓ ರಾಜೇಂದ್ರಾ ! ಕೇಳು ! ಹೀಗೆ ಸೈನ್ಯಗಳೆಲ್ಲವೂ ಹಿಂತಿರುಗಿಬಂದ ಮೇಲೆ, ಮ್ಲೇಚ್ಛಸೈನ್ಯಕ್ಕೆ ಒಡೆಯನಾದ ಸಾಲ್ವನು ಅತಿತೀವ್ರಕೋಪದಿಂದ ಪಾಂಡವರ ದೊಡ್ಡ ಸೈನ್ಯವನ್ನಿದಿರಿಸಿದನು ಅವನು ಪರ್ವತದಂತೆ ದೊಡ್ಡದಾಗಿಯೂ, ಐರಾವತದಂತೆ ಕಾಂತಿವಿಶಿಷ್ಟವಾಗಿಯೂ, ಶತ್ರುಗಳನ್ನು ಧ್ವಂಸಮಾಡುವುದಾಗಿಯೂ, ಮದಜಲವನ್ನು ಸುರಿಸತಕ್ಕುದಾಗಿಯೂ ಇರುವ ಒಂದು ದೊಡ್ಡ ಆನೆಯನ್ನೇರಿ ಬಂದನು ಅದು ಭದ್ರವೆಂಬ ಉತ್ತಮತರದ ಕುಲದಲ್ಲಿ ಹುಟ್ಟಿದುದು ಅದನ್ನು ದುರ್ಯೋಧನನು ಪ್ರತಿದಿನವೂ ಬಹಳ ಶ್ರದ್ಧೆಯಿಂದ ಪೂಜಿಸುತ್ತಿದ್ದನು ಅದು ಶಾಸ್ತ್ರನಿಶ್ಚಯವನ್ನು ತಿಳಿದ ವಿದ್ವಾಂಸರಿಂದ, ಯುದ್ಧಗಳಲ್ಲಿ ರಾಜಯೋಗ್ಯವಾದ ವಾಹನವೆಂದು ನಿರ್ಣಯಿಸಲ್ಪಟ್ಟಿತ್ತು ಹಿಂದೆ ದೈತ್ಯರನ್ನು ಕೊಲ್ಲುವ ಕಾಲದಲ್ಲಿ ದೇವೇಂದ್ರನು ಐರಾವತವನ್ನೇರಿ ಕುಳಿತು, ತನ್ನ ವೈರಿಗಳಿಗೆಲ್ಲ ಭಯವನ್ನು ಹುಟ್ಟಿಸುತ್ತ ಅವರನ್ನು ನಿಗ್ರಹಿಸಿದಂತೆ, ಸಾಲ್ವನು ಆ ಆನೆಯಮೇಲೇರಿ ಕುಳಿತು, ಪ್ರಾತಃಕಾಲದಲ್ಲಿ ಉದಯಪರ್ವತವನ್ನೇರಿದ ಸೂರ್ಯನಂತೆ ಜ್ವಲಿಸುತಿದ್ದನು ಹೀಗೆ ಸಾಲ್ವನು ಆ ಆನೆಯನ್ನೇರಿ ಪಾಂಡವರೆಲ್ಲರೂ ಗುಂಪಾಗಿ ನಿಂತಿದ್ದಕಡೆಗೆ ಹೋಗಿ, ಅಲ್ಲಿ ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಭಯಂಕರ ಬಾಣಗಳಿಂದ ಪಾಂಡವಸೈನ್ಯವನ್ನು ಹೊಡೆಯುತ್ತ ಬಂದನು ಹೀಗೆ ಬಾಣಗಳನ್ನು ಬಿಡುತ್ತ, ಯೋಧರನ್ನು ಕೊಂದು ಕೆಡಹುತಿದ್ದ ಆ ಸಾಲ್ವನ ಸುಳಿವನ್ನು ನಮ್ಮವರಾಗಲಿ, ಪಾಂಡವರಾಗಲಿ ತಿಳಿಯಲಾರದೆಹೋದರು ದೇವ ದಾನವಯುದ್ಧದಲ್ಲಿ ದಾನವರು ಇಂದ್ರನ ಸುಳಿವನ್ನು ತಿಳಿಯದಂತ, ಇವನು ಶತ್ರುಗಳಿಗೆ ತಿಳಿಯದಂತೆ ಹೊಡೆಯುತಿದ್ದನು ಆಗ ಪಾಂಡವರೂ, ಸೋಮಕರೂ, ಸೃಂಜಯರೂ ನಾಲ್ಕುಕಡೆಗಳಿಂದಲೂ ಸಾವಿರಾರು ಬಾಣಗಳನ್ನು ಬಿಡುತ್ತ, ತಾನೇತಾನಾಗಿ ಸಂಚರಿಸುತ್ತಿರುವ ಆ ಸಾಲ್ವನನ್ನೂ, ಅವನಿಗೆ ವಾಹನವಾಗಿ ಐರಾವತದಂತಿರುವ ಆನೆಯನ್ನೂ ನೋಡಿದರು ಓ ರಾಜಾ ! ಹೀಗೆ ಆ ಸಾಲ್ವನಿಂದ ಓಡಿಸಲ್ಪಡುತ್ತಿರುವ ಶತ್ರುಸೈನ್ಯವು ಅಲ್ಲಲ್ಲಿ ಮೃತಪ್ರಾಯವಾಗಿ ಚದರಿಹೋಗುತ್ತಿತ್ತು ಯುದ್ಧದಲ್ಲಿ ಒಬ್ಬನಾದರೂ ಧೈರ್ಯದಿಂದ ನಿಲ್ಲಲಾರದೆಹೋದನು

ಸೈನ್ಯವೆಲ್ಲ ಭಯದಿಂದ ಒಂದನ್ನೊಂದು ನೂಕಿ ಕೆಡಹುತ್ತ ಓಡಿಹೋಯಿತು ಪಾಂಡವಸೈನ್ಯವೆಲ್ಲವೂ ಬಹುಶೀಘ್ರದಲ್ಲಿ ಭಗ್ನವಾಯಿತು ಸಾಲ್ವನು ಕುಳಿತಿದ್ದ ಆ ಆನೆಯ ವೇಗವನ್ನು ತಡೆಯಲಾರದೆ, ನಾಲ್ಕು ದಿಕ್ಕುಗಳಿಗೂ ಓಡುತ್ತಿರುವ ಪಾಂಡವಸೈನ್ಯವನ್ನು ನೋಡಿ, ನಿನ್ನಕಡೆಯ ಮುಖ್ಯಯೋಧರಲ್ಲರೂ ಸಾಲ್ವನನ್ನು ಕೊಂಡಾಡುತ್ತ, ಜಯೋತ್ಸಾಹದಿಂದ ಶಂಖಗಳನ್ನೂದಿದರು ಹೀಗೆ ಕೌರವರು ಸಂತೋಷದಿಂದ ಕೂಗುತ್ತಿರುವ ಶಬ್ದಗಳನ್ನೂ, ಅಲ್ಲಿ ಹೊರಡುತಿದ್ದ ಶಂಖಧ್ವನಿಗಳನ್ನೂ ಕೇಳಿ ಪಾಂಡವಸೇನಾಪತಿಯಾದ ಧೃಷ್ಟದ್ಯುಮ್ನನಿಗೆ ಕೋಪವು ದುಸ್ಸಹವಾಯಿತು ಒಡನೆಯೇ ಅವನು ತನ್ನ ಜಯಕ್ಕಾಗಿ ಆತುರಗೊಂಡು, ಆ ಆನೆಯನ್ನು ಧೈರ್ಯದಿಂದ ಇದಿರಿಸಿ ಹೋದನು ಹಿಂದೆ ಜಂಭಾಸುರನು ಇಂದ್ರನನ್ನು ಕೊಲ್ಲುವುದಕ್ಕೆ ಹೋದಾಗ ಇಂದ್ರನ ಐರಾವತವನ್ನಿದಿರಿಸಿದಂತೆ ಇವನೂ ಆ ಆನೆಗೆ ಇದಿರಾದನು ಹೀಗೆ ಬರುತ್ತಿರುವ ಪಾಂಚಾಲಕುಮಾರನನ್ನು ನೋಡಿ ಅವನನ್ನು ಮೊದಲು ಕೊಲ್ಲುವುದಕ್ಕಾಗಿ ಸಾಲ್ವನು ತನ್ನ ಆನೆಯನ್ನು ವೇಗದಿಂದ ಬಿಟ್ಟನು ಅದನ್ನು ನೋಡಿ ಧೃಷ್ಟದ್ಯುಮ್ನನು ಅಗ್ನಿಸಮಾನಗಳಾಗಿಯೂ, ಚೆನ್ನಾಗಿ ಸಾಣೆಹಿಡಿದುದಾಗಿಯೂ ಇರುವ ಮೂರು ಬಾಣಗಳಿಂದ ಆ ಆನೆಯನ್ನು ಹೊಡೆದು, ಆಮೇಲೆ ಬೇರೆ ಐದು ತೀಕ್ಷ್ಣಬಾಣಗಳನ್ನು ತೆಗೆದು, ಆ ಆನೆಯ ಕುಂಭಸ್ಥಳಕ್ಕೆ ಗುರಿಯಿಟ್ಟು ಹೊಡೆದನು ಆ ನೋವನ್ನು ತಡೆಯಲಾರದೆ ಆನೆಯು ಹಿಂತಿರುಗಿ ಓಡಲಾರಂಭಿಸಿತು ಆಗ ಸಾಲ್ವನು ಬಲಾತ್ಕಾರದಿಂದ ಆ ಆನಯನ್ನು ತಿರುಗಿ ಯುದ್ಧರಂಗದಕಡೆಗೆ ಹಿಂತಿರುಗಿಸಿ, ಅಂಕುಶಗಳಿಂದ ತಿವಿದು ಧೃಷ್ಟದ್ಯುಮ್ನನಮೇಲೆ ಬಿಟ್ಟನು ಹೀಗೆ ತನಗಿದಿರಾಗಿ ಬರುತ್ತಿರುವ ಆನೆಯನ್ನು ನೋಡಿದೊಡನೆ, ಧೃಷ್ಟದ್ಯುಮ್ನನು ತನ್ನ ರಥದಿಂದ ಕೆಳಕ್ಕೆ ಧುಮುಕಿ, ಗದೆಯನ್ನು ಕೈಗೆ ತೆಗೆದುಕೊಂಡು ನೆಲದಮೇಲೆ ನಿಂತನು ಅವನಿಗೆ ಭಯದಿಂದ ಅಂಗಗಳೆಲ್ಲವೂ ನಡುಗುತಿದ್ದುವು ಇಷ್ಟರಲ್ಲಿಯೇ ಆ ಆನೆಯು ನೆಟ್ಟಗೆ ಮುಂದೆ ಬಂದು, ಸುವರ್ಣಾಲಂಕೃತವಾಗಿದ್ದ ಆ ಧೃಷ್ಟದ್ಯುಮ್ನನ ರಥವನ್ನೇ ಮೊತ್ತಕ್ಕೆ ಅದರ ಕುದುರೆಗಳೊಡನೆಯೂ, ಸಾರಥಿಯೊಡನೆಯೂ ತನ್ನ ಸುಂಡಲಿನಿಂದ ಮೇಲಕ್ಕೆತ್ತಿ ಆವೇಶದಿಂದ ಗರ್ಜಿಸುತ

ಆದನ್ನು ನೆಲಕ್ಕೆ ಅಪ್ಪಳಿಸಿತು. ಹೀಗೆ ಧೃಷ್ಟದ್ಯುಮ್ನನು ಅಪಾಯಸ್ಥಿತಿಯಲ್ಲಿರುವುದನ್ನು ಕಂಡು ಭೀಮನೂ, ಶಿಖಂಡಿಯೂ, ಸಾತ್ಯಕಿಯೂ ಅವನ ರಕ್ಷಣೆಗಾಗಿ ಓಡಿಬಂದು, ಆ ಆನೆಯನ್ನಿದಿರಿಸಿ ತಮ್ಮ ಬಾಣಗಳಿಂದ ಆ ಆನೆಯ ನಿರಂಕುಶವಾದ ಗತಿಯನ್ನು ತಡೆದರು ಹೀಗೆ ರಥಿಕರಾದ ಆ ಮೂವರಿಂದ ತಡೆಯಲ್ಪಟ್ಟ ಆ ಆನೆಯು ರಣರಂಗದಿಂದ ಚದರಿತು ಇಷ್ಟರಲ್ಲಿಯೇ ಸಾಲ್ವನು, ಸೂರ್ಯನು ತನ್ನ ಕಿರಣಗಳನ್ನು ಹೇಗೋ ಹಾಗೆ ಎಡೆಬಿಡದೆ ನಮ್ಮ ಶತ್ರುಗಳಮೇಲೆ ಬಾಣವರ್ಷವನ್ನು ಕರೆಯುತ್ತಿದ್ದನು ಆ ಬಾಣದಿಂದ ನೊಂದು ಪಾಂಡವರ ಅನೇಕ ರಥಗಳು ಅಲ್ಲಲ್ಲಿ ಗುಂಪಾಗಿ ಚದರಿ ಓಡಿಹೋದುವು ಸಾಲ್ವನ ಈ ಅದ್ಭುತಪರಾಕ್ರಮವನ್ನು ನೋಡಿ ಪಾಂಚಾಲರೂ, ಸೃಂಜಯರೂ ಕಳವಳಿಸಿ ಹಾಹಾಕಾರವಮಾಡುತ್ತ, ನಾನಾಕಡೆಗಳಿಂದ ಸುತ್ತಿ ನಿಂತು ಆ ಆನೆಯನ್ನು ತಡೆದರು ಇಷ್ಟರಲ್ಲಿ ಧೃಷ್ಟದ್ಯುಮ್ನನು ಪರ್ವತಶಿಖರಕ್ಕೆ ಸಮಾನವಾದ ತನ್ನ ಕೈಯಲ್ಲಿದ್ದ ಗದೆಯನ್ನು ತಿರುಗಿಸುತ್ತ ಆ ಆನೆಯನ್ನು ಇದಿರಿಸಿ ಹೊರಟನು ಮತ್ತು ಮಹಾಮೇಘದಂತೆಯೂ, ಪರ್ವತದಂತೆಯೂ ದೊಡ್ಡದಾಗಿ, ಮದಜಲವನ್ನು ಸುರಿಸುತ್ತಿರುವ ಆ ಆನೆಯಮೇಲೆ ತನ್ನ ಗದೆಯನ್ನು ವೇಗದಿಂದ ಬೀಸಿದನು ಆ ಪ್ರಹಾರದಿಂದ ಆನೆಯ ಕುಂಭಸ್ಥಳವು ಭೇದಿಸಿತು ಅದರ ಬಾಯಿಂದ ರಕ್ತಪ್ರವಾಹವು ಹೊರಡಲಾರಂಭಿಸಿತು ಅದು ದೊಡ್ಡ ಧ್ವನಿಯಿಂದ ಅರಚುತ್ತ ಭೂಕಂಪದಿಂದ ಕದಲಿಬಿದ್ದ ಪರ್ವತದಂತೆ ಸತ್ತು ಕೆಳಗೆ ಬಿದ್ದಿತು ಆ ಆನೆಯು ಬಿದ್ದುದನ್ನು ನೋಡಿ ನಿನ್ನಕಡೆಯ ಸೈನಿಕರಲ್ಲ 'ಹಾ! ಹಾ!' ಎಂದು ಕೂಗುತ್ತಿರುವ ಸಮಯದಲ್ಲ ಸಾತ್ಯಕಿಯು ತೀಕ್ಷ್ಣವಾದ ಒಂದು ಭಲ್ಲಾಯುಧದಿಂದ ಸಾಲ್ವನ ತಲೆಯನ್ನೂ ಕಡಿದುಬಿಟ್ಟನು ಒಡನೆಯೇ ಆ ಸಾಲ್ವನು ಇಂದ್ರನ ವಜ್ರಾಯುಧದಿಂದ ಭೇದಿಸಲ್ಪಟ್ಟ ಪರ್ವತಶಿಖರದಂತೆ ಕೆಳಕ್ಕೆ ಬಿದ್ದುಬಿಟ್ಟನು

ಇದು ಹತ್ತೊಂಭತ್ತನೆಯ ಅಧ್ಯಾಯವು



ಸಾತ್ಯಕಿಯು ಕೃತವರ್ಮನನ್ನು ಸೋಲಿಸಿದುದು

ರಾಜೇಂದ್ರಾ! ಕೇಳು! ಮಹಾಶೂರನಾದ ಸಾಲ್ವನು ಬಿದ್ದೊಡನೆ, ತಿರುಗಿ ನಿನ್ನ ಸೈನ್ಯಗಳು ಬಿರುಗಾಳಿಯಿಂದ ಕದಲಿಸಲ್ಪಟ್ಟ ಮಹಾವೃಕ್ಷದಂತೆ ಕದಲಿ ಚದರಿಹೋಯಿತು ಹೀಗೆ ಚದರಿಹೋದ ಸೈನ್ಯವನ್ನು ನೋಡಿ ಕೃತವರ್ಮನು ಅವರಿಗೆಲ್ಲ ಉತ್ಸಾಹವು ಹುಟ್ಟುವಂತೆ ಶತ್ರುಸೈನ್ಯವನ್ನು ವೇಗದಿಂದ ಇದಿರಿಸಿ ಬಂದನು ಕೃತವರ್ಮನು ಬೆಂಬಲವಾಗಿ ಬಂದುದನ್ನು ನೋಡಿದೊಡನೆ ಕೌರವಸೈನ್ಯಗಳು ತಿರುಗಿ ಯುದ್ಧಕ್ಕಾಗಿ ಹೊರಟುಬಂದುವು ಕೃತವರ್ಮನು ಶತ್ರುಗಳಿಗಿದಿರಾಗಿ ಬೆಟ್ಟದಂತೆ ಸ್ಥಿರವಾಗಿ ನಿಂತು ಬಾಣಗಳನ್ನೆರಚುತಿದ್ದನು ಕೌರವಪಾಂಡವರಿಗೆ ತಿರುಗಿ ಪ್ರಬಲಯುದ್ಧವು ಆರಂಭಿಸಿತು ಮರಣವೇ ತಮಗೆ ಯುದ್ಧದ ಕೊನೆಯೆಂದು ನಿಶ್ಚಯಿಸಿ ಎಲ್ಲರೂ ಯುದ್ಧವನ್ನು ಹೂಡಿದರು ಆಗ ಕೃತವರ್ಮನೊಬ್ಬನೇ ಶತ್ರುಗಳಿಗೆ ಅಭೇದ್ಯವಾದ ಅನೇಕ ಪಾಂಡವಸೇನೆಯನ್ನಿದಿರಿಸಿ ಯುದ್ಧಮಾಡಿದುದು ನಮಗೆ ಆಶ್ಚರ್ಯಕರವಾಗಿ ಕಂಡಿತು ಅಲ್ಲಿ ಒಬ್ಬೊಬ್ಬರೂ ತಮ್ಮತಮ್ಮ ಶತ್ರುಗಳಮೇಲೆ ದುಷ್ಕರವಾದ ಸಾಹಸಕಾರ್ಯಗಳನ್ನು ಮಾಡಿದಾಗ, ಆಯಾ ಪಕ್ಷದವರು ತಮ್ಮತಮ್ಮ ಸ್ನೇಹಿತರೊಡನೆ ಸಂತೋಷದಿಂದ ಮಾಡಿದ ಸಿಂಹನಾದಗಳು ಅಂತರಿಕ್ಷವನ್ನೆಲ್ಲ ವ್ಯಾಪಿಸುವಂತಾಯಿತು ಈ ಧ್ವನಿಯಿಂದಲೇ ಪಾಂಚಾಲರಲ್ಲ ಭಯಪಡುತ್ತಿರುವುದನ್ನು ನೋಡಿ, ಸಾತ್ಯಕಿಯು ಅವರಿಗೆ ಬೆಂಬಲವಾಗಿ ಅಭಯವನ್ನು ಕೊಟ್ಟು ಪ್ರೋತ್ಸಾಹಿಸಿದನು ಒಡನೆಯೇ ಸಾತ್ಯಕಿಯು ಮಹಾಬಲಾಢ್ಯನಾದ ಕ್ಷೇಮಧೂರ್ತಿಯೆಂಬ ರಾಜನನ್ನು ಏಳು ತೀಕ್ಷ್ಣಬಾಣಗಳಿಂದ ಯಮಪುರಿಗೆ ಕಳುಹಿಸಿಬಿಟ್ಟನು ಹೀಗೆ ಸಾತ್ಯಕಿಯು ಬಾಣವರ್ಷಗಳನ್ನು ಕರದು, ತನ್ನ ಕಡೆಯವರನ್ನೆಲ್ಲ ಕೊಲ್ಲುತ್ತ ಬರುವುದನ್ನು ನೋಡಿ ಕೃತವರ್ಮನು ಸಾತ್ಯಕಿಗೆ ಇದಿರಾದನು ಹೀಗೆ ಸಾತ್ಯಕಿ ಕೃತವರ್ಮರಿಬ್ಬರೂ ಸಿಂಹಗಳಂತೆ ಗರ್ಜಿಸುತ್ತ, ಒಬ್ಬರನ್ನೊಬ್ಬರು ಇದಿರಿಸಿ ಯುದ್ಧವನ್ನು ತೊಡಗಿದರು ಇಬ್ಬರೂ ಮಹಾಧನುರ್ಧಾರಿಗಳು! ಇಬ್ಬರೂ ರಥಿಕಶ್ರೇಷ್ಠರು! ಇಬ್ಬರೂ ಉತ್ತಮಾಸ್ತ್ರಗಳನ್ನು ಬಲ್ಲವರು! ಅವರಿಬ್ಬರೂ ಒಬ್ಬರನ್ನೊಬ್ಬರು ಇದಿರಿಸಿ ಯುದ್ಧಮಾಡುತ್ತಿರುವಾಗ, ಪಾಂಡ

ವರೂ, ಪಾಂಚಾಲರೂ, ಇತರ ಯೋಧರೂ, ರಾಜಶ್ರೇಷ್ಠರೂ ಕೇವಲ ಸಾಕ್ಷಿಗಳಾಗಿ ನಿಂತು ಅವರಿಬ್ಬರ ಯುದ್ಧವನ್ನು ನೋಡುತ್ತಿದ್ದರು ವೃಷ್ಣ್ಯಂಧಕಕುಲದ ಮಹಾರಥರನಿಸಿಕೊಂಡ ಅವರಿಬ್ಬರೂ ಉತ್ಸಾಹಗೊಂಡ ಮದದಾನೆಗಳಂತೆ ಒಬ್ಬರಿಗೊಬ್ಬರು ಇದಿರಾಗಿ ನಾರಾಚ, ವತ್ಸದಂತ, ಮೊದಲಾದ ವಿವಿಧ ಬಾಣಗಳನ್ನು ಪ್ರಯೋಗಿಸುತ್ತ ವಿಚಿತ್ರಗತಿಗಳಿಂದ ಸುತ್ತಿಸುತ್ತಿ ಒಬ್ಬರನ್ನೊಬ್ಬರು ಹೊಡೆಯುತ್ತಿದ್ದರು ಅವರ ಬಾಣಗಳು ಪತಂಗದ ಹುಳಗಳಂತೆ ಆಕಾಶವನ್ನೆಲ್ಲ ಆವರಿಸಿಕೊಂಡುವು ಕ್ಷಣಕ್ಷಣಕ್ಕೂ ಅವರಿಬ್ಬರೂ ಬಾಣವರ್ಷಗಳಲ್ಲಿ ಮುಚ್ಚಿಹೋಗುತ್ತಿದ್ದರು ಇಷ್ಟರಲ್ಲಿ ಕೃತವರ್ಮನು ನಾಲ್ಕು ಬಾಣಗಳಿಂದ ಸಾತ್ಯಕಿಯ ನಾಲ್ಕು ಕುದುರಗಳನ್ನೂ ಹೊಡೆದನು ಸಾತ್ಯಕಿಯು ಅದನ್ನು ಸಹಿಸಲಾರದೆ, ಅಂಕುಶದಿಂದ ತಿವಿಯಲ್ಪಟ್ಟ ಆನಯಂತೆ ಕೋಪಗೊಂಡು, ಎಂಟು ಬಾಣಗಳಿಂದ ಕೃತವರ್ಮನನ್ನು ಹೊಡೆದನು ಅದಕ್ಕೆ ಪ್ರತಿಯಾಗಿ ಕೃತವರ್ಮನು ಕಿವಿಯವರಗೆ ಪೂರ್ಣವಾಗಿ ಎಳೆದು ಬಿಟ್ಟ ಮೂರು ಬಾಣಗಳಿಂದ ಸಾತ್ಯಕಿಯನ್ನು ಹೊಡೆದು, ಬೇರೊಂದು ಬಾಣದಿಂದ ಅವನ ಬಿಲ್ಲನ್ನು ಕತ್ತರಿಸಿಬಿಟ್ಟನು ಆಗ ಸಾತ್ಯಕಿಯು ತನ್ನ ಧನುರ್ಭಂಗವನ್ನು ಸಹಿಸಲಾರದೆ ಮುರಿದ ಬಿಲ್ಲನ್ನು ಬಿಸುಟು, ಬೇರೊಂದು ಹೊಸ ಧನುಸ್ಸನ್ನು ಕೈಗೆತ್ತಿಕೊಂಡು, ಬಹುಬೇಗನೆ ಅದಕ್ಕೆ ನಾಣೇರಿಸಿ, ಕೋಪದಿಂದ ಕೃತವರ್ಮನಿಗಿದಿರಾಗಿ ನಿಂತು, ಹತ್ತು ಬಾಣಗಳಿಂದ ಕೃತವರ್ಮನ ಸಾರಥಿಯನ್ನೂ, ಕುದುರೆಗಳನ್ನೂ, ಧ್ವಜವನ್ನೂ ಭೇದಿಸಿ ಕೆಡಹಿದನು ತನ್ನ ರಥವು ವಿಫಲವಾದುದಕ್ಕಾಗಿ ಕೃತವರ್ಮನು ಅತ್ಯಾಕ್ರೋಶದಿಂದ ಒಂದು ಶೂಲವನ್ನು ಕೈಗೆತ್ತಿಕೊಂಡು, ತನ್ನ ಬಾಹುಬಲವನ್ನೆಲ್ಲ ಉಪಯೋಗಿಸಿ ಸಾತ್ಯಕಿಯ ಮೇಲೆ ಬೀಸಿದನು ಆದರೇನು ? ಸಾತ್ಯಕಿಯು ತನ್ನ ತೀಕ್ಷ್ಣಬಾಣಗಳಿಂದ ಆ ಶೂಲವನ್ನು ನಡುದಾರಿಯಲ್ಲಿಯೇ ಭೇದಿಸಿ, ಆ ಕೃತವರ್ಮನು ಆಶ್ಚರ್ಯಪಡುವಂತೆ ಅದನ್ನು ಪುಡಿಪುಡಿಯಾಗಿ ಮಾಡಿ ಕೆಡಹಿಬಿಟ್ಟನು ಬೇರೊಂದು ಬಾಣವನ್ನು ಕೃತವರ್ಮನ ಎದೆಗೆ ಹೊಡೆದನು ಸಾತ್ಯಕಿಯಿಂದ ಕುದುರಗಳೂ, ಸಾರಥಿಯೂ ಕೊಲ್ಲಲ್ಪಟ್ಟಮೇಲೆ ಕೃತವರ್ಮನು ರಥವನ್ನು ಬಿಟ್ಟು ಕೆಳಕ್ಕೆ ಧುಮುಕಿಬಿಟ್ಟನು. ಕೃತವರ್ಮನು ವಿರಥನಾ

ದುದನ್ನು ನೋಡಿ ನಿನ್ನ ಸೈನ್ಯಗಳಿಗೇ ಮಹತ್ತಾದ ಭೀತಿಯು ಹುಟ್ಟಿತು ನಿನ್ನ ಮಕ್ಕಳಿಗೂ ಪ್ರಬಲವಾದ ಚಿಂತೆಯು ಹುಟ್ಟಿತು ಇಷ್ಟರಲ್ಲಿ ಕೃಪಾಚಾರ್ಯನು ವಿರಥನಾದ ಕೃತವರ್ಮನ ಸ್ಥಿತಿಯನ್ನು ನೋಡಿ ಅಲ್ಲಿಗೆ ಓಡಿಬಂದು, ಕೃತವರ್ಮನನ್ನು ತನ್ನ ರಥಕ್ಕೇರಿಸಿಕೊಂಡು ರಣರಂಗದಿಂದ ಬೇರಕಡೆಗೆ ಸಾಗಿಸಿಬಿಟ್ಟನು ಸಾತ್ಯಕಿಯು ರಥಸಹಿತನಾಗಿದ್ದುಕೊಂಡು, ಕೃತವರ್ಮನು ವಿರಥನಾದುದನ್ನು ನೋಡಿ ಭಯಗೊಂಡು, ದುರ್ಯೋಧನನ ಸೈನ್ಯವೆಲ್ಲ ಮೆಲ್ಲಮೆಲ್ಲಗೆ ಯುದ್ಧದಿಂದ ಹಿಂತಿರುಗಲಾರಂಭಿಸಿತು ಸೇನಾಧೂಳಿಯು ಎಲ್ಲೆಲ್ಲಿಯೂ ಆವರಿಸಿದ್ದುದರಿಂದ ಶತ್ರುಗಳಿಗೆ ಇದು ತಿಳಿಯಲಿಲ್ಲ ದುರ್ಯೋಧನನೊಬ್ಬನು ಹೊರತು ನಿನ್ನಕಡೆಯವರಲ್ಲರೂ ಓಡಿಹೋದರು ತನ್ನ ಸೈನ್ಯವು ಭಗ್ನವಾಗಿ ಓಡಿದಮೇಲೆಯೂ ದುರ್ಯೋಧನನು ತಾನೊಬ್ಬನೇ ಪಾಂಡವರನ್ನೆಲ್ಲ ಇದಿರಿಸಿ ತಡೆದನು ಪಾಂಡವರು, ಧೃಷ್ಟದ್ಯುಮ್ನನು, ಶಿಖಂಡಿ, ಉಪಪಾಂಡವರು, ಪಾಂಚಾಲರು, ಕೇಕಯರು, ಸೋಮಕರು, ಸೃಂಜಯರು, ಇವರನ್ನೆಲ್ಲ ನಿನ್ನ ಮಗನು ಏಕಾಕಿಯಾಗಿಯೇ ಇದಿರಿಸಿ ನಿಂತನು ಸ್ವಲ್ಪವಾದರೂ ಎದೆಗುಂದದೆ ತೀಕ್ಷ್ಣಬಾಣಗಳನ್ನು ವರ್ಷಿಸುತ್ತ ಬಹಳ ಎಚ್ಚರಿಕೆಯಿಂದ ಯುದ್ಧವನ್ನು ಮಾಡುತ್ತಿದ್ದನು ಬಲಾಢ್ಯನಾದ ನಿನ್ನ ಮಗನು ಯಜ್ಞದಲ್ಲ ಮಂತ್ರಪೂತವಾದ ಅಗ್ನಿಯಂತೆ ಆ ಯುದ್ಧರಂಗದಲ್ಲಿ ಬೆಳಗುತಿದ್ದನು ಮನುಷ್ಯರು ಮೃತ್ಯುವನ್ನು ಕಂಡರ ಹೇಗೋ ಹಾಗೆ ಶತ್ರುಗಳು ಅವನನ್ನು ಕಂಡು ಹೆದರಿದರು ಇಷ್ಟರಲ್ಲಿ ಕೃತವರ್ಮನು ಬೇರ ರಥವನ್ನೇರಿ ನಿನ್ನ ಮಗನಿಗೆ ಬೆಂಬಲವಾಗಿ ಬಂದನು

ಇದು ಇಪ್ಪತ್ತನೆಯ ಅಧ್ಯಾಯವು



 ಸಂಕುಲಯುದ್ಧವು 

ಓ ರಾಜೇಂದ್ರಾ ! ಕೇಳು ! ನಿನ್ನ ಮಗನು ರಥಾರೂಢನಾಗಿ ರಣರಂಗದಲ್ಲಿ ಕಾಲರುದ್ರನಂತೆ ಶತ್ರುಗಳಿಗೆ ದುಸ್ಸಹನಾಗಿದ್ದನು ಅವನ ಸಾವಿರಾರು ಬಾಣಗಳಿಂದ ಭೂಮಿಯೆಲ್ಲವೂ ಕ್ಷಣಮಾತ್ರದಲ್ಲಿ ಮರೆಸಿದಂತಾ

ಯಿತು ಪರ್ವತದಮೇಲೆ ಮಳೆ ಸುರಿದಂತೆ ಶತ್ರುಗಳಮೇಲೆ ಬಾಣವರ್ಷವನ್ನು ಕರೆಯುತ್ತಿದ್ದನು ಆಗ ಸಮುದ್ರದಂತಿದ್ದ ಪಾಂಡವಸೈನ್ಯದಲ್ಲಿ ದುರ್ಯೋಧನನ ಬಾಣಗಳಿಂದ ಗಾಯಪಡದ ಆನೆಯಾಗಲಿ, ಕುದುರೆಯಾಗಲಿ, ರಥವಾಗಲಿ ಯಾವುದೂ ಇಲ್ಲದಂತೆ ಎಲ್ಲವೂ ಬಹಳವಾಗಿ ನೊಂದುವು ಆ ಯುದ್ಧದಲ್ಲಿ ಯಾವ ಸೈನಿಕನ ಮೈಯನ್ನು ನೋಡಿದರೂ ಅವನ ಮೈಯಲ್ಲಿ ದುರ್ಯೋಧನನ ಬಾಣಗಳು ನಾಟಿದ್ದುವು ಸೇನಾಧೂಳಿಯಿಂದ ಹೇಗೋ ಹಾಗೆ ದುರ್ಯೋಧನನ ಬಾಣಗಳಿಂದವೇ ಭೂಮಿಯೆಲ್ಲ ಮುಚ್ಚಿಹೋಯಿತು ನಿನ್ನ ಮಗನ ಹಸ್ತಲಾಘವದಿಂದ ಸಮಸ್ತಭೂಮಿಯೂ ಬಾಣಮಯವಾಗಿಯೇ ಕಾಣಿಸಲ್ಪಟ್ಟಿತು ಆಗ ನಿನ್ನವರಲ್ಲಿಯಾಗಲಿ, ಪಾಂಡವರಲ್ಲಿಯಾಗಲಿ, ಸಾವಿರಾರು ಮಂದಿ ಯೋಧರಲ್ಲ ನಿನ್ನ ಮಗನಿಗೆ ಸಮಾನನಾದ ಪೌರುಷವುಳ್ಳವನು ಒಬ್ಬನಾದರೂ ಇಲ್ಲವೆಂದೇ ನನಗೆ ತೋರಿತು ಅಷ್ಟುಮಂದಿ ಪಾರ್ಥರೂ ಒಂದಾಗಿ ಸೇರಿದರೂ, ನಿನ್ನ ಮಗನ ಪರಾಕ್ರಮಕ್ಕೆ ಇದಿರಾಗಲಾರದೆಹೋದರು. ಆಗ ನಿನ್ನ ಮಗನ ಪರಾಕ್ರಮವು ಲೋಕಕ್ಕೆ ಅತ್ಯಾಶ್ಚರ್ಯಕರವಾಗಿ ಕಂಡುಬಂದಿತು ಆಗ ನಿನ್ನ ಮಗನು ತನ್ನ ಕೈಚಳಕದಿಂದ ಏಕಕಾಲದಲ್ಲಿ ನೂರು ಬಾಣಗಳಿಂದ ಧರ್ಮರಾಜನನ್ನೂ, ಎಪ್ಪತ್ತು ಬಾಣಗಳಿಂದ ಭೀಮನನ್ನೂ, ಐದು ಬಾಣಗಳಿಂದ ಸಹದೇವನನ್ನೂ, ಅರುವತ್ತುನಾಲ್ಕು ಬಾಣಗಳಿಂದ ನಕುಲನನ್ನೂ, ಐದೈದು ಬಾಣಗಳಿಂದ ಧೃಷ್ಟದ್ಯುಮ್ನನನ್ನೂ, ಮತ್ತು ಐದು ಮಂದಿ ಉಪಪಾಂಡವರನ್ನೂ, ಮೂರು ಬಾಣಗಳಿಂದ ಸಾತ್ಯಕಿಯನ್ನೂ ಏಕಕಾಲದಲ್ಲಿ ಹೊಡದನು ಒಂದು ಭಲ್ಲದಿಂದ ಸಹದೇವನ ಕೈಯಲ್ಲಿದ್ದ ಬಿಲ್ಲನ್ನು ತುಂಡುಮಾಡಿದನು ಒಡನೆಯೇ ಸಹದೇವನು ಮುರಿದ ಬಿಲ್ಲನ್ನು ಬಿಸುಟು, ಬೇರೊಂದು ದೊಡ್ಡ ಬಿಲ್ಲನ್ನು ಕೈಗೆತ್ತಿಕೊಂಡು, ಹತ್ತು ಬಾಣಗಳಿಂದ ದುರ್ಯೋಧನನನ್ನು ಹೊಡೆದನು ಅದೇ ಕಾಲದಲ್ಲಿ ನಕುಲನೂ ಒಂಭತ್ತು ಬಾಣಗಳಿಂದ ಅವನನ್ನು ಹೊಡೆದು ಸಿಂಹನಾದ ಮಾಡಿದನು ಸಾತ್ಯಕಿಯೂ ಒಂದು ತೀವ್ರಬಾಣವನ್ನು ಪ್ರಯೋಗಿಸಿದನು ಅದೇ ಕಾಲದಲ್ಲಿ ಉಪಪಾಂಡವರು ಎಪ್ಪತ್ತುಮೂರು ಬಾಣಗಳನ್ನೂ, ಧರ್ಮರಾಜನು ಐದು ಬಾಣಗಳನ್ನೂ, ಭೀಮನು ಎಂಭತ್ತು ಬಾಣಗಳನ್ನೂ ನಿನ್ನ ಮಗನಮೇಲೆ

ಪ್ರಯೋಗಿಸಿದರು ಹೀಗೆ ಎಲ್ಲರೂ ಸುತ್ತಿಮುತ್ತಿ ಹೊಡೆಯುತ್ತಿರುವಾಗಲೂ ನಿನ್ನ ಮಗನು ಸ್ವಲ್ಪವಾದರೂ ಕದಲಲಿಲ್ಲ. ಆಗಲೂ ಮಹಾಬಲಶಾಲಿಯಾದ ನಿನ್ನ ಮಗನು ತನ್ನ ಹಸ್ತಲಾಘವದಿಂದಲೂ, ಚಾತುರ್ಯದಿಂದಲೂ, ವೀರ್ಯದಿಂದಲೂ ಸಮಸ್ತ ಭೂತಗಳಿಗೂ ಮೇಲಾದವನಂತೆ ಎಲ್ಲಾ ಜನರಿಗೆ ಕಾಣಿಸಿದನು. ಆಗ ಕೌರವವೀರರು, ತಮ್ಮ ಪ್ರಭುವಾದ ದುರ್ಯೋಧನನು ಶತ್ರುಗಳ ನಡುವೆ ಸಿಕ್ಕಿರುವುದನ್ನು ನೋಡಿ, ಕವಚಧಾರಿಗಳಾಗಿ ಬಂದು, ಅವನ ರಕ್ಷಣೆಗಾಗಿ ಸುತ್ತಲೂ ಆವರಿಸಿಕೊಂಡರು ಹೀಗೆ ದುರ್ಯೋಧನನ ಸುತ್ತಲೂ ನೆರೆಯುತ್ತಿರುವ ಆ ಸೈನಿಕರ ಘೋಷವು ವರ್ಷಾಕಾಲದಲ್ಲಿ ಕಲಗಿದ ಸಮುದ್ರಘೋಷದಂತೆ ಭಯಂಕರವಾಯಿತು ದುರ್ಯೋಧನನನ್ನು ಕೊಲ್ಲುವುದಕ್ಕಾಗಿ ಮುಂದೆ ಬಿದ್ದು ಬರುವ ಪಾಂಡವರನ್ನು ಅವರೆಲ್ಲರೂ ಒಂದಾಗಿ ಸೇರಿ ಇದಿರಿಸಿ ನಿಂತರು ದ್ರೋಣಪುತ್ರನಾದ ಅಶ್ವತ್ಥಾಮನು ಭೀಮನನ್ನು ತಡೆದನು ಅವರಿಬ್ಬರೂ ಯುದ್ಧ ಮಾಡುತ್ತಿರುವಾಗ, ಅವರ ಬಾಣಗಳಿಂದ ದಿಕ್ಕು ವಿದಿಕ್ಕುಗಳೆಲ್ಲವೂ ಮರಸಿ, ಯಾವುದೂ ಕಾಣದಂತಾಯಿತು ಒಬ್ಬರಿಗೊಬ್ಬರು ಹಟದಿಂದ ಭಯಂಕರವಾದ ಪರಾಕ್ರಮವನ್ನು ತೋರಿಸುತ್ತ ಹೋರಾಡಿದರು ತಮ್ಮ ಧನುಷ್ಟಂಕಾರದಿಂದಲೇ ದಿಕ್ಕುಗಳನ್ನೆಲ್ಲ ನಡುಗಿಸುತ್ತಿದ್ದರು ಇನ್ನೊಂದುಕಡೆ ಶಕುನಿಯು ಧರ್ಮರಾಜನಿಗಿದಿರಾಗಿ, ಅವನ ನಾಲ್ಕು ರಥಾಶ್ವಗಳನ್ನು ಕೊಂದು, ಸೈನ್ಯಗಳೆಲ್ಲವೂ ನಡುಗುವಂತೆ ದೊಡ್ಡ ಸಿಂಹನಾದವನ್ನು ಮಾಡಿದನು ಇಷ್ಟರಲ್ಲಿಯೇ ಸಹದೇವನು ವಿರಥನಾದ ಧರ್ಮರಾಜನನ್ನು ತನ್ನ ರಥದಮೇಲೇರಿಸಿಕೊಂಡು ಬೇರೆಕಡೆಗೆ ಕರೆದುಕೊಂಡು ಹೋದನು ಸ್ವಲ್ಪಹೊತ್ತಿನಲ್ಲಿಯೇ ಧರ್ಮರಾಜನು ಬೇರೊಂದು ರಥವನ್ನೇರಿ ಹಿಂತಿರುಗಿ ಬಂದು, ಮೊದಲು ಒಂಭತ್ತು ಬಾಣಗಳಿಂದಲೂ, ತಿರುಗಿ ಐದು ಬಾಣಗಳಿಂದಲೂ ಹೊಡೆದು ಸಿಂಹನಾದ ಮಾಡಿದನು ಅವರಿಬ್ಬರ ಯುದ್ಧವು ನೋಡುವವರಿಗೆ ಸಂತೋಷವನ್ನೂ, ಭಯವನ್ನೂ ಉಂಟುಮಾಡುವಂತಿದ್ದಿತು ಸಿದ್ಧಚಾರಣರೆಲ್ಲರೂ ಅದನ್ನು ಕೊಂಡಾಡುತ್ತಿದ್ದರು ಬೇರೊಂದುಕಡೆ ಉಲೂಕನು ನಕುಲನನ್ನಿದಿರಿಸಿ, ಅವನನ್ನು ಬಾಣವರ್ಷಗಳಿಂದ ಮುಚ್ಚಿದನು ಅದಕ್ಕೆ ಪ್ರತಿಯಾಗಿ ನಕುಲನು ಶಕುನಿಯ ಮಗ

ನಾದ ಆ ಉಲೂಕನನ್ನು ದೊಡ್ಡ ಬಾಣವರ್ಷಗಳಿಂದ ಮುಚ್ಚಿದನು ಮಹಾರಥರೆನಿಸಿದ ಅವರಿಬ್ಬರೂ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುತ್ತ ಪ್ರಬಲಯುದ್ಧವನ್ನು ಮಾಡುತ್ತಿದ್ದರು ಇನ್ನೊಂದುಕಡೆ ಸಾತ್ಯಕಿಯು ಕೃತವರ್ಮನನ್ನಿದಿರಿಸಿ, ಇಂದ್ರನೊಡನೆ ಬಲಿಯು ಹೇಗೋ ಹಾಗೆ ಅವನೊಡನೆ ಯುದ್ಧಮಾಡುತ್ತಿದ್ದನು ಇಷ್ಟರಲ್ಲಿ ದುರ್ಯೋಧನನು ಧೃಷ್ಟದ್ಯುಮ್ನನ ಧನುಸ್ಸನ್ನು ತುಂಡುಮಾಡಿ, ಚಾಪಹೀನನಾದ ಅವನಮೇಲೆ ತೀಕ್ಷ್ಣಬಾಣಗಳನ್ನು ಬಿಡುತ್ತಿದ್ದನು ಧೃಷ್ಟದ್ಯುಮ್ನನೂ ಉತ್ತಮವಾದ ಬೇರೆ ಆಯುಧವನ್ನು ಹಿಡಿದು ಯುದ್ಧಮಾಡತೊಡಗಿದನು ಮದಿಸಿದ ಕಾಡಾನೆಗಳಂತೆ ಅವರಿಬ್ಬರೂ ಪ್ರಬಲಯುದ್ಧವನ್ನು ನಡೆಸುತ್ತಿದ್ದರು ಮತ್ತೊಂದುಕಡೆ ಕೃಪನು ಐದುಮಂದಿ ಉಪಪಾಂಡವರನ್ನಿದಿರಿಸಿ, ಅವರನ್ನು ಅನೇಕಬಾಣಗಳಿಂದ ಹೊಡೆಯುತ್ತಿದ್ದನು ಮನುಷ್ಯರಿಗೆ ಪಂಚೇಂದ್ರಿಯಗಳೊಡನೆ ಹೋರಾಟವು ನಡೆದಂತೆ, ಕೃಪನಿಗೆ ಆ ಐದು ಮಂದಿ ಉಪಪಾಂಡವರೊಡನೆ ನಡೆದ ಯುದ್ಧವು ಅತಿಭಯಂಕರವಾಗಿ, ಇತರರಿಂದ ತಡೆಯಲಸಾಧ್ಯವಾಗಿ ಎಲ್ಲೆಯನ್ನು ಮೀರಿದುದಾಗಿದ್ದಿತು ಇಂದ್ರಿಯಗಳು ಬುದ್ಧಿಗೆಟ್ಟವನನ್ನು ಪೀಡಿಸುವಂತೆ, ಐದುಮಂದಿ ಉಪಪಾಂಡವರೂ ಆ ಕೃಪನನ್ನು ಬಾಣದಿಂದ ನೋಯಿಸಿದರು ಕೃಪನು ಆ ಐದುಮಂದಿಗೂ ಪ್ರತಿಯಾಗಿ ತನ್ನ ಪೌರುಷವನ್ನು ತೋರಿಸುತ್ತಿದ್ದನು ಚೇತನನಿಗೆ ಇಂದ್ರಿಯಗಳೊಡನೆ ಮೇರೆಮೀರಿದ ಉದ್ರೇಕದಿಂದ ಹೋರಾಟವು ನಡೆಯುವಂತೆ, ಅವರಿಗೆ ದುರ್ನಿವಾರ್ಯವಾದ ಯುದ್ಧವು ನಡೆಯಿತು ಅದಲ್ಲದೆ ಅಲ್ಲಲ್ಲಿ ಕಾಲಾಳುಗಳಿಗೆ ಕಾಲಾಳುಗಳೊಡನೆಯೂ, ಕುದುರೆಗಳಿಗೆ ಕುದುರಗಳೊಡನೆಯೂ ಪ್ರಬಲಯುದ್ಧವು ನಡೆಯುತ್ತಿದ್ದುವು "ಆಹಾ! ಇದಾಶ್ಚರ್ಯವು! ಇದು ಭಯಂಕರವು! ಇದು ಮಹಾಘೋರವು!" ಎಂದು ನೋಡುವವರು ಆಶ್ಚರ್ಯಪಡುವಂತೆ ಅಲ್ಲಲ್ಲಿ ಭಯಂಕರಗಳಾದ ಅನೇಕಯುದ್ಧಗಳು ನಡೆಯುತ್ತಿದ್ದುವು ಆ ದೊಂಬಿಯ ಜಗಳದಲ್ಲಿ ಒಬ್ಬರನ್ನೊಬ್ಬರು ಇದಿರಿಸಿ ಮೇಲೆ ಬೀಳುವರು! ಒಬ್ಬರನ್ನೊಬ್ಬರು ಹೊಡೆಯುವರು! ಆಗಾಗ ಸಿಂಹನಾದ ಮಾಡುವರು! ಆಗ ಆ ಸೈನಿಕರ ವಾಹನಗಳಿಂದ ಮೇಲೆದ್ದ ಧೂಳಿಯು

ಗಗನಾಂಗಣವನ್ನೆಲ್ಲ ವ್ಯಾಪಿಸಿತು ಗಾಳಿಯ ರಭಸದಿಂದಲೂ, ಕುದುರೆಗಳ ಓಡಾಟದಿಂದಲೂ, ರಥಚಕ್ರಗಳ ಹೊರಳುವಿಕೆಯಿಂದಲೂ, ಆನೆಗಳ ಉಸಿರಿನ ಗಾಳಿಯಿಂದಲೂ ಪ್ರಬಲವಾಗಿ ವ್ಯಾಪಿಸಿದ ಆ ಸೇನಾಧೂಳಿಯು ಸಂಧ್ಯಾಕಾಲದ ಮೇಘದಂತೆ ಕೆಂಪಾಗಿ ಆಕಾಶವನ್ನೆಲ್ಲ ಮರೆಸಿತು ಅದರಿಂದ ಸೂರ್ಯನೂ ಕಾಂತಿಹೀನನಾದಂತೆ ಕಾಣಿಸಿದನು ರಣಭೂಮಿಯೆಲ್ಲವೂ ಅಲ್ಲಿದ್ದ ಯೋಧರೊಡನೆ ಆ ಧೂಳಿನಿಂದ ಮರಸಲ್ಪಟ್ಟಿತು ಆದರೆ ಸ್ವಲ್ಪಹೊತ್ತಿನಲ್ಲಿಯೇ ಆ ಭಯಂಕರವಾದ ಧೂಳಿಯು ರಕ್ತಸ್ರಾವದಿಂದ ಶಾಂತವಾಗಿ ಎಲ್ಲವೂ ಪ್ರಕಾಶಕ್ಕೆ ಬರುವಂತಾಯಿತು ತಿರುಗಿ ದ್ವಂದ್ವಯುದ್ಧವು ಆರಂಭವಾಯಿತು ಅವರವರು ತಮ್ಮತಮ್ಮ ಅಂತಸ್ತಿಗೂ, ಶಕ್ತಿಗೂ ತಕ್ಕಂತೆ ಹೋರಾಡಿದರು ನಡುಹಗಲಿನಲ್ಲಿ ಭಯಂಕರಯುದ್ಧವು ನಡೆಯುತ್ತಿತ್ತು ಕವಚಗಳ ಉಜ್ವಲಕಾಂತಿಗಳು ಥಳಥಳಿಸುತಿದ್ದುವು ಬೆಂಕಿಹಿಡಿದ ಬಿದಿರುಮೆಳೆಗಳಿಂದ ಹೊರಡುವ ಧ್ವನಿಯಂತೆ ಹಾರಾಡುವ ಬಾಣಗಳ ಧ್ವನಿಯು ಎಲ್ಲಾ ಕಡೆಯನ್ನೂ ಆವರಿಸಿತು

ಇದು ಇಪ್ಪತ್ತೊಂದನೆಯ ಅಧ್ಯಾಯವು



 ಸಂಕುಲಯುದ್ಧವು 

ರಾಜಾ ! ಕೇಳು ! ಹೀಗೆ ಭಯಂಕರವಾದ ಘೋರಯುದ್ಧವು ನಡಯುತ್ತಿರುವಾಗ, ಸ್ವಲ್ಪಹೊತ್ತಿನೊಳಗಾಗಿಯೇ ತಿರುಗಿ ನಿನ್ನ ಸೈನ್ಯವು ಪಾಂಡವರಿಂದ ಭಗ್ನವಾಗಿ ಚದರಿಹೋಗಲಾರಂಭಿಸಿತು ಇಷ್ಟರಲ್ಲಿ ಮಹಾರಥರಾದ ನಿನ್ನ ಮಕ್ಕಳು ಆ ಸೈನ್ಯಗಳನ್ನೆಲ್ಲ ಬಹಳ ಪ್ರಯತ್ನದಿಂದ ಹಿಂತಿರುಗಿಸಿ, ತಿರುಗಿ ಪಾಂಡವರ ಸೇನೆಯೊಡನೆ ಯುದ್ಧಕ್ಕೆ ನಿಲ್ಲಿಸಿದರು ಅವರು ಹಿಂತಿರುಗಿಬಂದಮೇಲೆ ತಿರುಗಿ ನಿನ್ನವರಿಗೂ, ಪಾಂಡವರಿಗೂ ದೇವಾಸುರಯುದ್ಧಕ್ಕೆ ಸಮಾನವಾದ ದಾರುಣಯುದ್ಧಕ್ಕೆ ಮೊದಲಾಯಿತು ಉಭಯಪಕ್ಷದಲ್ಲಿಯೂ ಒಬ್ಬನಾದರೂ ಹಿಮ್ಮೆಟ್ಟಲಿಲ್ಲ ಆ ದೊಂಬಿಯುದ್ಧದಲ್ಲಿ ಒಬ್ಬರನ್ನೊಬ್ಬರು ಚೆನ್ನಾಗಿ ತಿಳಿಯಲಾರದೆ, ಅನುಮಾನದಿಂದಲೂ, ಸಂಕೇತದಿಂದಲೂ ಹೊಡೆದಾಡುತಿದ್ದರು ಇಷ್ಟರಲ್ಲಿ ಯುಧಿ

ಷ್ಠಿರನು ಮಹಾಕ್ರೋಶಗೊಂಡವನಾಗಿ ನಿನ್ನವರನ್ನೂ, ನಿನ್ನ ಕಡೆಯ ರಾಜಸಮೂಹವನ್ನೂ ಹೇಗಾದರೂ ಜಯಿಸಬೇಕೆಂಬ ಹಟದಿಂದ ತನ್ನ ಮುಂದಿದ್ದ ಕೃಪನನ್ನು ಮೂರು ಬಾಣಗಳಿಂದ ಹೊಡೆದನು ಕೃತವರ್ಮನ ನಾಲ್ಕು ರಥಾಶ್ವಗಳನ್ನೂ ನಾಲ್ಕು ಬಾಣಗಳಿಂದ ಕೊಂದನು ಒಡನೆಯೇ ಅಶ್ವತ್ಥಾಮನು ವಿರಥನಾಗಿದ್ದ ಕೃತವರ್ಮನನ್ನು ತನ್ನ ರಥಕ್ಕೇರಿಸಿ ಕೊಂಡು ರಣರಂಗದಿಂದ ಹಿಂತಿರುಗಿಸಿಬಿಟ್ಟನು. ಆಮೇಲೆ ಕೃಪನು ತನ್ನನ್ನು ಹೊಡೆದ ಧರ್ಮರಾಜನನ್ನ ತಾನೂ ಎಂಟು ಬಾಣಗಳಿಂದ ಹೊಡೆದನು ಇಷ್ಟರಲ್ಲಿ ದುರ್ಯೋಧನನು ಏಳುನೂರು ರಥಿಕರನ್ನು ಸೇರಿಸಿ, ಯುಧಿಷ್ಠಿರನನ್ನಿದಿರಿಸುವುದಕ್ಕಾಗಿ ಅವನಲ್ಲಿಗೆ ಕಳುಹಿಸಿದನು ಆ ರಥಿಕರಲ್ಲರೂ ಮನೋವಾಯುವೇಗವುಳ್ಳ ರಥಗಳನ್ನು ಬಿಟ್ಟುಕೊಂಡು ಧರ್ಮರಾಜನ ರಥಕ್ಕಿದಿರಾಗಿ ಹೊರಟರು ಅವರೆಲ್ಲರೂ ಯುಧಿಷ್ಠಿರ ನನ್ನು ಸುತ್ತಲೂ ಆವರಿಸಿಕೊಂಡು ಮೇಘಗಳು ಸೂರ್ಯನನ್ನು ಮರಸು ವಂತೆ ತಮ್ಮ ಬಾಣಗಳಿಂದ ಅವನನ್ನು ಕಣ್ಣಿಗೆ ಕಾಣಿಸದಂತೆ ಮುಚ್ಚಿಬಿ ಟ್ಟರು ಧರ್ಮರಾಜನಿಗುಂಟಾದ ಈ ಸ್ಥಿತಿಯನ್ನು ನೋಡಿ ಸಹಿಸಲಾ ರದೆ ಶಿಖಂಡಿ ಮೊದಲಾದ ರಥಿಕರು ಒಳ್ಳೇ ಉತ್ತಮಾಶ್ವಗಳಲ್ಲಿ ಹೂಡಿ, ಕಿರುಗೆಜ್ಜೆಗಳಿಂದ ಅಲಂಕೃತಗಳಾದ ತಮ್ಮ ರಥಗಳನ್ನು ವೇಗದಿಂದ ಬಿಟ್ಟುಕೊಂಡು ಧರ್ಮರಾಜನ ರಕ್ಷಣೆಗಾಗಿ ಓಡಿಬಂದರು ಒಡನೆಯೇ ಕೌರವರಿಗೂ, ಪಾಂಡವರಿಗೂ ರಕ್ತಪ್ರವಾಹಜನಕವಾದ ಘೋರಯುದ್ಧ ವು ನಡೆಯಿತು ಸ್ವಲ್ಪಹೊತ್ತಿನಲ್ಲಿಯೇ ಪಾಂಡವರೂ, ಪಾಂಚಾಲರೂ ಸೇರಿ ತಮ್ಮ ವಧಕ್ಕಾಗಿ ಬಂದ ಆ ಕೌರವಪಕ್ಷದ ಏಳುನೂರು ರಥಗಳನ್ನೂ ಧ್ವಂಸಮಾಡಿ, ಉಳಿದವರನ್ನೂ ಇದಿರಿಸಿ ಹೊಡೆಯುತ್ತಬಂದರು ರಾಜಾ! ಆಗ ನಿನ್ನ ಮಗನೊಡನೆ ಪಾಂಡವರಿಗೆ ನಡೆದ ಯುದ್ಧದಂತೆ ಪ್ರಬಲ ವಾದ ಯುದ್ಧವನ್ನು ನಾವು ಹಿಂದೆ ಯಾವಾಗಲೂ ಕಂಡುದೂ ಇಲ್ಲ! ಕೇಳಿಯೂ ಇಲ್ಲ! ನಾನಾಕಡೆಗಳಲ್ಲಿ ಕಟ್ಟುಕಟ್ಟಲೆಗಳೇನೂ ಇಲ್ಲದ ಪ್ರಬಲ ಯುದ್ಧವು ನಡೆಯುತಿದ್ದಿತು ಉಭಯಪಕ್ಷದಲ್ಲಿಯೂ ಸಿಕ್ಕಿದ ವರು ಸಿಕ್ಕಿದವರನ್ನು ಕೊಲೆಮಾಡುತಿದ್ದರು ಆಗ ಎಲ್ಲ ನೋಡಿದರೂ ಯೋಧರ ಕೂಗಾಟಗಳು! ಶಂಖಧ್ವನಿಗಳು! ಪ್ರಬಲವಾದ ಸಿಂಹನಾದ

ಗಳು! ಧನುರ್ಧಾರಿಗಳ ಗರ್ಜನೆಗಳು ! ಇವೆಲ್ಲ ಪ್ರಬಲವಾದುವು. ಅನೇಕ ಯೋಧರ ಕವಚಗಳು ಹರಿದುವು ಜಯಾತುರದಿಂದಿದ್ದ ಯೋಧರೆಲ್ಲರೂ ಬದುಕಿದರ ಸಾಕೆಂದು ಓಡುತಿದ್ದರು ಲೋಕವನ್ನೆಲ್ಲ ಮರುಗಿಸುವ ಕೊಲೆಗಳು ನಡೆದುವು ಉತ್ತಮಸ್ತ್ರೀಯರನೇಕರಿಗೆ ಬೈತಲೆಗಳನ್ನು ತಿದ್ದುವ ಕೆಲಸವು ಮುಗಿಯಿತು. (ವಿಧವೆಯರಾದರು) ವೀರಮರ್ಯಾದೆಗಳೇನೂ ಇಲ್ಲದ ಭಯಂಕರವಾದ ಆ ದೊಂಬಿಯುದ್ಧವು ನಡೆಯುತ್ತಿರುವಾಗಲೇ, ಅಲ್ಲಲ್ಲಿ ವಿನಾಶಸೂಚಕಗಳಾದ ಮಹೋತ್ಪಾತಕಗಳು ಗೋಚರಿಸತೊಡಗಿದುವು ಭೂಮಿಯು ದೊಡ್ಡ ಶಬ್ದದೊಡನೆ ಪರ್ವತಾರಣ್ಯಸಹಿತವಾಗಿ ನಡುಗಿತು ದಂಡಾಕಾರವಾದ ಕೊಳ್ಳಿಗಳಿಂದ ಕೂಡಿ, ನಾನಾ ಕಡೆಗೆ ಕಿಡಿಗಳನ್ನೆರಚುತ್ತ ಸೂರ್ಯಬಿಂಬವನ್ನು ಭೇದಿಸಿಕೊಂಡು ಆಕಾಶದಿಂದ ಉಲ್ಕೆಗಳು ಕೆಳಗೆ ಬಿದ್ದುವು ಮರಳನ್ನೆರಚುವ ಬಿರುಗಾಳಿಯು ನಾನಾಕಡೆಗಳಿಂದ ಬೀಸತೊಡಗಿತು ಸೈನ್ಯದಲ್ಲಿರುವ ಆನೆಗಳು ಕಣ್ಣೀರನ್ನು ಬಿಟ್ಟು ನಡುಗುತಿದ್ದುವು ಇಷ್ಟು ಉತ್ಪಾತಗಳು ಕಾಣುತ್ತಿದ್ದರೂ, ಅಲ್ಲಿ ನೆರದ ಕ್ಷತ್ರಿಯರು ಆವೊಂದನ್ನೂ ಲಕ್ಷ್ಯಮಾಡದೆ, ಸ್ಥಿರಮನಸ್ಸಿನಿಂದ ತಿರುಗಿ ಯುದ್ಧಕ್ಕೆ ಅಣಿಯಾದರು ಪವಿತ್ರವಾದ ಮತ್ತು ರಮಣೀಯವಾದ ಆ ಕುರುಕ್ಷೇತ್ರದಲ್ಲಿಯೇ ಯುದ್ಧದಲ್ಲಿ ದೇಹತ್ಯಾಗಮಾಡಿ, ವೀರಸ್ವರ್ಗವನ್ನು ಹೊಂದಬೇಕೆಂಬ ಸಂಕಲ್ಪವು ಅವರಲ್ಲರಿಗೂ ಹುಟ್ಟಿತು ಈ ಸಮಯದಲ್ಲಿ ಶಕುನಿಯು ತನ್ನ ಕಡೆಯ ಸೈನಿಕರನ್ನು ಕುರಿತು “ನೀವು ಮುಂದುಗಡೆಯಲ್ಲಿ ಹೋಗಿ ಯುದ್ಧಮಾಡಿರಿ! ನಾನು ಹಿಂಭಾಗದಿಂದ ಪಾಂಡವರನ್ನು ಕೊಲ್ಲುವೆನು” ಎಂದನು ಇದನ್ನು ಕೇಳಿ ಮದ್ರವೀರರು ಸಂತೋಷಕೋಲಾಹಲದಿಂದ ಹೊರಟರು ಶತ್ರುಗಳೂ ಪ್ರತಿಯಾಗಿ ಸಿಂಹನಾದಮಾಡಿದರು ಅಸ್ತ್ರವಿದ್ಯಾನಿಪುಣರಾದ ನಮ್ಮ ಶತ್ರುಗಳು ಬಿಲ್ಲುಗಳನ್ನೊದರುತ್ತ, ಮದ್ರಸೈನ್ಯದಮೇಲೆ ಬಾಣವರ್ಷಗಳನ್ನು ಕರೆದರು ಈ ಬಾಣವರ್ಷದಲ್ಲಿ ಸಿಕ್ಕಿ ಸಾಯುತ್ತಿರುವ ಮದ್ರಸೈನ್ಯಗಳನ್ನು ನೋಡಿ ದುರ್ಯೋಧನನ ಸೈನ್ಯವು ತಿರುಗಿ ಭಯಪಟ್ಟು ಹಿಂತಿರುಗಿ ಓಡಲಾರಂಭಿಸಿತು ಇದನ್ನು ನೋಡಿ ಶಕುನಿಯು ಅವರನ್ನು ಕುರಿತು “ಅಯ್ಯೋ! ಇದೇನಿದು? ಸ್ವಧರ್ಮವನ್ನು ತಿಳಿಯದೆ ಈಗ ಓಡಿಹೋಗುವುದರಿಂದ

ನಿಮಗೆ ಫಲವೇನು? ಹಿಂತಿರುಗಿರಿ'' ಎಂದು ಕೂಗಿ ಕರೆದನು ಆ ಶಕುನಿಯ ಕೈಕೆಳಗೆ ಈಟಿಗಳಿಂದ ಯುದ್ಧಮಾಡತಕ್ಕ ಹತ್ತುಸಾವಿರ ಕುದುರೆಗಳ ಸೈನ್ಯಗಳಿದ್ದುವು ಆ ಸೈನ್ಯವು ಪಾಂಡವರೊಡನೆ ಮುಂದೆ ನಿಂತು ಯುದ್ಧಮಾಡುತ್ತಿತ್ತು ಅನೇಕರು ಆ ಯುದ್ಧದಲ್ಲಿ ಸಾಯುತ್ತಿದ್ದರು ಇದೇ ಸಮಯದಲ್ಲಿ ಹಿಂದುಗಡೆಯಿಂದ ಗಾಂಧಾರದೇಶದರಸರಲ್ಲ ಶಕುನಿಯೊಡನೆ ಸೇರಿ ಪಾಂಡವರನ್ನು ತೀಕ್ಷ್ಣಬಾಣಗಳಿಂದ ಹೊಡೆಯುತ್ತಿದ್ದರು ಹೀಗೆ ಶತ್ರುಗಳ ನಡುವೆ ಸಿಕ್ಕಿದ ಪಾಂಡವರ ದೊಡ್ಡ ಸೈನ್ಯವು, ಬಿರುಗಾಳಿಗೆ ಸಿಕ್ಕಿದ ಮೇಘದಂತೆ ಕಟ್ಟೊಡೆದು ಚದರಲಾರಂಭಿಸಿತು ಆಗ ಧರ್ಮರಾಜನು ತನ್ನ ಸೈನ್ಯವು ಭಗ್ನವಾದುದನ್ನು ನೋಡಿ, ಸಹದೇವನನ್ನು ಕರೆದು "ವತ್ಸ! ದುರ್ಬುದ್ಧಿಯುಳ್ಳ ಶಕುನಿಯು ನಮ್ಮ ಹಿಂದೆ ನಿಂತು ನಮ್ಮ ಸೈನ್ಯವನ್ನು ನಾಶಮಾಡುತ್ತಿರುವನು ನೋಡಿದೆಯಾ? ನೀನು ಈಗಲೇ ದ್ರೌಪದಿಯ ಮಕ್ಕಳೊಡನೆ ಹೋಗಿ ಆ ಶಕುನಿಯನ್ನು ವಧಿಸುವ ಪ್ರಯತ್ನವನ್ನು ಮಾಡು ನಾನು ಧೃಷ್ಟದ್ಯುಮ್ನನೊಡನೆ ಸೇರಿ ಈ ರಥಸೈನ್ಯವನ್ನು ಧ್ವಂಸಮಾಡುವೆನು ನೀನು ಎಲ್ಲಾ ಗಜತುರಗಸೈನ್ಯಗಳನ್ನೂ, ಮೂರುಸಾವಿರಮಂದಿ ಪದಾತಿಗಳನ್ನೂ ಸಹಾಯಕ್ಕೆ ಕರದುಕೊಂಡುಹೋಗಿ ಆ ಶಕುನಿಯನ್ನು ಕೊಲ್ಲು'' ಎಂದನು ಅದರಂತೆಯೇ ಧನುರ್ಧಾರಿಗಳಾದ ಯೋಧರಿಂದಕೂಡಿದ ಏಳುನೂರು ಆನೆಗಳೂ, ಐದುಸಾವಿರ ಕುದುರಯ ಸೈನ್ಯಗಳೂ, ಮೂರುಸಾವಿರ ಕಾಲಾಳುಗಳೂ ಹೊರಡಲು ಸಿದ್ಧವಾದುವು ಸಹದೇವನು ಆ ಸೈನ್ಯಗಳನ್ನೂ, ಉಪಪಾಂಡವರನ್ನೂ ಕರೆದುಕೊಂಡು ಶಕುನಿಯಿದ್ದಲ್ಲಿಗೆ ಹೊರಟನು ಜಯದಲ್ಲಿ ಆತುರಗೊಂಡವನಾದ ಶಕುನಿಯು, ಪಾಂಡವರನ್ನಿದಿರಿಸಿ ಹೊಡೆಯುತ್ತ, ಅವರನ್ನೂ ದಾಟಿ ಮುಂದಿದ್ದ ಸೈನ್ಯವನ್ನು ಹಿಂದಿನಿಂದಲೇ ಹೊಡೆದು ಕೊಲ್ಲುತ್ತಿದ್ದನು ಆಗ ಪಾಂಡವರ ಪಕ್ಷದ ಅಶ್ವವೀರರೂ ತಮ್ಮ ಮುಂದಿದ್ದ ರಥಿಕರನ್ನು ದಾಟಿ, ಶಕುನಿಯ ಸೈನ್ಯದಲ್ಲಿ ಪ್ರವೇಶಿಸಿ ರಣರಂಗದ ನಡುವೆ ನಿಂತು ಶಸ್ತ್ರಗಳಿಂದ ಹೊಡೆಯಲಾರಂಭಿಸಿದರು ಗದೆಗಳು, ಪ್ರಾಸಗಳು, ಮುಂತಾದ ಆಯುಧಗಳನ್ನು ಹಿಡಿದು ಎಲ್ಲರೂ ತಮ್ಮ ಪೌರುಷಕ್ಕೆ ತಕ್ಕಂತೆ ಯುದ್ಧಮಾಡಿದರು ರಾಜಾ! ನಿನ್ನ ದುರ್ಯೋಧನೆ

ಯ ಫಲವಾಗಿ ಅಂತಹ ಪ್ರಬಲಯುದ್ಧವು ಆರಂಭಿಸಿತು ರಥಿಕರೆಲ್ಲರೂ ಆ ಅಶ್ವಯುದ್ಧವನ್ನೇ ಸುಮ್ಮನೆ ನೋಡುತ್ತ ನಿಂತುದರಿಂದ, ಧನುಸ್ಸಿನ ಹೆದೆಯ ಶಬ್ದವೇ ಇಲ್ಲದಂತಾಯಿತು ಆ ಯುದ್ಧದಲ್ಲಿ ನಮ್ಮ ಅಥವಾ ಶತ್ರುಗಳ ಪರಾಕ್ರಮದಲ್ಲಿ ವಿಶೇಷವೇನೂ ತೋರಲಿಲ್ಲ ಶೂರರು ಬೀಸಿದ ಶಕ್ತಿಗಳು ನಕ್ಷತ್ರಗಳಂತೆ ಬೀಳುತಿದ್ದುವು ಅಲ್ಲಲ್ಲಿ ಹಾರಿ ಬೀಳುವ ಋಷ್ಟಿಗಳಿಂದ ಆಕಾಶವೆಲ್ಲವೂ ಮುಚ್ಚಿದಂತಾಯಿತು ಪ್ರಾಸಗಳು ಆಕಾಶದಲ್ಲಿ ಹಾರಾಡುವ ಶಲಭಸಮೂಹದಂತೆ ಅಸಂಖ್ಯಾತವಾಗಿ ಕಾಣಿಸುತಿದ್ದುವು ಎಷ್ಟೋ ಕುದುರಗಳು ರಾವುತರನ್ನು ಕಳೆದುಕೊಂಡು, ಮೈಯೆಲ್ಲಾ ರಕ್ತದಿಂದ ತೊಯ್ದು, ನೂರುಸಾವಿರಸಂಖ್ಯೆಯಿಂದ ಸತ್ತುಬಿಳುತಿದ್ದುವು ಅಶ್ವಸೈನ್ಯಗಳು ಒಂದರಮೇಲೊಂದು ಬಿದ್ದು ನಜ್ಜುಗುಜ್ಜಾಗಿ, ಬಾಯಿಂದ ರಕ್ತವನ್ನು ಕಾರುತ್ತಿದ್ದುವು ಇಷ್ಟರಲ್ಲಿಯೇ ಸೈನ್ಯದ ಧೂಳಿನಿಂದ ಸುತ್ತಲೂ ಭಯಂಕರವಾದ ಕತ್ತಲೆಯು ಕವಿಯಿತು ಒಡನೆಯೇ ಕೆಲವು ಕುದುರೆಗಳು ರಣರಂಗವನ್ನು ಬಿಟ್ಟು ಓಡುವುದನ್ನು ಕಂಡೆವು ಕೆಲವು ಮನುಷ್ಯರೂ ಕತ್ತಲೆಯಲ್ಲಿ ಕಣ್ಣುಕಾಣದೆ ಓಡುತ್ತಿದ್ದರು ಕೆಲವರು ರಕ್ತವನ್ನು ಕಾರುತ್ತ ನೆಲಕ್ಕೆ ಬಿದ್ದರು ಅಲ್ಲಲ್ಲಿ ಕೆಲವರು ಒಬ್ಬರ ತಲೆಕೂದಲನ್ನು ಮತ್ತೊಬ್ಬರು ಹಿಡಿದು, ಅಲ್ಲಾಡುವುದಕ್ಕೂ ಸಾಧ್ಯವಿಲ್ಲದೆ ಹೆಣಗಾಡುತ್ತಿದ್ದರು ಬೇರೆ ಕೆಲವರು ಕುದುರೆಯಮೇಲಿದ್ದವರನ್ನು ಕೆಳಕ್ಕೆಳೆದು, ಜಟ್ಟಿಗಳಂತೆ ಮಲ್ಲಯುದ್ಧದಿಂದ ಹೋರಾಡಿ, ಒಬ್ಬರನ್ನೊಬ್ಬರು ಕೊಲ್ಲುತಿದ್ದರು ಅನೇಕರು ಗತಪ್ರಾಣರಾಗಿ ತಮಗೆ ವಾಹನವಾದ ಕುದುರಗಳಿಂದಲೇ ಸಿಕ್ಕಿದಕಡಗೆ ಎಳೆದುಯ್ಯಲ್ಪಡುತಿದ್ದರು ಜಯಾಕಾಂಕ್ಷಿಗಳಾಗಿ ಬಂದವರನೇಕರು ಹತರಾಗಿ ನೆಲಕ್ಕೆ ಬಿದ್ದರು ತಾವೇ ಶೂರರೆಂಬ ಹೆಮ್ಮೆಯಿಂದ ಬಂದವರೆಷ್ಟೋಮಂದಿ ಆ ರಣರಂಗದಲ್ಲಿ ಗತಪ್ರಾಣರಾಗಿ ಬಿದ್ದಿದ್ದರು ಮೈಯೆಲ್ಲ ರಕ್ತದಿಂದ ತೊಯ್ದು, ತೋಳುಗಳು ಕತ್ತರಿಸಿ, ತಲೆಕೂದಲು ಕೆದರಿ ಬಿದ್ದಿದ್ದ ನೂರುಸಾವಿರ ಶವಗಳಿಂದ ನೆಲವೆಲ್ಲವೂ ಮರಸಿಹೋಗಿದ್ದಿತು ಅಲ್ಲಲ್ಲಿ ರಾವುತರೊಡನೆ ಸತ್ತುಬಿದ್ದ ಕುದುರೆಗಳಿಂದ ಭೂಮಿಯೆಲ್ಲವೂ ಆವರಿಸಲ್ಪಟ್ಟು, ಯಾವ ಕುದುರೆಗೂ ಅಲ್ಲಿ ಮುಂದೆ ನಡೆಯುವುದೇ ಅಸಾಧ್ಯವಾಯಿತು ರಕ್ತದಿಂದ ತೊಯ್ದು ಮೈಯೊಡನಯೇ

ಅನೇಕ ವೀರರು ಘೋರವಾದ ಹಲವು ಶಸ್ತ್ರಾಸ್ತ್ರಗಳಿಂದ ಒಬ್ಬರನ್ನೊಬ್ಬರು ಕೊಲ್ಲುವ ಪ್ರಯತ್ನದಲ್ಲಿ ಹೆಣಗಾಡುತಿದ್ದರು ಪ್ರಾಯಕವಾಗಿ ಅನೇಕ ವೀರರು ಪ್ರಾಣವನ್ನೊಪ್ಪಿಸಿದರು ಹೀಗೆ ಬಹಳ ಕಡಿದಾದ ಆ ಯುದ್ಧವು ಒಂದು ಮುಹೂರ್ತಕಾಲದವರಗೆ ನಡೆದಮೇಲೆ, ಶಕುನಿಯು ಸತ್ತುಳಿದ ತನ್ನ ಕಡೆಯ ಆರುಸಾವಿರ ಅಶ್ವಸೈನ್ಯಗಳೊಡನೆ ರಣಾಂಗಣವನ್ನು ಬಿಟ್ಟೋಡಿದನು ಹಾಗೆಯೇ ಇತ್ತಲಾಗಿ ಪಾಂಡವಸೈನ್ಯವೂಕೂಡ ರಕ್ತದಿಂದ ತೊಯ್ದು ಮೈಯೊಡನೆ, ಬಹಳ ಆಯಾಸಗೊಂಡು, ತಮ್ಮಲ್ಲಿ ಉಳಿದಿದ್ದ ಆರುಸಾವಿರ ಕುದುರೆಯ ಸೈನ್ಯಗಳೊಡನೆ ರಣಾಂಗಣದಿಂದ ಹಿಂತಿರುಗಿತು ಆ ಮಹಾಯುದ್ಧದಲ್ಲಿ ಪ್ರಾಣವನ್ನಾದರೂ ಲಕ್ಷ್ಯಮಾಡದೆ ಮುಂದೆ ಬಿದ್ದು ಹೋರಾಡಿದ ಯೋಧರು, ಬಾಣಹತಿಯಿಂದುಂಟಾದ ರಕ್ತಸ್ರಾವದೊಡನೆ ಹಿಂತಿರುಗಿ ಹೋಗುವಾಗ ತಮ್ಮೊಳಗೆ ತಾವು "ನಮಗೆ ರಥಗಳನ್ನಿದಿರಿಸುವುದೇ ಕಷ್ಟವಾಗಿದೆ ಇನ್ನು ಶತ್ರುಪಕ್ಷದ ಮಹಾ ಗಜಗಳೊಡನೆ ಯುದ್ಧಮಾಡುವುದು ಹೇಗೆ ಸಾಧ್ಯವು? ರಥಿಕರು ರಥಿಕರನ್ನೇ ಇದಿರಿಸಲಿ! ಆನೆಗಳು ಆನೆಗಳನ್ನೇ ಇದಿರಿಸಲಿ! ಆ ಶಕುನಿಯೇನೋ ಇಲ್ಲಿಂದ ಓಡಿಹೋಗಿ ತನ್ನ ಸೈನ್ಯದಲ್ಲಿ ಸೇರಿಕೊಂಡುಬಿಟ್ಟನು ಅವನು ತಿರುಗಿ ಈಗಲೇ ಯುದ್ಧಕ್ಕೆ ಬರುವ ಸಂಭವವಿಲ್ಲ" ಎಂದು ಹೇಳಿಕೊಳ್ಳುತ್ತ, ಉಪಪಾಂಡವರೊಡನೆಯೂ, ಮದಿಸಿದ ಕೆಲವು ಮಹಾ ಗಜಗಳೊಡನೆಯೂ ಧೃಷ್ಟದ್ಯುಮ್ನನಿದ್ದಲ್ಲಿಗೆ ಬಂದು ಸೇರಿದರು ಆಗ ಯುದ್ಧದಿಂದ ಹೊರಟ ಧೂಳಿಯು ಮೇಘದಂತೆ ಆಕಾಶವನ್ನೆಲ್ಲ ಮರಸಿತು ಸಹದೇವನು ಆಗ ತಾನೊಬ್ಬನೇ ಯುಧಿಷ್ಠಿರನಿದ್ದಲ್ಲಗೆ ಬಂದನು ಇವರೆಲ್ಲರೂ ಹೀಗೆ ಹಿಂತಿರುಗಿದಮೇಲೆ, ತಿರುಗಿ ಶಕುನಿಯು ಯುದ್ಧಸನ್ನಾಹದೊಡನೆ ಹೊರಟುಬಂದು, ಧೃಷ್ಟದ್ಯುಮ್ನನ ಸೈನ್ಯವನ್ನು ಒಂದು ಪಾರ್ಶ್ವದಿಂದ ಹೊಡೆಯಲಾರಂಭಿಸಿದನು ತಿರುಗಿ ದೊಡ್ಡ ಯುದ್ಧವು ಆರಂಭವಾಯಿತು ಉಭಯಪಕ್ಷದವರೂ ಪ್ರಾಣದಾಸೆಯನ್ನು ಬಿಟ್ಟು ಒಬ್ಬರನ್ನೊಬ್ಬರು ಕೊಲ್ಲಲು ಯತ್ನಿಸುತ್ತಿದ್ದರು ಅನೇಕವೀರರಿಂದ ತುಂಬಿದ ಆ ಯುದ್ಧಭೂಮಿಯಲ್ಲಿ ಒಬ್ಬರನ್ನೊಬ್ಬರು ಕೋಪದಿಂದ ನೋಡುವರು! ನೂರುಸಾವಿರ ಲೆಕ್ಕದಿಂದ ಯುದ್ಧವೀರರು ನಾನಾದಿಕ್ಕುಗಳಿಂದ ಬಂದು

ಮೇಲೆ ಬಿಳುವರು ಲೋಕಕ್ಷಯಕರವಾದ ಆ ಯುದ್ಧದಲ್ಲಿ ಖಡ್ಗದಿಂದ ಕತ್ತರಿಸಲ್ಪಟ್ಟ ಎಷ್ಟೋ ಯೋಧರ ರುಂಡಗಳು, ತಾಳೆಯ ಹಣ್ಣುಗಳು ಮರದಿಂದ ಬಿದ್ದಂತೆ ಭಯಂಕರವಾದ ಶಬ್ದದೊಡನೆ ಬೀಳುತ್ತಿದ್ದುವು. ಶಸ್ತ್ರದಿಂದ ತುಂಡಾಗಿ ಬಿದ್ದ ಶರೀರಗಳೂ, ಆಯುಧಸಹಿತವಾಗಿ ಕಡಿದು ಬಿದ್ದ ಕೈಗಳೂ, ಮುರಿದ ತೊಡೆಗಳೂ ಕೇಳುವವರಿಗೆ ಮೈಯಲ್ಲಿ ರೋಮಾಂಚವು ಹುಟ್ಟುವಂತೆ ಕಟಕಟಧ್ವನಿಯೊಡನೆ ನೆಲಕ್ಕೆ ಬೀಳುತ್ತಿದ್ದುವು ಒಡಹುಟ್ಟಿದವರಂದೂ, ಮಕ್ಕಳೆಂದೂ, ಮಿತ್ರರಂದೂ ನೋಡದೆ ಯುದ್ಧವೀರರು ಕ್ರೂರಶಸ್ತ್ರಗಳಿಂದ ಒಬ್ಬರನ್ನೊಬ್ಬರು ಕೊಲ್ಲುವುದಕ್ಕಾಗಿ ಪಕ್ಷಿಗಳು ಮಾಂಸಕ್ಕೆ ಆಸೆಪಟ್ಟು ಬರುವಂತೆ ನಾನಾದಿಕ್ಕುಗಳಿಂದ ಮೇಲೆಬಿದ್ದು ಬರುತ್ತಿದ್ದರು ಕೋಪದಿಂದ ಒಬ್ಬರನ್ನೊಬ್ಬರು ಇದಿರಿಸಿ, ನಾನು ತಾನೆಂದು ಮುಂದೆ ಬಿದ್ದು ಶತ್ರುಗಳನ್ನು ಸಾವಿರಲೆಕ್ಕದಿಂದ ಕೊಲ್ಲುತ್ತಿದ್ದರು ಕುದುರೆಗಳ ಗತಿವಿಶೇಷಗಳಲ್ಲಿ ರಾವುತರೆಷ್ಟೋ ಮಂದಿ ತಮ್ಮ ಕುದುರಗಳಿಂದ ಬಿದ್ದು ಪ್ರಾಣವನ್ನು ಕಳೆದುಕೊಂಡರು ಕುದುರಗಳೂ ನೂರುಸಾವಿರ ಲೆಕ್ಕದಿಂದ ಸತ್ತುಬಿಳುತಿದ್ದುವು ಶತ್ರುಗಳು ಮೇಲೆಬಿದ್ದು ಹೊಡೆಯುವುದರಿಂದ ಜರ್ಝರಿತದೇಹವುಳ್ಳ ಕುದುರೆಗಳ ಕೂಗುಗಳೂ, ಯುದ್ಧಸನ್ನದ್ಧರಾಗಿ ಬಂದ ಮನುಷ್ಯರ ಸಿಂಹನಾದಗಳೂ, ಪ್ರಾಸ, ಶಕ್ತಿ, ಋಷ್ಟಿ ಮೊದಲಾದ ಆಯುಧಗಳ ಶಬ್ದವೂ ಒಂದಾಗಿ ಭಯಂಕರಧ್ವನಿಯುಂಟಾಯಿತು ಓ ರಾಜಾ! ಇವೆಲ್ಲವೂ ನಿನ್ನ ದುರ್ಮಂತ್ರದಿಂದುಂಟಾದ ಫಲವೇ! ಇಷ್ಟರಲ್ಲಿ ಧನುರ್ಧಾರಿಗಳ ವೀರವಾದಗಳು ಪ್ರಬಲವಾದುವು ಆ ಯುದ್ಧದಿಂದ ನಿನ್ನವರನೇಕರಿಗೆ ಮೈಯಲ್ಲಿ ಗಾಯವಾಗಿ ಆಯಾಸವು ಹೆಚ್ಚಿತು ಮನಸ್ಸಿನಲ್ಲಿ ಕೋಪವೂ ಉಕ್ಕುತ್ತಿತ್ತು ಅವರ ವಾಹನಗಳೆಲ್ಲವೂ ಬಳಲಿಹೋದುವು ಅವರಿಗೂ ಬಾಯಾರಿ ಗಂಟಲೊಣಗಿತು ಈ ಸ್ಥಿತಿಯಲ್ಲಿಯೂ ಅವರು ಯುದ್ಧವನ್ನು ಬಿಟ್ಟು ಹಿಂಜರಿಯದೆ ಶತ್ರುಗಳನ್ನು ಇದಿರಿಸಿದರು ರಕ್ತದ ದುರ್ಗಂಧದಿಂದ ಮತ್ತೇರಿದ ಕೆಲವರಿಗೆ, ವಿವೇಕಜ್ಞಾನವು ತಪ್ಪಿ, ವೀರಾವೇಶದಿಂದ ಶತ್ರುಗಳೆಂದೂ, ತನ್ನವರಂದೂ ನೋಡದೆ ತನ್ನ ಮುಂದೆ ಬಂದವರನ್ನೆಲ್ಲ ಕೊಲ್ಲುತ್ತಿದ್ದರು ಅನೇಕ ಕ್ಷತ್ರಿಯರು ಬಾಣಹತರಾಗಿ ನೆಲಕ್ಕುರುಳಿದರು ಹದ್ದು, ನರಿ, ತೋಳ, ಮೊದಲಾದ ಮಾಂಸಾಹಾರಪ್ರಾಣಿ

ಗಳಿಗೆಲ್ಲ ಸಂಯೋಷಜನಕವಾದ ಆ ದಿನದ ಯುದ್ಧದಲ್ಲಿ, ನಿನ್ನ ಮಗನ ಕಣ್ಣೆದಿರಾಗಿಯೇ ಅವನ ಅನೇಕಸೈನ್ಯಗಳು ನಷ್ಟವಾದುವು ರಣಭೂಮಿಯೆಲ್ಲ ಆನೆಗಳ, ಕುದುರೆಗಳ, ಮತ್ತು ಮನುಷ್ಯರ ಮೃತಶರೀರದಿಂದ ತುಂಬಿ, ರಕ್ತಪ್ರವಾಹಮಯವಾಗಿ, ಭೀರುಗಳಿಗೆ ಭಯಜನಕವಾಗಿದ್ದಿತು ಇಷ್ಟಾದರೂ ನಿನ್ನವರೂ, ಪಾಂಡವರೂ, ಕತ್ತಿಗಳಿಂದಲೂ, ಪಟ್ಟಿಸಗಳಿಂದಲೂ, ಶೂಲಗಳಿಂದಲೂ ಒಬ್ಬರನ್ನೊಬ್ಬರು ಕಡಿಯುತ್ತಿದ್ದರೇ ಹೊರತು ಯಾರೂ ಹಿಂತಿರುಗಲಿಲ್ಲ ಬಾಯಿಂದ ರಕ್ತವು ಸುರಿಯುತಿದ್ದರೂ ಬಿಡದೆ ಅನೇಕ ಯೋಧರು ತಮ್ಮ ಪ್ರಾಣವಿರುವವರಗೂ ತಮ್ಮ ಶಕ್ತಿಯಿದ್ದವರಗೆ ಮೇಲೆಬಿದ್ದು ಹೊಡೆಯುತ್ತಿದ್ದರು ತಲೆಯಿಲ್ಲದ ಮುಂಡವುಕೂಡ ಒಂದು ಕೈಯಲ್ಲಿ ರಕ್ತದಿಂದ ತೊಯ್ದ ಖಡ್ಗವನ್ನು ಮೇಲೆತ್ತಿ ಹಿಡಿದು, ಮತ್ತೊಂದು ಕೈಯಿಂದ ಶತ್ರುವಿನ ರುಂಡದ ಕೂದಲುಗಳನ್ನು ಹಿಡಿದು ಕುಣಿದಾಡುತ್ತಿತ್ತು! ಹೀಗೆ ಎಷ್ಟೋ ಮುಂಡಗಳು ರಣರಂಗದಲ್ಲಿ ಮೇಲೆದ್ದು ಆಡುತ್ತಿದ್ದುವು ರಕ್ತದ ದುರ್ಗಂಧದಿಂದ ಅನೇಕಯೋಧರಿಗೆ ಪ್ರಜ್ಞೆ ತಪ್ಪಿದಂತಾಯಿತು ಆಮೇಲೆ ಆ ಯುದ್ಧದಿಂದುಂಟಾದ ಗದ್ದಲವು ಸ್ವಲ್ಪ ಶಾಂತವಾದಂತೆ ಕಂಡುಬಂದಿತು ಆಗಲೂ ಶಕುನಿಯು ಅಲ್ಪಾವಶಿಷ್ಟಗಳಾದ ತನ್ನ ಕುದುರೆಯ ಸೈನ್ಯಗಳೊಡನೆ ಪಾಂಡವರನ್ನಿದಿರಿಸಿ ಹೊಡೆಯಲಾರಂಭಿಸಿದನು ತಿರುಗಿ ಪಾಂಡವರು ಕೋಪದಿಂದ ಆನೆಗಳನ್ನೂ, ಕುದುರೆಗಳನ್ನೂ, ಕಾಲಾಳುಗಳನ್ನೂ ಸೇರಿಸಿಕೊಂಡು ಎಲ್ಲಾ ಶಸ್ತ್ರಸನ್ನಾಹಗಳೊಡನೆ ವೇಗದಿಂದ ಶಕುನಿಯನ್ನು ತಡೆದರು ಹೇಗಾದರೂ ಆ ದಿನವೇ ಯುದ್ಧವನ್ನು ಮುಗಿಸಬೇಕೆಂಬ ಆತುರದಿಂದ ಆ ಚತುರಂಗಸೈನ್ಯವೂ ಶಕುನಿಯನ್ನು ಸುತ್ತಲೂ ಆವರಿಸಿಕೊಂಡು, ಅವನನ್ನು ನಡುವೆ ಸೇರಿಸಿಕೊಂಡು ನಾಲ್ಕು ಕಡೆಗಳಿಂದಲೂ ವಿವಿಧ ಶಸ್ತ್ರಾಸ್ತ್ರಗಳಿಂದ ಹೊಡೆಯುತ್ತಿದ್ದರು ಹೀಗೆ ಸುತ್ತಿ ನಿಂತ ಪಾಂಡವರನ್ನು ನೋಡಿ ನಿನ್ನ ಕಡೆಯ ಚತುರಂಗಸೈನ್ಯಗಳೂ ಹಿಂಜರಿಯದೆ ಅವರನ್ನಿದಿರಿಸಿದುವು ಕೆಲವು ಮಂದಿ ಕಾಲಾಳುಗಳು ತಮ್ಮಲ್ಲಿದ್ದ ಶಸ್ತ್ರಗಳೆಲ್ಲ ಕ್ಷೀಣವಾಗಲು ಒಬ್ಬರಿಗೊಬ್ಬರು ಕಾಲುಗಳಿಂದಲೂ, ಮುಷ್ಟಿಗಳಿಂದಲೂ ಹೊಡೆದಾಡಿ ಕೊನೆಗೆ ಸತ್ತು ನೆಲಕ್ಕೆ ಬೀಳುತ್ತಿದ್ದರು ಪುಣ್ಯಕ್ಷಯವಾದಮೇಲೆ ಸ್ವರ್ಗವಿಮಾನಗಳಿಂದ ಬೀಳುವ

ಸಿದ್ಧರಂತೆ ರಥಗಳಿಂದ ಕಥಿಕರೂ, ಆನೆಗಳಿಂದ ಮಾವುತರೂ, ಕುದುರೆಗಳಿಂದ ರಾವುತರೂ ಕೆಳಗೆ ಬೀಳುತಿದ್ದರು ಹೀಗೆ ಆ ಯುದ್ಧದಲ್ಲಿ ಉಭಯ ಪಕ್ಷದ ಸೈನಿಕರೂ ತಂದೆಗಳೆಂದೂ, ಸಹೋದರರೆಂದೂ, ಮಿತ್ರರಂದೂ, ಮಕ್ಕಳೆಂದೂ ನೋಡದೆ ಹೊಡೆದು ಕೊಲ್ಲುತ್ತಿದ್ದರು ಹೀಗೆ ಮೇರೆಯಿಲ್ಲದ ಯುದ್ಧವು ನಡೆಯಿತು ಪ್ರಾಸಗಳೂ, ಕತ್ತಿಗಳೂ, ಬಾಣಗಳೂ ಎಲ್ಲೆಲ್ಲಿಯೂ ತುಂಬಿಹೋದುವು

ಇದು ಇಪ್ಪತ್ತೆರಡನೆಯ ಅಧ್ಯಾಯವು



{ ಅರ್ಜುನನು ಕೃಷ್ಣನೊಡನ ದುರ್ಯೋದನನನ್ನು ನಿಂದಿಸುತ್ತ ಅವನ ಸೇನೆಯನ್ನು ಜಯಿಸಿದುದು }

ಧೃತರಾಷ್ಟ್ರಮಹಾರಾಜಾ! ನಿನ್ನ ಕಡೆಯ ಸೈನ್ಯವೆಲ್ಲ ಬಹಳಮಟ್ಟಿಗೆ ಪಾಂಡವರಿಂದ ಹತವಾಗಿ, ಸ್ವಲ್ಪಮಾತ್ರವೇ ಉಳಿದಿದ್ದಾಗ, ಶಕುನಿಯು ಏಳುಸಾವಿರ ಕುದುರಯ ಸೈನ್ಯದೊಡನೆ ಯುದ್ಧಕ್ಕೆ ಹೊರಟನು ಹೀಗೆ ತನ್ನ ಸೈನ್ಯವನ್ನು ನಡೆಸಿಕೊಂಡು ಅವರನ್ನೆಲ್ಲ 'ಹೋರಡಿರಿ! ಯುದ್ಧ ಮಾಡಿರಿ!' ಎಂದು ಯುದ್ಧಕ್ಕಾಗಿ ಪ್ರೋತ್ಸಾಹಗೊಳಿಸುತ್ತಿದ್ದನು. ಆಮೇಲೆ ತನ್ನ ಮುಂದಿದ್ದ ಕೆಲವು ಕ್ಷತ್ರಿಯರನ್ನು ನೋಡಿ 'ನಮ್ಮ ರಾಜನಾದ ದುರ್ಯೋಧನನೆಲ್ಲಿ?' ಎಂದನು ಅದಕ್ಕವರು 'ಅದೋ! ಕೌರವರಾಜನು ಯುದ್ಧಮಧ್ಯದಲ್ಲಿರುವನು ಅದೋ! ಪೂರ್ಣಚಂದ್ರನಿಗೆಣೆಯಾದ ದೊಡ್ಡ ಶ್ವೇತಚ್ಛತ್ರವು ಕಾಣುವುದು ನೋಡು ಯುದ್ಧಸನ್ನದ್ಧರಾದ ಅನೇಕರಥಿಕರು ಕವಚಧಾರಿಗಳಾಗಿ ಗುಂಪುಗೂಡಿರುವುದನ್ನು ನೋಡು ಮೇಘಧ್ವನಿಯಂತೆ ದೊಡ್ಡ ಧ್ವನಿಯು ಕೇಳಿಸುತ್ತಿರುವುದಲ್ಲವೆ? ಅಲ್ಲಿಯೇ ನಮ್ಮ ಕೌರವರಾಜನಿರುವನು ಅಲ್ಲಿಗೆ ಹೋದರೆ ನೀನು ಅವನನ್ನು ನೋಡಬಹುದು' ಎಂದರು ಈ ಮಾತನ್ನು ಕೇಳಿದೊಡನೆಯೇ ಶಕುನಿಯು ವಿಚಿತ್ರಯೋಧಿಗಳಾದ ಕೆಲವು ವೀರರಿಂದ ಪರಿವೃತನಾಗಿ, ನಿನ್ನ ಮಗನಿದ್ದ ಸ್ಥಳಕ್ಕೆ ಹೋದನು. ಅಲ್ಲಿ ರಥಸೈನ್ಯದ

ನಡುವೆ ಇದ್ದ ದುರ್ಯೋಧನನನ್ನು ಕಂಡು, ಅವನ ಸುತ್ತಲೂ ಇದ್ದ ರಥಿಕರನ್ನೆಲ್ಲ ಯುದ್ಧಕ್ಕೆ ಪ್ರೋತ್ಸಾಹಗೊಳಿಸುತ್ತ, ಯುದ್ಧದಲ್ಲಿ ತಾನು ಕೃತಕೃತ್ಯನಾಗಿ ಬಂದವನಂತೆ ದುರ್ಯೋಧನನ ಮುಂದೆ ಸಂತೋಷ ವನ್ನೂ ತೋರಿಸುತ್ತ ಹೀಗೆಂದು ಹೇಳುವನು "ರಾಜೇಂದ್ರಾ! ಇನ್ನು ನೀನು ನಿನ್ನ ಸರ್ವಪ್ರಯತ್ನದಿಂದ ಪಾಂಡವರ ರಥಸೈನ್ಯಗಳನ್ನು ಕೊಲ್ಲ ಬೇಕು ನಾನು ಅಶ್ವಸೈನ್ಯಗಳನ್ನೆಲ್ಲ ಆಗಲೇ ಜಯಿಸಿ ಬಂದೆನು ನಮ್ಮ ಪ್ರಾಣವನ್ನು ಲಕ್ಷಿಸದೆ ಯುದ್ಧಮಾಡಿದಹೊರತು ಯುಧಿಷ್ಠಿರನನ್ನು ಜಯಿ ಸುವುದು ಸಾಧ್ಯವಲ್ಲ ಆ ಪಾಂಡವನಿಂದ ರಕ್ಷಿತವಾದ ರಥಸೈನ್ಯವನ್ನು ಕೊಂದೊಡನೆ, ಗಜಸೈನ್ಯಗಳನ್ನೂ, ಪದಾತಿಸೈನ್ಯವನ್ನೂ, ಇತರರನ್ನೂ ಸುಲಭವಾಗಿ ಕೊಲ್ಲಬಹುದು" ಎಂದನು ಈ ಮಾತನ್ನು ಕೇಳಿದೊಡನೆ ನಿನ್ನವರಲ್ಲರೂ ಜಯೋತ್ಸಾಹದಿಂದ ಖಡ್ಗಗಳನ್ನೂ, ಧನುಸ್ಸುಗಳನ್ನೂ ಕೈಗೆತ್ತಿಕೊಂಡು, ಬಿಲ್ಲುಗಳನ್ನು ಮಿಡಿಯುತ್ತ ಸಿಂಹನಾದಗಳೊಡನೆ ಪಾಂಡ ವಸೈನ್ಯವನ್ನು ಪ್ರವೇಶಿಸಿದರು ತಿರುಗಿ ಆ ರಣರಂಗದಲ್ಲ ನಾಣನ್ನು ತಟ್ಟು ವ ಧ್ವನಿಯೂ, ಬಾಣಪಾತಧ್ವನಿಯೂ ಪ್ರಬಲವಾಯಿತು ಹೀಗೆ ನಿನ್ನ ವರು ಧನುರ್ಧಾರಿಗಳಾಗಿ ಇದಿರಿಸಿ ಬರುತ್ತಿರುವುದನ್ನು ನೋಡಿ ಅರ್ಜುನನು ಸಾರಥಿಯಾದ ಕೃಷ್ಣನನ್ನು ಕುರಿತು "ಕೃಷ್ಣಾ! ನೀನು ಸಾವಧಾನ ದಿಂದ ಕುದುರೆಗಳನ್ನು ತಟ್ಟಿ ಬಿಡು ನಮ್ಮ ರಥವನ್ನು ಸಮುದ್ರದಂತಿ ರುವ ಆ ಸೇನಾಮಧ್ಯಕ್ಕೆ ನಡೆಸು ಈಗಲೇ ಶತ್ರುಗಳನ್ನು ನನ್ನ ಬಾಣಗ ಳಿಂದ ಕೊನೆಮುಟ್ಟಿಸುವೆನು ನಾವು ಯುದ್ಧವನ್ನಾರಂಭಿಸಿ ಇಂದಿಗೆ ಹದಿ ನೆಂಟು ದಿನಗಳಾದುವು ಮಹಾಬಲವುಳ್ಳ ಶತ್ರುವೀರರ ಸೇನೆಯು ಮೊದ ಲು ಅಪಾರವಾಗಿದ್ದು ಈಗ ಬಹಳಮಟ್ಟಿಗೆ ನಾಶಹೊಂದಿತು ಆಹಾ! ದೈವಗತಿಯು ಎಂತದೋ ನೋಡು! ಮೊದಲು ಅಪಾರಸಮುದ್ರದಂತಿದ್ದ ದುರ್ಯೋಧನನ ಸೇನೆಯು, ನಮ್ಮನ್ನಿದಿರಿಸಿ, ಈಗ ಕ್ಷೀಣಪ್ರಾಯವಾಗಿ ಹಸುವಿನ ಹಜ್ಜೆಯ ಹಳ್ಳಕ್ಕೆ ಸಮಾನವಾಯಿತು ನಾವು ಮೊದಲು ಭೀಷ್ಮ ನನ್ನು ಕೊಂದೊಡನೆಯೇ ಯುದ್ಧವು ನಿಂತು, ಶಾಂತಿಯುಂಟಾಗುವು ದೆಂದು ಎಣಿಸಿದ್ದೆನು. ಮೂರ್ಖನಾದ ದುರ್ಯೋಧನನೋ ಅದರಂತೆ ನಡೆ ಸದೆ ಹೋದನು ಮೂಢಬುದ್ಧಿಯುಳ್ಳ ಆತನು ಭೀಷ್ಮನು ತನಗೆ

ಹೇಳಿದ ಹಿತವೂ, ಸತ್ಯವೂ ಆದ ಮಾತುಗಳನ್ನು ಕೇಳದೆಹೋದನು ಕೌರವರಿಗೆಲ್ಲ ಪ್ರಭುವಾಗಿಯೂ, ಮಹಾರಥನಾಗಿಯೂ ಇದ್ದ ಆ ಭೀಷ್ಮನು ಹತನಾದಮೇಲೆಯೂ ಈ ಮೂಢರು ಯಾವ ಕಾರಣವನ್ನು ಹಿಡಿದು ಯುದ್ಧವನ್ನು ಮುಂದುವರಿಸಿದರೋ ತಿಳಿಯಲಿಲ್ಲ? ಮುಖ್ಯವಾಗಿ ಆ ಧೃತರಾಷ್ಟ್ರಪುತ್ರರಲ್ಲರೂ ವಿವೇಚನೆಯಿಲ್ಲದವರೆಂದೇ ನನಗೆ ತೋರುವುದು ಭೀಷ್ಮನು ಬಿದ್ದುಹೋದಮೇಲೆಯೂ ಈ ಮೂಢರು ಜಯದಾಸೆಯಿಂದ ಯುದ್ಧಕ್ಕೆ ನಿಂತರಲ್ಲವೆ? ಅದಲ್ಲದೆ, ಬ್ರಹ್ಮವಿತ್ತುಗಳಲ್ಲಿ ಮೇಲೆನಿಸಿದ ಆ ದ್ರೋಣಾಚಾರ್ಯನೂ, ಮಹಾಪರಾಕ್ರಮಿಯೆನಿಸಿದ ಕರ್ಣನೂ, ವಿಕರ್ಣನೂ ಯುದ್ಧದಲ್ಲಿ ಸತ್ತರು ಇನ್ನಾದರೂ ಆ ಕೌರವರ ಯುದ್ಧಪ್ರಯತ್ನವು ಶಾಂತವಾಗಲಿಲ್ಲ ಈಗ ಕೌರವರ ಕಡೆಯಲ್ಲಿ ಸೈನ್ಯವು ಅತಿಸ್ವಲ್ಪವಾಗಿರುವುದು ವೀರಶ್ರೇಷ್ಠನಾದ ಆ ಕರ್ಣನೂ ತನ್ನ ಮಗನೊಡನೆ ಸತ್ತನು ಇಷ್ಟಾದರೂ ಆ ದುರ್ಯೋಧನನಿಗೆ ಯುದ್ಧದಾಸೆಯು ತೀರಲಿಲ್ಲ ಹಾಗೆಯೇ ವೀರನಾದ ಶ್ರುತಾಯುವೂ, ಮಗಧರಾಜನಾದ ಜಲಸಂಧನೂ, ಶ್ರುತಾಯುಧನೆಂಬ ರಾಜನೂ ಪ್ರಾಣವನ್ನು ಬಿಟ್ಟರೂ, ಇನ್ನೂ ಅವನ ಯುದ್ಧವು ಶಾಂತವಾಗಲಿಲ್ಲ! ಭೂರಿಶ್ರವಸ್ಸೂ, ಶಲ್ಯನೂ, ಸಾಲ್ವನೂ, ವೀರರಾದ ಅವಂತಿರಾಜರೂ ಸತ್ತಮೇಲೆಯೂ ಇನ್ನೂ ಈ ಯುದ್ಧವು ಶಾಂತವಾಗಲಿಲ್ಲ! ಜಯದ್ರಥನು ಸತ್ತನು! ಅಲಾಯುಧನೆಂಬ ರಾಕ್ಷಸನು ಹತನಾದನು! ಬಾಹ್ಲಿಕನೂ, ಸೋಮದತ್ತನೂ ಸತ್ತರು! ಇನ್ನೂ ದುರ್ಯೋಧನನಿಗೆ ಯುದ್ಧದಾಸೆಯು ತೀರಲಿಲ್ಲ! ಶೂರನಾದ ಭಗದತ್ತನೂ, ಭಯಂಕರನಾದ ಕಾಂಭೋಜನೂ, ಬಲಾಢ್ಯನಾದ ದುಶ್ಯಾಸನನೂ ತಮ್ಮ ಪ್ರಾಣಗಳನ್ನೊಪ್ಪಿಸಿದಮೇಲೆಯೂ ಇನ್ನೂ ದುರ್ಯೋಧನನಿಗೆ ಯುದ್ಧದಾಸೆಯು ತೀರಲಿಲ್ಲ! ಶೂರರೂ, ಮಂಡಲಾಧಿಪತಿಗಳೂ, ಬಲಾಢ್ಯರೂ ಆದ ಅನೇಕ ಕ್ಷತ್ರಿಯರು ಸತ್ತುದನ್ನು ನೋಡಿಯೂ ದುರ್ಯೋಧನನಿಗೆ ಯುದ್ಧದಾಸೆಯು ತೀರಲಿಲ್ಲ ಅಕ್ಷೌಹಿಣೀಪತಿಗಳಾದ ಅನೇಕರಾಜರು ಭೀಮನಿಂದ ಕೊಲ್ಲಲ್ಪಟ್ಟುದನ್ನು ನೋಡಿಯೂ ದುರ್ಯೋಧನನ ಅಜ್ಞಾನದಿಂದಲೋ, ಲೋಭದಿಂದಲೋ ಇನ್ನೂ ಆ ಯುದ್ಧದ ಅನರ್ಥವು ಅಡಗಲಿಲ್ಲ ಸೈನ್ಯದಲ್ಲಿದ್ದ ಉತ್ತಮವೀರರೆಲ್ಲರೂ ಹತರಾಗಿ, ಅವರ ಸೈನ್ಯವೆಲ್ಲವೂ ಕ್ಷೀಣಪ್ರಾ

ಯುವಾಯಿತು ಅಲಂಬುಸನೆಂಬ ವೀರನು ಸತ್ತಮೇಲೆಯೂ ಇನ್ನೂ ಯುದ್ಧವು ತೀರಲಿಲ್ಲ ಆ ದುರ್ಯೋಧನನಿಗೆ ತನ್ನ ಸಹೋದರರು, ವಯಸ್ಯರು, ಮಾವಂದಿರು, ಮಕ್ಕಳು, ಇವರಲ್ಲರೂ ಯುದ್ಧದಲ್ಲಿ ಸತ್ತುದನ್ನು ನೋಡಿಯೂ ಇನ್ನೂ ಈ ಕೊಲೆಗೆಲಸದಲ್ಲಿ ತೃಪ್ತಿಯಿಲ್ಲದಂತಿದೆ ಕೃಷ್ಣಾ! ಉತ್ತಮರಾಜಕುಲದಲ್ಲಿ, ಅದರಲ್ಲಿಯೂ ಪ್ರಸಿದ್ಧವಾದ ಕೌರವಕುಲದಲ್ಲಿ ಹುಟ್ಟಿದವನು ಈ ದುರ್ಯೋಧನನು ಹೊರತು ಬೇರೆ ಯಾವನುತಾನೇ ನಿಷ್ಪ್ರಯೋಜನವಾದ ಇಂತಹ ಮಹಾವೈರಕಾರ್ಯವನ್ನು ಸಾಧಿಸುವನು? ವಿವೇಕಿಯಾಗಿದ್ದ ಯಾವನುತಾನೇ ತನಗಿಂತಲೂ ಗುಣದಲ್ಲಿಯೂ, ಶೌರ್ಯದಲ್ಲಿಯೂ, ಬಲದಲ್ಲಿಯೂ ಮೇಲಾದವರೂಡನೆ ವಿರೋಧಿಸಿ ಇಂತಹ ಅನರ್ಥಕಾರ್ಯಗಳನ್ನು ತಂದುಕೊಳ್ಳುವನು ತನ್ನ ಹಿತಾಹಿತಗಳಲ್ಲಿ ದೃಷ್ಟಿಯುಳ್ಳವನಾರೂ ಹೀಗೆ ಪ್ರವರ್ತಿಸಲಾರನು ಕೃಷ್ಣಾ! ಪಾಂಡವರೂಡನ ಸಂಧಿಯನ್ನು ಮಾಡಿಕೊಳ್ಳಬೇಕೆಂದು ನೀನು ಅವನಿಗೆ ಹಿತವಾದಗಳನ್ನು ಹೇಳಿದಾಗಲೂ ಅವನ ಮನಸ್ಸು ಹೇಗಿತ್ತೆಂದು ಬಲ್ಲೆಯಲ್ಲವೆ? ಹೀಗಿರುವಾಗ ಬೇರ ಯಾರ ಮಾತನ್ನುತಾನೇ ಅವನು ಕೇಳುವನು? ಮಹಾತ್ಮನಾದ ಭೀಷ್ಮನೂ, ದ್ರೋಣನೂ, ವಿದುರನೂ ತನಗೆ ಹಿತವಾದಗಳನ್ನು ಹೇಳಿದಾಗ, ಅವರನ್ನೆಲ್ಲ ತಿರಸ್ಕರಿಸಿದ ಆ ದುರ್ಯೋಧನನಿಗೆ ಬೇರೆ ಔಷಧವೇನಿದೆ? ಆ ದುರ್ಯೋಧನನು ತನ್ನ ಮೂರ್ಖತನದಿಂದ ತನಗೆ ಹಿತವಾದವನ್ನು ಹೇಳಿದ ವೃದ್ಧನಾದ ತಂದೆಯನ್ನೂ, ಹೆತ್ತ ತಾಯಿಯನ್ನೂ ಅನೇಕಾವರ್ತಿ ನಿರಾಕರಿಸಿದನಲ್ಲವೆ? ಅಂತವನಿಗೆ ಬೇರ ಯಾರ ಮಾತುತಾನೇ ರುಚಿಸುವುದು? ಓ ಜನಾರ್ದನಾ! ಕೌರವಕುಲನಾಶಕ್ಕಾಗಿಯೇ ಅವನು ಹುಟ್ಟಿರುವನು ಅವನ ವ್ಯಾಪಾರವೂ, ಅವನ ರೀತಿಯೂ ಅದೇ ದಾರಿಯಲ್ಲಿ ಹೋಗುತ್ತಿರುವುದು ಅವನೇನೋ ನಮಗೆ ರಾಜ್ಯವನ್ನು ಕೊಡುವಹಾಗಿಲ್ಲ ಆ ದುರ್ಯೋಧನನು ತನ್ನ ಪ್ರಾಣವಿರುವವರೆಗೂ ನಮ್ಮ ಭಾಗವನ್ನು ಕೊಡುವವನಲ್ಲವೆಂದು ಮಹಾತ್ಮನಾದ ವಿದುರನು ಹಿಂದೆ ಎಷ್ಟೋ ಸಾರಿ ನನಗೆ ಹೇಳಿಯೇ ಇದ್ದನು ಮತ್ತು ಅವನು ನನ್ನೊಡನೆ ‘ದುರ್ಬುದ್ಧಿಯುಳ್ಳ ಆ ಧಾರ್ತರಾಷ್ಟ್ರನ ದೇಹದಲ್ಲಿ ಉಸಿರಾಡುತ್ತಿರುವವರೆಗೂ ಅವನು ನಿರಪರಾಧಿಗಳಾದ ನಿಮಗೆ ಕೇಡನ್ನೇ ಮಾಡು

ತ್ತಿರುವನು. ಅವನನ್ನು ಯುದ್ಧದಿಂದ ಹೊರತು ಬೇರೆ ವಿಧದಿಂದ ಅಡಗಿ ಸುವುದಕ್ಕೇ ಸಾಧ್ಯವಿಲ್ಲ' ಎಂದು ನನಗೆ ಎಷ್ಟೋಸಾರಿ ಹೇಳಿರುವನು ಸತ್ಯದರ್ಶಿಯಾದ ಆ ವಿದುರನು ಹೇಳಿದ ರೀತಿಯಲ್ಲಿಯೇ ದುರಾತ್ಮನಾದ ಈ ದುರ್ಯೋಧನನ ಪ್ರಯತ್ನಗಳೆಲ್ಲವೂ ನಡೆಯುತ್ತಿವೆ ಹಿಂದೆ ಪರಶುರಾಮನು ಹೇಳಿದ ಹಿತವಾದವನ್ನು ಕೂಡ ಕೇಳದೆ ನಿರಾಕರಿಸಿದ ಆ ದುರ್ಯೋಧನನಿಗೆ ನಿಜವಾಗಿಯೂ ನಾಶವು ಸಮೀಪಿಸಿದೆ ಆ ದುರ್ಯೋಧನನು ಹುಟ್ಟಿದ ಕಾಲದಲ್ಲಿಯೇ ಅವನ ಲಕ್ಷಣಗಳನ್ನು ನೋಡಿ ಅನೇಕ ಸಿದ್ಧರು 'ಇವನಿಂದ ಕ್ಷತ್ರಿಯಕುಲವೆಲ್ಲ ನಾಶವಾಗುವುದು' ಎಂದು ಹೇಳಿದರು ಈಗ ಎಲ್ಲವೂ ಅದರಂತೆಯೇ ನಡೆಯುತ್ತಿರುವುದು ಈ ದುರ್ಯೋಧನನಿಗಾಗಿ ಅನೇಕ ಕ್ಷತ್ರಿಯರು ಯುದ್ಧದಲ್ಲಿ ಹತರಾದರು ಇನ್ನು ಉಳಿದವರನ್ನೂ ಈಗಿನ ಯುದ್ಧದಲ್ಲಿ ನಾನು ತೀರಿಸಿಬಿಡುವೆನು ಕ್ಷತ್ರಿಯರೆಲ್ಲರೂ ಹತರಾಗಿ, ತನ್ನ ಶಿಬಿರವೆಲ್ಲವೂ ಶೂನ್ಯಪ್ರಾಯವಾದಮೇಲೆಯೂ ಇವನು ತನ್ನ ವಧವನ್ನುದ್ದೇಶಿಸಿ, ನಮ್ಮೊಡನೆ ಯುದ್ಧಕ್ಕೆ ಬಾರದೆ ಬಿಡನು ಆಗಲೇ ಇವನ ವೈರವು ಕೊನೆಮುಟ್ಟುವುದೆಂದು ನನ್ನ ಮನಸ್ಸಿಗೆ ತೋರುವುದು ಕೃಷ್ಣಾ! ನನ್ನ ಸ್ವಬುದ್ಧಿಯಿಂದಲೂ, ವಿದುರನ ವಾಕ್ಯದಿಂದಲೂ, ದುರಾತ್ಮನಾದ ಆ ದುರ್ಯೋಧನನ ಪ್ರಯತ್ನದಿಂದಲೂ ಇವೆಲ್ಲ ಹೀಗೆಯೇ ನಡೆಯುವುದೆಂದು ಚೆನ್ನಾಗಿ ತೋರಿದೆ ಆದುದರಿಂದ ರಥವನ್ನು ಮುಂದೆ ಬಿಟ್ಟು ಶತ್ರುಸೈನ್ಯವನ್ನು ಸಮೀಪಿಸು ದುರ್ಯೋಧನನನ್ನೂ, ದುರ್ಬಲವಾದ ಅವನ ಸೈನ್ಯವನ್ನೂ ಕೊಂದು, ನಮ್ಮಣ್ಣನಾದ ಧರ್ಮರಾಜನಿಗೆ ಈದಿನವೇ ಕ್ಷೇಮವನ್ನುಂಟುಮಾಡುವೆನು'' ಎಂದನು

ರಾಜೇಂದ್ರಾ! ಕುದುರೆಯ ಹಗ್ಗವನ್ನು ಕೈಯಲ್ಲಿ ಹಿಡಿದಿದ್ದಹಾಗೆಯೇ ಕೃಷ್ಣನು ಈ ಮಾತುಗಳನ್ನೆಲ್ಲ ಕೇಳಿ, ರಥವನ್ನು ಮುಂದೆ ಬಿಟ್ಟುಕೊಂಡು ಶತ್ರುಸೈನ್ಯವನ್ನು ಪ್ರವೇಶಿಸಿದನು ಶಕ್ತಿಗಳೆಂಬ ಮುಳ್ಳುಗಳಿಂದಲೂ, ಗದೆ ಮತ್ತು ಪರಿಘಗಳೆಂಬ ಕಲ್ಲುಬಂಡೆಗಳಿಂದಲೂ, ರಥಗಜಗಳೆಂಬ ದೊಡ್ಡದೊಡ್ಡ ಮರಗಳಿಂದಲೂ, ಕುದುರೆಗಳು ಮತ್ತು ಕಾಲಾಳುಗಳೆಂಬ ಬಳ್ಳಿಗಳಿಂದಲೂ ತುಂಬಿದ ಧನುರ್ಧಾರಿಗಳ ಸೈನ್ಯವೆಂಬ ಮಹಾ

ರಣ್ಯವನ್ನು ಪ್ರವೇಶಿಸಿ ಕೃಷ್ಣನು ಎತ್ತಿದ ಧ್ವಜವುಳ್ಳ ತನ್ನ ರಥವನ್ನು ನಿರಂಕುಶವಾಗಿ ನಡೆಸುತ್ತಿದ್ದನು ಅರ್ಜುನಾಧಿಷ್ಠಿತವಾಗಿ, ಕೃಷ್ಣನಿಂದ ನಡೆಸಲ್ಪಡುತ್ತಿದ್ದ ಆ ರಥವೇ ಎಲ್ಲಾ ಕಡೆಗಳಲ್ಲಿಯೂ ಕಾಣಿಸುತ್ತಿತ್ತು ಆ ರಥವನ್ನೇರಿ ಸವ್ಯಸಾಚಿಯು ಮೇಘವು ಮಳೆಯನ್ನು ಕರೆಯುವಂತೆ ನೂರಾರುಬಾಣಗಳನ್ನು ಕರಯುತಿದ್ದನು ಅರ್ಜುನನು ಬಿಟ್ಟ ಬಾಣಗಳ ಶಬ್ದವೇ ರಣರಂಗವನ್ನೆಲ್ಲ ಆವರಿಸಿತು ಗಾಂಡೀವಪ್ರೇರಿತಗಳಾದ ಅರ್ಜುನನ ಬಾಣಗಳು ವಜ್ರದಂತೆ ವೇಗವುಳ್ಳವುಗಳಾಗಿ, ಶತ್ರುಗಳ ಕವಚಗಳನ್ನು ತಡೆಯಿಲ್ಲದೆ ಭೇದಿಸಿಕೊಂಡುಹೋಗಿ ನೆಲದಲ್ಲಿ ನಾಟುತ್ತಿದ್ದುವು ಅರ್ಜುನನ ಬಾಣಗಳು ಪತಂಗದ ಹುಳುಗಳಂತೆ ಆಕಾಶವನ್ನೆಲ್ಲ ವ್ಯಾಪಿಸಿ, ಮಹಾಘೋಷದಿಂದ ಹೊರಟು, ಆನೆಗಳನ್ನೂ, ಕುದುರೆಗಳನ್ನೂ, ಪದಾತಿಗಳನ್ನೂ ಕೊಂದು ಕೆಡಹುತ್ತಿದ್ದುವು ದಿಕ್ಕು ವಿದಿಕ್ಕುಗಳೆಲ್ಲ ಗಾಂಡೀವಪ್ರೇರಿತಗಳಾದ ಬಾಣಗಳಿಂದಲೇ ತುಂಬಿ ಯಾವುದೂ ಕಾಣದಂತಾಯಿತು ಅರ್ಜುನನ ನಾಮಾಕ್ಷರಗಳಿಂದ ಕೆತ್ತಿದ ಚಿನ್ನದ ಹಿಡಿಯುಳ್ಳ ಬಾಣಗಳೇ ಎಲ್ಲೆಲ್ಲಿಯೂ ಕಾಣಿಸುತ್ತಿದ್ದುವು ಶತ್ರುಸೈನ್ಯಗಳೆಲ್ಲವೂ ಅಗ್ನಿಯಿಂದ ದಹಿಸಲ್ಪಡುವ ಆನೆಗಳಂತೆ ಅರ್ಜುನನ ಬಾಣಾಗ್ನಿಯಿಂದ ದಹಿಸಲ್ಪಡುತಿದ್ದುವು. ಆದರೂ ಆ ಶತ್ರುಗಳು ಅರ್ಜುನನನ್ನು ಬಿಟ್ಟು ಕದಲಲಿಲ್ಲ ಜ್ವಲಿಸುವ ಸೂರ್ಯನಂತೆ ಅರ್ಜುನನು ಧನುರ್ಬಾಣಗಳನ್ನು ಧರಿಸಿ, ಅಗ್ನಿಯು ಒಣಗಿದ ಪೊದೆಯನ್ನು ಸುಡುವಂತೆ, ಶತ್ರುಸೈನಿಕರನ್ನು ದಹಿಸುತ್ತಿದ್ದನು ಕಾಡನ್ನು ಕಾಯುವವರು ಒಣಗಿದ ಕಾಡಿಗೆ ಬೆಂಕಿಯಿಟ್ಟು ಉರಿಸುವಂತೆ, ಅರ್ಜುನನು ತನ್ನ ಬಾಣಾಗ್ನಿಯಿಂದ ನಿನ್ನ ಮಗನ ಸೈನ್ಯವನ್ನೆಲ್ಲ ದಹಿಸುತ್ತಿದ್ದನು ಪ್ರಾಣವನ್ನು ನೀಗಿಸತಕ್ಕ ಅವನ ಬಾಣಗಳು ಶತ್ರುಗಳ ದೃಢವಾದ ಉಕ್ಕಿನ ಕವಚಗಳಲ್ಲಿಯೂ ತಡೆಬಡೆಯಿಲ್ಲದೆ ಪ್ರವೇಶಿಸಿ ಯುದ್ಧವೀರರನ್ನು ಕೊಲ್ಲುತ್ತಿದ್ದುವು. ಅರ್ಜುನನು ಒಂದೊಂದು ಆನೆಯನ್ನಾಗಲಿ, ಮನುಷ್ಯನನ್ನಾಗಲಿ, ಕುದುರೆಯನ್ನಾಗಲಿ ಕೊಲ್ಲುವುದಕ್ಕಾಗಿ ಒಂದೇಒಂದು ಬಾಣವನ್ನಲ್ಲದೆ ಎರಡನೆಯ ಬಾಣವನ್ನು ಬಿಡಬೇಕಾದ ಸಂಭವವೇ ಇರುತ್ತಿರಲಿಲ್ಲ ಆ ಅರ್ಜುನನೊಬ್ಬನೇ ವಿಚಿತ್ರರೂಪವುಳ್ಳ ವಿವಿಧಬಾಣಗಳಿಂದ ಮಹಾರಥರ ಸೈನ್ಯವನ್ನು ಪ್ರವೇಶಿಸಿ,

ವಜ್ರಪಾಣಿಯಾದ ದೇವೇಂದ್ರನು ದೈತ್ಯರನ್ನು ಹೇಗೋ ಹಾಗೆ ನಿನ್ನವರನ್ನೆಲ್ಲ ಕೊಲ್ಲುತ್ತಬಂದನು

ಇದು ಇಪ್ಪತ್ತುಮೂರನೆಯ ಅಧ್ಯಾಯವು

ದುರ್ಯೋಧನನು ಧೃಷ್ಟದ್ಯುಮ್ನನಿಂದ ಪರಾಜಿತನಾಗಿ ಕುದುರೆಯನ್ನೇರಿ ಪಲಾಯನ ಮಾಡಿದುದು ಅಶ್ವತ್ಥಾಮಾದಿಗಳು ಅವನನ್ನು ಹುಡುಕಿದುದು

ರಾಜಾ! ಕೇಳು! ಆಗ ಅರ್ಜುನನು ತನ್ನನ್ನು ಕೊಲ್ಲದೆ ಹಿಂತಿರುಗುವುದಿಲ್ಲವೆಂಬ ದೃಢಸಂಕಲ್ಪದಿಂದ ಬಂದ ಶತ್ರುವೀರರ ಪ್ರಯತ್ನಗಳನ್ನೆಲ್ಲ ತನ್ನ ಗಾಂಡೀವದಿಂದ ವಿಫಲಮಾಡಿದನು ಸಿಡಿಲಿಗೆ ಸಮಾನಗಳಾಗಿಯೂ, ತಡೆಯಲಸಾಧ್ಯಗಳಾಗಿಯೂ ಇರುವ ಬಾಣಗಳ ಮಳೆಯನ್ನು ಎಡೆಬಿಡದೆ ಶತ್ರುಗಳಮೇಲೆ ಸುರಿಸುತಿದ್ದನು ಈ ಬಾಣದ ಪೆಟ್ಟನ್ನು ತಡೆಯಲಾರದೆ ನಿನ್ನ ಸೈನ್ಯವು, ದುರ್ಯೋಧನನು ನೋಡುತ್ತಿದ್ದ ಹಾಗೆಯೇ ರಣರಂಗವನ್ನು ಬಿಟ್ಟೋಡಿತು ಭಯದಿಂದ ಆ ಸೈನಿಕರು ಪಿತೃಗಳನ್ನೂ, ಸಹೋದರರನ್ನೂ, ಮಿತ್ರರನ್ನೂ ಲಕ್ಷ್ಯಮಾಡದ ಅಲ್ಲಲ್ಲ ಬಿಟ್ಟು ತಾವು ಬದುಕಿದರ ಸಾಕೆಂದು ಪಲಾಯನಮಾಡಿದರು ಅಲ್ಲಲ್ಲ ಕುದುರಗಳು ಸತ್ತ ರಥಗಳು ಕೆಲವು! ಸಾರಥಿಯು ಸತ್ತ ರಥಗಳು ಕೆಲವು! ಅಚ್ಚು ಮುರಿದ ರಥಗಳು ಕೆಲವು! ಹಾಗೆಯೇ ಮೂಕಿ, ನೊಗ, ಚಕ್ರಗಳು, ಇವೆಲ್ಲ ತುಂಡಾಗಿ ಬಿದ್ದ ಯುದ್ಧರಥಗಳೆಷ್ಟೋ ಕಾಣಿಸುತಿದ್ದುವು ಕೆಲವರಿಗೆ ಬಾಣಗಳೆಲ್ಲ ತೀರಿಹೋಗಿ ಮುಂದೆ ಯುದ್ಧಕ್ಕೆ ಕೈಸಾಗದೆ ಓಡಿದರು ಕೆಲವರು ಬಾಣದಿಂದ ನೊಂದು ಓಡುತಿದ್ದರು ಕೆಲವರು ಗಾಯವೇನೂ ಇಲ್ಲದೆ ಕೇವಲ ಭಯದಿಂದ ಪಲಾಯನಮಾಡಿದರು ಕೆಲವರು ಪ್ರಾಯಕವಾಗಿ ತಮ್ಮ ಬಂಧುಗಳೆಲ್ಲ ಹತರಾದಮೇಲೆ, ತಮ್ಮ ಮಕ್ಕಳನ್ನಾದರೂ ಬದುಕಿಸಿಕೊಳ್ಳಬೇಕೆಂಬ ಆಸೆಯಿಂದ ಅವರನ್ನೆತ್ತಿಕೊಂಡು ಓಡಿದರು ಅಲ್ಲಲ್ಲಿ ಕೆಲವರು 'ಹಾ! ಜನಕಾ!' ಎಂದೂ, ಕೆಲವರು 'ವಯಸ್ಯಾ!' ಎಂದೂ, ತಮ್ಮ ಬಂಧುಗಳನ್ನೂ, ತಮ್ಮ ಸಹೋದರರನ್ನೂ, ತಮ್ಮ ಸಂಬಂಧಿ

ಗಳನ್ನೂ ಹೆಸರುಹಿಡಿದು ಕೂಗಿ ಚೋದಿಸುತ್ತಿದ್ದರು ಆಗ ಅರ್ಜುನನ ಬಾಣದಿಂದ ಬಹಳವಾಗಿ ಗಾಯಪಟ್ಟು ಅನೇಕ ಮಹಾರಥರು ಮೇಲುಸಿರು ತೆಗೆಯುತ್ತ ಓಡುತಿದ್ದರು ಅವರನ್ನು ಬೇರೆ ಕೆಲವರು ಸಮಾಧಾನಗೊಳಿಸಿ ತಮ್ಮ ರಥಕ್ಕೇರಿಸಿಕೊಂಡುಹೋಗಿ, ಅವರಿಗೆ ದಣಿವಾರಿಸಿ, ತಾವೂ ವಿಶ್ರಾಂತಿಯನ್ನು ತೆಗೆದುಕೊಂಡಮೇಲೆ ತಿರುಗಿ ಯುದ್ಧಕ್ಕಾಗಿ ಬರುತ್ತಿದ್ದರು ಯುದ್ಧದಲ್ಲಿ ಹೆಮ್ಮೆಯುಳ್ಳ ಕೆಲವರು ನಿನ್ನ ಮಗನ ಆಜ್ಞೆಗೆ ಬದ್ಧರಾಗಿ, ನೊಂದವರನ್ನು ಅಲ್ಲಲ್ಲಿಯೇ ಬಿಟ್ಟು ತಾವು ರಣರಂಗಕ್ಕೆ ಹಿಂತಿರುಗಿ ಬರುತಿದ್ದರು ಅಲ್ಲಲ್ಲಿ ಕೆಲವರು ಪಾನೀಯಗಳನ್ನು ಕುಡಿದು, ತಮ್ಮ ವಾಹನಗಳಿಗೂ ದಣಿವಾರಿಸಿ ಹಿಂತಿರುಗಿ ಬರುತಿದ್ದರು ಕೆಲವರು ಹೊಸ ಯುದ್ಧಕವಚಗಳನ್ನು ಧರಿಸಿಬರುತಿದ್ದರು ಕೆಲವರು ಗಾಯಪಟ್ಟ ಸಹೋದರರನ್ನೂ, ಕೆಲವರು ಮಕ್ಕಳನ್ನೂ, ಕೆಲವರು ಪಿತೃಗಳನ್ನೂ ಶಿಬಿರಕ್ಕೆ ಸಾಗಿಸಿ ಸಮಾಧಾನಗೊಳಿಸಿ ತಿರುಗಿ ಯುದ್ಧಕ್ಕೆ ಬರುತಿದ್ದರು ಅಲ್ಲಲ್ಲಿ ಕೆಲವರು ತಮ್ಮತಮ್ಮ ರಥಗಳನ್ನು ತಮ್ಮತಮ್ಮ ಅಂತಸ್ತಿಗೆ ತಕ್ಕಂತೆ ಸಿದ್ಧಪಡಿಸಿ ನಿಲ್ಲಿಸಿಕೊಂಡು, ಪಾಂಡವಸೈನ್ಯವನ್ನಾವರಿಸಿ ತಿರುಗಿ ಯುದ್ಧವನ್ನಾರಂಭಿಸಿದರು ಆ ವೀರರಲ್ಲರೂ ಬಿರುದಿನ ಕಿರುಗೆಜ್ಜೆಗಳಿಂದಲಂಕೃತರಾಗಿ ಪ್ರಕಾಶಿಸುತ್ತ, ತ್ರೈಲೋಕ್ಯವಿಜಯಕ್ಕಾಗಿ ದೇವತೆಗಳನ್ನಿದಿರಿಸಿದ ದೈತ್ಯರಂತೆ ಕಾಣಿಸುತ್ತಿದ್ದರು ಕೆಲವರು ಸುವರ್ಣಾಲಂಕೃತಗಳಾದ ರಥಗಳೊಡನೆ, ಪಾಂಡವಸೈನ್ಯದಲ್ಲಿ ಧೃಷ್ಟದ್ಯುಮ್ನನನ್ನಿದಿರಿಸುವುದಕ್ಕಾಗಿ ವೇಗದಿಂದ ಬಂದರು ಧೃಷ್ಟದ್ಯುಮ್ನನೂ, ಶಿಖಂಡಿಯೂ, ನಕುಲಪುತ್ರನಾದ ಶತಾನೀಕನೂ ಆ ರಥಸೈನ್ಯಕ್ಕಿದಿರಾದರು ಧೃಷ್ಟದ್ಯುಮ್ನನು ಮಹಾಕೋಪದಿಂದ ದೊಡ್ಡ ಸೈನ್ಯದೊಡನೆ ನಿನ್ನವರನ್ನು ಕೊಲ್ಲುತ್ತಬಂದನು ಆಗ ನಿನ್ನ ಮಗನು ಅವನನ್ನು ತಡೆಯುವುದಕ್ಕಾಗಿ ಅನೇಕ ಬಾಣಸಮೂಹಗಳನ್ನು ಬಿಟ್ಟನು ಆಗ ಧನುರ್ಧಾರಿಯಾದ ನಿನ್ನ ಮಗನು ಅತ್ಯಂತ ವೇಗವುಳ್ಳ ನಾರಾಚಗಳು, ಅರ್ಧನಾರಾಚಗಳು, ವತ್ಸದಂತಗಳು, ಮೊದಲಾಗಿ ಉತ್ತಮಶಿಲ್ಪಿಗಳಿಂದ ಸಂಸ್ಕರಿಸಲ್ಪಟ್ಟ ವಿವಿಧ ಬಾಣಗಳಿಂದ ಧೃಷ್ಟದ್ಯುಮ್ನನ ನಾಲ್ಕು ಕುದುರೆಗಳನ್ನು ಕೊಂದು, ಅವನ ತೋಳುಗಳಿಗೂ, ಎದೆಗೂ ಗುರಿಯಿಟ್ಟು ಬೇರೆ ಬಾಣಗಳನ್ನು ಪ್ರಯೋಗಿಸಿದನು

ಇದರಿಂದ ಧೃಷ್ಟದ್ಯುಮ್ನನು ಅಂಕುಶದಿಂದ ತಿವಿದ ಆನೆಯಂತೆ ಕೋಪಾವಿಷ್ಟನಾಗಿ, ನಿನ್ನ ಮಗನ ನಾಲ್ಕು ರಥಾಶ್ವಗಳನ್ನೂ ಕೊಂದು, ಒಂದು ಭಲ್ಲಾಯುಧದಿಂದ ಅವನ ಸಾರಥಿಯ ತಲೆಯನ್ನು ಕತ್ತರಿಸಿ ಕೆಡಹಿದನು ಒಡನೆಯೇ ದುರ್ಯೋಧನನು ಕುದುರೆಯ ಬೆನ್ನನ್ನೇರಿಕೊಂಡು ರಣರಂಗದಿಂದ ಹೊರಟುಬಿಟ್ಟನು ಹೀಗೆ ನಿನ್ನ ಮಗನು ಧೃಷ್ಟದ್ಯುಮ್ನನಿಂದ ತನ್ನ ರಥವು ಭಗ್ನವಾಗಿ, ತನ್ನ ಸೈನ್ಯವೂಕೂಡ ಕೈಸಾಗದೆ ಯುದ್ಧಕ್ಕೆ ವಿಮುಖವಾಗುತ್ತಿರುವುದನ್ನು ನೋಡಿ, ನೆಟ್ಟಗೆ ಶಕುನಿಯಿದ್ದಲ್ಲಿಗೆ ಓಡಿಬಂದನು. ಇಷ್ಟರಲ್ಲಿ ನಿನ್ನಕಡೆಯಲ್ಲಿದ್ದ ರಥಗಳೆಲ್ಲವೂ ಭಗ್ನವಾಗಲು, ಮೂರು ಸಾವಿರ ಆನೆಗಳು ರಥಿಕರಾಗಿದ್ದ ಪಾಂಡವರನ್ನೆಲ್ಲ ಸುತ್ತಲೂ ಆವರಿಸಿಕೊಂಡುವು ಈ ಗಜಸೈನ್ಯದಿಂದ ಆವರಿಸಲ್ಪಟ್ಟ ಐದುಮಂದಿ ಪಾಂಡವರೂ ನಕ್ಷತ್ರಗಳಿಂದ ಸುತ್ತಲ್ಪಟ್ಟ ಐದು ಗ್ರಹಗಳಂತೆ ಕಾಣುತ್ತಿದ್ದರು ಇಷ್ಟರಲ್ಲಿ ಮಹಾಬಾಹುವೂ, ಶಸ್ತ್ರಾಸ್ತ್ರಚತುರನೂ ಆದ ಅರ್ಜುನನು, ತನ್ನ ಶ್ವೇತಾಶ್ವಗಳುಳ್ಳ ರಥವನ್ನೇರಿದಹಾಗೆಯೇ, ಸುತ್ತಲೂ ಪರ್ವತಕ್ಕೆಣೆಯಾಗಿದ್ದ ಗಜಸೈನ್ಯವನ್ನೆಲ್ಲ ಇದಿರಿಸಿ, ಬಾಣಗಳಿಂದ ಹೊಡೆಯುತ್ತಬಂದನು. ಮಹಾರಾಜಾ! ಅರ್ಜುನನ ಒಂದೊಂದೇ ಬಾಣದಿಂದ ಎಷ್ಟೆಷ್ಟೋ ಆನೆಗಳು ಬಿದ್ದೂ, ಬೀಳುತ್ತಲೂ ಇರುವುದನ್ನು ನಾವು ನೋಡಿದೆವು ಇದೇ ಸಮಯದಲ್ಲ ಮದದಾನೆಗೆ ಸಾಟಿಯಾದ ಭೀಮನೂಕೂಡ, ತನ್ನ ದೊಡ್ಡ ಗದೆಯನ್ನು ಕೈಗೆತ್ತಿಕೊಂಡು, ರಥದಿಂದ ಕೆಳಕ್ಕೆ ಧುಮುಕಿ, ದಂಡಪಾಣಿಯಾದ ಯಮನಂತೆ ಕಾಣಿಸುತ್ತ, ಆ ಆನೆಗಳೆನ್ನೆಲ್ಲ ಬಡಿದು ಕೊಲ್ಲುತ್ತ ಬಂದನು ಹೀಗೆ ಭೀಮನು ಗದೆಯನ್ನೆತ್ತಿಕೊಂಡು ಬರುವುದನ್ನು ನೋಡಿದಾಗಲೇ, ನಿನ್ನ ಸೈನ್ಯವೆಲ್ಲವೂ ಹೆದರಿ ಭಯದಿಂದ ಮಲಮೂತ್ರಗಳನ್ನು ಸುರಿಸಿದುವು ಆ ವೃಕೋದರನು ಗದೆಯನ್ನು ಕೈಯಲ್ಲಿ ತೆಗೆದುಕೊಂಡೊಡನೆ ನಿನ್ನ ಸೈನ್ಯಗಳೆಲ್ಲವೂ ತತ್ತಳಿಸಿತು ಭೀಮನಿಂದ ಕುಂಭಸ್ಥಳದಲ್ಲಿ ಭೇದಿಸಲ್ಪಟ್ಟ ಎಷ್ಟೋ ಆನೆಗಳು ಸತ್ತುಬಿದ್ದುವು ಎಷ್ಟೋ ಆನೆಗಳು ಓಡಿಹೋಗುತ್ತಿದ್ದುವು ಓಡುತ್ತಿರುವಾಗಲೂ ಎಷ್ಟೋ ಆನೆಗಳು ಭೀಮನ ಗದೆಯಿಂದ ತಾಡಿತಗಳಾಗಿ, ಆರ್ತಸ್ವರದಿಂದ ಕೂಗುತ್ತ ರೆಕ್ಕೆ ಕಡಿದ ಪರ್ವತಗಳಂತೆ ಬೀಳುತಿದ್ದುವು. ಹೀಗೆ ಅಲ್ಲಲ್ಲಿ ತಲೆಯೊಡೆದು ಕೆಳಗೆ

ಬೀಳುತ್ತಲೂ, ಭಯದಿಂದೋಡುತ್ತಲೂ ಇರುವ ಆ ಆನೆಗಳ ಸ್ಥಿತಿಯನ್ನು ನೋಡಿ ನಿನ್ನ ಸೈನಿಕರಿಗೆ ಮತ್ತಷ್ಟು ಭಯವು ಹೆಚ್ಚಿತು ಇದೇ ಸಮಯ ದಲ್ಲಿ ಯುಧಿಷ್ಠಿರನೂ, ನಕುಲಸಹದೇವರೂ ತೀಕ್ಷ್ಣಬಾಣಗಳಿಂದ ಗಜ ಸೈನ್ಯಗಳನ್ನು ಕೊಲ್ಲುತ್ತ ಬಂದರು ಧೃಷ್ಟದ್ಯುಮ್ನನು ಹೀಗೆ ದುರ್ಯೋ ಧನನನ್ನು ಪೂರ್ಣವಾಗಿ ಸೋಲಿಸಿಬಿಟ್ಟನು ನಿನ್ನ ಮಗನು ಅವನಿಗೆ ಭಯಪಟ್ಟು ಕುದುರೆಯನ್ನೇರಿ ಓಡಿಹೋದಮೇಲೆ ಇತ್ತಲಾಗಿ ದೊಡ್ಡ ಗಜ ಸೈನ್ಯದಿಂದ ಪಾಂಡವರು ಮುತ್ತಲ್ಪಟ್ಟಿರುವುದನ್ನು ನೋಡಿ ಧೃಷ್ಟದ್ಯುಮ್ನ ನೂಕೂಡ ಆ ಪಾಂಡವರ ರಕ್ಷಣೆಗಾಗಿ ಓಡಿಬಂದನು ಇದು ಹೀಗಿರು ತ್ತಿರಲು, ಅತ್ತಲಾಗಿ ನಿನ್ನ ಸೈನ್ಯದಲ್ಲಿದ್ದ ಅಶ್ವತ್ಥಾಮನೂ, ಕೃಪನೂ, ಕೃತ ವರ್ಮನೂ ರಥಸೈನ್ಯದ ಮಧ್ಯದಲ್ಲಿದ್ದ ದುರ್ಯೋಧನನನ್ನು ಕಾಣದೆ, ಅವ ನೆಲ್ಲಿರುವನೆಂಬುದನ್ನೂ ತಿಳಿಯದೆ ಚಿಂತಾಕುಲರಾದರು ಅಲ್ಲಲ್ಲಿದ್ದ ಕ್ಷತ್ರಿ ಯರನ್ನೆಲ್ಲ ' ನಮ್ಮ ರಾಜನಾದ ದುರ್ಯೊಧನನೆಲ್ಲಿಹೋದನು ?' ಎಂದು ಕಂಡಕಂಡವರನ್ನೆಲ್ಲ ಪ್ರಶ್ನೆಮಾಡುತ್ತಿದ್ದರು ಪ್ರಬಲವಾದ ಆ ಜನಕ್ಷಯ ದಲ್ಲಿ ದುರ್ಯೋಧನನೂ ಪ್ರಾಣವನ್ನೊಪ್ಪಿಸಿರಬೇಕೆಂದೇ ಅವರು ತಿಳಿದರು ದುಃಖದಿಂದ ಬಣ್ಣಗೆಟ್ಟ ಮುಖದೊಡನೆ ಕಂಡಕಂಡವರನ್ನೆಲ್ಲ ನಿನ್ನ ಮಗ ನ ವಿಷಯವಾಗಿ ವಿಚಾರಿಸುತ್ತಿದ್ದರು ಆಗ ಕೆಲವರು "ಸಾರಥಿಯು ಸತ್ತೊಡನೆ ನಮ್ಮ ರಾಜನು ಧೃಷ್ಟದ್ಯುಮ್ನನ ಸೈನ್ಯದ ಮುಂದೆ ನಿಲ್ಲಲಾ ರದೆ ಶಕುನಿಯನ್ನು ಹುಡುಕುತ್ತ ಹೊರಟುಹೋದನು" ಎಂದರು ಬಾಣ ದಿಂದ ಬಹಳವಾಗಿ ನೊಂದಿದ್ದ ಬೇರೆ ಕೆಲವರು, ಬಹಳ ಬೇಸರದಿಂದ 'ಈಗ ದುರ್ಯೋಧನನಿಂದ ನಮಗೇನಾಗಬೇಕಾಗಿದೆ? ಬದುಕಿದ್ದರೆ ಎಂದಾ ದರೂ ನೋಡುವಿರಿ! ನೀವೆಲ್ಲರೂ ಒಂದಾಗಿ ಸೇರಿ ಯುದ್ಧಮಾಡಿರಿ! ಈಗ ರಾಜನು ಬಂದು ಏನು ಮಾಡಬಲ್ಲನು?' ಎಂದರು ಅನೇಕ ಕ್ಷತ್ರಿಯರು ದೇಹದಲ್ಲಿ ಬಹಳವಾಗಿ ಗಾಯಪಟ್ಟು ತಮ್ಮ ವಾಹನಗಳನ್ನೆಲ್ಲ ಕಳೆದು ಕೊಂಡು, ಆ ಬಾಣದ ಬಾಧೆಯಿಂದ ನೋಯುತ್ತ, ಸ್ಪಷ್ಟವಾಗಿ ಮಾತಾಡು ವುದಕ್ಕೂ ಸಾಗದೆ 'ಇಲ್ಲಿ ನಮ್ಮನ್ನು ಸುತ್ತಿರುವ ಈ ಎಲ್ಲಾ ಸೈನ್ಯವನ್ನೂ ಮೊದಲು ಅಡಗಿಸಬೇಕು, ಅದೋ! ಪಾಂಡವರು ಗಜಸೈನ್ಯಗಳನ್ನೆಲ್ಲ ಕೊಂದು ಸಮೀಪಕ್ಕೆ ಬರುತ್ತಿರುವರು' ಎಂದರು ಈ ಮಾತುಗಳನ್ನು

ಕೇಳಿ ಅಶ್ವತ್ಥಾಮನು ತನ್ನನ್ನು ತಡೆಯುವುದಕ್ಕಾಗಿ ಬಂದ ಧೃಷ್ಟದ್ಯುಮ್ನನ ಸೈನ್ಯಗಳನ್ನೆಲ್ಲ ನಿಗ್ರಹಿಸಿ ದಾರಿಮಾಡಿಕೊಂಡು ಮುಂದೆ ಹೋದನು ಕೃಪ ಕೃತವರ್ಮರಿಬ್ಬರೂ ಅವನನ್ನು ಹಿಂಬಾಲಿಸುತ್ತ ರಥಸೈನ್ಯವನ್ನು ಬಿಟ್ಟು ಶಕುನಿಯಿದ್ದಸ್ಥಳಕ್ಕೆ ಹೊರಟರು ಈ ಮೂವರೂ ಹೊರಟು ಹೋದಮೇಲೆ ಇತ್ತಲಾಗಿ ಪಾಂಡವರು ಧೃಷ್ಟದ್ಯುಮ್ನನನ್ನು ಮುಂದಿಟ್ಟು ಕೊಂಡು, ನಾನಾಕಡೆಯಿಂದ ನಿನ್ನ ಸೈನ್ಯಗಳನ್ನೆಲ್ಲ ಕೊಲ್ಲುತ್ತ ಬಂದರು ಹೀಗೆ ಬರುವ ಪಾಂಡವೀರರ ಹರ್ಷೋತ್ಸಾಹಗಳನ್ನು ನೋಡಿ ನಿನ್ನವರಿಗೆ ಪ್ರಾಣದಲ್ಲಿಯೇ ಜಿಹಾಸೆಯು ಹುಟ್ಟಿತು ನಿನ್ನ ಸೈನ್ಯಕ್ಕೆಲ್ಲ ಮುಖವು ಬಣ್ಣಗೆಟ್ಟಿತು ಆಯುಧಗಳೆಲ್ಲವೂ ಹೋಗಿ ಶತ್ರುಸೈನ್ಯಗಳಿಂದ ಆವರಿಸಲ್ಪಟ್ಟಿದ್ದ ಆ ನಮ್ಮ ಸೈನ್ಯಗಳನ್ನು ನೋಡಿ ನಾನೂ ಆಗ ನನ್ನ ಜೀವದಲ್ಲಿಯೇ ಆಸೆಯನ್ನು ತೊರೆದು ಗಜ, ತುರಗ, ಪದಾತಿಗಳೆಂಬ ಮೂರು ಅಂಗಗಳಿಂದ ಕೂಡಿದ ಸೈನ್ಯದೊಡನೆ ಸೇರಿ, ಆ ಧೃಷ್ಟದ್ಯುಮ್ನನ ಸೈನ್ಯದೊಡನೆ ನಾನು ಐದನೆಯವನಾಗಿ ಯುದ್ಧವನ್ನಾರಂಭಿಸಿದನು ನಾನು ಆ ಯುದ್ಧದಲ್ಲಿ ಕೃಪಾಚಾರ್ಯನಿದ್ದಲ್ಲಿಗೇ ಸೇರಿಕೊಂಡೆನು ಆದರೇನು? ಕ್ಷಣಮಾತ್ರದಲ್ಲಿಯೇ ನಾವೈದುಮಂದಿಯೂ ಅರ್ಜುನನ ಬಾಣಗಳಿಂದ ನೊಂದು, ಆ ಸ್ಥಳದಿಂದ ಭಯಂಕರನಾದ ಧೃಷ್ಟದ್ಯುಮ್ನನಿದ್ದಲ್ಲಿಗೆ ಓಡಿದೆವು ಅಲ್ಲಿಯೂ ದೊಡ್ಡ ಯುದ್ಧವೇನೂ ನಡೆಯಲಿಲ್ಲ ಮೊದಲು ನಾವೆಲ್ಲರೂ ಸೋಲಿಸಲ್ಪಟ್ಟು ಅಲ್ಲಿಯೂ ನಿಲ್ಲಲಾರದೆ ಓಡಿದೆವು ಇಷ್ಟರಲ್ಲಿಯೇ ಸಾತ್ಯಕಿಯು ನಾನೂರು ರಥಗಳೊಡನೆ ನನ್ನನ್ನಿದಿರಿಸಿ ಬರುವುದನ್ನು ಕಂಡೆನು ಮಹಾರಾಜಾ! ಧೃಷ್ಟದ್ಯುಮ್ನನ ವಾಹನಗಳು ಸೋತುಹೋದ ಸಮಯದಲ್ಲಿ, ಹೇಗೋ ನಾನು ಅಲ್ಲಿಂದ ತಲೆತಪ್ಪಿಸಿಕೊಂಡು ಬಂದೆನು ಆದರೆ ಪಾಪಿಯು ನರಕದಲ್ಲಿ ಬೀಳುವಂತೆ ಸಾತ್ಯಕಿಯ ಸೈನ್ಯದಲ್ಲಿ ಸಿಕ್ಕಿಕೊಂಡೆನು ಅಲ್ಲಿ ಒಂದು ಮುಹೂರ್ತಕಾಲವು ಮಾತ್ರ ಭಯಂಕರವಾದ ಯುದ್ಧವು ನಡೆಯಿತು ಇಷ್ಟರಲ್ಲಿಯೇ ಸಾತ್ಯಕಿಯು ನನ್ನ ಪರಿವಾರಗಳನ್ನೆಲ್ಲ ಕೊಂದು, ಕೊನೆಗೆ ಮೂರ್ಛಿತನಾಗಿ ಕೆಳಗೆ ಬಿದ್ದಿದ್ದ ನನ್ನನ್ನು ಜೀವಸಹಿತವಾಗಿ ಸೆರೆಹಿಡಿದುಕೊಂಡನು. ಮುಹೂರ್ತಕಾಲದಲ್ಲಿಯೇ ಭೀಮನ ಗದೆಯಿಂದಲೂ, ಅರ್ಜುನನ ಬಾಣಗಳಿಂದಲೂ ನಮ್ಮ ದೊಡ್ಡ

ಗಜಸೈನ್ಯವೆಲ್ಲ ಹತವಾಯಿತು ಎಲ್ಲಾ ಕಡೆಯೂ ಬೆಟ್ಟದಂತೆ ಸತ್ತುಬಿದ್ದ ಆ ಆನೆಗಳ ನಡುವೆ ಪಾಂಡವರಿಗೆ ಸುಲಭವಾಗಿ ನಡೆದುಬರುವುದೇ ಕಷ್ಟವಾಯಿತು ಆಗ ಮಹಾಬಲವುಳ್ಳ ಭೀಮನು, ಸತ್ತ ಆನೆಗಳನ್ನೆಲ್ಲ ಅತ್ತಿತ್ತ ಎಳೆದುಹಾಕುತ್ತ ಪಾಂಡವರ ರಥಗಳಿಗೆ ದಾರಿಯನ್ನು ಮಾಡಿದನು. ಇಷ್ಟರಲ್ಲಿಯೇ ಅತ್ತಲಾಗಿ ಅಶ್ವತ್ಥಾಮ, ಕೃಪ, ಕೃತವರ್ಮರು ಮೂವರೂ, ನಿನ್ನ ಮಗನನ್ನು ಕಾಣದೆ, ಅವನ ಗತಿಯೇನೆಂದು ಕಳವಳಿಸುತ್ತ ಶಕುನಿಯಿದ್ದಲ್ಲಿಗೆ ಹುಡುಕಿಕೊಂಡು ಹೋದರು

ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು



## ಭೀಮನು ಯುದ್ಧದಲ್ಲಿ ಉಳಿದಿದ್ದ ದುರ್ಯೋದನನ ತಮ್ಮಂದಿರೆಲ್ಲರನ್ನೂ ಕೊಂದುದು

ರಾಜೇಂದ್ರಾ! ಕೇಳು! ಭೀಮಾರ್ಜುನರಿಂದ ನಿನ್ನಕಡೆಯ ಗಜಸೈನ್ಯವೆಲ್ಲ ಹತವಾದಮೇಲೆಯೂ, ಭೀಮನು ಲೋಕನಾಶಕ್ಕಾಗಿ ಕೋಪಗೊಂಡ ದಂಡಪಾಣಿಯಾದ ಕಾಲಾಂತಕನಂತೆ, ರಣರಂಗದಲ್ಲಿ ಸಂಚರಿಸುತ್ತಿದ್ದುದನ್ನು ಕಂಡೆವು ನಿನ್ನ ಮಗನಾದ ದುರ್ಯೋಧನನು ಕಣ್ಣಿಗೆ ಬೀಳದಿದ್ದುದನ್ನು ನೋಡಿ ಹತಶೇಷರಾದ ಅವನ ತಮ್ಮಂದಿರೆಲ್ಲ ಒಂದಾಗಿ ನೇರಿ ಕೋಪದಿಂದ ಭೀಮನನ್ನಿದಿರಿಸಿ ಬಂದರು ಶ್ರುತರ್ವನು, ಸಂಜಯನು, ಜಯತ್ಸೇನನು, ಶ್ರುತಾಂತಕನು, ದುರ್ವಿಮೋಚನಕನು, ದುರ್ವಿಷಹನು, ದುರ್ಮರ್ಷಣನು, ಸುಜಾತನು, ಚೈತ್ರನು, ಭೂರಿಬಲನು, ರವಿ, ಎಂಬೀ ನಿನ್ನ ಮಕ್ಕಳೆಲ್ಲರೂ ಒಂದಾಗಿ ಸೇರಿ, ನಾಲ್ಕು ಕಡೆಗಳಿಂದ ಭೀಮನನ್ನು ಸುತ್ತಿಕೊಂಡು ಹೊಡೆಯಲಾರಂಭಿಸಿದರು ಆಮೇಲೆ ಭೀಮನು ತಿರುಗಿ ತನ್ನ ರಥವನ್ನೇರಿ ನಿನ್ನ ಮಕ್ಕಳ ಮರ್ಮಸ್ಥಾನಗಳಲ್ಲಿ ಬಾಣಗಳನ್ನು ಬಿಡಲಾರಂಭಿಸಿದನು ಹೀಗೆ ಭೀಮನು ಬಾಣಗಳಿಂದ ಹೊಡೆಯುತ್ತಿರುವಾಗಲೂ, ಬಿರುಗಾಳಿಗಳು ನಾನಾಕಡೆಗಳಿಂದ ಒಂದು ದೊಡ್ಡ ಆನೆಯನ್ನಿದಿರಿಸುವಂತೆ ನಿನ್ನ ಮಕ್ಕಳು, ಭೀಮನನ್ನು ನಾನಾಕಡೆಗಳಿಂದ ತಡೆಯುತ್ತಿದ್ದರು ಇಷ್ಟರಲ್ಲಿ ಭೀಮನು ಕೋಪಗೊಂಡು

ಒಂದು ಕ್ಷುರಪ್ರಾಯುಧದಿಂದ ದುರ್ಮರ್ಷಣನ ತಲೆಯನ್ನು ಕತ್ತರಿಸಿ ನೆಲಕ್ಕೆ ಕೆಡಹಿದನು ಆಮೇಲೆ ಮತ್ತೊಂದು ಭಲ್ಲಾಯುಧದಿಂದ ಶ್ರುತಾಂತನನ್ನು ಕೊಂದನು ಆಮೇಲೆ ಮತ್ತೊಂದು ನಾರಾಚವನ್ನೆತ್ತಿ ನಗುಮುಖದಿಂದಲೇ ಜಯತ್ಸೇನನನ್ನು ರಥದಿಂದ ಕೆಡಹಲು, ಅವನು ರಥದಿಂದ ಬಿದ್ದೊಡನೆ ಗತಪ್ರಾಣನಾದನು ಇದನ್ನೆಲ್ಲ ನೋಡಿ ಕೋಪಗೊಂಡ ಶ್ರುತವರ್ಮನು, ಹದ್ದಿನ ಗರಿಯುಳ್ಳ ನೂರು ಬಾಣಗಳಿಂದ ಭೀಮನನ್ನು ಪ್ರಹರಿಸಿದನು ಆಗ ಭೀಮನು ಅತ್ಯಾಕ್ರೋಶಗೊಂಡು, ಚೈತ್ರ, ಭೂರಿಬಲ, ರವಿಯೆಂಬೀ ಮೂವರನ್ನೂ, ವಿಷಕ್ಕೂ, ಅಗ್ನಿಗೂ ಸಮಾನಗಳಾದ ಮೂರು ಬಾಣಗಳಿಂದ ಪ್ರಹರಿಸಲು, ಆ ಒಂದೊಂದೇ ಬಾಣದಿಂದ ಅವರು ಮೂವರೂ ಸತ್ತು ರಥದಿಂದ ಕೆಳಕ್ಕೆ ಬಿದ್ದು, ರಕ್ತದಿಗ್ಧರಾಗಿ ವಸಂತಕಾಲದಲ್ಲಿ ಚೆನ್ನಾಗಿ ಪುಷ್ಪಿಸಿ ಮುರಿದುಬಿದ್ದ ಮುತ್ತುಗದ ಮರಗಳಂತೆ ಕಾಣಿಸಿದರು ಆಮೇಲೆ ಭೀಮನು ಮತ್ತೊಂದು ಭಲ್ಲದಿಂದ ದುರ್ವಿಮೋಚನನನ್ನು ಹೊಡೆದು ಕೆಡಹಲು ಅವನು ಪರ್ವತಾಗ್ರದಲ್ಲಿದ್ದ ವೃಕ್ಷವು ಬಿರುಗಾಳಿಯಿಂದ ಮುರಿದು ಬೀಳುವಂತೆ ರಥದಿಂದ ಕೆಳಕ್ಕೆ ಬಿದ್ದನು ಆಮೇಲೆ ದುಷ್ಪ್ರಧರ್ಷ, ಸುಜಾತರೆಂಬ ನಿನ್ನ ಮಕ್ಕಳಿಬ್ಬರನ್ನೂ ಭೀಮನು ಪ್ರತ್ಯೇಕವಾಗಿ ಎರಡೆರಡು ಬಾಣಗಳಿಂದ ಹೊಡೆದು ಕೊಂದನು ಆಮೇಲೆ ನಿನ್ನ ಮತ್ತೊಬ್ಬ ಮಗನಾದ ದುರ್ವಿಷಹನು ತನಗಿದಿರಾಗಿ ಬರುವುದನ್ನು ಕಂಡೊಡನೆ ಭೀಮನು, ಅವನನ್ನೂ ಒಂದು ಭಲ್ಲದಿಂದ ಕೊಂದು ಕೆಡಹಿದನು ಸಮಸ್ತ ಧನುರ್ಧಾರಿಗಳೂ ನೋಡುತ್ತಿದ್ದ ಹಾಗೆಯೇ ಅವನು ತನ್ನ ವಾಹನದಿಂದ ಕೆಳಕ್ಕುರುಳಿದನು ಹೀಗೆ ಭೀಮನಿಂದ ತನ್ನ ಅನೇಕ ಸೋದರರು ಹತರಾದುದನ್ನು ನೋಡಿ, ಶ್ರುತರ್ವನು ಬಹಳ ಕೋಪಾವೇಶದಿಂದ, ಚಿನ್ನದಕಟ್ಟುಳ್ಳ ದೊಡ್ಡದೊಂದು ಬಿಲ್ಲನ್ನು ಹಿಡಿದು, ವಿಷಸಮಾನಗಳಾದ ತೀವ್ರಬಾಣಗಳನ್ನು ಪ್ರಯೋಗಿಸುತ್ತ ಭೀಮನಿಗಿದಿರಾದನು ಬಂದೊಡನೆ ಒಂದು ಬಾಣದಿಂದ ಭೀಮನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿ, ಚಾಪಹೀನನಾದ ಅವನನ್ನು ಇಪ್ಪತ್ತು ಬಾಣಗಳಿಂದ ಹೊಡೆದನು ಒಡನೆಯೇ ಭೀಮನು ಬೇರೆ ಬಿಲ್ಲನ್ನು ತೆಗೆದುಕೊಂಡು ನಿನ್ನ ಮಗನನ್ನು ನೋಡಿ "ಎಲಾ! ನಿಲ್ಲು! ನಿಲ್ಲು!" ಎಂದು ಕೂಗುತ್ತ

ಬಾಣಗಳನ್ನು ವರ್ಷಿಸಿದನು ಅವರಿಬ್ಬರಿಗೂ ಆಗ ಇಂದ್ರನಿಗೂ, ಜಂಭಾಸುರನಿಗೂ ನಡೆದ ಯುದ್ಧದಂತೆ ವಿಚಿತ್ರಯುದ್ಧಗಳು ನಡೆದುವು ಆಗ ಅವರ ಬಾಣಗಳಿಂದ ಭೂವ್ಯಾಕಾಶಗಳೂ, ದಿಕ್ಕುವಿದಿಕ್ಕುಗಳೂ ಎಡೆಬಿಡದೆ ಮರೆಸಿಹೋದುವು. ಆಗ ಶ್ರುತರ್ವನು ಭೀಮನ ಎದೆಗೂ, ತೋಳುಗಳಿಗೂ ಗುರಿಯಿಟ್ಟು ಹಲವು ಬಾಣಗಳನ್ನು ಬಿಟ್ಟನು ಇದರಿಂದ ಭೀಮನು ಪರ್ವಕಾಲದ ಸಮುದ್ರದಂತೆ ಕೋಪದಿಂದ ಕಲಗಿದವನಾಗಿ, ವೇಗದಿಂದ ಬಾಣಗಳನ್ನು ಬಿಟ್ಟು, ನಿನ್ನ ಮಗನ ನಾಲ್ಕು ರಥಾಶ್ವಗಳನ್ನೂ ಸಾರಥಿಯನ್ನೂ ಕೊಂದುಬಿಟ್ಟನು ಅವನು ವಿರಥನಾಗಿದ್ದಾಗಲೇ, ತನ್ನ ಕೈಚಳಕವನ್ನು ಇನ್ನೂ ಹೆಚ್ಚಾಗಿ ತೋರಿಸುತ್ತ, ಗರಿಗಟ್ಟಿದ ಹಲವು ಬಾಣಗಳನ್ನು ಅವನಮೇಲೆ ವರ್ಷಿಸಿದನು ರಥವು ಮುರಿದೊಡನೆ ಶ್ರುತರ್ವನು ಕತ್ತಿ ಗುರಾಣಿಗಳನ್ನು ಕೈಗೆತ್ತಿಕೊಂಡನು ಅವನು ಆ ಆಯುಧಗಳನ್ನು ಕೈಗೆತ್ತಿಕೊಳ್ಳುತ್ತಿರುವಾಗಲೇ ಭೀಮನು ಒಂದು ಕ್ಷುರಪ್ರಾಯುಧದಿಂದ ಅವನ ಶಿರಸ್ಸನ್ನು ದೇಹದಿಂದ ಬೇರ್ಪಡಿಸಿ ಕೆಡಹಿದನು ತಲೆಕಡಿದ ಅವನ ಮುಂಡವು ಮಹಾಧ್ವನಿಯೊಡನೆ ರಥದಿಂದ ಧೊಪ್ಪನೆ ಕೆಳಕ್ಕೆ ಬಿದ್ದಿತು ಮಹಾವೀರನೆನಿಸಿದ ಶ್ರುತರ್ವನು ಕೆಳಗೆ ಬಿದ್ದುದನ್ನು ನೋಡಿ ನಿನ್ನ ಸೈನಿಕರಲ್ಲರೂ ಭಯದಿಂದ ತಬ್ಬಿಬ್ಬಾದರು ಆದರೂ ಬಿಡದೆ ಭೀಮನೊಡನೆ ಯುದ್ಧಕ್ಕಾಗಿ ಇದಿರುಬಿದ್ದರು ಅವರು ಸಿದ್ಧರಾಗಿ ಬಂದುದನ್ನು ಕಂಡು ಭೀಮನೂ ಯುದ್ಧಕ್ಕೆ ಎದೆಗೊಟ್ಟು ನಿಂತನು ಅವರೆಲ್ಲರೂ ಭೀಮನನ್ನು ಸುತ್ತಲೂ ಆವರಿಸಿಕೊಂಡು ಹೊಡೆಯಲಾರಂಭಿಸಿದರು ಭೀಮನು ಅವರನ್ನೆಲ್ಲ ತಾನೊಬ್ಬನೇ ಬಾಣಗಳಿಂದ ಬಹಳವಾಗಿ ನೋಯಿಸಿದನು ಆಗಿನ ಯುದ್ಧದಲ್ಲಿ ಭೀಮನು ಐನೂರು ಮಹಾರಥಗಳನ್ನೂ, ಏಳುನೂರು ಗಜಸೈನ್ಯಗಳನ್ನೂ, ಲಕ್ಷ ಪದಾತಿಗಳನ್ನೂ, ಎಂಟುನೂರು ಕುದುರೆಗಳನ್ನೂ ಕೊಂದು ತೀರಿಸಿಬಿಟ್ಟನು ಹೀಗೆ ಭೀಮನು ನಿನ್ನ ಮಕ್ಕಳನ್ನೆಲ್ಲ ಕೊಂದಮೇಲೆ, ತಾನು ಆಗಲೇ ಕೃತಾರ್ಥನಾದಂತೆಯೂ, ತನ್ನ ಜನ್ಮವು ಆಗಲೇ ಸಾರ್ಥಕವಾಯಿತೆಂದೂ ತಿಳಿದು ಸಂತುಷ್ಟನಾಗಿದ್ದನು ಯುದ್ಧಮಾಡುತ್ತಿದ್ದ ಭೀಮನ ಆರ್ಭಟವನ್ನು ನೋಡುವುದಕ್ಕೂ ನಿನ್ನ ಸೈನಿಕರು ಅಶಕ್ತರಾದರು. ಹೀಗೆ ಭೀಮನು ಕುರುಗಳನ್ನೆಲ್ಲ ಓಡಿಸಿ, ಅವರ ಅನು

ಚರರನ್ನೂ ಕೊಂದು, ಮಹಾಗಜಗಳೂ ಹೆದರುವಂತೆ ಬಲವಾಗಿ ತೋಳುಗಳನ್ನು ತಟ್ಟಿ ಶಬ್ದಮಾಡುತ್ತಿದ್ದನು ರಾಜೇಂದ್ರಾ! ಆ ಯುದ್ಧದಲ್ಲಿ ಪ್ರಾಯಕವಾಗಿ ಅನೇಕಯೋಧರು ಹತರಾಗಲು, ಅಲ್ಪಾವಶಿಷ್ಟವಾದ ನಿನ್ನ ಸೇನೆಯು ಬಹಳ ದೀನದಶೆಯಲ್ಲಿದ್ದಿತು

ಇದು ಇಪ್ಪತ್ತೈದನೆಯ ಅಧ್ಯಾಯವು

ಕೃಷ್ಣಾರ್ಜುನ ಸಂವಾದಗಳು ಸಂಕುಲಯುದ್ಧವು ಭೀಮನು ಸುದರ್ಶನನೆಂಬ ದುರ್ಯೋಧನನ ತಮ್ಮನನ್ನು ಕೊಂದುದು

ರಾಜೇಂದ್ರಾ! ಕೇಳು! ಕೊನೆಗೆ ನಿನ್ನ ನೂರುಮಂದಿ ಪುತ್ರರಲ್ಲಿ ದುರ್ಯೋಧನನೊಬ್ಬನು, ಸುದರ್ಶನನೆಂಬವನೊಬ್ಬನು ಇವರಿಬ್ಬರೇ ಯುದ್ಧದಲ್ಲಿ ಉಳಿದಿದ್ದವರು. ಅವರು ಅಶ್ವಸೈನ್ಯಗಳ ನಡುವೆ ಇರುವಾಗ, ಕೃಷ್ಣನು ಆ ದುರ್ಯೋಧನನನ್ನು ನೋಡಿ ಅರ್ಜುನನನ್ನು ಕುರಿತು ಹೀಗೆಂದು ಹೇಳುವನು “ಧನಂಜಯಾ! ಪ್ರಾಯಕವಾಗಿ ನಿನ್ನ ಶತ್ರುಗಳೆಲ್ಲರೂ ಹತರಾದರು ನಿನ್ನ ಬಂಧುಗಳೆಲ್ಲರೂ ರಕ್ಷಿಸಲ್ಪಟ್ಟರು ಸಾತ್ಯಕಿಯು ಸಂಜಯನನ್ನೂ ಸೆರೆಹಿಡಿದುಕೊಂಡು ಹೊರಟುಹೋದನು ನಕುಲಸಹದೇವರಿಬ್ಬರೂ ಯುದ್ಧದಲ್ಲಿ ಪಾಪಿಗಳಾದ ಆ ಧೃತರಾಷ್ಟ್ರಪುತ್ರರೊಡನೆ ಹೋರಾಡಿ ಬಹಳ ಆಯಾಸಗೊಂಡಿರುವರು ದುರ್ಯೋಧನನು ಹೊರತು ಆ ಶತ್ರುಪಕ್ಷದಲ್ಲಿ ಕೃಪನು, ಕೃತವರ್ಮನು, ಅಶ್ವತ್ಥಾಮನು, ಈ ಮೂವರೇ ಉಳಿದಿರುವರು ಅದೋ! ನಮ್ಮಕಡೆ ಧೃಷ್ಟದ್ಯುಮ್ನನು ದುರ್ಯೋಧನನ ಸೈನ್ಯವನ್ನೆಲ್ಲ ಕೊಂದು, ಎಲ್ಲಾ ಪ್ರಭದ್ರಕರೊಡಗೂಡಿ ಜಯಲಕ್ಷ್ಮಿಯಿಂದ ಬೆಳಗುತ್ತಿರುವನು ಅತ್ತಲಾಗಿ ಕುದುರೆಯ ಸೈನ್ಯಮಧ್ಯದಲ್ಲಿ ರಾಜಚಿಹ್ನವಾದ ಶ್ವೇತಚ್ಛತ್ರವನ್ನು ಹಿಡಿಸಿಕೊಂಡು ದುರ್ಯೋಧನನು ಬಾರಿಬಾರಿಗೂ ಇತ್ತಕಡೆಗೇ ನೋಡುತ್ತಿರುವನು ಮತ್ತು ಅವನು ಈಗಲೂ ತನ್ನ ಸೈನ್ಯವನ್ನು ನಮಗೆ ಪ್ರತಿವ್ಯೂಹವನ್ನಾಗಿ ರಚಿಸಿಟ್ಟು ರಣಮಧ್ಯದಲ್ಲಿರುವನು. ಅವನನ್ನು ಈಗ ನೀನು ನಿನ್ನ ತೀಕ್ಷ್ಣಬಾಣಗಳಿಂದ

ತೀರಿಸಿಬಿಟ್ಟರೆಮಾತ್ರ ನೀನು ಕೃತಕೃತ್ಯನಾಗುವೆ  ಏಕೆಂದರೆ, ತಮ್ಮ ಗಜ ಸೈನ್ಯವೆಲ್ಲ ನಷ್ಟವಾದುದನ್ನೂ, ನೀನು ಯುದ್ಧಸನ್ನದ್ಧನಾಗಿ ಬಂದಿರುವುದನ್ನೂ ನೋಡಿ ಅವನು ಭಯಪಟ್ಟು ಓಡಿಹೋಗುವಷ್ಟರೊಳಗಾಗಿ, ನೀನು ದುರ್ಯೋಧನನನ್ನು ಕೊಂದುಬಿಡಬೇಕು  ಈಗಲೇ ನೀನು ಯಾವನೊಬ್ಬನನ್ನಾದರೂ ಕಳುಹಿಸಿ, ಧೃಷ್ಟದ್ಯುಮ್ನನನ್ನು ಬೇಗನೆ ಹಿಂದಕ್ಕೆ ಬರುವಂತೆ ಹೇಳಿಕಳುಹಿಸು  ಧೃಷ್ಟದ್ಯುಮ್ನನು ಧಾರ್ತರಾಷ್ಟ್ರರಿಗೆ ಬಹಳ ಹಾನಿಯನ್ನುಂಟುಮಾಡಿರುವನಲ್ಲದೆ, ಈಗ ಅವನ ಸೈನ್ಯವೂ ಬಹಳವಾಗಿ ಬಳಲಿರುವುದರಿಂದ, ಅವನು ಶತ್ರುಗಳಕೈಗೆ ಸಿಕ್ಕಿಬಿದ್ದರಮಾತ್ರ ಅವರು ಅವನನ್ನು ಬಿಡಲಾರರು  ಆಗ ಅವನು ನಿನ್ನ ಸೈನ್ಯವನ್ನೆಲ್ಲ ಕೊಂದು, ಪಾಂಡವರೆಲ್ಲರೂ ತನ್ನಿಂದ ಪರಾಜಿತರಾದರೆಂದೇ ತಿಳಿದು ಹೆಮ್ಮೆಯಿಂದ ಬಹಳವಾಗಿ ಉಬ್ಬಿಹೋಗುವನು  ಈಗ ಆ ದುರ್ಯೋಧನನಾದರೋ ತನ್ನ ಸೈನ್ಯವೆಲ್ಲ ಹತವಾದುದನ್ನೂ, ಪಾಂಡವರಿಂದ ಅದು ಬಹಳವಾಗಿ ನೊಂದುಹೋದುದನ್ನೂ ನೋಡಿ, ಆತ್ಮಹತ್ಯವನ್ನುದ್ದೇಶಿಸಿಯೇ ತಿರುಗಿ ಯುದ್ಧಕ್ಕೆ ಬರುವನು  ನೀನು ಎಚ್ಚರದಿಂದಿರು'' ಎಂದನು  ಈ ಮಾತನ್ನು ಕೇಳಿ ಅರ್ಜುನನು ಕೃಷ್ಣನನ್ನು ಕುರಿತು ''ಓ ಜನಾರ್ದನಾ! ಇದುವರೆಗೆ ಧೃತರಾಷ್ಟ್ರನ ಎಲ್ಲಾ ಮಕ್ಕಳನ್ನೂ ನನ್ನಣ್ಣನಾದ ಭೀಮಸೇನನೇ ಕೊಂದಿರುವನು  ಇನ್ನು ಇಬ್ಬರುಮಾತ್ರ ಉಳಿದಿರುವರು  ಅವರೂ ಶೀಘ್ರದಲ್ಲಿಯೇ ಕೊನೆಗಾಣುವುದು ನಿಶ್ಚಯವು. ಭೀಷ್ಮನು ಹತನಾದನು  ದ್ರೋಣನು ಹತನಾದನು  ಸೂರ್ಯಪುತ್ರನಾದ ಕರ್ಣನೂ ಹತನಾದನು  ಶಲ್ಯ ಜಯದ್ರಥರೂ ಹತರಾದರು  ಈಗ ಶಕುನಿಗೆ ಸಂಬಂಧಪಟ್ಟ ಐನೂರು ಕುದುರೆಗಳೂ, ಇನ್ನೂರು ರಥಗಳೂ, ಒಂದುನೂರಕ್ಕಿಂತಲೂ ಸ್ವಲ್ಪ ಹೆಚ್ಚು ಆನೆಗಳೂ, ಮೂರು ಸಾವಿರ ಪದಾತಿಗಳೂ ಉಳಿದಿರುವುವು  ಅಶ್ವತ್ಥಾಮನು, ಕೃಪನು, ಕೃತವರ್ಮನು, ಸುಶರ್ಮನು, ಶಕುನಿ, ಅವನ ಮಗನಾದ ಉಲೂಕನು, ಇವರಿಷ್ಟುಮಂದಿ ಮಾತ್ರವೇ ಕೌರವ ಸೈನ್ಯದಲ್ಲಿ ಉಳಿದಿರುವರು  ಕಾಲವೇನೋ ಯಾರನ್ನೂ ಉಳಿಸುವಹಾಗಿಲ್ಲವೆಂಬುದು ನಿಜವು  ಸೈನ್ಯವೆಲ್ಲವೂ ಸತ್ತಮೇಲೆಯೂ ಆ ದುರ್ಯೋಧನನಿರುವ ಸ್ಥಿತಿಯನ್ನು ನೋಡು  ಈದಿನ ಸಾಯಂಕಾಲದೊಳಗಾಗಿಯೇ

ಧರ್ಮರಾಜನು ಶತ್ರುರಹಿತನಾಗುವುದು ನಿಜವು ಶತ್ರುಗಳಲ್ಲಿ ನನ್ನಿಂದ ತಪ್ಪಿಸಿಕೊಂಡು ಬದುಕಿಹೋಗುವವನಾವನೂ ಇಲ್ಲವೆಂದು ನನಗೆ ಚೆನ್ನಾಗಿ ತಿಳಿದಿದೆ. ಈಗ ಯಾರುಯಾರು ಹೆಮ್ಮೆಯಿಂದ ಯುದ್ಧವನ್ನು ಬಿಟ್ಟು ಹೋಗದೆ ಮುಂದೆ ಬರುವರೋ, ಅವರು ಮನುಷ್ಯರಲ್ಲದ ದೇವತೆಗಳೇ ಆಗಿದ್ದರೂ ನಾನು ಅವರನ್ನೆಲ್ಲ ಕೊಲ್ಲದಿರನು ಈಗಿನ ಯುದ್ಧದಲ್ಲಿ ದೀರ್ಘ ಕಾಲದಿಂದ ನಿದ್ರೆಯಿಲ್ಲದೆ ಕೊರಗುತ್ತಿದ್ದ ನಮ್ಮಣ್ಣನಿಗೆ, ಇನ್ನುಮೇಲೆ ಆ ಜಾಗರಣೆಯು ಬಿಟ್ಟುಹೋಗಿ, ಮನಸ್ಸು ನೆಮ್ಮದಿಯಾಗುವಂತೆ ಆ ದುರ್ಯೋಧನನನ್ನು ಕೊಲ್ಲುವೆನು ದುರಾತ್ಮನಾದ ಶಕುನಿಯು ಸಭೆಯಲ್ಲಿ ನಮ್ಮನ್ನು ಕಪಟದ್ಯೂತದಿಂದ ವಂಚಿಸಿ, ನಮ್ಮಿಂದ ಯಾವಯಾವ ರತ್ನಗಳನ್ನು ಅಪಹರಿಸಿದ್ದನೋ, ಅವನ್ನೆಲ್ಲ ಈಗ ಯುದ್ಧದಮೂಲಕವಾಗಿ ಅವನಿಂದ ಕಕ್ಕಿಸುವೆನು ನಾಗಪುರದ ಸ್ತ್ರೀಯರೆಲ್ಲರೂ ತಮ್ಮ ಪತಿ ಪುತ್ರಾದಿಗಳೆಲ್ಲ ಪಾಂಡವರಿಂದ ಹತರಾದುದನ್ನು ಕೇಳಿ, ನನ್ನ ಶಕ್ತಿಯೆಂತದೆಂಬುದನ್ನು ಈಗ ಚೆನ್ನಾಗಿ ತಿಳಿಯುವರು ಕೃಷ್ಣಾ! ನಾವು ಮಾಡಬೇಕಾದ ಕಾರ್ಯವೆಲ್ಲ ಇಂದಿಗೆ ಮುಗಿದಂತೆಯೇ ತಿಳಿ! ಈಗಲೇ ದುರ್ಯೋಧನನು ತನ್ನ ಸಂಪತ್ತುಗಳನ್ನೂ, ಪ್ರಾಣವನ್ನೂ ತೊರೆಯುವನು ಆ ದುರ್ಯೋಧನನು ಈಗಲೂ ನಮಗೆ ಭಯಪಟ್ಟು ಯುದ್ಧರಂಗದಿಂದ ತಪ್ಪಿಸಿಕೊಂಡು ಹೋಗದಿದ್ದರೆ, ಇಂದಿಗೆ ಅವನ ಕೆಲಸವು ಮುಗಿದಂತೆಯೇ ತಿಳಿ! ಓ ಜನಾರ್ದನಾ! ನಮ್ಮೆದಿರಾಗಿರುವ ಈ ಕುದುರೆಯ ಸೈನ್ಯವು ನನಗೆ ಎಷ್ಟು ಮಾತ್ರವು? ನನ್ನ ಧನುಷ್ಟಂಕಾರಮಾತ್ರವನ್ನೂ ಅದು ಸಹಿಸಿ ನಿಲ್ಲಲಾರದು ಆದುದರಿಂದ ಮುಂದೆ ರಥವನ್ನು ಬಿಡು ನಾನು ಅದನ್ನೆಲ್ಲ ಸಂಹರಿಸಿಬಿಡುವೆನು” ಎಂದನು

ರಾಜೇಂದ್ರಾ! ಈ ಮಾತನ್ನು ಕೇಳಿದೊಡನೆ ಕೃಷ್ಣನು ದುರ್ಯೋಧನನ ಸೈನ್ಯವಿದ್ದಲ್ಲಿಗೆ ರಥವನ್ನು ಬಿಟ್ಟನು ಆ ದುರ್ಯೋಧನನ ಬಲವನ್ನು ನೋಡಿ ಭೀಮಾರ್ಜುನಸಹದೇವರು ಮೂವರೂ ತಮ್ಮ ಮಹಾರಥಗಳೊಡನೆ ಯುದ್ಧಕ್ಕಣಿಯಾಗಿ, ಸಿಂಹನಾದಗಳನ್ನು ಮಾಡುತ್ತ ಮುಂದು ವರಿದರು ಹೀಗೆ ಆ ಮೂವರೂ ಒಂದುಗೂಡಿ ಧನುರ್ಧಾರಿಗಳಾಗಿ

ವೇಗದಿಂದ ತನಗಿದಿರಾಗಿ ಬರುವುದನ್ನು ನೋಡಿದೊಡನೆ, ಶಕುನಿಯು ಮುಂದುಬಿದ್ದು ದುರ್ಯೋಧನನ ವಧಕ್ಕಾಗಿ ಬರುತ್ತಿದ್ದ ಅವರನ್ನು ತಡೆದನು. ಇದೇ ಸಮಯದಲ್ಲಿ ನಿನ್ನ ಮಗನಾದ ಸುದರ್ಶನನು ಭೀಮನಿಗಿದಿರಾದನು ಸುಶರ್ಮ ಶಕುನಿಗಳಿಬ್ಬರೂ ಅರ್ಜುನನೊಡನೆ ಯುದ್ಧವನ್ನಾರಂಭಿಸಿದರು ಕುದುರೆಯನ್ನೇರಿದ್ದ ನಿನ್ನ ಜ್ಯೇಷ್ಠಪುತ್ರನು ಸಹದೇವನನ್ನಿದಿರಿಸಿದನು ಒಡನೆ ದುರ್ಯೋಧನನು ಪ್ರಯತ್ನಪೂರ್ವಕವಾಗಿ ಒಂದು ಪ್ರಾಸವನ್ನು ಸಹದೇವನ ತಲೆಗೆ ಗುರಿಯಿಟ್ಟು ಬೀಸಿದನು ಈ ಪ್ರಹಾರದಿಂದ ಸಹದೇವನಿಗೆ ಮೈಯೆಲ್ಲ ರಕ್ತವು ಕಿತ್ತುಕೊಂಡಿತು ಅಲ್ಲದೆ ಅವನಿಗೆ ಮೂರ್ಛೆಬಂದಂತಾಗಲು, ಹಾವಿನಂತೆ ದೀರ್ಘಶ್ವಾಸವನ್ನು ಬಿಡುತ್ತ ರಥದ ಗದ್ದುಗೆಯಮೇಲೆ ಒರಗಿ ಕುಳಿತನು ಆದರೇನು? ಸ್ವಲ್ಪಹೊತ್ತಿನಲ್ಲಿಯೇ ಅವನಿಗೆ ಮೂರ್ಛೆತಿಳಿಯಲು ಮೆಲ್ಲಗೆ ಚೇತರಿಸಿಕೊಂಡು, ತೀಕ್ಷ್ಣಬಾಣಗಳಿಂದ ದುರ್ಯೋಧನನನ್ನು ಹೊಡೆಯಲಾರಂಭಿಸಿದನು. ಒಂದು ಕಡೆಯಲ್ಲಿ ಅರ್ಜುನನು ಬಾಣಗಳಿಂದ ಅಶ್ವಯೋಧರ ತಲೆಗಳನ್ನು ಕಡಿದು ಅವರನ್ನು ಕೆಡಹುತಿದ್ದನು ಹೀಗೆ ಅವನು ತನ್ನ ಬಾಣಗಳಿಂದ ಆ ಅಶ್ವಸೈನ್ಯವನ್ನೆಲ್ಲ ನಾಶಮಾಡಿ, ತ್ರಿಗರ್ತರಾಜನಾದ ಸುಶರ್ಮನ ರಥಸೈನ್ಯಕ್ಕಿದಿರಾಗಿ ಹೊರಟನು ಆಗ ತ್ರಿಗರ್ತದೇಶದ ಮಹಾರಥರಲ್ಲ ಒಂದಾಗಿ ಸೇರಿ ಬಂದು ಕೃಷ್ಣಾರ್ಜುನರಿಬ್ಬರಮೇಲೆಯೂ ಬಾಣವರ್ಷಗಳನ್ನು ಕರೆಯುತಿದ್ದರು ಅರ್ಜುನನು ಅವರಲ್ಲಿ ಸತ್ಯಕರ್ಮನೆಂಬ ಮಹಾರಥನನ್ನು ಒಂದು ಕ್ಷುರಪ್ರಾಯುಧದಿಂದ ಪ್ರಹರಿಸಿ, ಅವನ ರಥದ ಮೂಕಿಯನ್ನು ಕತ್ತರಿಸಿಬಿಟ್ಟನು ಮತ್ತು ಚೆನ್ನಾಗಿ ಸಾಣೆಹಿಡಿದ ಮತ್ತೊಂದು ಕ್ಷುರಪ್ರದಿಂದ ಸುವರ್ಣಕುಂಡಲಾಲಂಕೃತವಾದ ಅವನ ತಲೆಯನ್ನು ಕತ್ತರಿಸಿ ಕೆಡಹಿದನು ಆಮೇಲೆ ಸತ್ಯೇಷುವೆಂಬವನನ್ನಿದಿರಿಸಿ, ಕಾಡಿನಲ್ಲಿ ಹಸಿದ ಸಿಂಹವು ಮೃಗದಮೇಲೆ ಬೀಳುವಂತೆ ಅವನಮೇಲೆ ಬಿದ್ದು, ಎಲ್ಲಾ ಯೋಧರೂ ನೋಡುತ್ತಿದ್ದಹಾಗೆಯೇ ಅವನನ್ನೂ ಕೊಂದುಬಿಟ್ಟನು ಆಮೇಲೆ ಸುಶರ್ಮನನ್ನು ಮೂರು ಬಾಣಗಳಿಂದ ಬಲವಾಗಿ ನೋಯಿಸಿ, ಅವನೊಡನೆ ಬಂದಿದ್ದ ಎಲ್ಲಾ ರಥಿಕರನ್ನೂ ಕೊಲ್ಲುತ್ತ ಬಂದನು ಅದರಿಂದಾಚೆಗೆ ಬಹುಕಾಲದಿಂದ ತನ್ನ ಕಣ್ಣಿಗೆ ಬೀಳದೆ ತಲೆತಪ್ಪಿಸಿಕೊಂ

ಡಿದ್ದ ಪ್ರಸ್ಥಲಾಧಿಪತಿಯನ್ನು ಕಂಡು, ಅವನಮೇಲೆ ತೀವ್ರವಾದ ಕೋಪ ವೆಂಬ ವಿಷಾಗ್ನಿಯನ್ನು ಕಾರುತ್ತ, ವೇಗದಿಂದ ಅವನನ್ನಿದಿರಿಸಿ ನೂರು ಬಾಣಗಳಿಂದ ಅವನನ್ನು ಮರಸಿ, ಅವನ ಕುದುರೆಗಳನ್ನು ಕೊಂದನು ಆಮೇಲೆ ಯಮದಂಡಕ್ಕೆ ಸಮಾನವಾದ ಒಂದು ಬಾಣವನ್ನು ತೆಗೆದು ಸುಶರ್ಮನಮೇಲೆ ಬೀಸಿದನು ಆ ಬಾಣವು ನೆಟ್ಟಗೆ ಆ ಸುಶರ್ಮನ ಎದೆ ಯಲ್ಲ ನಾಟಿತು ಒಡನೆಯೇ ಅವನೂ ಸತ್ತುಬಿದ್ದನು ಅದರಿಂದ ಪಾಂಡ ವರಿಗೆ ಅತ್ಯಂತ ಸಂತೋಷವೂ, ನಿನ್ನವರಿಗೆ ಮಹತ್ತಾದ ವ್ಯಥೆಯೂ ಉಂಟಾಯಿತು ಸುಶರ್ಮನನ್ನು ಕೊಂದಮೇಲೆ ಅರ್ಜುನನು ಮಹಾ ರಥರಾದ ಅವನ ಮಕ್ಕಳಲ್ಲಿ ಮೊದಲು ಏಳುಮಂದಿಯನ್ನೂ, ಆಮೇಲೆ ಎಂಟುಮಂದಿಯನ್ನೂ, ಅದರಿಂದಾಚೆಗೆ ಉಳಿದ ಮೂವತ್ತು ಮಂದಿ ಯನ್ನೂ ಬಾಣಗಳಿಂದ ಯಮಪುರಿಗೆ ಕಳುಹಿಸಿಬಿಟ್ಟನು ಆಮೇಲೆ ಪಾರ್ಥನು ಆ ಸುಶರ್ಮನಿಗೆ ಬೆಂಬಲವಾಗಿ ಬಂದಿದ್ದ ಉಳಿದವರಲ್ಲರನ್ನೂ ಬಾಣಗಳಿಂದ ಕೊಂದು, ಇನ್ನೂ ಅಲ್ಲಲ್ಲ ಹತಶೇಷವಾಗಿದ್ದ ಕೌರವಸೈನ್ಯ ವನ್ನೆಲ್ಲ ಕಂಡಕಂಡಲ್ಲಿ ಕೊಲ್ಲುತ್ತ ಬಂದನು ಇದೇ ಸಮಯದಲ್ಲಿ ಭೀಮ ನೂ ತನಗಿದಿರಾಗಿ ಬಂದ ನಿನ್ನ ಮಗನಾದ ಸುದರ್ಶನನನ್ನು ಅವನಿದ್ದ ಸ್ಥಳವೇ ತಿಳಿಯದಂತೆ ಬಾಣಗಳಿಂದ ಮುಚ್ಚಿಬಿಟ್ಟನು ಆಮೇಲೆ ಸ್ವಲ್ಪ ಹೊತ್ತಿನಲ್ಲಿಯೇ ಒಂದು ತೀಕ್ಷ್ಣವಾದ ಕ್ಷುರಪ್ರದಿಂದ ಅವನ ತಲೆಯನ್ನು ಕಡಿಯಲು, ಅವನೂ ಸತ್ತು ಕೆಳಗೆ ಬಿದ್ದನು ಆಗ ಆ ಸುದರ್ಶನನ ಪರಿ ವಾರಗಳೆಲ್ಲವೂ ಕೋಪದಿಂದ ಒಂದಾಗಿ ಸೇರಿ ಭೀಮನನ್ನು ಸುತ್ತಿಕೊಂಡು ವಿವಿಧಬಾಣಗಳಿಂದ ಹೊಡೆಯಲಾರಂಭಿಸಿದುವು ಭೀಮನೂ ಆಗ ವಜ್ರ ಸಮಾನಗಳಾದ ಬಾಣಗಳಿಂದ ಕ್ಷಣಮಾತ್ರದಲ್ಲಿ ಆ ಸೈನ್ಯವನ್ನೆಲ್ಲ ಕೊಂದು ತೀರಿಸಿದನು ಈ ಸೈನ್ಯಗಳ ಕೊಲೆಯನ್ನು ನೋಡಿ ಕೆಲವು ಸೇನಾಧಿಪತಿ ಗಳು ಬಂದು ಭೀಮನನ್ನು ಯುದ್ಧಕ್ಕಾಗಿ ಇದಿರಿಸಿದರು ಅವರನ್ನೂ ಭೀಮನು ಬಾಣಗಳಿಂದ ಹೊಡೆಯುತ್ತ ಬಂದನು ನಿನ್ನವರೂ ದೊಡ್ಡ ಬಾಣವರ್ಷಗಳಿಂದ ಭೀಮನನ್ನು ಮುಚ್ಚುತಿದ್ದರು ಆಗ ಪಾಂಡವರಿಗೂ ನಿನ್ನವರಿಗೂ ಬಹಳ ತುಮುಲಯುದ್ಧವು ನಡೆಯಿತು. ಉಭಯಪಕ್ಷದ

ಲ್ಲಿಯೂ ಅನೇಕ ಯೋಧರು ತಮ್ಮತಮ್ಮ ಬಂಧುಗಳನ್ನು ಕೂಗಿ ಕರೆಯುತ್ತ ಹತರಾಗಿ ಬೀಳುತಿದ್ದರು

ಇದು ಇಪ್ಪತ್ತೇಳನೆಯ ಅಧ್ಯಾಯವು

ಸಹದೇವನು ಶಕುನಿಯನ್ನೂ, ಉಲೂಕನನ್ನೂ ಕೊಂದುದು

ರಾಜೇಂದ್ರಾ! ಅನೇಕ ಪ್ರಾಣಿಗಳಿಗೆ ನಾಶಕರವಾದ ಆ ಯುದ್ಧವು ನಡೆಯುತ್ತಿರುವಾಗ ಶಕುನಿಯು ಸಹದೇವನಿಗಿದಿರಾದನು ಶಕುನಿಯನ್ನು ಕಂಡೊಡನೆ ಸಹದೇವನ ಬಿಲ್ಲಿನಿಂದ ಪತಂಗದ ಹುಳಗಳಂತೆ ಬಾಣಪರಂಪರೆಗಳು ಹಾರತೊಡಗಿದುವು ಅವನು ಹತ್ತು ಬಾಣಗಳಿಂದ ಉಲೂಕನನ್ನು ಹೊಡೆದನು ಅದಕ್ಕೆ ಪ್ರತಿಯಾಗಿ ಶಕುನಿಯು ಮೂರು ಬಾಣಗಳಿಂದ ಭೀಮನನ್ನೂ, ತೊಂಭತ್ತು ಬಾಣಗಳಿಂದ ಸಹದೇವನನ್ನೂ ಪ್ರಹರಿಸಿದನು ಹೀಗೆ ಆ ಶೂರರೆಲ್ಲರೂ ಒಬ್ಬರಿಗೊಬ್ಬರು ಗರಿಗಟ್ಟಿದ ತೀಕ್ಷ್ಣ ಬಾಣಗಳಿಂದ ಹೊಡೆದಾಡುತ್ತಿದ್ದರು ಚೆನ್ನಾಗಿ ಸಾಣೆಹಿಡಿದು ಚಿನ್ನದ ಹಿಡಿಗಳುಳ್ಳ ಬಾಣಗಳನ್ನು ಅವರು ಬಿಲ್ಲಿನಲ್ಲಿ ನೇರಿಸಿ, ಕಿವಿಯವರೆಗೆ ಎಳೆದು ಬಿಡುತ್ತಿದ್ದಾಗ, ಆ ಬಾಣವರ್ಷವು ಮೇಘವರ್ಷದಂತೆ ಸಮಸ್ತ ದಿಕ್ಕುಗಳನ್ನೂ ಮರಸಿತು ಭೀಮ ಸಹದೇವರಿಬ್ಬರೂ ಅತಿಕೋಪದಿಂದ ರಣಾಂಗಣದಲ್ಲಿ ಸುತ್ತುತ್ತ ನಿನ್ನ ಸೈನ್ಯಗಳಮೇಲೆ ನೂರಾರು ಬಾಣಗಳನ್ನು ವರ್ಷಿಸಿದರು ಅವರ ಬಾಣಗಳು ಆಕಾಶವನ್ನೆಲ್ಲ ಅಂಧಕಾರಮಯವಾಗಿಸಿತು ಅವರ ಬಾಣಗಳಿಂದ ಮುಚ್ಚಲ್ಪಟ್ಟ ಕುದುರೆಗಳು ಸಿಕ್ಕಿದಕಡೆಗೆ ಚದರಿ, ಅಲ್ಲಲ್ಲಿ ಸತ್ತುಬಿದ್ದ ಸಾವಿರಾರು ಮಂದಿಯನ್ನು ಎಳೆದುಕೊಂಡು ಓಡುತಿದ್ದಾಗ, ಅವುಗಳ ಸಂಚಾರದಿಂದಲೇ ಅಲ್ಲಲ್ಲಿ ಮಾರ್ಗಗಳು ಏರ್ಪಡುತ್ತಿದ್ದುವು ಅಲ್ಲಲ್ಲಿ ರಾವುತರೊಡನೆ ಸತ್ತುಬಿದ್ದ ಕುದುರೆಗಳೂ, ಹರಿದುಬಿದ್ದ ಕವಚಗಳೂ, ತುಂಡಾಗಿ ಬಿದ್ದ ಋಷ್ಟಿ, ಪ್ರಾಸ, ಶಕ್ತಿ, ಖಡ್ಗ, ಪರಶ್ವಧಾದಿ ಶಸ್ತ್ರಾಸ್ತ್ರಗಳೂ ರಣಭೂಮಿಯನ್ನೆಲ್ಲ ಮರೆಸಿದುವು ಅದರಿಂದ ಆ ರಣಾಂಗಣವು ವಿಚಿತ್ರಪುಷ್ಪಗಳಿಂದ ಅಲಂಕರಿಸಲ್ಪಟ್ಟಂತೆ ಕಾಣಿಸಿತು ಯೋಧರು ಒಬ್ಬರನ್ನೊಬ್ಬರು ಕೊಲ್ಲುತ್ತ ಆವೇಶಹಿಡಿದವರಂತೆ ಸುತ್ತುತ್ತಿದರು

ರಾಜೇಂದ್ರಾ ! ಆಗ ಅಲ್ಲಲ್ಲಿ ಎಷ್ಟೋ ಮೃತದೇಹಗಳು ಬಿದ್ದಿದ್ದುವು ಹೊರಳಿದ ಕಣ್ಣಾಲಿಗಳು, ಕೋಪದಿಂದ ಕಚ್ಚಿದ ತುಟಿ, ಕಿವಿಯಲ್ಲಿ ಕುಂಡಲಗಳು, ಆನೆಯ ಸುಂಡಿಲಿನಂತೆ ದುಂಡಗೆ ನೀಡಿ ಕತ್ತರಿಸಿ ಬಿದ್ದ ಭುಜಗಳು, ಖಡ್ಗ ಪ್ರಾಸ ಮೊದಲಾದ ಆಯುಧಗಳೊಡನೆಯೂ, ಯುದ್ಧಕವಚಗಳೊಡನೆಯೂ, ತೋಳ್ಬಳೆಗಳೊಡನೆಯೂ ಕೂಡಿದ ತಲೆಯಿಲ್ಲದ ಮುಂಡಗಳು, ಇವುಗಳಿಂದ ಆ ರಣಭೂಮಿಯೆಲ್ಲ ಮರೆಸಿಹೋಯಿತು ತಲೆಯಿಲ್ಲದ ಕೆಲವು ಮುಂಡಗಳು ಹಾಗೆಯೇ ಮೇಲೆದ್ದು ನಿಂತಿರುವುವು ! ಕೆಲವು ಎದ್ದೆದ್ದು ಕುಣಿದಾಡುವುವು ! ಅಲ್ಲಲ್ಲಿ ಮಾಂಸಾಹಾರಿಗಳಾದ ಪ್ರಾಣಿಗಳೂ, ಪಿಶಾಚಗಳೂ ಮುತ್ತಿಕೊಂಡಿರುವುವು ಇದರಿಂದ ಆ ರಣಭೂಮಿಯು ಮಹಾಭಯಂಕರವಾಯಿತು ಅನೇಕ ಸೈನ್ಯಗಳು ಹತವಾಗಿ, ನಿನ್ನ ಕಡೆಯಲ್ಲಿ ಸ್ವಲ್ಪ ಸೈನ್ಯವು ಮಾತ್ರ ಉಳಿದಿರುವುದನ್ನು ನೋಡಿ ಪಾಂಡವರು ಮೇಲೆಮೇಲಿನ ಸಂತೋಷದಿಂದ ಮೇಲೆಮೇಲೆ ಕೌರವಸೈನ್ಯಗಳನ್ನು ಕೊಲ್ಲುತ್ತಿದ್ದರು ಇಷ್ಟರಲ್ಲಿ ಶಕುನಿಯು ಒಂದು ಪ್ರಾಸವನ್ನು ಅತಿವೇಗದಿಂದ ಸಹದೇವನ ತಲೆಗೆ ಗುರಿಯಿಟ್ಟು ಬೀಸಿದನು ಈ ಪ್ರಹಾರದಿಂದ ಸಹದೇವನಿಗೆ ಮೂರ್ಛೆಬಂದಂತಾಗಿ ರಥದಮೇಲೆ ಒರಗಿ ಕುಳಿತನು. ಸಹದೇವನ ಈ ಸ್ಥಿತಿಯನ್ನು ನೋಡಿ ಭೀಮನು ಕೋಪದಿಂದ ಥಟ್ಟನೆ ಮುಂದೆ ಬಿದ್ದು ಶತ್ರುಸೈನ್ಯವನ್ನಿದಿರಿಸಿ, ನೂರು ಸಾವಿರ ಲೆಖ್ಖದಿಂದ ಬಾಣಗಳನ್ನು ಬಿಟ್ಟು, ಅವರನ್ನು ಚದರಿಸುತ್ತ ಭಯಂಕರವಾದ ಸಿಂಹನಾದವನ್ನು ಮಾಡಿದನು ಈ ಶಬ್ದವನ್ನು ಕೇಳಿದಮಾತ್ರಕ್ಕೆ ಶಕುನಿಗೆ ಬೆಂಬಲವಾಗಿ ಬಂದಿದ್ದ ಗಜ ತುರಗ ಸೈನ್ಯಗಳೆಲ್ಲ ಭಯಪಟ್ಟು ಓಡಲಾರಂಭಿಸಿದುವು ಹೀಗೆ ಓಡುತ್ತಿರುವ ಸೈನ್ಯವನ್ನು ನೋಡಿ ನಿನ್ನ ಮಗನಾದ ದುರ್ಯೋಧನನು ಅವರನ್ನು ಕುರಿತು “ ಧರ್ಮಜ್ಞಾನವಿಲ್ಲದವರೇ ! ಹಿಂತಿರುಗಿರಿ ! ಯುದ್ಧಮಾಡಿರಿ ! ಈಗ ಓಡಿಹೋಗುವುದರಿಂದ ಫಲವೇನು ? ಯಾವ ಧೀರನು ಯುದ್ಧದಲ್ಲಿ ಬೆನ್ನು ತೋರಿಸದೆ ಪ್ರಾಣವನ್ನೊಪ್ಪಿಸುವನೋ, ಅವನು ಈ ಲೋಕದಲ್ಲಿ ಕೀರ್ತಿಯನ್ನು ಹೊಂದಿ ಪರಲೋಕದಲ್ಲಿ ಉತ್ತಮ ಮೋಕ್ಷವನ್ನು ಅನುಭವಿಸುವನು. ನೀವು ಓಡಿಹೋಗುವುದು ಧರ್ಮವಲ್ಲ ” ಎಂದನು ಈ ಮಾತನ್ನು ಕೇಳಿದಮೇಲೆ ಶಕುನಿಯ ಸೈನಿ

ಕರಲ್ಲರೂ ಇನ್ನು ಮೇಲೆ ತಾವು ಸಾಯುವವರೆಗೆ ಹಿಂತಿರುಗುವುದಿಲ್ಲವೆಂದು ಸಂಕಲ್ಪಮಾಡಿ, ಆರ್ಭಟದಿಂದ ತಿರುಗಿ ಪಾಂಡವರನ್ನಿದಿರಿಸಿ ಬಂದರು ಕಲಗಿದ ಸಮುದ್ರಘೋಷದಂತೆ ಅವರ ಕೂಗಾಟಗಳು ಪ್ರಬಲವಾಗಿ, ದಿಕ್ಕುಗಳನ್ನೆಲ್ಲ ತುಂಬಿತು ತಮಗಿದಿರಾಗ ವೇಗದಿಂದ ಬರುವ ಆ ಸೌಬಲ ಸೈನಿಕರನ್ನು ನೋಡಿ, ಪಾಂಡವರೂ ಜಯೋತ್ಸಾಹದಿಂದ ಅವರನ್ನಿದಿರಿಸಿದರು ಇಷ್ಟರಲ್ಲಿ ಮೂರ್ಛಿತನಾದ ಸಹದೇವನು ಚೇತರಿಸಿಕೊಂಡು, ಹತ್ತು ಬಾಣಗಳಿಂದ ಶಕುನಿಯನ್ನೂ, ಮೂರು ಬಾಣಗಳಿಂದ ಅವನ ರಥಾಶ್ವಗಳನ್ನೂ ಹೊಡೆದು, ಬೇರೆ ಕೆಲವು ಬಾಣಗಳಿಂದ ಅವನ ಕೈಯಲ್ಲಿದ್ದ ಧನುಸ್ಸನ್ನು ತುಂಡುಮಾಡಿದನು ಒಡನೆಯೇ ಶಕುನಿಯು ಬೇರೊಂದು ಬಿಲ್ಲನ್ನು ತೆಗೆದುಕೊಂಡು, ಅರುವತ್ತುಬಾಣಗಳಿಂದ ನಕುಲನನ್ನೂ, ಏಳು ಬಾಣಗಳಿಂದ ಭೀಮನನ್ನೂ ಹೊಡೆದನು ಇದೇ ಸಮಯದಲ್ಲಿ ಶಕುನಿಯ ಮಗನಾದ ಉಲೂಕನೂಕೂಡ ಭೀಮನನ್ನು ಏಳು ಬಾಣಗಳಿಂದಲೂ, ಸಹದೇವನನ್ನು ಎಪ್ಪತ್ತು ಬಾಣಗಳಿಂದಲೂ ತಡೆದನು ಇಷ್ಟರಲ್ಲಿಯೇ ಭೀಮನು ಒಂಭತ್ತು ಬಾಣಗಳಿಂದ ಅವನನ್ನು ಹೊಡೆದುದಲ್ಲದೆ, ಶಕುನಿಯನ್ನು ಅರುವತ್ತುನಾಲ್ಕು ಬಾಣಗಳಿಂದಲೂ, ಅವನ ಪಾರ್ಶ್ವರಕ್ಷಕರನ್ನು ಮೂರುಮೂರು ಬಾಣಗಳಿಂದಲೂ ಹೊಡೆದನು ಭೀಮನ ಪ್ರಹಾರವನ್ನು ಸಹಿಸಲಾರದೆ ಅವರು ಬಾಣವರ್ಷಗಳಿಂದ ಸಹದೇವನನ್ನು ಮುಚ್ಚಿದರು ಮಿಂಚಿನೊಡಗೂಡಿದ ಮೇಘಗಳು ಜಲಧಾರಗಳಿಂದ ಪರ್ವತವನ್ನು ಮರಸುವಂತೆ ಬಾಣಗಳಿಂದ ಸಹದೇವನು ಮರಸಿಹೋದನು ಆದರೇನು ? ಪ್ರತಾಪಶಾಲಿಯಾದ ಸಹದೇವನು ಅವನ್ನೆಲ್ಲ ತಡೆದು, ಒಂದೇ ಭಲ್ಲದಿಂದ ತನ್ನಿದಿರಾಗಿದ್ದ ಉಲೂಕನ ತಲೆಯನ್ನು ಕತ್ತರಿಸಿಬಿಟ್ಟನು ಅವನು ರಕ್ತದಿಂದ ತೊಯ್ದ ಸರ್ವಾವಯವವುಳ್ಳವನಾಗಿ ಪಾಂಡವರಿಗೆ ಸಂತೋಷವಾಗುವಂತೆ ರಥದಿಂದ ಕೆಳಗೆ ಬಿದ್ದುಬಿಟ್ಟನು ಪುತ್ರಮರಣವನ್ನು ನೋಡಿ ಶಕುನಿಗೆ ಸಂಕಟದಿಂದ ಕಣ್ಣುಗಳಲ್ಲಿ ನೀರು ತುಳುಕಿತು ಆಗ ವಿದುರನ ಬುದ್ಧಿವಾದಗಳು ಅವನ ನೆನಪಿಗೆ ಬಂದುವು ಅವನು ಕಣ್ಣೀರುಬಿಟ್ಟು ಸ್ವಲ್ಪಹೊತ್ತಿನವರೆಗೆ ಚಿಂತಿಸುತ್ತಿದ್ದು, ತಿರುಗಿ ಯುದ್ಧಕ್ಕೆ ನಿಂತು, ಮೂರು ಬಾಣಗಳಿಂದ ಸಹದೇವನನ್ನು ಹೊಡೆದನು ಆ ಬಾಣ

ಗಳನ್ನೆಲ್ಲ ಸಹದೇವನು ತನ್ನ ಬಾಣಗಳಿಂದ ತಡೆದುದಲ್ಲದೆ, ಶಕುನಿಯ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿಬಿಟ್ಟನು ಕೂಡಲೇ ಶಕುನಿಯು ದೊಡ್ಡದೊಂದು ಖಡ್ಗವನ್ನೆತ್ತಿ ಅದನ್ನು ಸಹದೇವನಮೇಲೆ ಬೀಸಿದನು ಭಯಂಕರವಾದ ಆ ಕತ್ತಿಯು ತನಗಿದಿರಾಗಿ ಬರುತ್ತಿರುವಾಗಲೇ ಸಹದೇವನು ಅದನ್ನು ಎರಡು ತುಂಡಾಗಿ ಕತ್ತರಿಸಿದನು ತನ್ನ ಖಡ್ಗವು ವಿಫಲವಾದುದನ್ನು ಕಂಡು ಶಕುನಿಯು ಒಂದು ಮಹಾಗದೆಯನ್ನೆತ್ತಿ ಸಹದೇವನಮೇಲೆ ಪ್ರಯೋಗಿಸಿದನು ಅದೂ ವಿಫಲವಾಗಿ ಬಿದ್ದುಹೋಯಿತು ಆಮೇಲೆ ಶಕುನಿಯು ಕಾಳರಾತ್ರಿಯಂತೆ ಬಯಂಕರವಾದ ಒಂದು ಶಕ್ತಿಯನ್ನು ಬೀಸಲು, ಅದನ್ನೂ ಸಹದೇವನು ತನ್ನ ಸಮಿಾಪಕ್ಕೆ ಬರುವಷ್ಟರಲ್ಲಿಯೇ ಮೂರು ತುಂಡಾಗಿ ಕತ್ತರಿಸಿದನು ಆ ಶಕ್ತಿಯು ತುಂಡುತುಂಡಾಗಿ, ಆಕಾಶದಿಂದ ಬಿಳುವ ಮಿಂಚಿನ ಶಕಲ್ರಗಳಂತೆ ಕೆಳಗೆ ಬಿದ್ದಿತು ಶಕುನಿಗೆ ಆಗ ಮನಸ್ಸಿನಲ್ಲಿ ಸ್ವಲ್ಪ ಭೀತಿಯು ಅಂಕುರಿಸಿತು ಹೀಗೆ ಶಕ್ತಿಯು ವಿಫಲವಾದುದನ್ನೂ, ಶಕುನಿಯು ಭಯಪಟ್ಟಿರುವುದನ್ನೂ ನೋಡಿ, ನಿನ್ನಕಡೆಯಲ್ಲಿ ಉಳಿದಿದ್ದ ಸೈನಿಕರೆಲ್ಲರೂ ಭೀತಿಗೊಂಡು ಓಡಲಾರಂಭಿಸಿದರು ಇದನ್ನು ನೋಡಿ ಪಾಂಡವರ ಕಡೆಯಲ್ಲಿ ಜಯೋತ್ಸಾಹದಿಂದುಂಟಾದ ದೊಡ್ಡ ಕೋಲಾಹಲವೆದ್ದಿತು ಕೌರವಸೈನಿಕರೆಲ್ಲರೂ ಪ್ರಾಯಕವಾಗಿ ಹಿಂತಿರುಗಿಬಿಟ್ಟರು ಹೀಗೆ ನಿನ್ನವರು ಯುದ್ಧಕ್ಕೆ ಹಿಂಜರಿದು ಓಡುತ್ತಿರುವ ಸಮಯದಲ್ಲಿಯೇ ಸಹದೇವನು ಅನೇಕಸಹಸ್ರಬಾಣಗಳಿಂದ ಅವರನ್ನು ಬೆನ್ನಟ್ಟಿ ಓಡಿಸುತ್ತಿದ್ದನು ಆಗ ಸಹದೇವನು ಶಕುನಿಯನ್ನು ತೀರಿಸಿಬಿಡಬೇಕೆಂಬ ದೃಢಸಂಕಲ್ಪದಿಂದ, ಅನೇಕ ಗ್ಗಾಂಧಾರಸೈನಿಕರಿಂದ ರಕ್ಷಿತನಾಗಿದ್ದ ಆ ಶಕುನಿಯನ್ನು ವೇಗದಿಂದಿದಿರಿಸಿ ಬಂದನು ಆ ಶಕುನಿಯ ವಧಕಾರ್ಯವೊಂದುಮಾತ್ರ ತನ್ನ ಪಾಲಿಗೆ ಉಳಿದಿರುವುದನ್ನು ಜ್ಞಾಪಿಸಿಕೊಂಡು, ಸಹದೇವನು ಸುವರ್ಣಾಲಂಕೃತವಾದ ರಥದಲ್ಲಿ ಕುಳಿತು, ತನ್ನ ಮಹಾಧನುಸ್ಸನ್ನು ಚೆನ್ನಾಗಿ ತೀಡಿ ನಾಣೇರಿಸಿ, ಧನುಷ್ಟಂಕಾರಗಳೊಡನೆ ಶಕುನಿಯನ್ನು ಸಮಿಾಪಿಸಿ, ಮದದಾನೆಯನ್ನು ಅಂಕುಶದಿಂದ ತಿವಿಯುವಂತೆ ಗರಿಗಟ್ಟಿದ ತೀಕ್ಷ್ಣಬಾಣಗಳಿಂದ ಮೇಲೆಮೇಲೆ ಅವನನ್ನು ಹೊಡೆಯುತ್ತ, ನಗುಮುಖದೊಡನೆ ಆ ಶಕುನಿಯನ್ನು ನೋಡಿ, ಅವನು ಹಿಂದೆ ತಮಗೆ ಮಾಡಿದ

ಕೆಡಕುಗಳನ್ನೆಲ್ಲ ಅವನ ಜ್ಞಾಪಕಕ್ಕೆ ತರುವಂತೆ ಚಮತ್ಕಾರವಾದ ನಿಂದಾ ವಾಕ್ಯಗಳಿಂದ ಹೀಗೆಂದು ಹೇಳುವನು "ಎಲ ಮೂಢಾ! ಹಿಂದೆ ನೀನು ದ್ಯೂತಸಭೆಯಲ್ಲಿ ಕೈಯಲ್ಲಿ ದಾಳಗಳನ್ನು ಹಿಡಿದು, ನಮ್ಮ ಮುಂದೆ ಏನೇ ನೋ ಬಾಯಿಗೆ ಬಂದಂತೆ ಹರಟುತ್ತಿದ್ದೆಯಲ್ಲವೆ? ಈಗ ಕ್ಷತ್ರಧರ್ಮದಲ್ಲಿ ಅದೇವಿಧವಾಗಿ ನಿನ್ನ ಪರಾಕ್ರಮವನ್ನು ತೋರಿಸಿ ಯುದ್ಧಮಾಡು ಆಗಲೇ ನೀನು ಗಂಡಸಾಗುವೆ ಎಲ ದುರಾತ್ಮಾ! ಆಗ ನೀನು ಮಾಡಿದ ಕಾರ್ಯ ಗಳಿಗೆ ಈಗ ಫಲವನ್ನು ಹೊಂದುವೆ ಹಿಂದೆ ಅದೇ ದ್ಯೂತಸಭೆಯಲ್ಲಿ ನಿನ್ನ ಮೋಸದಿಂದ ಸೋಲಿಸಲ್ಪಟ್ಟ ನಮ್ಮನ್ನು ಕುರಿತು ಯಾರುಯಾರು ಹಾಸ್ಯಮಾಡಿ ನಕ್ಕರೋ ಅವರಲ್ಲರೂ ಆಗಲೇ ಹತರಾದರು ಕೌರವ ಕುಲಕ್ಕೆ ಕಳಂಕದಂತಿರುವ ಆ ದುರ್ಯೋಧನನೊಬ್ಬನು, ಅವನ ಮಾವ ನಾದ ನೀನೊಬ್ಬನು, ನೀವಿಬ್ಬರೇ ಉಳಿದಿರುವಿರಿ ಇದೋ! ಈಗಲೇ ನಾನು ಮರದ ಹಣ್ಣನ್ನು ದಂಡದಿಂದ ಉದಿರಿಸುವಂತೆ, ಒಂದೇ ಕ್ಷುರಾ ಯುಧದಿಂದ ನಿನ್ನ ತಲೆಯನ್ನು ಕಡಿದು ಕೆಡಹುವೆನು" ಎಂದನು ಹೀ ಗೆಂದು ಹೇಳಿ ಸಹದೇವನು, ವೇಗದಿಂದ ಮುಂದೆ ಹೋಗಿ, ಕೋಪದಿಂದುರಿ ಯುತ್ತ, ಬಿಲ್ಲನ್ನು ಬಲವಾಗಿ ಎಳೆದು ಶಕುನಿಯನ್ನು ಹತ್ತು ಬಾಣಗಳಿಂದ ಹೊಡೆದನು ನಾಲ್ಕು ಬಾಣಗಳಿಂದ ಅವನ ನಾಲ್ಕು ಕುದುರೆಗಳನ್ನೂ ಕೊಂ ದನು ಬೇರೆ ಬಾಣಗಳಿಂದ ಶಕುನಿಯ ಛತ್ರವನ್ನೂ, ಧ್ವಜವನ್ನೂ, ಬಿಲ್ಲ ನ್ನೂ ಕತ್ತರಿಸಿಬಿಟ್ಟನು ಹೀಗೆ ತನ್ನ ಛತ್ರ ಧ್ವಜ ಚಾಮರಗಳೆಲ್ಲವೂ ಮುರಿದು, ತನ್ನ ಮರ್ಮಸ್ಥಾನಗಳೊಳಗೆಲ್ಲ ಅನೇಕ ಬಾಣಗಳು ನಾಟಿಕೊಂ ಡುದರಿಂದ, ಶಕುನಿಗೆ ಸಹದೇವನಮೇಲೆ ಕೈ ನಡೆಯದೆಹೋಯಿತು ಇದೇ ಸಮಯದಲ್ಲಿ ಸಹದೇವನು ಅವನಮೇಲೆ ಎಡೆಬಿಡದೆ ಬಾಣವರ್ಷಗಳನ್ನು ಸುರಿಸಿದನು ಈ ಸ್ಥಿತಿಯಲ್ಲಿಯೂ ಬಿಡದೆ ಶಕುನಿಯು ಕೋಪವನ್ನು ತಡೆಯಲಾರದೆ, ಒಂದು ಪ್ರಾಸವನ್ನು ಕೈಗೆತ್ತಿಕೊಂಡು ಸಹದೇವನನ್ನು ಅದರಿಂದ ಕೊಂದುಬಿಡಬೇಕೆಂಬ ಆತುರದಿಂದ ಮುಂದೆ ಬಿದ್ದು ಓಡಿಬಂ ದನು ಇದನ್ನು ನೋಡಿದೊಡನೆ ಸಹದೇವನು ಏಕಕಾಲದಲ್ಲಿ ಮೂರು ಬಾಣಗಳನ್ನು ಪ್ರಯೋಗಿಸಿ, ಆ ಶಕುನಿಯು ಎತ್ತಿಹಿಡಿದ ಪ್ರಾಸವನ್ನೂ, ಅವನ ಎರಡು ತೋಳುಗಳನ್ನೂ ಕತ್ತರಿಸಿ, ರಣಮಧ್ಯದಲ್ಲಿ ದೊಡ್ಡ ಸಿಂಹ

ನಾದವನ್ನು ಮಾಡಿದನು ಅಲ್ಲದೆ ಚಿನ್ನದ ಹಿಡಿಯುಳ್ಳ ಉಕ್ಕಿನ ತೀಕ್ಷ್ಣ ಬಾಣವೊಂದನ್ನು ತೆಗೆದು, ಎಂತಹ ವಜ್ರಕವಚಗಳನ್ನಾದರೂ ಭೇದಿಸತಕ್ಕ ಆ ಬಾಣವನ್ನು ಶಕುನಿಯು ಕಂಠಕ್ಕೆ ಸರಿಯಾಗಿ ಗುರಿಯಿಟ್ಟು ಹೊಡೆದು, ಅವನ ಶಿರಸ್ಸನ್ನು ಶರೀರದಿಂದ ಬೇರ್ಪಡಿಸಿ ಕೆಡಹಿದನು ಒಡನೆಯೇ ಶಕುನಿಯ ದೇಹವು ಎರಡು ತುಂಡಾಗಿ ಕೆಳಗೆ ಬಿದ್ದಿತು ಇಷ್ಟಾದರೂ ಸಹದೇವನಿಗೆ ಆ ಶಕುನಿಯಮೇಲಿನ ಕೋಪವು ಆರಲಿಲ್ಲ ಕೌರವರು ತಮಗೆ ಮಾಡಿದ ಅನ್ಯಾಯಗಳಿಗೆಲ್ಲ ಮೂಲಭೂತವಾದ ದುರ್ಮಂತ್ರಗಳು ಎಲ್ಲಿಂದ ಹೊರಡುತ್ತಿದ್ದುವೋ ಆ ಶಕುನಿಯ ತಲೆಯನ್ನು ತನ್ನ ಬಾಣಗಳಿಂದ ತುಂಡುತುಂಡಾಗಿ ನೆಗ್ಗಿ ಬಿಸಾಡಿದನು ದಾಳಗಳನ್ನೆಸೆದ ಅವನ ಎರಡು ತೋಳುಗಳನ್ನೂ ಮುಂಡದಿಂದ ಕಡಿದುಹಾಕಿದನು ರಕ್ತದಿಂದ ತೊಯ್ದು ನಡುಗುತ್ತಿದ್ದ ಆ ಶಕುನಿಯ ಶಿರಸ್ಸು ಭಯಂಕರರೂಪದೊಡನೆ ರಥದಿಂದ ಕೆಳಗೆ ಬಿದ್ದಿತು ತಲೆಹರಿದು ರಕ್ತದಿಂದ ತೊಯ್ದು ಬರೀ ಮುಂಡದೊಡನೆ ನೆಲದಲ್ಲಿ ಬಿದ್ದ ಆ ಶಕುನಿಯ ದೇಹವನ್ನು ನೋಡಿ, ನಿನ್ನವರು ಕೈಯಲ್ಲಿ ಶಸ್ತ್ರಗಳನ್ನು ಹಿಡಿದಿದ್ದಹಾಗೆಯೇ ಭಯದಿಂದ ಬುದ್ಧಿಗೆಟ್ಟು ದಿಕ್ಕುದಿಕ್ಕುಗಳಿಗೆ ಓಡಲಾರಂಭಿಸಿದರು ನಿನ್ನವರೆಲ್ಲರಿಗೂ ಮುಖವು ಬಣ್ಣಗೆಟ್ಟಿತು ಎಲ್ಲರಿಗೂ ಪ್ರಜ್ಞೆತಪ್ಪಿದಂತಾಯಿತು ಆಗಾಗ ಅರ್ಜುನನ ಗಾಂಡೀವಘೋಷವು ಅವರ ತಲೆಯಮೇಲೆ ಬಡಿದಂತೆ ಕೇಳಿಸುತ್ತಿತ್ತು ನಿನ್ನ ಚತುರಂಗ ಸೈನ್ಯಗಳೂ ಭಯದಿಂದೋಡಿಬಿಟ್ಟುವು ಶಕುನಿಯು ಬಿದ್ದೊಡನೆ ಶ್ರೀಕೃಷ್ಣನೊಡಗೂಡಿ ಪಾಂಡವರು ಸಂತೋಷದಿಂದ ಶಂಖಧ್ವನಿಗಳನ್ನು ಮಾಡಿ, ತಮ್ಮ ಸೈನಿಕರಿಗೆಲ್ಲ ಉತ್ಸಾಹವನ್ನು ಹುಟ್ಟಿಸುತ್ತಿದ್ದರು ಎಲ್ಲರೂ ಆಗ ಸಹದೇವನನ್ನು ಸುತ್ತಿಮುತ್ತಿ ಅವನನ್ನು ಗೌರವಿಸುತ್ತ “ಓ ವೀರಾಗ್ರಣೀ! ಮಹಾಬಲಾಢ್ಯನೂ, ಮೋಸಗಾರನೂ ಆದ ಆ ಶಕುನಿಯನ್ನು ಅವನ ಮಗನೊಡನೆ ವಧಿಸಿ, ನೀನು ದೈವಾಧೀನದಿಂದ ಜಯಶೀಲನಾದೆ” ಎಂದು ಪ್ರಶಂಸೆ ಮಾಡಿದರು

ಇದು ಇಪ್ಪತ್ತೇಳನೆಯ ಅಧ್ಯಾಯವು

**ಇಲ್ಲಿಗೆ ಶಲ್ಯವಧೆಪರ್ವವು ಮುಗಿದುದು.**



# ಹ್ರದಪ್ರವೇಶಪರ್ವವು.

---

{ ತನ್ನ ಕಡೆಯಲ್ಲಿ ಉಳಿದಿದ್ದ ಅಲ್ಪಸ್ವಲ್ಪ ಸೈನ್ಯಗಳನ್ನೂ ಪಾಂಡವರು ಕೊಂದಮೇಲೆ, ದುರ್ಯೋಧನನು ಯುದ್ಧರಂಗದಿಂದ ಪಲಾಯನಮಾಡುವುದಾಗಿ ನಿಶ್ಚಯಿಸಿದುದು }

ಓ ರಾಜಾ! ಆಮೇಲೆ ಶಕುನಿಯನ್ನು ಹಿಂಬಾಲಿಸಿಬಂದಿದ್ದ ವೀರರೆಲ್ಲರೂ ಕೋಪದಿಂದ ತಮ್ಮ ಪ್ರಾಣವನ್ನಾದರೂ ಒಪ್ಪಿಸಲು ಸಿದ್ಧರಾಗಿ, ಪಾಂಡವರನ್ನು ಸುತ್ತಿ ನಿಂತರು ಸಹದೇವನ ರಕ್ಷಣೆಗಾಗಿ ಅರ್ಜುನನೂ, ಉಗ್ರಸರ್ಪದಂತಿದ್ದ ಭೀಮಸೇನನೂ ಅವರನ್ನಿದಿರಿಸಿದರು ಶಕ್ತಿ, ರಿಷ್ಟಿ, ಪ್ರಾಸಗಳನ್ನು ಕೈಯಲ್ಲಿ ಹಿಡಿದು, ಸಹದೇವನ ವಧಕ್ಕಾಗಿ ಬಂದ ಅವರೆಲ್ಲರ ಕೋರಿಕೆಯನ್ನೂ ಧನಂಜಯನು ತನ್ನ ಗಾಂಡೀವವೇಗದಿಂದ ವಿಫಲಮಾಡಿದನು ಆಯುಧಪಾಣಿಗಳಾಗಿ ಇದಿರಿಸಿ ಬರುತ್ತಿದ್ದ ಆ ಯುದ್ಧವೀರರ ಕೈಗಳನ್ನೂ, ತಲೆಗಳನ್ನೂ, ಅವರ ಕುದುರೆಗಳನ್ನೂ ಕತ್ತಿಯಿಂದ ಕತ್ತರಿಸಿದನು ಆ ಪ್ರಹಾರದಿಂದ ಎಷ್ಟೋ ಕುದುರೆಗಳು ಸತ್ತುರುಳಿದುವು ತನ್ನ ಸೈನ್ಯಕ್ಕುಂಟಾಗುತಿದ್ದ ಆ ಕೊಲೆಯನ್ನು ಕಂಡೂ ನಿನ್ನ ಪುತ್ರನಾದ ದುರ್ಯೋಧನನು, ಸತ್ತುಳಿದಿದ್ದ ಆನೆ ಕುದುರೆಗಳ ಸೈನ್ಯವನ್ನೂ, ರಥಗಳನ್ನೂ, ಅಲ್ಲಲ್ಲಿದ್ದ ಕಾಲಾಳುಗಳನ್ನೂ ನೋಡಿ, ಭಯಶೋಕಗಳಿಂದ ಕಳವಳಿಸುತಿದ್ದ ಅವರನ್ನೆಲ್ಲ ಸಮಾಧಾನಗೊಳಿಸುತ್ತ "ಮುಂದೆ ಹೋಗಿರಿ! ಪಾಂಡವರನ್ನು ಅವರ ಬಂಧುಮಿತ್ರರೊಡನೆ ಕೊಲ್ಲುವ ಪ್ರಯತ್ನಮಾಡಿರಿ! ಸೇನಾಧಿಪತಿಯಾದ ಧೃಷ್ಟದ್ಯುಮ್ನನನ್ನು ಕೊಂದು ಬೇಗನೆ ಹಿಂತಿರುಗಿರಿ!" ಎಂದನು ನಿನ್ನ ಮಗನ ವಾಕ್ಯವನ್ನು ಮೀರಲಾರದೆ ಅವರು ತಿರುಗಿ ಪಾಂಡವರನ್ನಿದಿರಿಸಿದರು ಹತಶೇಷರಾದ ಕೌರವರು ತಮ್ಮನ್ನಿದಿರಿಸಿ ಬರುತ್ತಿರುವುದನ್ನು ನೋಡಿ ಪಾಂಡವರೂ ಅವರಮೇಲೆ ಸರ್ಪಸಮಾನಗಳಾದ ಬಾಣಗಳನ್ನು ಪ್ರಯೋಗಿಸಿದರು ಆ ಸೈನ್ಯವು ಯುದ್ಧಭೂಮಿಯನ್ನು ಸೇರಿದ ಒಂದು ಮುಹೂರ್ತಕಾಲದಲ್ಲಿಯೇ ವಧಿಸಲ್ಪಟ್ಟಿತು ಉಳಿದ ಸೈನ್ಯಕ್ಕೆ ರಕ್ಷಕರಿಲ್ಲದಂತಾಗಿ ಅದೂ ಭಯದಿಂದೋಡಿತು ಅದಕ್ಕೆ ನೆಲೆ

ಯಾಗಿ ನಿಲ್ಲಲು ಅನುಕೂಲವಾದ ಸ್ಥಳವಾವುದೂ ಸಿಕ್ಕದೆ, ನಾನಾಕಡೆಗೆ ಓಡುತ್ತಿರುವಾಗ, ಆ ಅಶ್ವಸೈನ್ಯದಿಂದೆದ್ದ ಧೂಳಿನಿಂದ ದಿಕ್ಕು ವಿದಿಕ್ಕು ಗಳೊಂದೂ ತಿಳಿಯದಂತಾಯಿತು. ಪಾಂಡವಸೈನ್ಯದಿಂದ ಮುಂದೆ ನುಗ್ಗಿ ಅನೇಕರು ನಿಮ್ಮವರನ್ನು ಒಂದು ಮುಹೂರ್ತಕಾಲದೊಳಗಾಗಿ ಹೊಡೆದು ಕೊಲ್ಲುತ್ತ ಬಂದರು ಪ್ರಾಯಕವಾಗಿ ನಿನ್ನ ಸೈನ್ಯವೆಲ್ಲ ನಿಶ್ಶೇಷವಾ ಯಿತು ಮೊದಲು ನಿನ್ನ ಮಗನೊಡನೆ ಸೇರಿ ಬಂದಿದ್ದ ಹನ್ನೊಂದಕ್ಷೌ ಹಿಣೀಸೈನ್ಯವೂ ಹೀಗೆ ಪಾಂಡವರಿಂದಲೂ, ಸೃಂಜಯರಿಂದಲೂ ಪೂರ್ಣ ವಾಗಿ ಕೊಲ್ಲಲ್ಪಟ್ಟಿತು ಓ ರಾಜಾ! ಮಹಾಬಲವುಳ್ಳ ಅಷ್ಟೊಂದು ರಾಜ ಸಮೂಹದಲ್ಲಿ, ಬಹಳವಾಗಿ ನೊಂದಿದ್ದ ದುರ್ಯೋಧನನೊಬ್ಬನೇ ಆಗ ಕಾಣಿಸಿದನು ಎಲ್ಲಾ ಯುದ್ಧವೀರರನ್ನೂ, ಸೈನ್ಯಗಳನ್ನೂ, ವಾಹನಗ ಳನ್ನೂ ಕಳೆದುಕೊಂಡ ಆ ದುರ್ಯೋಧನನು, ಆಗ ನಾಲ್ಕು ದಿಕ್ಕುಗಳನ್ನೂ, ರಣಭೂಮಿಯನ್ನೂ ಕಣ್ಣಿಟ್ಟು ನೋಡಿದನು ಎಲ್ಲವೂ ಕೇವಲ ಶೂನ್ಯ ಪ್ರಾಯವಾಗಿದ್ದಿತು ತನ್ನ ಪ್ರತಿಪಕ್ಷದಲ್ಲಿ ಪಾಂಡವರು, ಎಲ್ಲಾ ವಿಧಗಳ ಲ್ಲಿಯೂ ಕಾರ್ಯಸಿದ್ಧಿಯನ್ನು ಪಡೆದು, ಸಂತೋಷದಿಂದ ಕೋಲಾಹಲ ಮಾಡುತ್ತಿರುವುದನ್ನೂ ಕಂಡನು ಆಗಾಗ ಆ ಪಾಂಡವರ ಧನುಷ್ಟಂ ಕಾರಧ್ವನಿಯು ಕಿವಿಗೆ ಬೀಳುತ್ತಿರಲು, ಅವನಿಗೆ ಅದರಿಂದ ಬುದ್ಧಿಭ್ರಮೆ ಬಂದು, ರಣರಂಗದಿಂದ ಓಡಿಹೋಗುವುದಾಗಿ ತೀರ್ಮಾನಿಸಿಕೊಂಡನು

ಇದು ಇಪ್ಪತ್ತೆಂಟನೆಯ ಅಧ್ಯಾಯವು



ಅಸಹಾಯನಾದ ದುರ್ಯೋಧನನು ತನ್ನ ಗದೆಯನ್ನು ಕೈಗೆ ತ್ತಿಕೊಂಡು, ಮಡುವನ್ನು ಪ್ರವೇಶಿಸಲು ಹೊರಟುದು ಸಂಜಯನನ್ನು ಕೊಲ್ಲಲು ಪ್ರಯತ್ನಿಸಿದ ಸಾತ್ಯಕಿಯು ನ್ನು ವ್ಯಾಸನು ತಡೆದುದು ದುರ್ಯೋಧನನು ಸಂಜ ಯನ ಮೂಲಕವಾಗಿ ತನ್ನ ತಂದೆಗೆ ಸಂದೇಶವ ನ್ನು ಕಳುಹಿಸಿ, ಮಡುವಿನಲ್ಲಿಳಿದು ಜಲಸ್ತಂ ಭನ ಮಾಡಿದುದು ಅಶ್ವತ್ಥಾಮಾದಿಗಳು ದುಃಖದಿಂದ ಶಿಬಿರಕ್ಕೆ ಹಿಂತಿರುಗಿದು ದು ಯುಯುತ್ಸುವು ರಾಜಪತ್ನಿ ಯರನ್ನು ಪಟ್ಟಣಕ್ಕೆ ಕರೆದು ಕೊಂಡು ಹೋದುದು

ಆಗ ಧೃತರಾಷ್ಟ್ರನು "ಓ ಸಂಜಯಾ! ಸೈನ್ಯವೆಲ್ಲ ಹತವಾಗಿ ನಮ್ಮ ಶಿಬಿರವು ಜನಶೂನ್ಯವಾಯಿತಷ್ಟೆ? ಆಗ ಪಾಂಡವಸೈನ್ಯದಲ್ಲಿ ಉಳಿದಿದ್ದವರು ಯಾರು? ಗರ್ವಿಯೂ, ಸಹಾಯಶೂನ್ಯನೂ ಆದ ನನ್ನ ಮಗನು ತನ್ನ ಸರ್ವನಾಶವನ್ನು ನೋಡಿದಮೇಲೆ ಮಾಡಿದುದೇನು? ಅದನ್ನು ನನಗೆ ತಿಳಿಸು" ಎಂದನು

ಅದಕ್ಕಾ ಸಂಜಯನು "ಓ ರಾಜಾ! ಯುದ್ಧದಲ್ಲಿ ಧೃಷ್ಟದ್ಯುಮ್ನನು ಯಾವ ಪಾಂಡವಸೇನೆಗೆ ಸೇನಾಪತಿಯಾಗಿದ್ದನೋ, ಆ ಸೈನ್ಯದಲ್ಲಿ ಕೊನೆಗೆ ಎರಡು ಸಾವಿರರಥಗಳೂ, ಏಳುನೂರು ಆನೆಗಳೂ, ಐದುಸಾವಿರ ಕುದುರೆಗಳೂ, ಹತ್ತುಸಾವಿರ ಕಾಲಾಳುಗಳೂ ಉಳಿದಿದ್ದುವು. ಇತ್ತಲಾಗಿ ಏಕಾಕಿಯಾಗಿ ಉಳಿದುಕೊಂಡ ನಿನ್ನ ಮಗನು, ತನಗೆ ಸಹಾಯರಾರನ್ನೂ ಕಾಣದೆ, ತನ್ನ ಸೈನ್ಯವೆಲ್ಲ ನಷ್ಟವಾದುದನ್ನೂ, ಶತ್ರುಗಳು ಗರ್ಜಿಸುವುದನ್ನೂ ಕಂಡನು ಅವನಿಗೆ ಬುದ್ಧಿಯು ತಬ್ಬಿಬ್ಬಾಯಿತು. ತನಗೆ ವಾಹನವಾಗಿದ್ದ ಕುದುರೆಯೂ ಸಾಯಲು, ಅದರಿಂದಿಳಿದು ಭಯದಿಂದೋಡಿದನು. ಹನ್ನೊಂದಕ್ಷೌಹಿಣೀಸೈನ್ಯಗಳಿಗೆ ನಾಥನೆನಿಸಿ ಮಹಾಪರಾಕ್ರಮಶಾಲಿಯಾದ ನಿನ್ನ ಮಗನು, ಗದಾಯುಧವನ್ನು ಹೊತ್ತುಕೊಂಡು, ಬರೀ ಕಾಲುನಡೆಯಿಂದಲೇ ಒಂದು ಮಡುವನ್ನುಕುರಿತು ಹೊರಟನು ಹಾಗೆ ಅವನು

ಒಂಟಿಯಾಗಿ ನಡೆಯುತಿದ್ದಾಗ, ಧಾರ್ಮಿಕನೂ, ಬುದ್ಧಿವಂತನೂ ಆದ ವಿದುರನು ತನಗೆ ಹೇಳಿದ ಹಿತವಾದಗಳೆಲ್ಲ ಅವನ ನೆನಪಿಗೆ ಬಂದುವು ಆಗ ಅವನು ತನ್ನಲ್ಲಿತಾನು "ಆಹಾ! ಮಹಾಪ್ರಾಜ್ಞನಾದ ವಿದುರನು ಇದನ್ನೆಲ್ಲ ಹಿಂದೆಯೇ ಹೇಳಿದ್ದನು ಈಗ ನಮಗೂ, ಎಲ್ಲಾ ಕ್ಷತ್ರಿಯರಿಗೂ ಸಂಭವಿಸಿರುವ ಈ ಮಹಾವ್ಯಸನವನ್ನು ಅವನು ಮೊದಲೇ ಚೆನ್ನಾಗಿ ತಿಳಿದಿದ್ದನು" ಎಂದು ಪಶ್ಚಾತ್ತಾಪಪಡುತ್ತ ಮುಂದೆ ಸಾಗಿದನು ಹೀಗೆ ಮಹಾಸಂಕಟದಿಂದ ನಿನ್ನ ಮಗನು ಹನ್ನೊಂದಕ್ಷೌಹಿಣೀಸೈನ್ಯಕ್ಕೂ ನಾಥನಾಗಿದ್ದ ತನಗೆ ಈ ಅವಸ್ಥೆಯುಂಟಾಯಿತೆಂಬ ವ್ಯಸನದಿಂದ ಮಡುವಿನಲ್ಲಿ ಪ್ರವೇಶಿಸಿಬಿಟ್ಟನು. ರಾಜಾ! ದೈವಬಲಕ್ಕೆಮೇಲೆ ಬಲವುಂಟೆ? ಇತ್ತಲಾಗಿ ಧೃಷ್ಟದ್ಯುಮ್ನನೇ ಮೊದಲಾದ ಪಾಂಡವರು, ಆಗಲೂ ಅಧಿಕಕೋಪದಿಂದ ನಿನ್ನ ಸೈನ್ಯವನ್ನು ಕುರಿತು ವೇಗದಿಂದಿದಿರಿಸಿಹೋದರು ಶಕ್ತಿಗಳನ್ನೂ, ರಿಷ್ಟಿಗಳನ್ನೂ ಈಟಿಗಳನ್ನೂ ಹಿಡಿದು ಗರ್ಜಿಸುತ್ತಿರುವ ಆ ನಿನ್ನ ಸೈನ್ಯಗಳ ಆರ್ಭಟವನ್ನೆಲ್ಲ ಅರ್ಜುನನು ತನ್ನ ಒಂದೇ ಗಾಂಡೀವ ಧನುಸ್ಸಿನಿಂದ ವಿಫಲಮಾಡಿದನು ಬಂಧು, ಮಿತ್ರ, ಮಂತ್ರಿ ಪರಿಜನರೊಡಗೂಡಿದ ಆ ಸೈನ್ಯಗಳನ್ನೆಲ್ಲ ಅವನು ತೀಕ್ಷ್ಣಬಾಣಗಳಿಂದ ಕೊಂದು, ಶ್ವೇತಾಶ್ವಗಳುಳ್ಳ ರಥದಲ್ಲಿ ಶಾನೀತಾನಾಗಿ ಬೆಳಗುತಿದ್ದನು ರಥ ಗಜ ತುರಗ ಪದಾತಿಸೈನ್ಯಗಳೊಡನೆ ಶಕುನಿಯೂ ಕೊಲ್ಲಲ್ಪಡಲು, ನಿಮ್ಮ ಸೈನ್ಯವು ವೃಕ್ಷಶೂನ್ಯವಾದ ಕಾಡಿನಂತಾಯಿತು ದುರ್ಯೋಧನನ ಲಕ್ಷೋಪಲಕ್ಷ ಸೈನ್ಯದಲ್ಲಿ ವೀರನಾದ ದ್ರೋಣಪುತ್ರನು, ಕೃತವರ್ಮನು, ಕೃಪನು, ರಾಜನಾದ ನಿನ್ನ ಮಗನು, ಇವರುಹೊರತು ಬೇರೆ ಯಾವ ಮಹಾರಥನೂ ಬದುಕಿದಹಾಗೆ ಕಾಣಲಿಲ್ಲ ರಾಜಾ! ಇಷ್ಟರಲ್ಲಿ ಧೃಷ್ಟದ್ಯುಮ್ನನು ನನ್ನನ್ನು ನೋಡಿ ನಗುತ್ತ, ಸಾತ್ಯಕಿಯನ್ನು ಕುರಿತು "ಇವನನ್ನು ಹಿಡಿದು ತಂದಿಟ್ಟುಕೊಂಡು ನಮಗಾಗುವುದೇನು? ಇವನನ್ನು ಜೀವಸಹಿತವಾಗಿರಿಸುವುದರಿಂದ ಪ್ರಯೋಜನವೇನಿದೆ?" ಎಂದನು ಧೃಷ್ಟದ್ಯುಮ್ನನು ಈ ಮಾತನ್ನು ಹೇಳಿದುದೇ ಸಾಕೆಂದು ಸಾತ್ಯಕಿಯು ಹರಿತವಾದ ಕತ್ತಿಯನ್ನೆತ್ತಿ ನನ್ನನ್ನು ಕೊಲ್ಲಲು ಯತ್ನಿಸುವಷ್ಟರಲ್ಲಿ, ಮಹಾಪ್ರಾಜ್ಞನಾದ ವ್ಯಾಸನು ಆತನ ಸಮೀಪಕ್ಕೆ ಬಂದು 'ಸಾತ್ಯಕೀ! ಈ ಸಂಜಯನನ್ನು ಕೊಲ್ಲದೆ

ಬಿಟ್ಟುಬಿಡು ಹೇಗೂ ಇವನನ್ನು ಕೊಲ್ಲಬಾರದು' ಎಂದನು ಆದರ ಮೇಲೆ ಸಾತ್ಯಕಿಯು ವ್ಯಾಸನಿಗೆ ಕೈಮುಗಿದು ನನ್ನನ್ನು ಬಿಟ್ಟುಬಿಟ್ಟು 'ಸಂಜಯಾ! ಕ್ಷೇಮದಿಂದ ಹಿಂತಿರುಗು' ಎಂದನು ಒಡನೆ ನಾನು ಯುದ್ಧ ಕವಚವನ್ನು ಬಿಚ್ಚಿ, ಶಸ್ತ್ರಪರಿತ್ಯಾಗಮಾಡಿ, ರಕ್ತದಿಂದ ತೊಯ್ದ ಮೈಯೊಡನೆ ಸಾಯಂಕಾಲದಲ್ಲಿ ಪಟ್ಟಣವನ್ನು ಕುರಿತು ಹೊರಟೆನು ದಾರಿಯಲ್ಲಿ ಬರುತ್ತಿರುವಾಗ ದುರ್ಯೋಧನನು ಏಕಾಕಿಯಾಗಿ ನನ್ನಿದಿರಿಗೆ ಬರುತ್ತಿದ್ದುದನ್ನು ಕಂಡೆನು ಅವನಾದರೋ ಆಗಲೇ ಪಟ್ಟಣದಿಂದ ಒಂದು ಕ್ರೋಶ ದೂರಕ್ಕೆ ಬಂದಿದ್ದನು ಅವನ ಮೈಯೆಲ್ಲ ಗಾಯಗಳಿಂದ ತುಂಬಿದ್ದಿತು. ಗದೆಯನ್ನು ಕೈಯಲ್ಲಿ ಹಿಡಿದಿರುವನು ಅನಾಥನಂತೆ ಸಹಾಯಕರಾರೂ ಇಲ್ಲದೆ ಏಕಾಕಿಯಾಗಿ ಬರುತ್ತಿರುವನು ಅವನ ಕಣ್ಣುಗಳಲ್ಲಿ ನೀರು ತುಂಬಿ ತುಳುಕುತ್ತಿದ್ದುದರಿಂದ, ಅವನಿಗೆ ನನ್ನನ್ನು ನೋಡಲುಕೂಡ ಸಾಧ್ಯವಾಗಲಿಲ್ಲ ಕೊನೆಗೆ ಅವನು ಪಕ್ಕಕ್ಕೆ ತಿರುಗಿ ದೀನಸ್ಥಿತಿಯಲ್ಲಿದ್ದ ನನ್ನನ್ನು ನೋಡಿದನು ಏಕಾಕಿಯಾಗಿ ನಿಂತು ದುಃಖಿಸುತ್ತಿರುವ ದುರ್ಯೋಧನನನ್ನು ಕಂಡು ನಾನೂ ಅಧಿಕದುಃಖಾಕುಲನಾಗಿ ಮುಹೂರ್ತಕಾಲದವರೆಗೆ ಅವನನ್ನು ಮಾತಾಡಿಸಲಾರದೆಹೋದೆನು ರಾಜಾ! ನಾನೇನು ಹೇಳಲಿ? ಸಾವಿರಾರು ರತ್ನಗಳಿಂದ ಖಚಿತವಾದ ಕಿರೀಟಗಳನ್ನು ಧರಿಸಿದ ಮೂರ್ಧಾಭಿಷಿಕ್ತರಾದ ಎಷ್ಟೋ ಮಂದಿ ರಾಜರು ಯಾವನ ಅರಮನೆಗೆ ಕಪ್ಪಗಳನ್ನು ತಂದೊಪ್ಪಿಸುತ್ತಿದ್ದರೋ, ಯಾವನಿಗಾಗಿ ಕರ್ಣನೊಬ್ಬನೇ ಚತುಸ್ಸಮುದ್ರಗಳನ್ನೇ ಮೇರೆಯಾಗಿ ಉಳ್ಳ ರತ್ನಸಮೃದ್ಧವಾದ ಸಮಸ್ತಭೂಮಿಯಿಂದಲೂ ಕಪ್ಪವನ್ನು ತರಿಸಿಕೊಡುತಿದ್ದನೋ, ಯಾವನ ಆಜ್ಞೆಯು ಕರ್ಣನಿಂದ ಶತ್ರುರಾಷ್ಟ್ರಗಳೊಳಗೆಲ್ಲ ನಿರಂಕುಶವಾಗಿ ನಡೆಯುವಂತಾಗಿದ್ದಿತೋ, ಕರ್ಣನ ಸಹಾಯದಿಂದ ಯಾವನ ಶಸ್ತ್ರಗಳಿಗೆ ಶ್ರಮವೇನೂ ಇಲ್ಲದಂತಿದ್ದಿತೋ. ಯಾವನು ಐಶ್ವರ್ಯದಲ್ಲಿ ಕುಬೇರನನ್ನೂ ಲಕ್ಷ್ಯಮಾಡದೆ ಹಸ್ತಿನಾವತಿಯಲ್ಲಿದ್ದುಕೊಂಡು ರಾಜ್ಯವನ್ನು ಕ್ಷೇಮದಿಂದ ಶತ್ರುಬಾಧೆಯಿಲ್ಲದೆ ಪರಿಪಾಲಿಸುತ್ತಿದ್ದನೋ, ಯಾವನು ಒಂದು ಗೃಹದಿಂದ ಮತ್ತೊಂದು ಗೃಹಕ್ಕಾಗಲಿ, ದೇವಾಲಯಗಳಿಗಾಗಲಿ ಹೋಗುವಾಗ, ಚಿನ್ನದ ಸರಿಗೆಯ ವಸ್ತ್ರದಿಂದ ನಡೆಮಡಿಯು ಹಾಸಲ್ಪಡುತಿದ್ದಿತೋ, ಯಾವನು ಬೀದಿಯಲ್ಲಿ ಹೊರ

ಟಾಗ ಶ್ರೀಮಂತರ ಮನೆಗಳೆಲ್ಲ ಸೂರ್ಯಕಿರಣವನ್ನೇ ಮರೆಸುವಂತೆ ವಿಶಾಲವಾದ ಧ್ವಜಪತಾಕೆಗಳಿಂದಲೂ, ತೋರಣಗಳಿಂದಲೂ ಪ್ರಕಾಶಿಸುತ್ತಿದ್ದುವೋ, ಇಂದ್ರಸಮಾನನೂ, ಮಹಾಬಲಶಾಲಿಯೂ ಆದ ಯಾವಾತನು ಐರಾವತಕ್ಕೆ ಸಮಾನವಾದ ಆನೆಯನ್ನೇರಿ ಅಟ್ಟಹಾಸದಿಂದ ಹೊರಡುತ್ತಿದ್ದನೋ, ಅಂತಹ ದುರ್ಯೋಧನನು, ಈಗ ತನ್ನ ಅಂಗಾಂಗಗಳೊಳಗೆಲ್ಲ ಗಾಯಪಟ್ಟು, ಬರಿಯಕಾಲಿನಿಂದ ನೆಲದಮೇಲೆ ನಿಂತಿರುವುದನ್ನು ನೋಡಿ, ನನ್ನ ವ್ಯಸನಕ್ಕೆ ಮೇರೆಯಿಲ್ಲದಂತಾಯಿತು ಲೋಕಪ್ರಭುವೆನಿಸಿದ್ದ ಆ ದುರ್ಯೋಧನನಿಗೆಕೂಡ ಇಂತಹ ವಿಪತ್ತು ಸಂಭವಿಸಿದಮೇಲೆ ಇದೆಲ್ಲವೂ ವಿಧಿವಿಲಾಸವಲ್ಲವೇ? ಆಗ ನಾನು ಆ ದುರ್ಯೋಧನನಿಗೆ, ಸಾತ್ಯಕಿಯು ನನ್ನನ್ನು ಹಿಡಿದುದನ್ನೂ ವ್ಯಾಸನ ಕೃಪೆಯಿಂದ ನಾನು ಪ್ರಾಣಸಹಿತನಾಗಿ ಬಿಡುಗಡೆ ಹೊಂದಿದುದನ್ನೂ, ತಿಳಿಸಿದೆನು ಆತನೂ ಒಂದು ಮುಹೂರ್ತಕಾಲದವರೆಗೆ ಭ್ರಾಂತನಾಗಿ ಆಲೋಚಿಸುತ್ತಿದ್ದು, ಆಮೇಲೆ ಬುದ್ಧಿಯಲ್ಲಿ ತಿಳಿವನ್ನು ಹೊಂದಿ, ತನ್ನ ಸಹೋದರರ ವಿಷಯವಾಗಿಯೂ, ಸೈನ್ಯದ ವಿಷಯವಾಗಿಯೂ ಮುಂದೆ ನಡೆದ ವೃತ್ತಾಂತಗಳನ್ನೆಲ್ಲ ನನ್ನನ್ನು ಕೇಳಿದನು ಅವೆಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿದ್ದ ನಾನು, ಸಹೋದರರೆಲ್ಲರೂ ಕೊಲ್ಲಲ್ಪಟ್ಟುದನ್ನೂ, ಸೈನ್ಯವೆಲ್ಲವೂ ನಷ್ಟವಾದುದನ್ನೂ ಆ ದುರ್ಯೋಧನನಿಗೆ ತಿಳಿಸುತ್ತ 'ರಾಜಾ! ನಾವು ಯುದ್ಧಕ್ಕೆ ಹೊರಟ ಸಮಯದಲ್ಲಿಯೇ ವ್ಯಾಸಮುನಿಯು ನನ್ನನ್ನು ಕರೆದು ನಿನ್ನ ಕಡೆಯುವರಲ್ಲಿ ಮೂರುಮಂದಿ ರಥಿಕರು ಮಾತ್ರ ಉಳಿಯುವರು' ಎಂದು ಹೇಳಿದ್ದನು ಅದರಂತೆಯೇ ಆಯಿತು' ಎಂದೆನು ಆಗ ನಿನ್ನ ಮಗನು ದೀರ್ಘವಾಗಿ ನಿಟ್ಟುಸಿರುಬಿಡುತ್ತ, ಅಡಿಗಡಿಗೆ ಧ್ಯಾನಪರನಾಗಿ, ನನ್ನನ್ನು ನೋಡಿ, ಕೊನೆಗೆ ನನ್ನ ಕೈಯನ್ನು ಹಿಡಿದುಕೊಂಡು ಹೀಗೆಂದನು "ಓ ಸಂಜಯಾ! ಈಗಿನ ಯುದ್ಧದಲ್ಲಿ ನೀನುಹೊರತು ಬೇರೊಬ್ಬರೂ ಜೀವಸಹಿತವಾಗಿ ಉಳಿಯಲಿಲ್ಲ ನಿನ್ನ ಹೊರತು ಬೇರೊಬ್ಬನೂ ನನ್ನ ಕಣ್ಣಿಗೂ ಬೀಳಲಿಲ್ಲ ಪಾಂಡವರಾದರೋ ತಮ್ಮ ಎಲ್ಲಾ ಪರಿವಾರಗಳೊಡನೆ ಮೆರೆಯುತ್ತಿರುವರು ಈಗ ನನಗೆ ಬೇರೆ ಉಪಾಯವಿಲ್ಲ ಜ್ಞಾನಚಕ್ಷುಸ್ಸಳ್ಳ ನನ್ನ ತಂದೆಯೊಡನೆ ನೀನು 'ನಿನ್ನ ಮಗನಾದ ದುರ್ಯೋಧನನು ಮಡುವಿನಲ್ಲಿ ಪ್ರವೇಶಿಸಿದ'ನೆಂದು

ತಿಳಿಸಿಬಿಡು ! ಪಾಂಡವರಿಂದ ರಾಜ್ಯವು ಆಕ್ರಮಿಸಲ್ಪಟ್ಟಮೇಲೆ, ಬಂಧು ಮಿತ್ರ ಪುತ್ರ ಸಹೋದರರನ್ನೆಲ್ಲ ಕಳೆದುಕೊಂಡು ನನ್ನಂತೆ ಯಾವನು ತಾನೇ ಪ್ರಾಣಸಹಿತನಾಗಿರಬಲ್ಲನು ? ಇಂದಿಗೆ ನಾನು ಮಹಾಯುದ್ಧದಿಂದ ಬಿಡುಗಡೆಹೊಂದಿದೆನೆಂದೂ, ನಾನು ಗಾಯದಿಂದ ಬಹಳವಾಗಿ ನೊಂದಿರುವೆನೆಂದೂ, ಯಾರಿಗೂ ತಿಳಿಯದಂತೆ ಜಲಪೂರ್ಣವಾದ ಮಡುವಿನಲ್ಲಿ ಪ್ರಾಣಸಹಿತನಾಗಿ ಮರಸಿಕೊಂಡಿರುವೆನೆಂದೂ ನನ್ನ ತಂದೆಗೆ ತಿಳಿಸು '' ಎಂದನು ಓ ರಾಜಾ ! ಹೀಗೆ ಹೇಳಿ ಒಡನೆಯೇ ದುರ್ಯೋಧನನು ಮಡುವಿನಲ್ಲಿ ಪ್ರವೇಶಿಸಿಬಿಟ್ಟನು ಅಲ್ಲಿ ಆತನು ತನ್ನ ಮಾಯಾಶಕ್ತಿಯಿಂದ ಆ ಮಡುವಿನ ಜಲವನ್ನು ಸ್ತಂಭನಮಾಡಿರುವನು ಅತ್ತಲಾಗಿ ಆತನು ಮಡುವಿಗೆ ಪ್ರವೇಶಿಸಿದೊಡನೆ ಒಂಟಿಯಾಗಿ ಬರುತಿದ್ದ ನಾನು, ಅದೇ ದಾರಿಯಲ್ಲಿ ನನಗಿದಿರಾಗಿ ಬಹಳವಾಗಿ ಬಳಲಿದ ವಾಹನಗಳೊಡನೆ ಒಂದಾಗಿ ಬರುತಿದ್ದ ರಥಿಕಶ್ರೇಷ್ಠರಾದ ಕೃಪ ಕೃತವರ್ಮಾಶ್ವತ್ಥಾಮರು ಮೂವರನ್ನೂ ಕಂಡನು ಅವರೆಲ್ಲರೂ ನನ್ನನ್ನು ನೋಡಿದೊಡನೆ ತಮ್ಮ ಕುದುರೆಗಳನ್ನು ಓಡಿಸಿಕೊಂಡು ನನ್ನನ್ನು ಸಮಿಾಪಿಸಿ, '' ಸಂಜಯಾ ! ಭಾಗ್ಯವಿಶೇಷದಿಂದ ನೀನು ಬದುಕಿರುವೆಯಾ ? ರಾಜನಾದ ದುರ್ಯೋಧನನು ಜೀವಸಹಿತನಾಗಿರುವನೇ ? '' ಎಂದು ಕೇಳಿದರು ಆಗ ನಾನು ' ರಾಜನು ಕ್ಷೇಮದಿಂದಿರುವನು ' ಎಂದು ಹೇಳಿ ದುರ್ಯೋಧನನು ನನ್ನೊಡನೆ ಹೇಳಿದುದೆಲ್ಲವನ್ನೂ ಅವರಿಗೂ ತಿಳಿಸಿದೆನು ನನ್ನ ಮಾತನ್ನು ಕೇಳಿದೊಡನೆ ಅಶ್ವತ್ಥಾಮನು ಆ ಹ್ರದದಕಡೆಗೆ ಕಣ್ಣಿಟ್ಟು ನೋಡುತ್ತ ದೀನಸ್ವರದಿಂದ ' ಆಹಾ ! ಈ ಕೃತ್ಯವು ನಿಂದೆಗೆ ಗುರಿಯಾದುದಲ್ಲವೆ ? ನಾವು ಜೀವಸಹಿತರಾಗಿರುವುದು ದುರ್ಯೋಧನರಾಜನಿಗೆ ತಿಳಿಯದೇನು ? ನಾವು ಆ ದುರ್ಯೋಧನನಿಗೆ ಸಹಾಯಕರಾಗಿ ಶತ್ರುಗಳನ್ನಿದಿರಿಸಿ ಯುದ್ಧ ಮಾಡಲು ಸಮರ್ಥರಲ್ಲವೆ ? ' ಎಂದು ವಿಲಪಿಸಿದನು ರಥಿಕಶ್ರೇಷ್ಠರಾದ ಆ ಮಹಾರಥರು ಮೂವರೂ ಸ್ವಲ್ಪಹೊತ್ತು ರೋದಿಸುತ್ತಿದ್ದು, ಆಮೇಲೆ ಯುದ್ಧರಂಗದಲ್ಲಿ ಕೂಗುತ್ತಿದ್ದ ಪಾಂಡವರನ್ನು ಕಂಡು ವೇಗದಿಂದ ಅಲ್ಲಿಗೆ ಓಡಿದರು ಕೌರವರಕಡೆಯಲ್ಲಿ ಹತಶೇಷರಾಗಿದ್ದ ಆ ಮೂವರೂ ಕೃಪನ ರಥದಮೇಲೆ ನನ್ನನ್ನೇರಿಸಿಕೊಂಡು ಸೇನಾನಿವೇಶಸ್ಥಳಕ್ಕೆ ಬಂದರು ಸೂ

ರ್ಯನು ಅಸ್ತಮಿಸುವ ಕಾಲಕ್ಕೆ, ಅಲ್ಲಿದ್ದ ಸೇನಾಸಮೂಹಗಳೆಲ್ಲ ಬಿಡಾರದಲ್ಲಿ ಬಂದು ಕಲೆತುವು ನಿನ್ನ ಪುತ್ರರ ನಾಶವನ್ನು ಕಂಡು ಎಲ್ಲರೂ ಶೋಕಗೊಂಡರು ಆಮೇಲೆ ವೃದ್ಧ ಕಂಚುಕಿಗಳು ಬಿಡಾರದಲ್ಲಿದ್ದ ರಾಜಪತ್ನಿಯರನ್ನು ಕರೆದುಕೊಂಡು ಪಟ್ಟಣಕ್ಕೆ ಹೊರಟುಹೋದರು ಆ ಪಟ್ಟಣದಲ್ಲಿ ಕೌರವರ ಸಾವನ್ನು ಕೇಳಿ ಅಲ್ಲಲ್ಲಿ ನಾನಾಕಡೆಗಳಿಂದ ಸ್ತ್ರೀಯರ ರೋದನಧ್ವನಿಗಳು ಹೊರಟುವು ಆ ಸ್ತ್ರೀಯರೆಲ್ಲ ತಮ್ಮ ಪತಿಗಳ ಮತ್ತು ಬಂಧುಗಳ ಮರಣವನ್ನು ಕೇಳಿ ಕುರರಪಕ್ಷಿಗಳಂತೆ ದೀನಧ್ವನಿಯಿಂದ ಪ್ರಲಾಪಿಸುತ್ತ, ತಮ್ಮ ರೋದನಧ್ವನಿಯಿಂದ ಭೂಮಿಯೆಲ್ಲ ಪ್ರತಿಧ್ವನಿ ಕೊಡುವಂತೆ ಕೂಗಿಡುತ್ತಿದ್ದರು ಕೆಲವರು ಬೆರಳುಗಳಿಂದಲೂ, ಕೈಗಳಿಂದಲೂ, ತಲೆಗಳನ್ನು ಚಚ್ಚಿಕೊಳ್ಳುವರು ಅಲ್ಲಲ್ಲಿ ಕೆಲವರು ತಲೆಕೂದಲುಗಳನ್ನು ಕೆದರಿಕೊಂಡು 'ಹಾ! ಹಾ!' ಎಂದು ಮೊರೆಯಿಟ್ಟು ಕೂಗುತ್ತ ಎದೆಯನ್ನು ಬಡಿದುಕೊಳ್ಳುವರು ಕೆಲವರು ಒಳಗೊಳಗೆ ದುಃಖದಿಂದ ಕುದಿಯುತ್ತಿದ್ದರು ಆಗ ದುರ್ಯೋಧನನ ಮಂತ್ರಿಗಳೆಲ್ಲರೂ, ದುಃಖದಿಂದ ಕಣ್ಣೀರನ್ನು ಸುರಿಸುತ್ತ, ಗದ್ಗದಸ್ವರದಿಂದ ರಾಜಪತ್ನಿಯರನ್ನು ಸಮಾಧಾನಗೊಳಿಸಿ, ಸಂಗಡ ಕರೆದುಕೊಂಡು ಪಟ್ಟಣಕ್ಕೆ ಬರುತಿದ್ದರು ಅವರೊಡನೆ ಕೈಯಲ್ಲಿ ದಂಡವನ್ನು ಹಿಡಿದು ಬಾಗಿಲುಕಾಯುತಿದ್ದ ದ್ವಾರಪಾಲಕರೂ, ಅಂತಃಪುರಾಧ್ಯಕ್ಷರೂ, ಉತ್ತಮವಾದ ಹೊದಿಕೆಗಳಿಂದ ಕೂಡಿದ ಹಾಸಿಗೆಗಳನ್ನು ಹೊತ್ತುಕೊಂಡು ನಗರಕ್ಕೆ ಬರುತಿದ್ದರು ಹಿಂದೆ ಯಾವಾಗಲೂ ಸೂರ್ಯನ ಕಣ್ಣಿಗೂ ಬೀಳದಿದ್ದ ಆ ರಾಜಸ್ತ್ರೀಯರೆಲ್ಲ, ಪಟ್ಟಣಕ್ಕೆ ಬರುತ್ತಿರುವಾಗ, ಸಾಧಾರಣಜನರುಕೂಡ ನೋಡುವಂತಾಯಿತು ಪತಿ ಪುತ್ರ ಬಾಂಧವರನ್ನೆಲ್ಲ ಕಳೆದುಕೊಂಡ ಅನೇಕ ಸ್ತ್ರೀಯರು ನಗರಕ್ಕೆ ಬಂದು ಸೇರುತಿದ್ದರು ಆಬಾಲಗೋಪಾಲಕರೂ ಭೀಮನ ಭಯದಿಂದ ನಿಂತಲ್ಲಿ ನಿಲ್ಲದೆ ವೇಗದಿಂದ ನಗರವನ್ನು ಕುರಿತು ಓಡುತಿದ್ದರು ರಣರಂಗವನ್ನು ಬಿಟ್ಟು ಬಂದಮೇಲೆಯೂ ಅವರಿಗೆ ಪಾಂಡವರ ಬೆಜ್ಜರವು ಬಿಡಲಿಲ್ಲ. ಒಬ್ಬರ ಮುಖವನ್ನೊಬ್ಬರು ನೋಡುತ್ತ ಅವರೆಲ್ಲರೂ ಗುಂಪಾಗಿ ಭಯದಿಂದೋಡುತ್ತಿರುವಾಗ, ದುಃಖಾವೇಶದಿಂದ ಬುದ್ಧಿಭ್ರಮೆಗೊಂಡಂತಿದ್ದ ಯುಯುತ್ಸುವು, ಕಾಲೋಚಿತವೇನೆಂದು ತನ್ನಲ್ಲತಾನು ಹೀಗೆಂದು

ಚಿಂತಿಸುವನು "ಆಹಾ! ಭಯಂಕರಪರಾಕ್ರಮವುಳ್ಳ ಪಾಂಡವರು ಹನ್ನೊಂದಕ್ಷೌಹಿಣೀಸೈನ್ಯಗಳಿಗೂ ನಾಥನಾದ ದುರ್ಯೋಧನನನ್ನೇ ಜಯಿಸಿಬಿಟ್ಟರು ಆತನ ಸಹೋದರರೆಲ್ಲ ಸತ್ತರು ಭೀಷ್ಮ ದ್ರೋಣರೊಡನೆ ಎಲ್ಲಾ ಕೌರವವೀರರೂ ಹತರಾದರು ನಾನೊಬ್ಬನುಮಾತ್ರ ಏನೋ ಅದೃಷ್ಟವಶದಿಂದ ಆ ಮಹಾವಿಪತ್ತನ್ನು ತಪ್ಪಿಸಿಕೊಂಡು ಬಂದಿರುವೆನು ಎಲ್ಲಾ ಸೈನ್ಯವೂ ಶಿಬಿರವನ್ನು ಬಿಟ್ಟು ನಾಲ್ಕು ಕಡೆಗಳಲ್ಲಿಯೂ ಚದರಿ ಓಡಿತು ಈಗಲೂ ನಮ್ಮವರನೇಕರು ಅನಾಥರಾಗಿ, ವೀರ್ಯವಡಗಿ, ದುಃಖ ಭಯಗಳಿಂದ ಕಲಗಿದ ಕಣ್ಣುಗಳೊಡನೆ, ಬೆದರಿದ ಜಿಂಕೆಗಳಂತೆ ದಿಕ್ಕುದಿಕ್ಕುಗಳನ್ನು ನೋಡುತ್ತ ಅಲ್ಲಲ್ಲಿ ಓಡುತ್ತಿರುವರು ಸತ್ತುಳಿದ ದುರ್ಯೋಧನನ ಮಂತ್ರಿಗಳಲ್ಲಿ ಕೆಲವರು ರಾಜಪತ್ನಿಯರನ್ನು ಕರೆದುಕೊಂಡು ನಗರವನ್ನು ಪ್ರವೇಶಿಸಿದರು ಆದುದರಿಂದ ಈಗ ನಾನು ಆ ಧರ್ಮರಾಜನನ್ನೂ, ಕೃಷ್ಣನನ್ನೂ ಪ್ರಾರ್ಥಿಸಿಕೊಂಡು ಅವರ ಅನುಮತಿಯನ್ನು ಪಡದು ಆಮೇಲೆ ಪುರಪ್ರವೇಶಮಾಡುವುದೇ ಉಚಿತವೆಂದು ತೋರುವುದು" ಎಂದು ನಿಶ್ಚಯಿಸಿ, ಅವನು ಅಲ್ಲಿಂದ ಬಂದು ಆದನ್ನು ಅವರಿಬ್ಬರಿಗೂ ತಿಳಿಸಿದನು ಕರುಣಾಳುವಾದ ಯುಧಿಷ್ಠಿರನು ಆತನ ವಿಷಯದಲ್ಲಿ ಪ್ರೀತಿಯಿಟ್ಟು, ಅವನನ್ನು ಆಲಿಂಗನಮಾಡಿಕೊಂಡು, ನಗರಕ್ಕೆ ಹೋಗುವಂತೆ ಆತನಿಗೆ ತಾನೇ ಅನುಮತಿಕೊಟ್ಟನು ಆಮೇಲೆ ಯುಯುತ್ಸುವು ರಥದಮೇಲೇರಿ, ಕುದುರೆಗಳನ್ನು ವೇಗದಿಂದೋಡಿಸುತ್ತ, ರಾಜಪತ್ನಿಯರನ್ನೆಲ್ಲ ತನ್ನೊಡನೆ ನಗರಕ್ಕೆ ಕರದುಕೊಂಡುಹೋದನು ಅವರೆಲ್ಲರೂ ಕಣ್ಣೀರು ಬಿಟ್ಟು ಗದ್ಗದಸ್ವರದಿಂದ ಕೂಗಿಡುತ್ತ, ಸೂರ್ಯಾಸ್ತಮಯದಲ್ಲಿ ಹಸ್ತಿನಾಪುರವನ್ನು ಪ್ರವೇಶಿಸಿದರು ಅಲ್ಲಿನ ಅರಮನೆಯಲ್ಲಿ ಧೃತರಾಷ್ಟ್ರ ಮಹಾರಾಜನಿಗೆ ಸ್ವಲ್ಪ ದೂರವಾಗಿ ನಿಂತು ಶೋಕದಿಂದ ಕಣ್ಣೀರು ಸುರಿಸುತ್ತ ಪ್ರಜ್ಞೆತಪ್ಪಿದಂತಿದ್ದ ವಿದುರನನ್ನು ಕಂಡರು ಧೈರ್ಯಸ್ವಭಾವವುಳ್ಳ ವಿದುರನು ತನ್ನ ಮುಂದೆ ನಮಸ್ಕರಿಸುತ್ತ ನಿಂತಿರುವ ಯುಯುತ್ಸುವನ್ನು ಕುರಿತು "ವತ್ಸಾ! ಕೌರವರಿಗೆಲ್ಲ ಕ್ಷಯಕಾರಿಯಾದ ಆ ಯುದ್ಧದಲ್ಲಿ ನೀನೊಬ್ಬನಾದರೂ ಭಾಗ್ಯವಿಶೇಷದಿಂದ ಜೀವಸಹಿತನಾಗಿ ಉಳಿದಿರುವೆಯಾ? ದುರ್ಯೋಧನನೊಡನೆ ಸೇರದೆ ನೀನುಮಾತ್ರ ಇಲ್ಲಿ

ಗೇಕೆ ಬಂದೆ? ಕಾರಣವನ್ನು ಸವಿಸ್ತರವಾಗಿ ತಿಳಿಸು" ಎಂದನು ಆಗ ಯುಯುತ್ಸುವು "ಅಯ್ಯಾ! ಆ ಯುದ್ಧದಲ್ಲಿ ಪುತ್ರ ಮಿತ್ರಬಾಂಧವರೊಡನೆ ಶಕುನಿಯು ಕೊಲ್ಲಲ್ಪಟ್ಟಮೇಲೆ, ಅತ್ಯಲ್ಪಪರಿವಾರವುಳ್ಳ ದುರ್ಯೋಧನರಾಜನು, ತನ್ನ ಕುದುರೆಯನ್ನು ಬಿಟ್ಟಿಳಿದು, ಭಯದಿಂದ ಪೂರ್ವಾಭಿಮುಖವಾಗಿ ಓಡಿದನು ರಾಜನು ಓಡಿಹೋದೊಡನೆ ಮಿಕ್ಕವರೆಲ್ಲರೂ ಭಯದಿಂದ ವ್ಯಾಕುಲಗೊಂಡು ನಗರವನ್ನು ಕುರಿತು ಹೊರಟರು ಆಮೇಲೆ ಅಧಿಕಾರಿಗಳೂ ರಾಜಪತ್ನಿಯರನ್ನೂ ಆತನ ಸಹೋದರನ ಪತ್ನಿಯರನ್ನೂ ವಾಹನಗಳಮೇಲೇರಿಸಿಕೊಂಡು ಭಯದಿಂದೋಡಿದರು. ಆಮೇಲೆ ನಾನು ಲೋಕಾಪವಾದವನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ, ಶ್ರೀಕೃಷ್ಣನ ಮತ್ತು ಧರ್ಮರಾಜನ ಅನುಮತಿಯನ್ನು ಪಡೆದೇ ಈ ಹಸ್ತಿನಾಪುರವನ್ನು ಪ್ರವೇಶಿಸಿದೆನು" ಎಂದನು

ಧರ್ಮಜ್ಞನೂ, ಅಪಾರಬುದ್ಧಿಯುಳ್ಳವನೂ ಆದ ವಿದರನು, ಯುಯುತ್ಸುವಿನ ಮಾತನ್ನು ಕೇಳಿ ಅದೇ ಈಗ ಸಮಯೋಚಿತವಾದುದೆಂದೆಣಿಸಿ, ಆತನನ್ನು ಸ್ತುತಿಸುತ್ತ "ಕ್ಷತ್ರಿಯವಿನಾಶಕರವಾದ ಈ ಯುದ್ಧದಲ್ಲಿ ಕಾಲಾನುಸಾರವಾಗಿ ನಡೆದು, ವಾಸ್ತವವನ್ನು ತಿಳಿಸಿದ ನಿನ್ನ ದಯಾಗುಣದಿಂದ ಕುಲಧರ್ಮವು ರಕ್ಷಿಸಲ್ಪಟ್ಟಂತಾಯಿತು ವೀರಕ್ಷಯಕರವಾದ ಆ ಯುದ್ಧದಲ್ಲಿ ಭಾಗ್ಯವಶದಿಂದ ಬದುಕಿಬಂದ ನಿನ್ನನ್ನು, ಪ್ರಜೆಗಳು ಸೂರ್ಯನನ್ನು ಹೇಗೋ ಹಾಗೆ, ನಾವೆಲ್ಲರೂ ನೋಡಿ ಸಂತೋಷಿಸುವಂತಾಯಿತು ವತ್ಸಾ! ದುರಾಶೆಯಿಂದಲೂ, ದುರ್ವಿಧಿಯಿಂದಲೂ ಬುದ್ಧಿಗೆಟ್ಟು, ಕಾಲಮಹಿಮೆಯನ್ನರಿಯದೆ, ನಾನು ಹಲವು ವಿಧಗಳಲ್ಲಿ ಪ್ರಾರ್ಥಿಸಿ ಕೇಳಿದರೂ ಅದಕ್ಕೆ ಕಿವಿಗೊಡದೆ ಅನ್ಯಾಯಕ್ಕೆಬಿದ್ದ, ಅಂಧನೂ, ದೂರದೃಷ್ಟಿಯಿಲ್ಲದವನೂ ಆದ ಆ ಧೃತರಾಷ್ಟ್ರನಿಗೆ, ಎಲ್ಲಾ ವಿಧಗಳಲ್ಲಿಯೂ ನೀನೊಬ್ಬನು ಮಾತ್ರ ಈಗ ಊರುಗೋಲಿನಂತೆ ಉಳಿದಿರುವೆ ಈ ದಿನದಲ್ಲಿ ನೀನು ಇಲ್ಲಿಯೇ ವಿಶ್ರಾಂತಿಹೊಂದಿದ್ದು ನಾಳೆ ಯುಧಿಷ್ಠಿರನ ಬಳಿಗೆ ಹೋಗು" ಎಂದನು ವಿದುರನು ಕಣ್ಣುಗಳಲ್ಲಿ ನೀರು ತುಂಬಿಸಿಕೊಂಡು ಹೀಗೆಂದು ಹೇಳಿ, ಅವನ ಅನುಮತಿಯನ್ನು ಪಡೆದು ತಾನು ರಾಜನ ಅರಮನೆಯನ್ನು ಪ್ರವೇ

ಶಿಸಿದನು ಪಟ್ಟಣವು ರೋದನಧ್ವನಿಯಿಂದ ತುಂಬಿತು. ಸಂತೋಷ ವೆಂಬುದು ಎಲ್ಲಿಯೂ ಅಣುಮಾತ್ರವೂ ಇರಲಿಲ್ಲ ಎಲ್ಲವೂ ಕಾಂತಿಗುಂದಿ ದ್ದಿತು ಉದ್ಯಾನಗಳೆಲ್ಲವೂ ಹಾಳುಬಿದ್ದಂತೆ ಕಾಣಿಸಿದುವು ಮೊದ ಲೇ ಚಿಂತಾಕುಲನಾಗಿದ್ದ ವಿದುರನಿಗೆ, ಆ ಸ್ಥಿತಿಯನ್ನು ನೋಡಿ ವ್ಯಸನವು ಮತ್ತಷ್ಟು ಹೆಚ್ಚಿತು ಧರ್ಮಜ್ಞನಾದ ವಿದುರನು ಮಹಾವ್ಯಸನದಿಂದ ನಗರವನ್ನು ಪ್ರವೇಶಿಸಿ ನಿಟ್ಟುಸಿರು ಬಿಡುತಿದ್ದನು ಯುಯುತ್ಸುವು ಆ ದಿನ ರಾತ್ರಿ ಮನೆಯಲ್ಲಿಯೇ ನಿಂತುಬಿಟ್ಟನು ಮಹಾವ್ಯಸನಕ್ಕೊಳಗಾದ ಯುಯುತ್ಸುವು ಸ್ತುತಿಪಾಠಕರಿಂದ ಸ್ತುತಿಸಲ್ಪಟ್ಟರೂ, ಭರತವಂಶದ ನಾಶ ವನ್ನು ನೆನೆಸಿ, ಮನಸ್ಸಿನಲ್ಲಿ ಸಂತೋಷವಿಲ್ಲದೆ ಆ ರಾತ್ರಿಯೆಲ್ಲ ಕೊರಗುತಿ ದ್ದನು

ಇದು ಇಪ್ಪತ್ತೊಂಭತ್ತನೆಯ ಅಧ್ಯಾಯವು

ಕೃಪಾಶ್ವತ್ಥಾಮರು ದುರ್ಯೋಧನನೊಡನೆ ಮಾತನಾಡುತ್ತಿ ದ್ದುದನ್ನು ಅಕಸ್ಮಾತ್ತಾಗಿ ಕಂಡ ಕೆಲವು ಬೇಡರು ಪಾಂಡ ವರಿಗೆ ದುರ್ಯೋಧನನಿರುವ ಮಡುವನ್ನು ತಿಳಿಸಲು, ಅ ವರು ಅಲ್ಲಿಗೆ ಬಂದುದು ಕೃಪಾದಿಗಳು ಇದನ್ನು ದೂರದಲ್ಲಿದ್ದ ಒಂದು ಆಲದ ಮರದಡಿಯಲ್ಲಿ ಮರೆಯಾಗಿ ಕುಳಿತು ನೋಡುತಿದ್ದುದು ದು ರ್ಯೋಧನನು ತಿರುಗಿ ಜಲಸ್ತಂಭನಮಾಡಿ ಮಡುವಿಗೆ ಇಳಿದುದು

ಓ ರಾಜೇಂದ್ರಾ! ಮೊದಲು ಮದದಾನೆಗಳ ಘೀಂಕಾರದಿಂದ ತುಂಬಿ ದ್ದ ಕೌರವಶಿಬಿರವು, ಒಂದು ಮುಹೂರ್ತಕಾಲದೊಳಗಾಗಿ ಕೇವಲ ಶೂನ್ಯ ಪ್ರಾಯವಾಯಿತು ಯಾವ ಸ್ಥಳದಲ್ಲಿ ಧನುಷ್ಟಂಕಾರಘೋಷಗಳಿಂದ ಮಹಾರಥರು ಯಾವುದನ್ನೂ ಅರಿಯದಂತಾಗಿದ್ದರೋ, ಆ ಸ್ಥಳದಲ್ಲಿ ನಮಗೆ ಒಬ್ಬ ಮನುಷ್ಯನ ಪಿಸುಮಾತಾದರೂ ಕೇಳಿಸಲಿಲ್ಲ'' ಎಂದನು

ಆಗ ಧೃತರಾಷ್ಟ್ರನು ''ಓ ಸಂಜಯಾ! ಪಾಂಡವರಿಂದ ನಮ್ಮ ಕಡೆಯ ವೀರರೆಲ್ಲರೂ ಹತರಾದಮೇಲೆ, ನಮ್ಮಲ್ಲಿ ಸತ್ತುಳಿದ ಕೆಲವರು

ಏನು ಮಾಡಿದರು? ಕೃತವರ್ಮನೂ, ಕೃಪನೂ, ದ್ರೋಣಪುತ್ರನೂ, ಮಂದಬುದ್ಧಿಯುಳ್ಳ ನನ್ನ ಮಗನೂ ಮುಂದೆ ಮಾಡಿದ ಕಾರ್ಯವೇನು?'' ಎಂದನು ಅದಕ್ಕಾ ಸಂಜಯನು '' ಸೈನ್ಯಗಳೂ, ರಾಜಪತ್ನಿಯರೂ ಬಿಟ್ಟೋಡಿದಮೇಲೆ, ನಮ್ಮ ಶಿಬಿರವು ಕೇವಲ ಶೂನ್ಯವಾಗಿದ್ದಿತು ಆಗ ರಾಜನಲ್ಲಿ ಅಧಿಕ ವಿಶ್ವಾಸವುಳ್ಳ ಕೃಪನೇ ಮೊದಲಾದ ಮೂವರು ರಥಿಕರೂ ಅತ್ತಲಾಗಿ ಪಾಂಡವರ ಜಯಘೋಷವನ್ನೂ, ಇತ್ತಲಾಗಿ ಸೈನ್ಯಶೂನ್ಯವಾದ ನಮ್ಮ ಶಿಬಿರವನ್ನೂ ನೋಡಿ, ಸಾಯಂಕಾಲದಲ್ಲ ಆ ಸ್ಥಳದಲ್ಲಿ ನಿಲ್ಲಲು ಮನಸ್ಸಿಲ್ಲದೆ, ದುರ್ಯೋಧನನು ಅವಿತುಕೊಂಡಿದ್ದ ಮಡುವಿನ ಕಡೆಗೇ ಹೊರಟರು ಅತ್ತಲಾಗಿ ಯುಧಿಷ್ಠಿರನಾದರೋ ಸಂತೋಷದಿಂದ ತನ್ನ ಸಹೋದರರೊಡಗೂಡಿ ದುರ್ಯೋಧನನನ್ನು ಕೊಲ್ಲುವ ಉದ್ದೇಶದಿಂದ ಅವನನ್ನು ಯುದ್ಧರಂಗದಲ್ಲಿ, ಅಲ್ಲಲ್ಲಿ ಹುಡುಕುತಿದ್ದನು ಪಾಂಡವರು ಎಷ್ಟೆಷ್ಟು ಹುಡುಕಿ ನೋಡಿದರೂ ಆತನನ್ನು ಕಾಣಲಿಲ್ಲ ಅತ್ತಲಾಗಿ ದುರ್ಯೋಧನನು ಯುದ್ಧವನ್ನು ಬಿಟ್ಟು, ಕಾಲುನಡೆಯಿಂದೋಡಿ, ಮಾಯೆಯಿಂದ ಜಲಸ್ತಂಭನಮಾಡಿ ಮಡುವನ್ನು ಪ್ರವೇಶಿಸಿ ಅಲ್ಲಿ ಅವಿತುಕೊಂಡನು ಇತ್ತಲಾಗಿ ಪಾಂಡವರೂ ಬಳಲಿದ ವಾಹನಗಳುಳ್ಳವರಾಗಿ, ತಮ್ಮ ಬಿಡಾರವನ್ನು ಸೇರಿ, ತಮ್ಮ ಕಡೆಯ ವೀರರೊಡನೆ ವಿಶ್ರಾಂತಿಗೊಂಡು ಮಲಗಿದ್ದರು ಈ ಸಮಯದಲ್ಲಿ ಕೃಪನೂ, ಅಶ್ವತ್ಥಾಮನೂ, ಕೃತವರ್ಮನೂ, ಮೆಲ್ಲಗೆ ಆ ಮಡುವನ್ನು ಕುರಿತು ಹೊರಟರು ದುರ್ಯೋಧನನು ಮುಳುಗಿದ್ದ ಮಡುವನ್ನು ಸೇರಿ, ನೀರಿನೊಳಗೆ ಮಲಗಿದ್ದ ರಾಜನನ್ನು ಕುರಿತು '' ರಾಜಾ! ಯುದ್ಧಮಾಡುವೆವು ಮೇಲೆದ್ದು ಬಾ! ಯುಧಿಷ್ಠಿರನನ್ನು ಇದಿರಿಸು ಜಯಶೀಲನಾಗಿ ಬದುಕಿಬಂದರ ಭೂಮಿಯನ್ನನುಭವಿಸುವೆ ಕೊಲ್ಲಲ್ಪಟ್ಟರ ವೀರಸ್ವರ್ಗವನ್ನು ಪಡೆಯುವೆ ದುರ್ಯೋಧನಾ! ಈಗ ನಿನ್ನಿಂದ ಪಾಂಡವರ ಬಲವು ಬಹಳಮಟ್ಟಿಗೆ ಕ್ಷೀಣವಾಗಿದೆ ಆ ಕಡೆಯಲ್ಲಿ ಸತ್ತುಳಿದಿರುವ ವೀರರೂ ನಿನ್ನಿಂದ ಬಹಳವಾಗಿ ನೊಂದುಹೋಗಿರುವರು ಈ ಸ್ಥಿತಿಯಲ್ಲಿ ನಾವೂ ನಿನಗೆ ಬೆಂಬಲವಾಗಿರುವಾಗ, ನಿನಗೆ ಭಯವೇಕೆ? ನಿನ್ನ ಪರಾಕ್ರಮವನ್ನು ತಡೆಯಲು ಅವರು ಎಂದಿಗೂ ಶಕ್ತರಲ್ಲ ಮೇಲಕ್ಕೆದ್ದು ಬಾ!'' ಎಂದರು ಆಗ ದುರ್ಯೋಧನನು ಅವರನ್ನು

ಕುರಿತು “ ಅಪ್ತರೇ ! ಸರ್ವನಾಶಕರವಾದ ಆ ಮಹಾಯುದ್ಧದಿಂದ ಬದುಕಿಬಂದ ನಿಮ್ಮನ್ನು ಭಾಗ್ಯವಶದಿಂದ ನಾನು ನೋಡುವಂತಾಯಿತು ಸ್ವಲ್ಪಹೊತ್ತು ಶ್ರಮವನ್ನು ತೀರಿಸಿಕೊಂಡು, ಆಮೇಲೆ ಪಾಂಡವರನ್ನು ನಾವೆಲ್ಲರೂ ಸೇರಿ ಜಯಿಸುವೆವು ಈಗ ನೀವೂ ಆಯಾಸಪಟ್ಟಿರುವಿರಿ! ನಾನೂ ಬಹಳವಾಗಿ ಗಾಯಪಟ್ಟಿರುವೆನು ಈಗ ಪಾಂಡವರ ಸೇನೆಯು ಬಹಳ ಬಲವುಳ್ಳುದು ಆದುದರಿಂದ ಈಗ ನಾನು ಯುದ್ಧಕ್ಕೆ ಸಮ್ಮತಿಸಲಾರನು ಓ ವೀರರೇ ! ಈಗಲೂ ನಿಮ್ಮ ಮನಸ್ಸು ಧೈರ್ಯಗೊಂಡಿರುವುದೇನೂ ಅತಿಶಯವಲ್ಲ ನಮ್ಮಲ್ಲಿ ಪ್ರಬಲಶಕ್ತಿಯುಂಟಾದರೂ ನಮ್ಮ ಪರಾಕ್ರಮವನ್ನು ತೋರಿಸಲು ಇದು ಸಮಯವಲ್ಲ ನಾನು ಈ ರಾತ್ರಿ ವಿಶ್ರಾಂತಿಯನ್ನು ತೆಗೆದುಕೊಂಡು, ನಾಳೆ ನಿಮ್ಮೊಡನೆ ಸೇರಿಯೇ ಶತ್ರುಗಳನ್ನಿದಿರಿಸಿ ಯುದ್ಧಮಾಡುವೆನು ಆಗ ನನಗೆ ಶ್ರಮವಿರುವುದಿಲ್ಲ” ಎಂದನು ಈ ಮಾತನ್ನು ಕೇಳಿ ಅಶ್ವತ್ಥಾಮನು ರಾಜನನ್ನು ಕುರಿತು “ ರಾಜಾ ! ಹಾಗಲ್ಲ ! ಈಗಲೇ ಎದ್ದು ಬಾ ! ನಿನಗೆ ಮಂಗಳವಾಗಲಿ ! ನಾವೇ ಶತ್ರುಗಳನ್ನು ಜಯಿಸುವೆವು ನನ್ನ ಸತ್ಯ, ದಾನ, ಜಪ, ಇಷ್ಟಾಪೂರ್ತ (ಯಜ್ಞಕರ್ಮಗಳು ಮತ್ತು ತಟಾಕಾದಿನಿರ್ಮಾಣಗಳು) ಗಳಮೇಲೆ ಆಣೆಯಿಟ್ಟು ಹೇಳುವೆನು ಈ ದಿನವೇ ನಾನು ಸೋಮಕರನ್ನೆಲ್ಲ ನಾಶಮಾಡುವೆನು ಈ ರಾತ್ರಿಯು ಕಳೆಯುವುದರೊಳಗಾಗಿ ನಾನು ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲದಿದ್ದರೆ, ಯಜ್ಞಶೀಲರ ಪ್ರೀತಿಗೆ ನಾನು ಪಾತ್ರನಾಗಲಾರನು ಈ ದಿನದಲ್ಲಿ ಎಲ್ಲಾ ಪಾಂಚಾಲರನ್ನೂ ಕೊಂದಲ್ಲದೆ ನಾನು ನನ್ನ ಈ ಕವಚವನ್ನು ಕಳೆಯುವುದಿಲ್ಲ ಮೇಲಕ್ಕೇಳು ! ನನ್ನ ಮಾತನ್ನು ಕೇಳು ” ಎಂದನು

ಇವರು ಹೀಗೆ ಮಾತನಾಡುತ್ತಿರುವ ಸಮಯದಲ್ಲಿ, ಆ ದಾರಿಯಾಗಿ ಮೃಗಮಾಂಸವನ್ನು ಹೊತ್ತುಕೊಂಡು ಬರುತಿದ್ದ ಕೆಲವು ಬೇಡರು, ಆ ಮಾಂಸಭಾರದಿಂದ ಬಳಲಿ ಬಾಯಾರಿ, ತಣ್ಣೀರನ್ನು ಕುಡಿಯಲು ಆ ಕೊಳದ ಸಮೀಪಕ್ಕೆ ಬಂದರು - ಅವರು ಪ್ರತಿದಿನವೂ ಭಕ್ತಿಯಿಂದ ಭೀಮಸೇನನಿಗೆ ಮಾಂಸವನ್ನು ತಂದುಕೊಡುತಿದ್ದವರು ಅವರು ಅಲ್ಲಿ ಮರೆಯಾಗಿ

ಕುಳಿತು, ಕೃಪಾದಿಗಳಿಗೂ, ದುರ್ಯೋಧನನಿಗೂ ನಡೆಯುತ್ತಿದ್ದ ಸಂಭಾಷಣೆಗಳನ್ನೆಲ್ಲ ಕಿವಿಗೊಟ್ಟು ಕೇಳುತಿದ್ದರು ಯುದ್ಧಕಾಂಕ್ಷೆಯುಳ್ಳ ಅಶ್ವತ್ಥಾಮಾದಿಗಳೆಲ್ಲರೂ ದುರ್ಯೋಧನನಿಗೆ ಬಹಳ ನಿರ್ಬಂಧಮಾಡಿ ಯುದ್ಧಕ್ಕೆ ಹುರಿಗೊಳಿಸುತ್ತಿರುವುದನ್ನೂ, ಯುದ್ಧಾಪೇಕ್ಷೆಯಿಲ್ಲದೆ ನೀರಿನಲ್ಲಿ ಅಡಗಿರುವ ರಾಜನೊಡನೆ ನಡೆದ ಪರಸ್ಪರ ಸಂಭಾಷಣೆಗಳನ್ನೂ ಕೇಳಿದರು ದುರ್ಯೋಧನನು ನೀರಿನಲ್ಲಿ ಅವಿತುಕೊಂಡಿರುವನೆಂದು ಆಗ ಅವರಿಗೆ ತಿಳಿದುಹೋಯಿತು ನಿನ್ನ ಮಗನನ್ನು ಹುಡುಕುತಿದ್ದ ಭೀಮನು, ಆತನ ವಿಷಯವಾಗಿ ಮೊದಲೇ ಆ ಬೇಡರನ್ನು ಒಮ್ಮೆ ವಿಚಾರಿಸಿದ್ದನು ಆ ಬೇಟೆಗಾರರು ಭೀಮನ ಆ ಮಾತುಗಳನ್ನು ಜ್ಞಾಪಿಸಿಕೊಂಡು “ದುರ್ಯೋಧನನ ಈ ರಹಸ್ಯವನ್ನು ತಿಳಿಸಿದರೆ, ಭೀಮನು ನಮಗೆ ಒಳ್ಳೇ ಬಹುಮಾನ ಕೊಡುವನು ಈ ಮಡುವಿನಲ್ಲ ದುರ್ಯೋಧನರಾಜನಿರುವನೆಂಬುದು ನಮಗೆ ಪ್ರತ್ಯಕ್ಷವಾಗಿ ತಿಳಿಯಿತು ಆದುದರಿಂದ ನಾವೆಲ್ಲರೂ ಹೋಗಿ ಈ ವಿಷಯವನ್ನು ಧರ್ಮರಾಜನಿಗೆ ತಿಳಿಸುವೆವು ಭೀಮಸೇನನಿಗೂ ಈ ವೃತ್ತಾಂತವನ್ನು ತಿಳಿಸುವೆವು ಆತನು ಬಹಳ ಸಂತುಷ್ಟನಾಗಿ ನಮಗೆ ವಾಸ್ತವದಲ್ಲಿ ಅಧಿಕ ಧನವನ್ನು ಕೊಡುವನು ದಿನತಪ್ಪದೆ ಹೀಗೆ ಮಾಂಸವನ್ನು ಹೊತ್ತು ದೇಹಶ್ರಮಪಟ್ಟುದು ಇನ್ನುಸಾಕು” ಎಂದು ರಹಸ್ಯವಾಗಿ ಒಬ್ಬರೊಡನೊಬ್ಬರು ಮಾತನಾಡಿಕೊಂಡರು ಹಣದಾಸೆಯಿಂದ ಬೇಡರು ಹೀಗೆ ತೀರ್ಮಾನಿಸಿ, ಆ ಮಾಂಸದ ಹೊರೆಯನ್ನು ಹೊತ್ತುಕೊಂಡು, ಪಾಂಡವಶಿಬಿರಕ್ಕೆ ಹೊರಟರು ಅಷ್ಟರಲ್ಲಿ ಪಾಂಡವರೂ ಯುದ್ಧಭೂಮಿಯಲ್ಲಿ ದುರ್ಯೋಧನನನ್ನು ಕಾಣದೆ, ವಂಚನಾಸ್ವಭಾವವುಳ್ಳ ಆತನನ್ನು ಕಂಡುಹಿಡಿಯುವ ಆತುರವುಳ್ಳವರಾಗಿ ಅವನನ್ನು ಹುಡುಕಲು ನಾಲ್ಕು ಕಡೆಗೂ ಗೂಡಚಾರರನ್ನು ಕಳುಹಿಸಿದ್ದರು ಆ ಚಾರರೆಲ್ಲರೂ ಅಲ್ಲಲ್ಲಿ ಹುಡುಕಿಬಂದು “ದುರ್ಯೋಧನನ ಎಲ್ಲಿಯೋ ಹೋಗಿಬಿಟ್ಟನು ಇನ್ನು ಸಿಕ್ಕುವುದು ಕಷ್ಟವು” ಎಂದರ ಆಗ ಧರ್ಮರಾಜನು “ಶತ್ರುಪಕ್ಷದಲ್ಲಿ ಒಬ್ಬನು ಜೀವಿಸಿದ್ದರೂ ನಮ್ಮ ಜಯವು ಸಂಶಯಾಸ್ಪದವೇ! ಆಗ ನಮಗೆ ರಾಜ್ಯದಾಸೆಯೆಲ್ಲಿ? ರಾಜ್ಯವನ್ನು ಶತ್ರುಜಯದಿಂದಲೇ ಸಾಧಿಸಬೇಕಲ್ಲವೇ?” ಎಂದು ಚಿಂತಾಕು



ಪುಟ ೧೪೬ ಜಲಸ್ತಂಭನಮಾಡಿ ಅವಿತುಕೊಂಡಿದ್ದ ದುರ್ಯೋಧನನು ಮೇಲೆದ್ದು ಕೃಪಾದಿಗಳೊಡನೆ ಮಾತಾಡುತ್ತಿದ್ದುದನ್ನು ಕೆಲವು ಬೇಡರು ಮರೆಯಾಗಿ ನಿಂತು ಕೇಳಿದುದು

ನ್ನಾಗಿ ನಿಟ್ಟುಸಿರುಬಿಡುತ್ತಿದ್ದನು ಓ ರಾಜಾ ! ಹಾಗೆ ಪಾಂಡವರು ಕಳವಳಿಸುತ್ತಿದ್ದ ವೇಳೆಗೆ ಸರಿಯಾಗಿ, ದುರ್ಯೋಧನರಾಜನಿರುವ ಸ್ಥಳವನ್ನು ಕಂಡ ಬೇಡರು ವೇಗದಿಂದ ಆ ಶಿಬಿರಕ್ಕೆ ಬಂದು ಸೇರಿದರು. ಅವರು ಬಾಗಿಲಲ್ಲಿ ನಿವಾರಿಸಲ್ಪಟ್ಟರೂ, ಭೀಮಸೇನನು ನೋಡುತ್ತಿರುವಂತೆಯೇ ಯಾರನ್ನೂ ಲಕ್ಷ್ಯಮಾಡದೆ, ಧೈರ್ಯದಿಂದ ಒಳಕ್ಕೆ ನುಗ್ಗಿ, ತಾವು ಆ ಮಡುವಿನ ಸಮೀಪದಲ್ಲಿ ಕಂಡು ಕೇಳಿದುದನ್ನೆಲ್ಲ ಭೀಮನಿಗೆ ತಿಳಿಸಿದರು ಒಡನೆ ಭೀಮನು ಆ ಬೇಡರಿಗೆ ಅಪಾರಧನವನ್ನು ಬಹುಮಾನಮಾಡಿ, ಧರ್ಮರಾಜನಲ್ಲಿಗೆ ಹೋಗಿ “ ಅಣ್ಣಾ ! ಆ ದುರ್ಯೋಧನನಿರುವ ಸ್ಥಳವು ಈ ಬೇಡರ ಮೂಲಕವಾಗಿ ತಿಳಿದುಹೋಯಿತು ಯಾವನ ವಿಷಯವಾಗಿ ನೀನು ತಪಿಸುತ್ತಿರುವೆಯೋ, ಆ ದುರ್ಯೋಧನನು ಜಲಸ್ತಂಭನದಿಂದ ಮಡುವಿನಲ್ಲಿ ಮಲಗಿರುವನಂತೆ ” ಎಂದು ಆ ವೃತ್ತಾಂತವೆಲ್ಲವನ್ನೂ ತಿಳಿಸಿದನು ಆಗ ಧರ್ಮರಾಜನಿಗೂ, ಅವನ ಸಹೋದರರಿಗೂ ಅಪಾರ ಸಂತೋಷವಾಯಿತು ಆಗಲೇ ಧರ್ಮರಾಜನು ಕೃಷ್ಣನನ್ನು ಮುಂದೆ ಬಿಟ್ಟುಕೊಂಡು, ವೇಗದಿಂದ ಆ ಮಡುವಿನ ಬಳಿಗೆ ಬಂದನು ಪಾಂಡವರ ಮತ್ತು ಪಾಂಚಾಲರ ಸಂತೋಷಕೋಲಾಹಲಗಳು ಎಲ್ಲಾ ಕಡೆಗಳಲ್ಲಿಯೂ ಕೇಳಿಸುತ್ತಿದ್ದುವು ಅವರೆಲ್ಲರೂ ಅತಿ ಸಂಭ್ರಮದಿಂದ ಅಟ್ಟಹಾಸಗಳನ್ನೂ, ಸಿಂಹನಾದಗಳನ್ನೂ ಮಾಡಿದರು ಒಬ್ಬರನ್ನೊಬ್ಬರು ಉಚ್ಚಸ್ವರದಿಂದ ಕೂಗಿ ಕರೆಯುತ್ತಿದ್ದರು. ಆಗ ಸೋಮಕರು ಮಿತಿಮೀರಿದ ಸಂತೋಷದಿಂದ “ ಪಾಪಿಯಾದ ದುರ್ಯೋಧನನಿರುವ ಸ್ಥಳವು ತಿಳಿಯಿತು ಅವನು ಸಿಕ್ಕಿಬಿದ್ದನು ” ಎಂದು ಯುದ್ಧಭೂಮಿಯ ಎಲ್ಲಾ ಕಡೆಗಳಲ್ಲಿಯೂ ಕೂಗಿಡುತ್ತಿದ್ದರು ರಾಜಾ ! ಆಗ ವೇಗದಿಂದೋಡುವ ಅವರ ರಥಧ್ವನಿಯು ಆಕಾಶವನ್ನೆಲ್ಲ ಆವರಿಸಿತು ವಾಹನಗಳು ಬಹಳವಾಗಿ ಓಡಿಯೋಡಿ ಬಳಲಿದ್ದರೂ ಬಿಡದೆ ದುರ್ಯೋಧನನನ್ನು ಹುಡುಕುವ ಆತುರದಲ್ಲಿ ಎಲ್ಲರೂ ಇನ್ನಷ್ಟುವೇಗದಿಂದ ಅವುಗಳನ್ನು ಹೊಡೆದೋಡಿಸುತ್ತಿದ್ದರು ಭೀಮಾರ್ಜುನರು, ನಕುಲಸಹದೇವರು, ಧೃಷ್ಟದ್ಯುಮ್ನನು, ಶಿಖಂಡಿ, ಉತ್ತಮೌಜಸ್ಸು, ಯುಧಾಮನ್ಯು, ಸಾತ್ಯಕಿ, ಪಾಂಚಾಲರು, ದ್ರೌಪದೀಪುತ್ರರು, ಆನೆಕುದುರೆ ಮೊದಲಾದ ಚತುರಂಗಗಳು, ಎಲ್ಲರೂ ಒಂದುಗೂಡಿ ಧರ್ಮ

ರಾಜನನ್ನು ಮುಂದಿಟ್ಟುಕೊಂಡು ಬಂದು, ನಿನ್ನ ಪುತ್ರನಾದ ದುರ್ಯೋಧನನು ಮಾಯೆಯಿಂದ ಜಲಸ್ತಂಭನಮಾಡಿಕೊಂಡಿದ್ದ ದ್ವೈಪಾಯನಹ್ರದವನ್ನು ಸೇರಿದರು ಸ್ವಚ್ಛವಾದ ಶೀತಲಜಲದಿಂದ ತುಂಬಿದ ಆ ಸರೋವರವೋ ಎರಡನೆಯ ಸಮುದ್ರದಂತೆ ವಿಶಾಲವಾಗಿರುವುದು ನೋಡುವವರ ಮನಸ್ಸಿಗೆ ಹರ್ಷವನ್ನುಂಟುಮಾಡುತಿದ್ದರೂ ಅಗಾಧವಾಗಿ ಭಯಂಕರವಾದುದು ಆಹಾ! ವಿಧಿಯೋಗವು ಆಶ್ಚರ್ಯಕರವು! ದುರ್ಯೋಧನರಾಜನು ಗದಾಯುಧವನ್ನು ಕೈಯಲ್ಲಿ ಹಿಡಿದಹಾಗೆಯೇ ನೀರಿನಲ್ಲಿ ಪ್ರವೇಶಿಸಿ, ಯಾರ ಕಣ್ಣಿಗೂ ಬೀಳದಂತೆ ಮಲಗಿದ್ದನು ಹಾಗೆ ಜಲದಲ್ಲಿ ಶಯನಮಾಡುತಿದ್ದ ದುರ್ಯೋಧನನು, ಮೇಘಗರ್ಜನೆಗೆ ಸಮಾನವಾಗಿ ಕೊಳದಮೇಲಿಂದ ಬರುವ ಶಬ್ದವನ್ನು ಕೇಳಿದನು ಯುಧಿಷ್ಠಿರನು ತನ್ನ ಸಹೋದರರೊಡನೆ ದೊಡ್ಡ ಶಂಖಧ್ವನಿಯಿಂದಲೂ, ರಥಚಕ್ರಧ್ವನಿಯಿಂದಲೂ ಭೂಮಿಯನ್ನು ನಡುಗಿಸುವಂತೆ ಬರುತಿದ್ದನು ನೆಲದಿಂದ ದೊಡ್ಡ ಧೂಳಿಯೆದ್ದಿತು ಎಲ್ಲರೂ ನಿನ್ನ ಮಗನನ್ನು ಕೊಲ್ಲುವ ಉದ್ದೇಶದಿಂದ ಆ ಮಡುವಿಗೆ ಬಂದು ಸೇರಿದರು ಕೃತವರ್ಮ ಕೃಪಾಶ್ವತ್ಥಾಮಾದಿಗಳೂ ಯುಧಿಷ್ಠಿರನ ಸೈನ್ಯದ ಶಬ್ದವನ್ನು ಕೇಳಿ, ರಾಜನನ್ನು ನೋಡಿ "ರಾಜಾ! ಅದೋ! ಜಯಶಾಲಿಗಳಾದ ಪಾಂಡವರು ಅಧಿಕ ಸಂತೋಷದೊಡನೆ ಬರುವಂತಿದೆ! ನಮಗೆ ಅನುಮತಿಯನ್ನು ಕೊಡು ನಾವು ಓಡಿಹೋಗುವೆವು" ಎಂದರು ದುರ್ಯೋಧನನು 'ಹಾಗೆಯೇ ಆಗಲಿ' ಎಂದು ಹೇಳಿ, ಆ ಮಡುವಿನಲ್ಲಿ ಮಾಯೆಯಿಂದ ಜಲಸ್ತಂಭನಮಾಡಿ ಮಲಗಿದನು ದುರ್ಯೋಧನನ ಆಜ್ಞೆಯನ್ನು ಪಡೆದಮೇಲೆ ಕೃಪಾದಿಗಳು ಮಹಾದುಃಖದಿಂದ ಹೊರಟರು ಮೊದಲೇ ಬಹಳವಾಗಿ ದಣಿದಿದ್ದ ಅವರು, ಸ್ವಲ್ಪದೂರ ಹೋದಮೇಲೆ ಅಲ್ಲಿ ಒಂದು ಆಲದ ಮರವನ್ನು ನೋಡಿ, ಅರಸನ ವಿಷಯವಾದ ಚಿಂತೆಯಿಂದ ಆ ಮರದಡಿಯಲ್ಲಿ ಕುಳಿತರು ದುರ್ಯೋಧನನು ಜಲಸ್ತಂಭನಮಾಡಿಕೊಂಡು ನೀರಿನಲ್ಲಿ ಮಲಗಿದನು. ಪಾಂಡವರೂ ಅಲ್ಲಿಗೆ ಬಂದರು ಇತ್ತಲಾಗಿ ಅಶ್ವತ್ಥಾಮಾದಿಗಳು "ಮುಂದೆ ಯುದ್ಧವು ಹೇಗೆ ನಡೆಯುವುದೋ! ರಾಜನು ಏನಾಗುವನೋ! ಪಾಂಡವರು ದುರ್ಯೋಧನನನ್ನು ಹೇಗೆ ಕಂಡುಹಿಡಿಯುವರೋ" ಎಂದು

ಚಿಂತಿಸುತ್ತ, ತಮ್ಮ ರಥಗಳಿಂದ ಕುದುರೆಗಳನ್ನು ಬಿಚ್ಚಿಬಿಟ್ಟು, ಆ ಆಲದ ಮರದಡಿಯಲ್ಲಿಯೇ ಕುಳಿತಿದ್ದರು

ಇದು ಮೂವತ್ತನೆಯ ಅಧ್ಯಾಯವು

(ಯುಧಿಷ್ಠಿರನು ಮಡುವಿನಲ್ಲಿರುವ ದುರ್ಯೋಧನನನ್ನು ಮೂದಲಿಸಿ ಭಯಪಡಿಸಿದುದು ಯುಧಿಷ್ಠಿರನಿಗೂ, ದುರ್ಯೋಧನನಿಗೂ ನಡೆದ ಸಂವಾದಗಳು)

ಆ ಮೂರುಮಂದಿ ರಥಿಕರೂ, ದುರ್ಯೋಧನನನ್ನು ಬಿಟ್ಟುಹೋದಮೇಲೆ, ಪಾಂಡವರು ದುರ್ಯೋಧನನಿದ್ದ ಮಡುವಿನ ಬಳಿಗೆ ಬಂದರು. ದ್ವೈಪಾಯನವೆಂಬ ಆ ಮಡುವು ಧೃತರಾಷ್ಟ್ರಪುತ್ರನಿಂದ ಸ್ತಂಭಿಸಲ್ಪಟ್ಟುದನ್ನು ಕಂಡು, ಧರ್ಮರಾಜನು ವಾಸುದೇವನನ್ನು ನೋಡಿ “ಮಾಧವಾ! ಧಾರ್ತರಾಷ್ಟ್ರನ ಈ ಮಾಯೆಯನ್ನು ನೋಡಿದೆಯಾ? ಜಲವನ್ನು ಸ್ತಂಭಿಸಿ ಮಲಗಿರುವನು ಈತನಿಗೆ ಈಗ ಮನುಷ್ಯಭಯವಿಲ್ಲ ಕಪಟವೃತ್ತಿಯಲ್ಲಿ ತೇರಿದ ಈತನು ದೇವಸಂಬಂಧವಾದ ಮಾಯೆಯನ್ನು ಹಿಡಿದು ವಂಚನೆಯಿಂದ ನೀರಿನಲ್ಲಿ ಮರೆಸಿಕೊಂಡಿರುವನು ಆದರೆ, ನಾವೇನೋ ಅವನನ್ನು ಜೀವದಿಂದ ಬಿಡುವವರಲ್ಲ ಈತನಿಗೆ ಯುದ್ಧದಲ್ಲಿ ವಜ್ರಪಾಣಿಯಾದ ಸಾಕ್ಷಾತ್ ದೇವೇಂದ್ರನೇ ಸಹಾಯಕನಾಗಿ ಬಂದರೂ, ನಮ್ಮಿಂದ ಕೊಲ್ಲಲ್ಪಡುವುದನ್ನು ಜನರೆಲ್ಲರೂ ನೋಡುವರು” ಎಂದನು ಆಗ ಕೃಷ್ಣನು “ರಾಜಾ! ಮಾಯಾವಿಯಾದ ದುರ್ಯೋಧನನ ಈ ಮಾಯೆಯನ್ನು ನಾವೂ ಮಾಯೆಯಿಂದಲೇ ನಾಶಮಾಡಬೇಕು ಮಾಯಾವಿಗಳನ್ನು ಮಾಯೆಯಿಂದಲೇ ಕೊಲ್ಲಬೇಕು ಇದು ಸತ್ಯವು ನ್ಯಾಯಾನ್ಯಾಯಗಳನ್ನು ಗಮನಿಸದೆ, ಶತ್ರುಗಳ ತಂತ್ರಗಳಿಗೆ ಪ್ರತಿತಂತ್ರಗಳನ್ನು ಮಾಡುವುದೇ ಉಚಿತವು ಮಾಯಾವಿಯಾದ ದುರ್ಯೋಧನನನ್ನು ನೀನೂ ತಂತ್ರದಿಂದಲೇ ಕೊಲ್ಲುವನಾಗು ಇಂದ್ರನು ದೈತ್ಯದಾನವರೆಲ್ಲರನ್ನೂ ತಂತ್ರಗಳಿಂದಲೇ ಜಯಿಸಿದನು ಬಲಿಚಕ್ರವರ್ತಿಯೂ ಮಹಾತ್ಮನಾದ ವಿಷ್ಣುವಿನ ಪ್ರಬಲತಂತ್ರಗಳಿಂದಲೂ, ಉಪಾಯಗಳಿಂದಲೂ ಬಂಧಿಸಲ್ಪಟ್ಟನು ಮ

ಹಾಸುರರಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳೂ ಉಪಾಯಕಾರ್ಯಗಳಿಂದಲೇ ನಾಶಮಾಡಲ್ಪಟ್ಟರು ಮಹಾಬಲಶಾಲಿಯಾದ ವೃತ್ರನೂ ತಂತ್ರದಿಂದಲೇ ಹತನಾದನು ಹಾಗೆಯೇ ಪುಲಸ್ತ್ಯ ಪೌತ್ರನೂ, ವಿಶ್ರಾವಸುವಿನ ಮಗನೂ ಆದ ರಾವಣಾಸುರನು ಕೂಡ, ಬಂಧುಪರಿವಾರಗಳೊಡನೆ ರಾಮನಿಂದ ಉಪಾಯದಿಂದಲೇ ಕೊಲ್ಲಲ್ಪಟ್ಟನು ಆದುದರಿಂದ ನೀನೂ ತಕ್ಕ ಉಪಾಯವನ್ನನುಸರಿಸಿ, ತಕ್ಕ ತಂತ್ರಗಳಿಂದ, ನಿನ್ನ ಪರಾಕ್ರಮವನ್ನು ವ್ಯಕ್ತಪಡಿಸು. ಹಿಂದೆ ತಾರಕನೆಂಬ ಮಹಾಸುರನೂ, ವೀರ್ಯವಂತನಾದ ವಿಪ್ರಚಿತ್ತಿಯೂ ತಂತ್ರಕಾರ್ಯಗಳಿಂದಲೇ ನನ್ನಿಂದ ಹತರಾದರು ಇಲ್ವಲ ವಾತಾಪಿಗಳೂ, ತ್ರಿಶಿರಸ್ಸೂ, ಸುಂದೋಪಸುಂದರೂ, ತಂತ್ರಗಳಿಂದಲೇ ಕೊಲ್ಲಲ್ಪಟ್ಟರು ತಂತ್ರಗಳಿಂದಲೇ ಇಂದ್ರನು ಸ್ವರ್ಗವನ್ನನುಭವಿಸುತ್ತಿರುವನು ಆದುದರಿಂದ ತಂತ್ರಕಾರ್ಯವೇ ಮಹಾಬಲವುಳ್ಳದು ಬೇರೆ ಯಾವುದೂ ಅಷ್ಟು ಪ್ರಬಲವಲ್ಲ ದೈತ್ಯದಾನವರಾಕ್ಷಸರೂ, ರಾಜರೂ ತಂತ್ರಗಳಿಂದಲೇ ಹತರಾದರು. ಧರ್ಮರಾಜಾ! ನೀನೂ ಅಂತಹ ಉಪಾಯವೊಂದನ್ನು ಹಿಡಿ" ಎಂದನು ಕೃಷ್ಣನು ಹೀಗೆ ಹೇಳಲು, ವ್ರತನಿಷ್ಠನಾದ ಧರ್ಮರಾಜನು ಅಟ್ಟಹಾಸಮಾಡುತ್ತ, ಜಲದಲ್ಲಿ ಅವಿತುಕೊಂಡಿದ್ದ ನಿನ್ನ ಮಗನನ್ನು ಕುರಿತು ಹೀಗೆಂದು ಹೇಳತೊಡಗಿದನು

"ದುರ್ಯೋಧನಾ! ಮಹಾರಾಜಾ! ಎಲ್ಲಾ ಕ್ಷತ್ರಿಯರೊಡನೆ ನಿನ್ನ ಕುಲವನ್ನೆಲ್ಲ ನಾಶಕ್ಕೆ ಗುರಿಮಾಡಿ, ಈಗ ನೀನುಮಾತ್ರ ಆತ್ಮಸಂರಕ್ಷಣಕ್ಕಾಗಿ ಈ ಜಲದಲ್ಲಿ ಪ್ರವೇಶಿಸಿದೆಯಾ? ನಿನ್ನ ಪ್ರಾಣರಕ್ಷಣೆಗಾಗಿಯೇ ಅಲ್ಲವೇ ನೀನು ಈ ನೀರಿನಲ್ಲ ಪ್ರವೇಶಿಸಿರುವೆ ಮೇಲೆದ್ದು ಬಾ! ನಮ್ಮೊಡನೆ ಯುದ್ಧಮಾಡು ಹೀಗೆ ನೀನು ಭೀತಿಯಿಂದ ಜಲದಲ್ಲಿ ಮುಳುಗಿಕೊಂಡಿರಬಹುದೆ? ಆ ನಿನ್ನ ಹೆಮ್ಮೆಯೂ, ಆ ಗರ್ವವೂ ಈಗ ಎಲ್ಲಿ ಹೋದುವು? ಎಲ್ಲರೂ ಸಭೆಯಲ್ಲಿ ನಿನ್ನನ್ನು ಮಹಾಶೂರನೆಂದು ಹೇಳುತಿದ್ದರಲ್ಲವೆ? ಅಂತಹ ನೀನು ಈಗ ಭಯದಿಂದ ನೀರಿನಲ್ಲಿ ಜಲಸ್ತಂಭನಮಾಡಿ ಮಲಗಿರುವೆಯಾ? ಓ ರಾಜಾ! ಮೇಲಕ್ಕೇಳು! ಬಾ! ಯುದ್ಧ



ಪಟ ೧೫೧. ಪಾಂಡವರು ಭಯದಿಂದ ಮಡುವಿನಲ್ಲಿ ಅವಿತುಕೊಂಡ ದುರ್ಯೋಧನನನ್ನು ಮೂದಲಿಸಿದುದು. ಅವರಿಬ್ಬರ ವೀರವಾದಗಳು.

ಮಾಡು. ನೀನು ಸತ್ಕುಲದಲ್ಲಿ ಹುಟ್ಟಿದ ಕ್ಷತ್ರಿಯನಲ್ಲವೆ? ಅದರಲ್ಲಿಯೂ ಕುರುಕುಲದಲ್ಲಿ ಹುಟ್ಟಿದ ನೀನು, ನಿನ್ನ ಕುಲವನ್ನೂ, ನಿನ್ನ ಹುಟ್ಟನ್ನೂ ಸ್ಮರಿಸಬಾರದೆ? ಕುರುವಂಶದಲ್ಲಿ ಹುಟ್ಟಿದುದಕ್ಕಾಗಿಯೇ ಹೆಮ್ಮೆಪಡುತಿದ್ದ ನೀನು, ಈಗ ಯುದ್ಧಕ್ಕಾಗಿ ಹೆದರಿ ನೀರಿನಲ್ಲಿ ಹೇಗೆ ಪ್ರವೇಶಿಸಿದೆ? ಯುದ್ಧಕ್ಕೆ ಹೆದರಿ ಓಡಿಹೋಗಿ ಅವಿತುಕೊಳ್ಳುವುದು ಕ್ಷತ್ರಿಯರಿಗೆ ಧರ್ಮವಲ್ಲ ಯುದ್ಧದಿಂದೋಡುವುದು ಹೀನಜನರಿಗೆ ಯೋಗ್ಯವು. ಅದು ಸ್ವರ್ಗಪ್ರಾಪ್ತಿಗೆ ನಿರೋಧಕವು ನಿನಗೆ ಯುದ್ಧದಲ್ಲಿದ್ದ ಆ ಶ್ರದ್ಧೆಯು ತಪ್ಪಿ, ಈ ರೀತಿಯಾದ ಪ್ರಾಣಸಂರಕ್ಷಣೆಗಾಗಿ ಹೇಗೆ ಬುದ್ಧಿ ಹುಟ್ಟಿತು? ರಾಜಕುಮಾರಾ! ಯುದ್ಧದಲ್ಲಿ ಸತ್ತುಬಿದ್ದ ಪುತ್ರರನ್ನೂ, ಸಹೋದರರನ್ನೂ, ಪಿತೃಗಳನ್ನೂ ಕಣ್ಣಾರೆ ನೋಡಿ, ಅನೇಕ ಜ್ಞಾತಿಗಳನ್ನೂ, ಮಾವಂದಿರನ್ನೂ, ಬಂಧುಗಳನ್ನೂ, ಸಂಬಂಧಿಗಳನ್ನೂ ಕೊಲ್ಲಿಸಿ, ಈಗ ನೀನು ಮಾತ್ರ ಹೇಗೆ ಈ ಮಡುವಿನಲ್ಲಿ ಅವಿತುಕೊಂಡಿರುವೆ? ನಾನೇ ಮಹಾಶೂರನೆಂದು ನೀನು ತಿಳಿದುಕೊಂಡಿರುವೆಯಲ್ಲದೆ, ನಿಜವಾಗಿ ನೀನು ಶೂರನಲ್ಲ ಓ ದುರ್ಬುದ್ಧೀ! ಯುದ್ಧದಲ್ಲಿ ಎಲ್ಲರೂ ನೆರೆದಿರುವಾಗ, 'ನಾನು ಮಹಾಶೂರ'ನೆಂದು ಹೇಳಿಕೊಳ್ಳುತಿದ್ದೆಯಲ್ಲವೆ? ನಿಜವಾದ ಶೂರರು ಶತ್ರುಗಳನ್ನು ನೋಡಿ ಹೀಗೆ ಓಡುವುದುಂಟೇನು? ಎಂದಿಗೂ ಇಲ್ಲ ಶೂರಾಗ್ರಣೀ! ನೀನು ಯಾವ ನೀತಿಗಾಗಿ ಯುದ್ಧವನ್ನು ಬಿಟ್ಟುಬಂದೆ? ಅದನ್ನಾದರೂ ಹೇಳು ಓ ದುರ್ಯೋಧನಾ! ಎದ್ದೇಳು! ಮನಸ್ಸಿನಲ್ಲಿ ಭಯವನ್ನು ಬಿಟ್ಟು ಯುದ್ಧಮಾಡು ಸುಯೋಧನಾ! ಕ್ಷತ್ರಿಯಧರ್ಮವನ್ನವಲಂಬಿಸಿರುವ ನಿನ್ನಂತಹ ಶೂರನು, ಧರ್ಮಾನುಷ್ಠಾನದಲ್ಲಿ ಅಭಿಲಾಷೆಯುಳ್ಳವನಾದರ, ಎಲ್ಲಾ ಸೈನ್ಯವನ್ನೂ, ಭ್ರಾತೃಗಗಳನ್ನೂ ಮರಣಕ್ಕೆ ಗುರಿಪಡಿಸಿ, ತಾನುಮಾತ್ರ ಪ್ರಾಣವನ್ನುಳಿಸಿಕೊಳ್ಳುವ ಪ್ರಯತ್ನಮಾಡಬಾರದು ಆ ಕರ್ಣನನ್ನೂ, ಆ ಶಕುನಿಯನ್ನೂ, ಆ ದುಶ್ಶಾಸನನನ್ನೂ ನಂಬಿ ನೀನು, ಅವರ ಮಾತಿನಲ್ಲಿರುವ ಮೋಹದಿಂದ ನಿನ್ನನ್ನೂ ತಿಳಿಯದೆ, ದೊಡ್ಡ ಪಾಪಕ್ಕೆ ಗುರಿಯಾದೆ ಹೋಗಲಿ! ಈಗ ನಮ್ಮನ್ನಿದಿರಿಸಿ ಯುದ್ಧಮಾಡು ನಿನ್ನಂಥವನಿಗೆ ಯುದ್ಧದಲ್ಲಿ ಭಯಪಟ್ಟೋಡುವ ಉದ್ದೇಶವೇ ಯೋಗ್ಯವಲ್ಲ ಓ ದುರ್ಯೋಧನಾ! ನಿನ್ನ ಆ ಯುದ್ಧಸಾಮ

ರ್ಯವೆಲ್ಲಿ ? ನಿನ್ನ ಮಾನವೆಲ್ಲಿ ? ಆ ನಿನ್ನ ಶೌರ್ಯವೆಲ್ಲಿ ಹೋಯಿತು ? ಆ ನಿನ್ನ ಮಹೋತ್ಸಾಹವು ಈಗ ಎಲ್ಲಿ ಅಡಗಿರುವುದು ? ನಿನ್ನ ಶಸ್ತ್ರ ಸಾಮರ್ಥ್ಯವೆಲ್ಲಿ ? ನೀನೇಕೆ ಹೀಗೆ ಕೆರೆಯಲ್ಲಿ ಮುಳುಗಿರುವೆ ? ರಾಜಾ ! ಏಳು ! ಕ್ಷತ್ರಿಯ ಧರ್ಮವನ್ನು ಹಿಡಿದು ಯುದ್ಧಮಾಡು ನಮ್ಮನ್ನು ಕೊಂದು ನೀನೇ ಭೂಮಿಯನ್ನಾಳು ! ಇಲ್ಲವೇ ನಮ್ಮಿಂದಾದರೂ ನೀನು ಮೃತಪಟ್ಟು ರಣಭೂಮಿಯಲ್ಲಿ ಮಲಗು ಮಹಾತ್ಮನಾದ ಬ್ರಹ್ಮದೇವ ನಿಂದ ಇದೇ ನಿನಗೆ ಪರಮಧರ್ಮವಾಗಿ ವಿಧಿಸಲ್ಪಟ್ಟಿರುವುದು ನೀನು ಪೌರುಷವನ್ನು ಹಿಡಿದು ಸ್ವಧರ್ಮವನ್ನು ಸಾರ್ಥಕಗೊಳಿಸು " ಎಂದನು

ಆಗ ದುರ್ಯೋಧನನು ಜಲದೊಳಗಿದ್ದ ಹಾಗೆಯೇ ಧರ್ಮರಾಜನ ಮಾತಿಗೆ ಪ್ರತ್ಯುತ್ತರವಾಗಿ " ಓ ಮಹಾರಾಜಾ ! ಪ್ರಾಣಿಗಳಿಗೆ ಭಯ ವುಂಟಾಗುವುದೇನೂ ಅತಿಶಯವಲ್ಲ ಆದರೂ ಈಗ ಮರಣಕ್ಕೆ ಹೆದರಿ ನಾನು ಯುದ್ಧವನ್ನು ಬಿಟ್ಟೋಡಲಿಲ್ಲ ನನಗೆ ರಥವೂ ಹೋಯಿತು. ನನ್ನಲ್ಲಿದ್ದ ಬಾಣಬತ್ತಳಿಕೆಗಳೂ ಹೋದುವು ನನ್ನ ಹಿಂದೆ ಕುಳಿತಿದ್ದ ಸಾರಥಿಯೂ ಹೋದನು ಸೈನ್ಯಗಳೆಲ್ಲ ನಷ್ಟವಾದುವು ಏಕಾಕಿಯಾ ಗಿದ್ದ ನಾನು ವಿಶ್ರಾಂತಿಯನ್ನು ಬಯಸಿ ಇಲ್ಲಿಗೆ ಬಂದೆನು ರಾಜಾ ! ಪ್ರಾಣಸಂರಕ್ಷಣೆಗಾಗಲಿ, ವ್ಯಸನದಿಂದಾಗಲಿ ನಾನು ಈ ನೀರಿನಲ್ಲಿ ಪ್ರವೇಶಿಸಿ ದವನಲ್ಲ ಕೇವಲ ಶ್ರಮಪರಿಹಾರಕ್ಕಾಗಿ ನಾನೀ ಕಾರ್ಯವನ್ನು ಮಾಡಿ ದೆನು ಓ ಕುಂತೀಪುತ್ರಾ ! ಈಗ ನೀನೂ ಸ್ವಲ್ಪ ಶ್ರಮಪರಿಹಾರಮಾಡಿ ಕೊಳ್ಳುವನಾಗು ನಿನ್ನನ್ನನುಸರಿಸಿಬಂದಿರುವವರೂ, ಶ್ರಮಪರಿಹಾರ ಮಾಡಿಕೊಳ್ಳಲಿ ಆಮೇಲೆ ನಾನು ಮೇಲೆದ್ದುಬಂದು ನಿಮ್ಮೆಲ್ಲರೊಡನೆ ಯುದ್ಧಮಾಡುವೆನು " ಎಂದನು

ಅದಕ್ಕೆ ಧರ್ಮರಾಜನು " ದುರ್ಯೋಧನಾ ! ನಾವು ಶ್ರಮಪರಿ ಹಾರಮಾಡಿಕೊಂಡೇ ಬಂದಿರುವೆವು ಬಹಳ ಕಾಲದಿಂದ ನಿನ್ನನ್ನು ಹುಡುಕುತ್ತಿರುವೆವು ಆದುದರಿಂದ ಈಗಲೇ ಮೇಲೆದ್ದುಬಂದು ಯುದ್ಧ ಮಾಡು ಯುದ್ಧದಲ್ಲಿ ನಮ್ಮನ್ನಾದರೂ ಕೊಂದು ಸಂಪತ್ಸಮೃದ್ಧವಾದ ಕೌರವರಾಜ್ಯವನ್ನನುಭವಿಸು ಇಲ್ಲದಿದ್ದರೆ ನಮ್ಮಿಂದಾದರೂ ಕೊಲ್ಲಲ್ಪಟ್ಟು

ನೀನು ದಾನಮಾಡುವ ಸಾಮರ್ಥ್ಯವುಳ್ಳವನೆಂದು ಭಾವಿಸಿದ್ದರೂ, ನಿನ್ನಿಂದ ದಾನವಾಗಿ ಕೊಡಲ್ಪಟ್ಟ ಭೂಮಿಯನ್ನಾಳುವ ಅಪೇಕ್ಷೆಯೇ ನನಗಿಲ್ಲ ಕ್ಷತ್ರಿಯನಿಗೆ ದಾನತೆಗೆದುಕೊಳ್ಳುವುದು ಧರ್ಮವಲ್ಲ ಅಧರ್ಮದಿಂದ ಬಂದ ಭೂಮಿಯನ್ನು ನಾನು ಸ್ವೀಕರಿಸಲಾರನು ನೀನಾಗಿ ಕೊಟ್ಟರೂ ನನಗೇ ಈ ಭೂಮಿಯನ್ನು ಆಳುವ ಅಪೇಕ್ಷೆಯಿಲ್ಲ ನಿನ್ನನ್ನು ಯುದ್ಧದಲ್ಲಿ ಜಯಿಸಿಯೇ ಈ ಭೂಮಿಯನ್ನನುಭವಿಸುವೆನು ಅದಲ್ಲದೆ ಈಗ ನಿನಗೆ ಅಧಿಕಾರವಿಲ್ಲದಿರುವಾಗ ನನಗೆ ಭೂಮಿಯನ್ನು ಹೇಗೆ ಕೊಡುವೆ? ಮೊದಲೇ ನೀನು ಆ ಭೂಮಿಯನ್ನೇಕೆ ನಮಗೆ ಕೊಡಬಾರದಾಗಿದ್ದಿತು? ರಾಜಾ! ಶ್ರೀವಾಸುದೇವನೇ ನಮ್ಮ ಕುಲಕ್ಕೆ ಸಮಾಧಾನವನ್ನುಂಟುಮಾಡಲು, ನಿನ್ನಲ್ಲಿಗೆ ಬಂದು ಧರ್ಮದಿಂದ ಭೂಮಿಯನ್ನು ಯಾಚಿಸಿದಾಗ, ನೀನು ಅವನನ್ನೇ ಅವಮಾನಗೊಳಿಸಿದೆ ಈಗ ನೀನಾಗಿ ಕೊಡುವುದಕ್ಕೆ ಬಂದ ಕಾರಣವೇನು ಹೇಳು! ಇದೇನು ನಿನಗೆ ಇಂತಹ ಬುದ್ಧಿಭ್ರಮೆ? ಸಮರ್ಥನಾದ ಯಾವ ಅರಸನುತಾನೇ ಹೀಗೆ ಭೂಮಿಯನ್ನು ಕೊಡಲು ಬರುವನು? ಕುರುಕುಲನಂದನಾ! ಇದರ ತತ್ವವನ್ನು ನಾನು ಬಲ್ಲೆನು ಭೂಮಿಯನ್ನು ಇತರರಿಗೆ ಕೊಡುವುದಕ್ಕಾಗಲಿ, ಬಲಾತ್ಕಾರದಿಂದ ಕಿತ್ತುಕೊಳ್ಳುವುದಕ್ಕಾಗಲಿ ಈಗ ನೀನು ಶಕ್ತನಲ್ಲ ಇಂತಹ ಸ್ಥಿತಿಯಲ್ಲಿರುವ ನೀನು ರಾಜ್ಯವನ್ನು ಕೊಡುವೆನೆಂದು ಹೇಗೆ ಹೇಳಿಕೊಳ್ಳುವೆ? ಈಗಲೂ ಯುದ್ಧದಲ್ಲಿ ನನ್ನನ್ನು ಜಯಿಸಿ ಈ ಭೂಮಿಯನ್ನಾಳು ಸೂಜಿಯ ಮೊನೆಯಷ್ಟು ಭೂಮಿಯನ್ನಾದರೂ ನಮಗೆ ಕೊಡಲಾರೆನೆಂದು ನೀನು ಹಿಂದೆ ಹೇಳಿದವನಲ್ಲವೆ? ಅಂತಹ ನೀನು ಈಗ ಭೂಮಿಯೆಲ್ಲವನ್ನೂ ನಮಗೆ ಹೇಗೆ ಕೊಡುವೆ? ಹಿಂದೆ ಸೂಜಿಯ ಮೊನೆಯಷ್ಟು ಭೂಮಿಯನ್ನೂ ಬಿಟ್ಟುಕೊಡಲಾರದಿದ್ದ ನಿನಗೆ, ಈಗ ಭೂಮಿಯೆಲ್ಲವನ್ನೂ ಬಿಡಲು ಹೇಗೆ ಇಷ್ಟವಾಯಿತು? ಅಂತಹ ಐಶ್ವರ್ಯವನ್ನು ಪಡೆದು ಈ ಭೂಮಿಯನ್ನೆಲ್ಲ ಪರಿಪಾಲಿಸುತಿದ್ದ ಯಾವ ಮೂಢನು ತಾನೇ ತಾನಾಗಿ ಶತ್ರುವಿಗೆ ಭೂಮಿಯನ್ನು ಕೊಡಲು ಸಮ್ಮತಿಸುವನು? ನೀನು ಕೇವಲ ಮೂರ್ಖಸ್ವಭಾವದಿಂದ ವಿಷಯಗಳನ್ನು ಗ್ರಹಿಸಲಾರದೆ ಮೂಢನಾಗಿರುವೆ ನಿನಗೆ ಈಗ ಭೂಮಿಯನ್ನು ಕೊಡುವ ಮನಸ್ಸಿದ್ದರೂ, ನಿನ್ನನ್ನು ಬೇರೆ ನಾವು ಪ್ರಾಣ

ದಿಂದುಳಿಸುವಹಾಗಿಲ್ಲ ನೀನು ನಮ್ಮನ್ನಾದರೂ ಸೋಲಿಸಿ ಈ ಭೂಮಿಯನ್ನಾಳು ಇಲ್ಲದಿದ್ದರೆ ನಮ್ಮಿಂದ ಹತನಾಗಿ ಉತ್ತಮ ಲೋಕಗಳನ್ನು ಹೊಂದು ರಾಜಾ! ನೀನೂ, ನಾನೂ ಪ್ರಾಣಸಹಿತರಾಗಿರುವವರೆಗೆ, ಜನರಿಗೆಲ್ಲ ನಮ್ಮಿಬ್ಬರ ಜಯವಿಷಯದಲ್ಲಿ ಸಂಶಯವಿದ್ದೇ ಇರುವುದು ಈಗ ನಮ್ಮ ಕೈಗೆ ಸಿಕ್ಕಿಬಿದ್ದ ನೀನೇನೋ ಪ್ರಾಣವನ್ನುಳಿಸಿಕೊಳ್ಳಲಾರೆ ನಾವಾಗಿ ಇಷ್ಟಪಟ್ಟರೆ ಮಾತ್ರ ನಿನ್ನನ್ನು ಪ್ರಾಣಸಹಿತವಾಗಿ ಬಿಡಬಲ್ಲೆವು ಆದರೆ ನೀನು ಜೀವಂತನಾಗಿರಲು ಯೋಗ್ಯನಲ್ಲ ನಮ್ಮನ್ನು ನಿರ್ಮೂಲವಾಗಿ ಸುಟ್ಟುಬಿಡುವುದಕ್ಕಾಗಿಯೇ ನೀನು ಮಹಾಪ್ರಯತ್ನಗಳನ್ನು ಮಾಡಿದೆ. ಸರ್ಪಗಳಿಂದಲೂ, ವಿಷದಿಂದಲೂ ನಮ್ಮನ್ನು ಕೊಲ್ಲಲು ಪ್ರಯತ್ನಿಸಿದೆ ನೀರಿನಲ್ಲಿ ಎತ್ತಿಹಾಕಿದೆ ನಮ್ಮ ರಾಜ್ಯವನ್ನೆಲ್ಲ ಕಿತ್ತುಕೊಂಡೆ! ಮೋಸದಿಂದ ನಮ್ಮನ್ನು ವಂಚಿಸಿದೆ ದ್ರೌಪದಿಗೆ ಮಾನಭಂಗಪಡಿಸಿದೆ. ನಿನ್ನಿಂದ ನಾವು ಎಷ್ಟೋ ಅವಮಾನಗಳಿಗೆ ಗುರಿಯಾದೆವು ಈ ಕಾರಣಗಳಿಂದ ನಿನ್ನ ಪ್ರಾಣವನ್ನುಳಿಸಲಾರೆವು ಏಳೇಳು! ಮೇಲೆದ್ದು ಬಾ! ನಮ್ಮೊಡನೆ ಯುದ್ಧಮಾಡು ಯುದ್ಧದಿಂದಲೇ ನಿನಗೆ ಶ್ರೇಯಸ್ಸು!" ಎಂದನು ರಾಜಾ! ಹೀಗೆ ಅವರವರು ಅಲ್ಲಲ್ಲಿಂದ ಹೀಗೆ ವಿವಿಧ ವಾಕ್ಯಗಳನ್ನಾಡಿ ನಿನ್ನ ಮಗನನ್ನು ಬಾರಿಬಾರಿಗೂ ಮೂದಲಿಸುತಿದ್ದರು

ಇದು ಮೂವತ್ತೊಂದನೆಯ ಅಧ್ಯಾಯವು



{ ಯುಧಿಷ್ಠಿರನ ಕಠೋರವಾಕ್ಯಗಳನ್ನು ಕೇಳಿ ದುರ್ಯೋಧನನು ಗದೆಯನ್ನು ಕೈಯಲ್ಲಿ ಹಿಡಿದು ಮಡುವಿನಿಂದೆದ್ದು ಬಂದುದು ಇಬ್ಬರಿಗೂ ಸಂವಾದವು }

ಆಮೇಲೆ ಧೃತರಾಷ್ಟ್ರನು "ಸಂಜಯಾ! ಪಾಂಡವರ ಅಂತಹ ಕ್ರೂರವಾಕ್ಯಗಳನ್ನು ಕೇಳಿದಾಗ, ಬಹಳ ಮಾನಿಯೂ, ವೀರನೂ ಆದ ನನ್ನ ಮಗನ ಸ್ಥಿತಿಯೇನಾಗಿದ್ದಿತು? ಇಂತಹ ಬೆದರಿಕೆಯ ಮಾತುಗಳನ್ನು ನನ್ನ ಮಗನು ಕೇಳಿದುದಕ್ಕೆ ಇದೇ ಮೊದಲು ಆತನು ಮಹಾರಾಜಪದವಿಗೆ ತಕ್ಕಂತೆ ಎಲ್ಲರ ಪೂಜೆಗೂ ಅರ್ಹನಾಗಿದ್ದವನು ಮಹಾಮಾನಿಯಾದ

ಯಾವನು ತನ್ನ ಅಹಂಕಾರದಿಂದ ತನ್ನ ಶ್ವೇತಚ್ಛತ್ರದ ನೆರಳನ್ನು ಕೂಡ ಸೂರ್ಯತಾಪಕ್ಕೆ ಸಮಾನವಾಗಿಯೇ ಭಾವಿಸಿ, ತನಗೆ ಅದರಿಂದಾಗುವ ರಕ್ಷಣೆಯನ್ನೂ ಸಹಿಸಲಾರದಿದ್ದನೋ, ಅವನು ಇಂತಹ ಕಠಿನ ವಾಕ್ಯಗಳನ್ನು ಹೇಗೆ ಸಹಿಸಿದನು? ಸಂಜಯಾ! ಮ್ಲೇಚ್ಛರಿಂದಲೂ, ಆಟವಿಕ (ಅಡವಿಯ ಜನ) ರಿಂದಲೂ ಕೂಡಿದ ಈ ಭೂಮಿಯಲ್ಲವೂ ನಿನ್ನ ಪ್ರಣ್ಣಾದಿರಾಗಿ ಯಾವನ ಅನುಗ್ರಹದಿಂದ ಧರಿಸಲ್ಪಟ್ಟಿದ್ದಿತೋ, ಆ ದುರ್ಯೋಧನನು ಅಸಹಾಯನಾಗಿ ನಿರ್ಜನಪ್ರದೇಶದಲ್ಲಿದ್ದಾಗ, ಇಂತಹ ಬೆದರಿಕೆಯ ಮಾತುಗಳನ್ನು, ಅದರಲ್ಲಿಯೂ ಅವನಿಗೆ ಪರಮವೈರಿಗಳಾದ ಪಾಂಡವರ ಬಾಯಿಂದ ಹೊರಟುದನ್ನು, ಕೇಳಿ ಹೇಗೆ ಸಹಿಸಿದನು? ಅತಿ ಕ್ರೂರವೂ, ಜಯಸೂಚಕವೂ ಆದ ಪಾಂಡವರ ವಾಕ್ಯಗಳನ್ನು ಅಡಿಗಡಿಗೆ ಕೇಳಿದ ಮೇಲೆ, ಅವನು ಪಾಂಡವರನ್ನು ಕುರಿತು ಏನು ಹೇಳಿದನೋ ಅದನ್ನೆಲ್ಲ ನನಗೆ ತಿಳಿಸಬೇಕು" ಎನಲು, ಸಂಜಯನು ಹೇಳುವನು

"ರಾಜೇಂದ್ರಾ! ನಿನ್ನ ಮಗನು ಯುಧಿಷ್ಠಿರನ ಮರ್ಮಭೇದಕವಾದ ವಾಕ್ಯಗಳನ್ನು ಕೇಳಿ, ನೀರಿನಲ್ಲಿದ್ದ ಹಾಗೆಯೇ ಅಡಿಗಡಿಗೆ ದೀರ್ಘವೂ, ಉಷ್ಣವೂ ಆದ ನಿಟ್ಟುಸಿರು ಬಿಡುತ್ತ, ಎರಡು ಕೈಗಳನ್ನೂ ಒದರಿಕೊಂಡು ಯುದ್ಧೋದ್ಯತನಾಗಿ ಯುಧಿಷ್ಠಿರನನ್ನು ಕುರಿತು "ಓ ಪಾಂಡವರೇ! ನೀವೆಲ್ಲರೂ ಎಲ್ಲಾ ಬಂಧುಗಳಿಂದಲೂ, ರಥವಾಹನಗಳಿಂದಲೂ ಕೂಡಿರುವಿರಿ! ನಾನಾದರೋ ಈಗ ಒಬ್ಬೊಂಟಿಗನಾಗಿರುವೆನು ನನ್ನ ಬಂಧುಮಿತ್ರರೆಲ್ಲರೂ ಅಗಲಿದರು ನನಗೆ ರಥವಿಲ್ಲ ನನ್ನ ವಾಹನಗಳೆಲ್ಲವೂ ಕೊಲ್ಲಲ್ಪಟ್ಟುವು ನನಗೆ ಸಹಾಯಕರಾರೂ ಇಲ್ಲ ಶಸ್ತ್ರಗಳೂ ಇಲ್ಲ ಈ ಸ್ಥಿತಿಯಲ್ಲಿರುವ ನಾನು ಶಸ್ತ್ರಪಾಣಿಗಳೂ, ರಥಸಹಿತರೂ ಆದ ನಿಮ್ಮಂತಹ ಅನೇಕರನ್ನು ಇದಿರಿಸಿ ನಿಂತು ಯುದ್ಧಮಾಡಲು ಹೇಗೆ ಶಕ್ತನಾಗುವೆನು? ಯುಧಿಷ್ಠಿರಾ! ನೀವು ಒಬ್ಬೊಬ್ಬರಾಗಿ ನನ್ನೊಡನೆ ಯುದ್ಧಮಾಡುವುದಾದರೆ ಈಗಲೂ ನಾನು ಸಿದ್ಧನಾಗಿರುವೆನು ಒಬ್ಬನು ಅನೇಕರೊಡನೆ ಯುದ್ಧಮಾಡುವುದು ಧರ್ಮವಲ್ಲ ಅಲ್ಲದೆ, ನನ್ನ ಯುದ್ಧಕವಚವು ಹರಿದುಹೋದುದರಿಂದ ಅದನ್ನೂ ಬಿಚ್ಚಿಹಾಕಿರುವೆನು ಮಹಾವಿಪತ್ತಿಗೆ ಗುರಿ

ಯಾಗಿರುವೆನು. ನನ್ನ ಶರೀರವೆಲ್ಲ ಬಹಳವಾಗಿ ಗಾಯಗೊಂಡಿರುವುದು. ನನ್ನ ವಾಹನಗಳೂ, ಸೈನ್ಯಗಳೂ ಎಲ್ಲವೂ ಹೋದುವು. ಯುಧಿಷ್ಠಿರಾ! ಈ ಸ್ಥಿತಿಯಲ್ಲಿಯೂ ನಾನು ನಿನಗಾಗಲಿ, ಭೀಮಾರ್ಜುನರಿಗಾಗಲಿ, ನಕುಲಸಹದೇವರಿಗಾಗಲಿ, ಕೃಷ್ಣನಿಗಾಗಲಿ, ಪಾಂಚಾಲರಿಗಾಗಲಿ, ಯುಯುಧಾನನು ಮುಂತಾದ ನಿನ್ನ ಕಡೆಯ ವೀರರಿಗಾಗಲಿ ಹೆದರುವೆನೆಂದು ತಿಳಿಯಬೇಡ. ಕೋಪಗೊಂಡ ನಾನೊಬ್ಬನೇ ಯುದ್ಧದಲ್ಲಿ ನಿಂತು ನಿಮ್ಮೆಲ್ಲರನ್ನೂ ತಡೆಯಬಲ್ಲೆನು. ಆದರೆ, ಸತ್ಪುರುಷರ ಕೀರ್ತಿಗೆ ಧರ್ಮವೇ ಆಧಾರವು. ಆ ಧರ್ಮ ಕೀರ್ತಿಗಳನ್ನುದ್ದೇಶಿಸಿ ನಾನು ಮಾತಾಡುವೆನೆಂದು ತಿಳಿ. ಈಗಲೂ ನಾನು ಮೇಲೆ ಬಂದು ಯುದ್ಧರಂಗದಲ್ಲಿ ಎಲ್ಲಾ ವೀರರುಗಳನ್ನೂ ಇದಿರಿಸಿ ಯುದ್ಧಮಾಡುವೆನು. ನನ್ನೊಡನೆ ಯುದ್ಧಮಾಡುವವರಲ್ಲರನ್ನೂ ಕೊಲ್ಲುವೆನು. ನಾನು ರಥಶಸ್ತ್ರವಿಹೀನನಾಗಿದ್ದರೂ, ರಥಹಯಸಮೇತರಾದ ನಿಮ್ಮೆನ್ನೆಲ್ಲ ಸೂರ್ಯನು ನಿಶಾಂತದಲ್ಲಿ ನಕ್ಷತ್ರಗಳನ್ನು ಹೇಗೋ ಹಾಗೆ ನನ್ನ ತೇಜಸ್ಸಿನಿಂದ ಕಂದಿಸಬಲ್ಲೆನು. ಓ ಪಾಂಡವರೇ! ಧೈರ್ಯದಿಂದ ಬಂದು ಸ್ಥಿರವಾಗಿ ನಿಲ್ಲಿರಿ. ಇದುವರೆಗೆ ನನಗಾಗಿ ಪ್ರಾಣವನ್ನು ಬಿಟ್ಟ ಪ್ರಸಿದ್ಧ ಕ್ಷತ್ರಿಯರು, ಬಾಹ್ಲಿಕರು, ದ್ರೋಣನು, ಭೀಷ್ಮನು, ಕರ್ಣನು, ಜಯದ್ರಥನು, ಭಗದತ್ತನು, ಶಲ್ಯನು, ಭೂರಿಶ್ರವಸ್ಸು, ನನ್ನ ಮಕ್ಕಳು, ಶಕುನಿ, ಇವರೆಲ್ಲರ ವಿಷಯದಲ್ಲಿ ಈಗ ನನ್ನ ಋಣವನ್ನು ತೀರಿಸಿಕೊಳ್ಳುವೆನು. ಓ ಧರ್ಮರಾಜಾ! ನಿನ್ನನ್ನು ನಿನ್ನ ಎಲ್ಲಾ ಭ್ರಾತೃಗಳೊಡನೆ ಕೊಂದು, ನನ್ನ ಎಲ್ಲಾ ಬಂಧುಮಿತ್ರಸಹೋದರರಲ್ಲಿ ನಾನು ಋಣವಿಮುಕ್ತನಾಗುವನು" ಎಂದನು. ನಿನ್ನ ಪುತ್ರನು ನೀರೊಳಗಿನಿಂದಲೇ ಇಷ್ಟು ಮಾತುಗಳನ್ನೂ ಆಡಿ ಸುಮ್ಮನಾದನು. ಆಗ ಯುಧಿಷ್ಠಿರನು ತಿರುಗಿ ನಿನ್ನ ಮಗನನ್ನು ಕುರಿತು "ಓ ದುರ್ಯೋಧನಾ! ಭಾಗ್ಯವಿಶೇಷದಿಂದ ನೀನೂ ಕ್ಷತ್ರಿಯಧರ್ಮವನ್ನು ತಿಳಿದವನಾದೆ! ದೈವವಶದಿಂದ ಈಗ ನಿನ್ನ ಬುದ್ಧಿಯು ಯುದ್ಧದಲ್ಲಿ ಉದ್ವೇಗಗೊಂಡಿದೆ. ವಿಧಿವಶದಿಂದ ಈಗಲೇ ನೀನೂ ಶೂರನೆನಿಸಿದೆ. ನೀನು ಯುದ್ಧಮರ್ಮವನ್ನು ತಿಳಿದವನಾದೆ! ನೀನು ಅಸಹಾಯನಾಗಿಯೇ ನಮ್ಮೆಲ್ಲರನ್ನೂ ಇದಿರಿಸಿ ಯುದ್ಧಮಾಡಬೇಕೆಂದಿರುವೆಯಲ್ಲವೆ? ಅಸಹಾಯಕ

ನಾದ ನೀನು, ನಮ್ಮಲ್ಲಿ ಅಸಹಾಯಕನಾದ ಒಬ್ಬೊಬ್ಬನನ್ನೇ ಇದಿರಿಸಿ ಯುದ್ಧಮಾಡು! ನೀನು ಯಾವ ಆಯುಧವನ್ನಪೇಕ್ಷಿಸುವೆಯೋ, ಆ ಆಯುಧವನ್ನೇ ಹಿಡಿದು ಯುದ್ಧಮಾಡು! ಬೇರೆಯವರೆಲ್ಲರೂ ಸುಮ್ಮನೆ ನೋಡುತ್ತ ನಿಂತಿರುವೆವು ಓ ವೀರಾ! ನೀನು ಕೋರಿದಹಾಗೆಲ್ಲಾ ನಾನೂ ಸಮ್ಮತಿಸುವೆನು ನಮ್ಮಲ್ಲಿ ಒಬ್ಬನನ್ನು ಕೊಂದರೂ ನೀನೇ ರಾಜನಾಗಬಹುದು ಇಲ್ಲವೇ ನಮ್ಮಿಂದ ನೀನಾದರೂ ಕೊಲ್ಲಲ್ಪಟ್ಟು ವೀರಸ್ವರ್ಗವನ್ನು ಪಡೆ!'' ಎಂದನು ಅದಕ್ಕಾ ದುರ್ಯೋಧನನು ''ಧರ್ಮರಾಜಾ! ಯುದ್ಧಮಾಡುವುದರಲ್ಲಿ ನೀನು ನನಗೆ ಮತ್ತೊಂದು ಸಮ್ಮತಿಯನ್ನು ಕೊಡಬೇಕು ಆಯುಧಗಳಲ್ಲಿ ಈ ಗದಾಯುಧವೇ ಯಾವಾಗಲೂ ನನಗೆ ಪ್ರಿಯವಾದುದು ಸಹೋದರರಾದ ನಿಮ್ಮಲ್ಲಿ ಗದೆಯಿಂದ ನನ್ನನ್ನು ಇದಿರಿಸಲು ತಾನು ಶಕ್ತಿಯುಳ್ಳವನೆಂದು ಯಾವನು ಭಾವಿಸುವನೋ, ಆತನು ಗದಾಯುಧವನ್ನು ಹಿಡಿದು ಪಾದಚಾರಿಯಾಗಿ ನಿಂತು ನನ್ನೊಡನೆ ಯುದ್ಧಮಾಡಲಿ ಇದುವರೆಗೆ ವಿಚಿತ್ರವಾದ ಅನೇಕ ರಥಯುದ್ಧಗಳು ನಡೆದುದಾಯಿತು ಆಶ್ಚರ್ಯಕರವಾದ ದೊಡ್ಡ ಗದಾಯುದ್ಧವೊಂದು ಈಗ ನಡೆಯಲಿ ಮನುಷ್ಯರು ತಮ್ಮ ಭೋಜನಕ್ಕಾಗಿ ತಮ್ಮ ತಮ್ಮ ಅಭಿರುಚಿಗೆ ತಕ್ಕಂತೆ ಅನ್ನಗಳನ್ನು ಮಾಡುವಂತೆ ನಮ್ಮ ಯುದ್ಧದ ರೀತಿಗಳೂ ಮಾರ್ಪಡಲಿ ಓ ಮಹಾಬಾಹೂ! ಈಗಲೂ ನಾನು ಸಹೋದರರೊಡಗೂಡಿದ ನಿನ್ನನ್ನೂ, ಪಾಂಚಾಲರನ್ನೂ, ಸೃಂಜಯರನ್ನೂ, ಇತರ ಯುದ್ಧವೀರರನ್ನೂ ಜಯಿಸುವೆನು ಇಂದ್ರನೂ ನನ್ನನ್ನು ಕದಲಿಸಲಾರನು'' ಎಂದು ಪ್ರತ್ಯುತ್ತರಕೊಟ್ಟನು. ಆಗ ಯುಧಿಷ್ಠಿರನು 'ಓ ಗಾಂಧಾರೀಪುತ್ರಾ! ದುರ್ಯೋಧನಾ! ಹಾಗಿದ್ದರೆ ಏಳು! ಏಳು! ಬಲಶಾಲಿಯಾದ ನೀನೊಬ್ಬನೇ ಗದಾಯುಧವನ್ನು ಹಿಡಿದು ನನ್ನೊಬ್ಬನನ್ನಿದಿರಿಸಿ ಯುದ್ಧಮಾಡು ಇಂದ್ರನೇ ನಿನಗೆ ಸಹಾಯಕನಾಗಿ ಬಂದರೂ, ನಿನಗೇನೋ ಪ್ರಾಣವುಳಿಯುವಹಾಗಿಲ್ಲ' ಎಂದನು ನಿನ್ನ ಮಗನಾದ ದುರ್ಯೋಧನನು ನೀರಿನೊಳಗೇ ಇದ್ದು, ಹುತ್ತಿನೊಳಗಿಂದ ಬುಸುಗುಟ್ಟುವ ಸರ್ಪದಂತೆ ಆ ವಾಕ್ಯಗಳನ್ನು ಸಹಿಸಲಾರದೆ ದೀರ್ಘಶ್ವಾಸವನ್ನು ಬಿಡುತಿದ್ದನು ಹೀಗೆ ವಾಗ್ಬಾಣದಿಂದ ಅಡಿಗಡಿಗೆ ಬಾಧಿತನಾದ ಆ ದುರ್ಯೋ

ಧನನು ಉತ್ತಮಜಾತಿಯ ಕುದುರೆಯು ಚಾವಟಿಯ ಪೆಟ್ಟನ್ನು ಸೈರಿಸಲಾರದಂತೆ, ಅದನ್ನು ತಡೆಯಲಾರದೆ ಕೊಳದ ನೀರನ್ನು ಕಲಕುತ್ತ, ಸುವರ್ಣಾಲಂಕೃತವಾದ ತನ್ನ ಉಕ್ಕಿನ ಗದೆಯನ್ನು ಹಿಡಿದು, ಸರ್ಪದಂತೆ ಬುಸುಗುಟ್ಟುತ್ತ ಸ್ತಂಭಿಸಿದ್ದ ಜಲವನ್ನು ಭೇದಿಸಿಕೊಂಡು ಗದೆಯನ್ನು ಕೈಗಳಿಂದ ಬೀಸುತ್ತ ಜ್ವಲಿಸುವ ಸೂರ್ಯನಂತೆ ಮೇಲೆದ್ದು ಬಂದನು ಗದಾಪಾಣಿಯಾಗಿ ಪರ್ವತಾಕಾರದಿಂದ ಮೇಲೆದ್ದ ಆ ನಿನ್ನ ಮಗನು, ನೋಡಿದವರಿಗೆಲ್ಲ ಕೋಪಗೊಂಡ ಶೂಲಪಾಣಿಯಾದ ಕಾಲರುದ್ರನಂತೆಯೂ, ಕಾಲದಂಡವನ್ನು ಹಿಡಿದ ಯಮನಂತೆಯೂ ಭಯಂಕರನಾಗಿದ್ದನು ಪಾಂಚಾಲರೆಲ್ಲರೂ ನಿನ್ನ ಮಗನನ್ನು ವಜ್ರಾಯುಧವನ್ನು ಕೈಯಲ್ಲಿ ಹಿಡಿದ ಇಂದ್ರನಂತೆ ಭಾವಿಸಿದರು ಆದರೆ ಮೇಲೆ ಬಂದ ದುರ್ಯೋಧನನನ್ನು ಕಂಡು ಪಾಂಡವರೂ, ಪಾಂಚಾಲರೂ ಸಂತೋಷಾತಿಶಯದಿಂದ ಒಬ್ಬರಿಗೊಬ್ಬರು ಹಸ್ತಲಾಘವವನ್ನು ಕೊಟ್ಟು ಕೈಗಳನ್ನು ಪೋಣಿಸಿ ನಿಂತರು ನಿನ್ನ ಮಗನು ಅದನ್ನೆಲ್ಲ ತನ್ನ ವಿಷಯವಾದ ಪರಿಹಾಸವೆಂದು ಭಾವಿಸಿ, ಕೋಪದಿಂದ ಪಾಂಡವರನ್ನು ದಹಿಸುವವನಂತೆ ಕಣ್ಣುಗಳನ್ನು ತೊಳಲಿಸುತ್ತ, ಹುಬ್ಬುಗಂಟುಹಾಕಿ ತುಟಿಗಳನ್ನು ಕಚ್ಚಿಕೊಂಡು ಕೃಷ್ಣಸಮೇತರಾದ ಆ ಪಾಂಡವರನ್ನು ಕುರಿತು “ ಓ ಪಾಂಡವರೇ! ಈ ಪರಿಹಾಸಕ್ಕೆ ಪ್ರತಿಫಲವನ್ನು ಈಗಲೇ ನೀವು ಅನುಭವಿಸುವಿರಿ ನೀವು ಈಗಲೇ ನನ್ನಿಂದ ಹತರಾಗಿ ಪಾಂಚಾಲರೊಡನೆ ಯಮಲೋಕವನ್ನು ಸೇರುವಿರಿ ” ಎಂದು ಹೇಳುತ್ತ, ನೀರನ್ನು ಬಿಟ್ಟು ಮೇಲೆದ್ದು ಬಂದು ರಕ್ತದಲ್ಲಿ ತೊಯ್ದು ಮೈಯೊಡನೆ ನಿಂತನು ರಕ್ತಮಿಶ್ರವಾದ ಜಲದಲ್ಲಿ ನೆನೆದ ಆತನ ಶರೀರವು ಗಿರಿನದಿಗಳಿಂದ ಕೂಡಿದ ಬೆಟ್ಟದಂತೆ ಕಾಣಿಸಿತು ಗದಾಪಾಣಿಯಾದ ಆ ವೀರನು ಕೋಪಗೊಂಡ ಯಮನಂತೆಯೂ, ಶೂಲಪಾಣಿಯಾದ ರುದ್ರನಂತೆಯೂ ಕಾಣಿಸುತ್ತ, ಮೇಘಗರ್ಜನೆಗೆ ಸಮಾನವೂ ವೃಷಭದಂತೆ ಉತ್ಸಾಹಪರಿಪೂರ್ಣವೂ ಆದ ಗರ್ಜನೆಗಳನ್ನು ಮಾಡಿ ಪಾಂಡವರನ್ನು ಗದಾಯುದ್ಧಕ್ಕೆ ಕರೆದನು ಆಗ ಆತನು “ ಓ ಯುಧಿಷ್ಠಿರಾ! ನೀವು ಒಬ್ಬೊಬ್ಬರಾಗಿ ನನ್ನೊಡನೆ ಯುದ್ಧಕ್ಕೆ ಬರಬೇಕು ಒಬ್ಬ ವೀರನಿಗೆ ಅನೇಕ ವೀರರು ಇದಿರಾಗಿ ಯುದ್ಧಮಾಡುವುದು ನ್ಯಾಯವಲ್ಲ.

ನಾನಾದರೋ ಈಗ ಯುದ್ಧಕವಚವಿಲ್ಲದವನು ಬಹಳ ಶ್ರಮಗೊಂಡಿರುವೆನು ಈಗಲೇ ನೀರಿನಲ್ಲಿ ಮುಳುಗಿ ಬಂದವನು ನನ್ನ ಶರೀರವೂ ಅಧಿಕವಾಗಿ ಗಾಯಪಟ್ಟಿರುವುದು ನನ್ನ ಕಡೆಯ ವಾಹನಗಳೂ, ಸೈನ್ಯವೂ ನಷ್ಟವಾಗಿವೆ ಆದರೂ ಈಗ ನಿಮ್ಮೊಡನೆ ಯುದ್ಧಮಾಡದೆ ತೀರದು ಆದರ, ನೀವೆಲ್ಲರೂ ಒಂದಾಗಿ ಸೇರಿ ನನ್ನೊಡನೆ ಯುದ್ಧಮಾಡುವುದು ನ್ಯಾಯವೇ, ಅನ್ಯಾಯವೇ ಎಂಬುದನ್ನು ನೀನೂ ಚೆನ್ನಾಗಿ ಬಲ್ಲೆಯಷ್ಟೆ?" ಎಂದನು

ಆದಕ್ಕೆ ಯುಧಿಷ್ಠಿರನು "ಓ ದುರ್ಯೋಧನಾ! ಅಸಹಾಯಕನಾದ ಅಭಿಮನ್ಯುವನ್ನು ನಿನ್ನ ಕಡೆಯ ಅನೇಕ ಮಹಾರಥರು ಕೊಂದಾಗ ನಿನಗೆ ಆ ನ್ಯಾಯಬುದ್ಧಿಯೆಲ್ಲಿಹೋಗಿದ್ದಿತು? ಹೇಗೆ ನೋಡಿದರೂ ಕ್ಷತ್ರಿಯಧರ್ಮವೇ ಮಹಾಕ್ರೂರವಾದುದು ನ್ಯಾಯಾನ್ಯಾಯಗಳನ್ನು ಗಮನಿಸುವುದಿಲ್ಲ ಹಾಗಿಲ್ಲದಿದ್ದರೆ ಅಂತಹ ಅಪಾಯಸ್ಥಿತಿಯಲ್ಲಿದ್ದ ಅಭಿಮನ್ಯುವನ್ನು ನೀವು ಬಹಳ ಮಂದಿ ಒಂದಾಗಿ ಸೇರಿ ಹೇಗೆತಾನೇ ಕೊಲ್ಲುತಿದ್ದಿರಿ? ನೀವೆಲ್ಲರೂ ಧರ್ಮವನ್ನರಿತವರು! ಎಲ್ಲರೂ ಶೂರರು! ಎಲ್ಲರೂ ಪ್ರಾಣತ್ಯಾಗಕ್ಕೆ ಸಿದ್ಧರಾದವರು! ನ್ಯಾಯರೀತಿಯಿಂದ ಯುದ್ಧಮಾಡುವವರಿಗೆ ಉತ್ತಮವಾದ ಇಂದ್ರಲೋಕವು ಪ್ರಾಪ್ತವಾಗುವುದೆಂದು ಶಾಸ್ತ್ರಗಳಲ್ಲಿ ಹೇಳಿದೆ ಒಬ್ಬನನ್ನು ಅನೇಕರು ಯುದ್ಧದಲ್ಲಿ ಕೊಲ್ಲಕೂಡದೆಂಬುದು ಧರ್ಮವು ಆದರ ನಿನ್ನ ಆಜ್ಞೆಗೊಳಪಟ್ಟ ಅನೇಕ ವೀರರು ಸೇರಿ ಅಭಿಮನ್ಯುವನ್ನೇಕೆ ಕೊಂದರು? ಯಾವ ಮನುಷ್ಯನೂ ವಿಪತ್ತಿಗೆ ಗುರಿಯಾದಾಗ ಧರ್ಮಶಾಸ್ತ್ರವನ್ನು ಗಮನಿಸಲಾರನು ಒಳ್ಳೇ ಮಾರ್ಗದಲ್ಲಿರುವವನಿಗೆ ಪರಲೋಕವು ತಾನಾಗಿ ಬಾಗಿಲನ್ನು ತೆರದು ತೋರಿಸುವುದು ವೀರಾ! ಈಗಲೂ ನೀನು ಕವಚವನ್ನು ಧರಿಸು ತಲೆಕೂದಲುಗಳನ್ನು ಕಟ್ಟಿಡು. ನಿನಗೆ ಬೇಕಾದುದನ್ನೆಲ್ಲ ಸಾವಧಾನವಾಗಿ ಸಂಗ್ರಹಿಸಿಟ್ಟುಕೊಂಡು ಬಾ! ನಾನಾಗಿ ತಿರುಗಿ ನಿನಗೆ ಮತ್ತೊಂದು ವಿಶೇಷವರವನ್ನು ಕೊಡವೆನು ನಮ್ಮೈವರಲ್ಲಿ ನೀನು ಯಾರೊಡನೆ ಯುದ್ಧಮಾಡಲಪೇಕ್ಷಿಸುಯೋ ಆತನೊಬ್ಬನನ್ನು ಕೊಂದರೂ ನೀನು ರಾಜನಾಗಬಹುದು ಹಾ।

ಲ್ಲದೆ ನೀನೇ ಕೊಲ್ಲಲ್ಪಟ್ಟರೆ ನಿನಗೆ ವೀರಸ್ವರ್ಗವು ಸಿದ್ಧವೇ ! ನಿನ್ನ ಪ್ರಾಣ ವೊಂದನ್ನು ಬಿಟ್ಟು ಇನ್ನೂ ಬೇರೆ ಯಾವ ವರವನ್ನಾದರೂ ಕೇಳು ಕೊಡು ವೆನು'' ಎಂದನು ರಾಜಾ! ಆಮೇಲೆ ನಿನ್ನ ಮಗನು ಸುವರ್ಣಕವಚ ವನ್ನು ಧರಿಸಿ, ತಲೆಪಾಗನ್ನು ಕಟ್ಟಿ, ಸ್ವರ್ಣಗಿರಿಯಂತೆ ಪ್ರಕಾಶಿಸುತ್ತ, ಗದೆಯನ್ನು ಕೈಯಲ್ಲಿ ಹಿಡಿದು ಯುದ್ಧಸನ್ನದ್ಧನಾಗಿ ಪಾಂಡವರೆಲ್ಲರನ್ನೂ ಕುರಿತು ' ಸಹೋದರರಾದ ನಿಮ್ಮಲ್ಲಿ ಯಾವನೊಬ್ಬನಾದರೂ ಗದಾಯುಧ ವನ್ನು ಕೈಗೆತ್ತಿಕೊಂಡು ಈಗ ನನ್ನೊಡನೆ ಯುದ್ಧಮಾಡಬಹುದು ಓ ಭರತಕುಲೋತ್ತಮಾ ! ಸಹದೇವನೊಡನೆಯಾಗಲಿ, ಭೀಮನೊಡನೆಯಾ ಗಲಿ, ನಕುಲನೂಡನೆಯಾಗಲಿ, ಅರ್ಜುನನೊಡನೆಯಾಗಲಿ, ನಿನ್ನೊಡನೆ ಯಾಗಲಿ ಈಗ ನಾನು ಯುದ್ಧಕ್ಕೆ ಸಿದ್ಧನು ನಾನು ನಿಮ್ಮನ್ನು ಜಯಿ ಸುವೆನು ಚಿನ್ನದ ಪಟ್ಟಿಯುಳ್ಳ ಈ ನನ್ನ ಗದಾಯುಧದಿಂದ ಹೇಗೂ ನಮ್ಮ ವೈರವನ್ನು ಇಂದಿಗೆ ಕೊನೆಮುಟ್ಟಿಸುವೆನು ಗದಾಯುದ್ಧದಲ್ಲಿ ನನಗೆ ಸಮಾನನು ಬೇರ ಯಾವನೂ ಇಲ್ಲವೆಂದೇ ನನ್ನ ನಂಬಿಕೆ. ನಿಮ್ಮೆಲ್ಲರನ್ನೂ ಸೇರಿಸಿ ಈ ಗದಾಯುಧದಿಂದಲೇ ಕೊಲ್ಲುವೆನು ನೀವೆಲ್ಲ ರೂ ಸೇರಿಯಾಗಲಿ, ಪ್ರತ್ಯೇಕವಾಗಿಯಾಗಲಿ ನ್ಯಾಯರೀತಿಯಿಂದ ನನ್ನೊ ಡನೆ ಯುದ್ಧಮಾಡಿದರ ಜಯಿಸಲಾರಿರಿ ಗರ್ವೋದ್ರೇಕದಿಂದಕೂಡಿದ ಇಂತಹ ವಾಕ್ಯಗಳನ್ನು ನಾನೇ ಹೇಳಿಕೊಳ್ಳುವುದು ಯುಕ್ತವಲ್ಲ ಆದ ರೇನು ? ನಿಮ್ಮ ಮುಂದೆಯೇ ಈ ವಾಕ್ಯಗಳನ್ನು ಸಫಲಗೊಳಿಸಿ ತೋರಿಸ ಬಲ್ಲೆನು ಈ ಮುಹೂರ್ತದಲ್ಲಿಯೇ ಅದರ ನಿಶ್ಚಯಾನಿಶ್ಚಯವು ನಿಮಗೆ ತಿಳಿಯುವುದು ಈಗ ನಿಮ್ಮಲ್ಲಿ ನನ್ನೊಡನೆ ಯುದ್ಧಮಾಡಬಲ್ಲವನು ಯಾವನೋ ಆತನು ಗದೆಯನ್ನು ಕೈಯಲ್ಲಿ ಹಿಡಿದು ಮುಂದೆ ಬರಲಿ ! '' ಎಂದನು

ಇದು ಮೂವತ್ತೆರಡನೆಯ ಅಧ್ಯಾಯವು



ಯುಧಿಷ್ಠಿರನು 'ತನ್ನೊಳಗೆ ಒಬ್ಬನನ್ನು ಗೆದ್ದರೂ, ದುರ್ಯೋಧನನೇ ರಾಜ್ಯವನ್ನು ಪಡೆಯಬಹು'ದೆಂಬ ಮಾತಿಗೆ ಕೃಷ್ಣನು ಆಕ್ಷೇಪಿಸಿ, "ಭೀಮನಾದರೂ ದುರ್ಯೋಧನನನ್ನು ಗೆಲ್ಲುವುದು ಸಂದೇಹವೇ" ಎಂದು ಹೇಳಲು, ಭೀಮನು ದುರ್ಯೋಧನನನ್ನು ತಾನು ಕೊಲ್ಲುವುದಾಗಿ ಹೇಳಿದುದು ಕೃಷ್ಣಾದಿಗಳು ಭೀಮನನ್ನು ಕೊಂಡಾಡಿದುದು ಭೀಮ ದುರ್ಯೋಧನರು ವೀರವಾದಗಳನ್ನು ಮಾಡುವುದಕ್ಕೆ ಸಿದ್ಧರಾದುದು

ಹೀಗೆ ದುರ್ಯೋಧನನು ಅದಿಗಡಿಗೆ ಗರ್ಜಿಸುತ್ತಿರಲು, ಕೃಷ್ಣನು ಯುಧಿಷ್ಠಿರನಮೇಲೆ ಕೋಪಗೊಂಡು "ಓ ಯುಧಿಷ್ಠಿರಾ! 'ಯುದ್ಧದಲ್ಲಿ ನಮ್ಮೊಳಗೆ ಒಬ್ಬನನ್ನು ಕೊಂದರೂ ನೀನು ರಾಜನಾಗಬಹುದು' ಎಂದು ನೀನೇಕೆ ಹೇಳಿದೆ? ನೀನು ಹೀಗೆ ಮುಂದಾಲೋಚನೆಯಿಲ್ಲದೆ ಮಾತಾಡಬಹುದೆ? ನಿನ್ನನ್ನೇ ಮೊದಲು ಯುದ್ಧಕ್ಕೆ ಕರೆದರೆ, ಆಗ ನೀನೇನುಮಾಡಬಲ್ಲೆ? ಅಥವಾ ಅರ್ಜುನನೊಡನೆಯಾಗಲಿ, ನಕುಲಸಹದೇವರೊಡನೆಯಾಗಲಿ ಅವನು ಯುದ್ಧಮಾಡಲಪೇಕ್ಷಿಸಿದರೆ ನೀವೇನುಮಾಡುವಿರಿ? ಈತನು ಭೀಮಸೇನನನ್ನು ಕೊಲ್ಲಬೇಕೆಂಬ ಉದ್ದೇಶದಿಂದಲೇ ಉಕ್ಕಿನಿಂದ ಮಾಡಿದ ಪುರುಷಾಕೃತಿಯೊಡನೆ ಹದಿಮೂರು ವರ್ಷಗಳವರೆಗೆ ಗದಾಯುದ್ಧವಿದ್ಯೆಯನ್ನು ಅಭ್ಯಾಸಮಾಡಿರುವನು ಹೀಗಿರುವಾಗ ನಿನ್ನ ಕಾರ್ಯವು ಹೇಗೆ ಸಿದ್ಧಿಸುವುದು? ಕೇವಲ ಕರುಣೆಯಿಂದ ನೀನು ಸ್ವಲ್ಪವೂ ಆಲೋಚಿಸದೆ ಹೀಗೇಕೆ ಮಾತಾಡಿದೆ? ಈತನನ್ನಿದಿರಿಸಿ ಯುದ್ಧಮಾಡಲು ಶಕ್ತನಾದವನು ವೃಕೋದರನು ಹೊರತು ಬೇರೊಬ್ಬನೂ ಇಲ್ಲ ಹಾಗೆ ನೋಡಿದರೆ ಭೀಮನೂ ಗದಾಯುದ್ಧದಲ್ಲಿ ಅವನಷ್ಟು ಪರಿಶ್ರಮವುಳ್ಳವನಲ್ಲ ಹಿಂದೆ ನಿನಗೂ, ಶಕುನಿಗೂ ದ್ಯೂತವು ನಡೆದಂತೆ, ಈಗಿನ ಯುದ್ಧದ್ಯೂತವೂ ಅವರಿಗೇ ಅನುಕೂಲವಾಗಬಹುದು ಏಕೆಂದರೆ ಭೀಮನೇನೋ ಮಹಾಬಲಶಾಲಿಯೇ ಹೌದು! ಆದರೆ ದುರ್ಯೋಧನನು ಭೀಮನಿಗಿಂತಲೂ ಅಧಿಕತಂತ್ರವುಳ್ಳವನು ಚೆನ್ನಾಗಿ ಸಾಧಕವಾ

ಡಿದವನು ದೇಹಬಲ, ಬುದ್ಧಿಬಲ, ಇವೆರಡರಲ್ಲಿ ಬುದ್ಧಿಬಲವುಳ್ಳವನೇ ಮೇಲು ಅಂತಹ ನಿನ್ನ ಶತ್ರುವನ್ನು ಈಗ ನೀನು ಅವನಿಗೇ ಅನುಕೂಲವಾದ ಮಾರ್ಗಕ್ಕೆ ತಂದಿರಿಸಿದೆಯಲ್ಲ! ಇದರಿಂದ ನೀನೂ ದೊಡ್ಡ ಆಪತ್ತಿಗೆ ಗುರಿಯಾದುದಲ್ಲದೆ ನಾವೂ ಕಷ್ಟಕ್ಕೆ ಗುರಿಯಾದೆವು ಅಯ್ಯೋ! ಇದುವರೆಗೆ ಎಲ್ಲಾ ಶತ್ರುಗಳನ್ನೂ ಕೊಂದು ಬಂದು, ಕೊನೆಗೆ ಕೇವಲ ಕಷ್ಟದಶೆಯಲ್ಲಿ ಸಿಕ್ಕಿಕೊಂಡಿರುವ ಒಬ್ಬ ಶುತ್ರುವಿನ ಒಂದೇ ಪ್ರಹಾರದಿಂದ ಕೆಡಹಲ್ಪಟ್ಟು, ನಿನ್ನ ರಾಜ್ಯವು ಅವನ ಕೈ ಸೇರುವಂತೆ ಮಾಡುವ ನಿನ್ನಂತಹ ವಿವೇಕಶೂನ್ಯನು ಯಾವನಿರುವನು? ಗದಾಪಾಣಿಯಾದ ದುರ್ಯೋಧನನನ್ನು ಜಯಿಸಬಲ್ಲವನು ಮೂರು ಲೋಕಗಳಲ್ಲಿ ಯಾವನೂ ಇಲ್ಲ ದೇವಾಂಶಪುರುಷನಾದರೂ ಜಯಿಸಲಾರನು ಹೀಗಿರುವಾಗ ದುರ್ಯೋಧನನನ್ನು ಜಯಿಸಲು ಅರ್ಜುನನಾಗಲಿ, ನೀನಾಗಲಿ, ಮಾದ್ರೀಪುತ್ರರಾದ ನಕುಲಸಹದೇವರಾಗಲಿ ಸಮರ್ಥರೆಂದು ತಿಳಿಯುವೆಯಾ! ಅದು ಸುಳ್ಳು! ದುರ್ಯೋಧನನು ಬಹಳ ಸಮರ್ಥನು ನೀನಾಗಲಿ, ಭೀಮನಾಗಲಿ, ನಕುಲಸಹದೇವರಾಗಲಿ, ಅರ್ಜುನನಾಗಲಿ ನ್ಯಾಯರೀತಿಯಿಂದ ಅವನನ್ನು ಜಯಿಸಲು ಸಾಧ್ಯವೇ ಅಲ್ಲ ಹೀಗಿರುವಾಗ ಯುದ್ಧದಲ್ಲಿ 'ನಮ್ಮೊಳಗೆ ಒಬ್ಬನನ್ನು ಕೊಂದರೂ ನೀನು ರಾಜನಾಗು' ಎಂದೂ, 'ಗದೆಯಿಂದ ಯುದ್ಧಮಾಡು' ಎಂದೂ, ಅವನಿಗೆ ನೀನೇ ಹೇಗೆ ಸಲಿಗೆಯನ್ನು ಕೊಟ್ಟೆ? ಈಗ ವೃಕೋದರನಿಂದಲೂ ನಮಗೆ ಜಯವುಂಟಾಗುವುದು ಸಂದೇಹವೇ ಮಹಾಬಲಶಾಲಿಯಾದ ಈ ದುರ್ಯೋಧನನು ನ್ಯಾಯಯುದ್ಧದಲ್ಲಿ ಮಹಾನಿಪುಣನು ಬಹಳ ಬಲಾಢ್ಯನು ಈಗ ಮುಖ್ಯವಾಗಿ 'ಅಂತು ಕುಂತಿಯ ಮಕ್ಕಳಿಗೆ ರಾಜ್ಯವಿಲ್ಲ' ವೆಂಬ ನಾಣ್ನುಡಿಯು ನಿಜವೆಂದೇ ತೋರುವುದು ಪಾಂಡುವಿನ ಮಕ್ಕಳಾದ ನೀವು ಎಂದಿಗೂ ಮುಗಿಯದ ವನವಾಸಕ್ಕಾಗಿಯೋ, ಭಿಕ್ಷೆಯೆತ್ತುವುದಕ್ಕಾಗಿಯೋ ಸೃಷ್ಟಿಸಲ್ಪಟ್ಟಂತಾಯಿತು" ಎಂದನು

ಆಗ ಭೀಮಸೇನನು "ಓ ಮಧುಸೂದನಾ! ಇದಕ್ಕಾಗಿ ನೀನೇನೂ ಯೋಚಿಸಬೇಕಾದುದಿಲ್ಲ ಈದಿನವೇ ನಾನು ನಮ್ಮ ವೈರವನ್ನು ಕೊನೆಮು

ಟ್ಟಿಸುವೆನು ಯುದ್ಧದಲ್ಲಿ ನಾನೇ ದುರ್ಯೋಧನನನ್ನು ಕೊಲ್ಲುವೆನು ಇದರಲ್ಲಿ ಸಂಶಯವಿಲ್ಲ ಓ ವಾಸುದೇವಾ! ನೀನು ವ್ಯಾಕುಲಪಡಬೇಕಾದುದಿಲ್ಲ ಧರ್ಮರಾಜನಿಗೇ ವಾಸ್ತವದಲ್ಲಿ ಜಯವುಂಟಾಗುವುದನ್ನು ನೀನು ನೋಡುವೆ ನನ್ನ ಗದೆಯು ಒಂದೂವರೆಪಾಲು ದೊಡ್ಡದಾಗಿರುವುದು ದುರ್ಯೋಧನನದು ಅಂತದಲ್ಲ ನೀನೇಕೆ ಚಿಂತಿಸುವೆ? ನಾನು ಈ ಒಂದೇ ಗದೆಯಿಂದ ಯುದ್ಧಮಾಡಲು ಶಕ್ತನಾಗಿರುವೆನು ನೀವೆಲ್ಲರೂ ಸುಮ್ಮನೆ ಅದನ್ನು ಸಾಕ್ಷಿಗಳಾಗಿ ನೋಡುತ್ತಿರಿ ಗೋವಿಂದಾ! ವಿವಿಧಶಸ್ತ್ರಗಳನ್ನು ಧರಿಸಿದ ಮೂರು ಲೋಕದ ವೀರರೂ ದೇವತೆಗಳೊಡನೆ ಕಲೆತು ಯುದ್ಧಕ್ಕೆ ನಿಂತರೂ ನಾನು ಅವರನ್ನಿದಿರಿಸಿ ಯುದ್ಧಮಾಡುವೆನು ಹಾಗಿರುವಾಗ ದುರ್ಯೋಧನನನ್ನಿದಿರಿಸುವ ವಿಷಯದಲ್ಲಿ ಕೇಳಬೇಕೆ?" ಎಂದನು ವೃಕೋದರನ ಆ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಸಂತೋಷದಿಂದ ಆತನನ್ನು ಪ್ರಶಂಸಿಸುತ್ತ, "ಮಹಾಬಾಹೂ! ಯುಧಿಷ್ಠಿರನು ನಿನ್ನ ಬಲದಿಂದಲೇ ಶತ್ರುವನ್ನು ಕೊಂದು ರಾಜ್ಯಸಂಪತ್ತನ್ನು ಪಡೆಯುವನೆಂಬುದರಲ್ಲಿ ಸಂಶಯವಿಲ್ಲ ಇದುವರಗೆ ನಿನ್ನಿಂದಲೇ ಯುದ್ಧದಲ್ಲ ಧೃತರಾಷ್ಟ್ರಪುತ್ರರಲ್ಲರೂ ಕೊಲ್ಲಲ್ಪಟ್ಟರು ಅನೇಕರಾಜರೂ, ರಾಜಕುಮಾರರೂ, ಆನೆಗಳೂ ನಿನ್ನಿಂದ ಹತವಾದುವು ಓ ಪಾಂಡುನಂದನಾ! ಆ ಮಹಾಯುದ್ಧದಲ್ಲಿ ನಿನ್ನನ್ನಿದಿರಿಸಿದ ಕಳಿಂಗರೂ, ಮಹಾರಥರೂ, ಪೂರ್ವದೇಶದ ವೀರರೂ, ಗಾಂಧಾರರೂ, ಕೌರವವೀರರೂ ಸತ್ತರು ಉಪೇಂದ್ರನು ದೈತ್ಯರನ್ನು ಜಯಿಸಿ ಇಂದ್ರನಿಗೆ ಸ್ವರ್ಗರಾಜ್ಯವನ್ನು ಕೊಟ್ಟಂತೆ, ನೀನೂ ದುರ್ಯೋಧನನನ್ನು ಕೊಂದು ಭೂಮಿಯನ್ನು ಧರ್ಮರಾಜನಿಗೆ ಒಪ್ಪಿಸಿಕೊಡು ಪಾಪಿಯಾದ ದುರ್ಯೋಧನನು ಈಗ ನಿನ್ನೊಡನೆ ಯುದ್ಧಕ್ಕೆ ನಿಂತರೆ ಸಾಯುವುದು ನಿಶ್ಚಯವೇ! ಆತನ ತೊಡೆಗಳೆರಡನ್ನೂ ಮುರಿದು, ನಿನ್ನ ಪ್ರತಿಜ್ಞೆಯನ್ನು ಪರಿಪಾಲಿಸು ಆದರೆ, ಆ ದುರ್ಯೋಧನನಾದರೋ ಬಲಾಢ್ಯನು! ಸಮರ್ಥನು! ಸುಶಿಕ್ಷಿತನು! ಎಚ್ಚರಿಕೆಯಿರಲಿ" ಎಂದನು.

ಓ ರಾಜಾ! ಆಮೇಲೆ ಸಾತ್ಯಕಿಯೂ ಭೀಮಸೇನನನ್ನು ಸ್ತುತಿಸಿದನು. ಧರ್ಮರಾಜನೇ ಮೊದಲಾಗಿ ಪಾಂಚಾಲರೂ, ಇತರರೂ ಭೀಮ

ಸೇನನ ಆ ವಾಕ್ಯಗಳನ್ನು ಕೇಳಿ ಕೊಂಡಾಡಿದರು ಆಗ ಭೀಮನು ಸೃಂಜ ಯರ ನಡುವೆ ಜ್ವಲಿಸುವ ಸೂರ್ಯನಂತಿರುವ ಯುಧಿಷ್ಠಿರನನ್ನು ಕುರಿತು "ಅಣ್ಣಾ ! ನಾನು ಈತನನ್ನಿದಿರಿಸಿ ಯುದ್ಧಮಾಡಲು ತಕ್ಕ ಶಕ್ತಿಯುಳ್ಳವನು ನನ್ನನ್ನು ಜಯಿಸಲು ದುರ್ಯೋಧನನು ಶಕ್ತನಲ್ಲ ಖಾಂಡವ ವನದಲ್ಲಿ ಅರ್ಜುನನು ಅಗ್ನಿಯನ್ನು ಪ್ರಯೋಗಿಸಿದಂತೆ, ನನ್ನೊಳಗೆ ಅಡಗಿದ್ದ ಕೋಪಾಗ್ನಿಯನ್ನು ಈಗ ಧೃತರಾಷ್ಟ್ರಪುತ್ರನಾದ ದುರ್ಯೋಧನನ ಮೇಲೆ ಪ್ರಯೋಗಿಸಿ, ನಿನ್ನ ಮನಸ್ಸಿನಲ್ಲಿ ನಾಟಿರುವ ಶಲ್ಯವನ್ನು ಕಿತ್ತುಹಾಕುವೆನು ಓ ರಾಜಾ ! ಪಾಪಿಯಾದೀ ದುರ್ಯೋಧನನು ನನ್ನ ಗದಾಹತಿಯಿಂದ ಕೊಲ್ಲಲ್ಪಟ್ಟಮೇಲೆ ನೀನು ಸುಖವಾಗಿರಬಹುದು ಶೀಘ್ರದಲ್ಲಿಯೇ ನಿನಗೆ ನಾನು ಕೀರ್ತಿಮಯವಾದ ಮಾಲೆಯನ್ನು ಧರಿಸುವೆನು ಈದಿನವೇ ದುರ್ಯೋಧನನು ತನ್ನ ಪ್ರಾಣವನ್ನೂ, ಐಶ್ವರ್ಯವನ್ನೂ, ರಾಜ್ಯವನ್ನೂ ಒಟ್ಟಿಗೆ ಕಳೆದುಕೊಳ್ಳುವನು ಧೃತರಾಷ್ಟ್ರನುಕೂಡ, ತನ್ನ ಪುತ್ರಮರಣವನ್ನು ಕೇಳಿ ತನ್ನ ಮಗನಿಗ ಶಕುನಿಯ ದುರ್ಬೋಧನೆಯಿಂದುಂಟಾದ ಹಾನಿಯೆಷ್ಟೆಂಬುದನ್ನು ಈಗ ತಿಳಿಯುವನು" ಎಂದನು ಭೀಮಸೇನನು ಹೀಗೆ ಹೇಳಿ ಗದೆಯನ್ನು ಕೈಗೆತ್ತಿಕೊಂಡು ಇಂದ್ರನು ವೃತ್ರಾಸುರನನ್ನು ಕರೆದಂತೆ ದುರ್ಯೋಧನನನನ್ನು ಕರಯುತ್ತ ಯುದ್ಧಕ್ಕೆ ಮುಂದುವರಿದನು ಮಹಾವೀರ್ಯವುಳ್ಳ ನಿನ್ನ ಮಗನೂ ಆಗ ಆತನು ಯುದ್ಧಕ್ಕೆ ಕರದುದನ್ನು ಸಹಿಸಲಾರದೆ, ಆನೆಯು ಮತ್ತೊಂದು ಆನೆಯನ್ನು ಇದಿರಿಸಿ ಬರುವಂತೆ ರಭಸದಿಂದಿದಿರಿಸಿ ಬಂದನು ದುರ್ಯೋಧನನು ಗದಾಪಾಣಿಯಾಗಿ ಯುದ್ಧಕ್ಕೆ ಬರುವಾಗ, ಶಿಖರದಿಂದಕೂಡಿದ ಕೈಲಾಸಪರ್ವತಕ್ಕೆ ಸಮಾನವಾಗಿ ಕಾಣಿಸಿದನು ಆಗ ಹಿಂಡಿನಿಂದ ತಪ್ಪಿ ಬಂದ ಆನೆಯ ಸಲಗನಂತೆ ಒಂಟಿಯಾಗಿ ಬರುತ್ತಿದ್ದ ನಿನ್ನ ಮಗನನ್ನು ನೋಡಿ ಪಾಂಡವರಲ್ಲ ಸಂತೋಷಗೊಂಡರು ಆ ಸ್ಥಿತಿಯಲ್ಲಿಯೂ ನಿನ್ನ ಮಗನಿಗೆ ಮನಸ್ಸಿನಲ್ಲಿ ಭೀತಿಯಾಗಲಿ, ಕಳವಳವಾಗಲಿ, ಬೇಸರವಾಗಲಿ, ವ್ಯಥೆಯಾಗಲಿ ಇರಲಿಲ್ಲ. ಸಿಂಹದಂತೆ ಗಂಭೀರವಾಗಿ ನಿಶ್ಚಲನಾಗಿದ್ದನು ಆಗ ಭೀಮನು ಶಿಖರದಿಂದ ಕೂಡಿದ ಬೆಟ್ಟದಂತೆ ಗದೆಯನ್ನೆತ್ತಿಕೊಂಡು ಬರುವ ನಿನ್ನ ಮಗನನ್ನು ನೋಡಿ "ಓ ದುರ್ಯೋಧನಾ ! ಧೃತರಾಷ್ಟ್ರ

ನೂ, ನೀನೂ ನಮ್ಮ ವಿಷಯದಲ್ಲಿ ಹಿಂದೆ ವಾರಣಾವತದಲ್ಲಿ ಮಾಡಿದ ಪಾಪ ಕೃತ್ಯಗಳನ್ನು ಈಗ ನೆನೆಸಿಕೋ! ಶಕುನಿಯ ಬೋಧನೆಯಂತೆ ಸಭೆಯ ಮಧ್ಯಕ್ಕೆ ಗೃಹಲಕ್ಷ್ಮಿಯಾದ ದ್ರೌಪದಿಯನ್ನು ಎಳೆದುಕೊಂಡುಬಂದಿರಲ್ಲವೆ? ದ್ಯೂತದಲ್ಲಿ ನಮ್ಮ ಯುಧಿಷ್ಠಿರನನ್ನು ವಂಚಿಸಿದಿರಲ್ಲವೆ? ಓ ದುಷ್ಟಾ! ನಿರಪರಾಧಿಗಳಾದ ಪಾಂಡವರ ವಿಷಯದಲ್ಲಿ ಇನ್ನೂ ನೀನು ಯಾವಯಾವ ಪಾಪಕೃತ್ಯಗಳನ್ನು ಮಾಡಿಸಿದೆಯೋ, ಅವುಗಳ ಫಲವೆಲ್ಲವನ್ನೂ ಈಗ ನೀನು ಅನುಭವಿಸುವೆ ನೋಡು. ಮಹಾಕೀರ್ತಿವಂತನೂ, ಭರತಕುಲೋತ್ತಮನೂ, ನಮ್ಮೆಲ್ಲರಿಗೂ ಪಿತಾಮಹನೂ, ಗಂಗಾಪುತ್ರನೂ ಆದ ಭೀಷ್ಮನು ನಿನಗಾಗಿ ಯುದ್ಧದಲ್ಲಿ ಗಾಯಪಟ್ಟು ಶರತಲ್ಪದಲ್ಲಿ ಮಲಗಿರುವನು. ದ್ರೋಣನೂ, ಕರ್ಣನೂ ಮೃತರಾದರು. ಪ್ರತಾಪಶಾಲಿಯಾದ ಶಲ್ಯನೂ ಕೊಲ್ಲಲ್ಪಟ್ಟನು. ವೈರವೆಂಬ ಬೆಂಕಿಯನ್ನು ಪ್ರಾರಂಭದಲ್ಲಿ ಹುಟ್ಟಿಸಿದ ಶಕುನಿಯೂ ಯುದ್ಧದಲ್ಲಿ ಹತನಾದನು. ಕುಲವೆಲ್ಲವನ್ನೂ ಕೆಡಿಸುವುದಕ್ಕೆ ಹುಟ್ಟಿದ ನೀನೊಬ್ಬನುಮಾತ್ರ ಇನ್ನೂ ಉಳಿದಿರುವೆ. ನಿನ್ನನ್ನೂ ಈಗ ನಾನು ಗದೆಯಿಂದ ಕೊಲ್ಲುವೆನು! ಇದರಲ್ಲಿ ಸಂದೇಹವಿಲ್ಲ! ಈಗಲೇ ನಾನು ಯುದ್ಧದಲ್ಲಿ ನಿನ್ನ ಮದವನ್ನೂ, ರಾಜ್ಯದಾಸೆಯನ್ನೂ, ಪಾಂಡವರ ವಿಷಯದಲ್ಲಿ ನೀನು ಇನ್ನೂ ಮಾಡಬೇಕೆಂದಿರುವ ಪಾಪಕೃತ್ಯಗಳನ್ನೂ ತಪ್ಪಿಸುವೆನು ನೋಡು!'' ಎಂದನು. ಆಗ ದುರ್ಯೋಧನನು ''ವೃಕೋದರಾ! ಇಂತಹ ಆತ್ಮಸ್ತುತಿಗಳಿಂದ ಪ್ರಯೋಜನವೇನು? ನನ್ನೊಡನೆ ಯುದ್ಧಮಾಡು. ನಿನಗೆ ಯುದ್ಧದಲ್ಲಿರುವ ಈ ಆತುರವನ್ನು ನಾನು ಈಗಲೇ ಹೋಗಲಾಡಿಸುವೆನು. ಪಾಪೀ! ಪರ್ವತದ ಶಿಖರಕ್ಕೆ ಸಮಾನವಾದ ಬೃಹದ್ಗದೆಯನ್ನು ಹಿಡಿದು, ಯುದ್ಧಸನ್ನದ್ಧನಾಗಿ ನಿಂತಿರುವ ನನ್ನನ್ನು ನೀನು ನೋಡಲಿಲ್ಲವೆ? ಅನ್ಯಾಯದಿಂದಿಲ್ಲದೆ ನೀತಿಮಾರ್ಗದಿಂದ ಯುದ್ಧಮಾಡುವುದಾದರೆ ದೇವಶ್ರೇಷ್ಠನಾದ ಇಂದ್ರನೇ ಆದರೂ ಗದಾಪಾಣಿಯಾದ ನನ್ನನ್ನು ಕೊಲ್ಲಲು ಶಕ್ತನಾಗಲಾರನು. ಓ ಕುಂತೀಪುತ್ರಾ! ಶರತ್ಕಾಲದ ಶುಷ್ಕಗರ್ಜನೆಯಂತೆ ಸುಮ್ಮನೆ ಅರಚಬೇಡ. ನಾನು ನಿನ್ನ ಪ್ರಾಣವನ್ನು ಕಳೆಯುವುದಕ್ಕೆ ಮೊದಲೇ ಯುದ್ಧದಲ್ಲಿ ನಿನ್ನ ಬಲವನ್ನು ತೋರಿಸು'' ಎಂದನು. ಜಯಾಭಿಲಾಷಿಗಳಾಗಿದ್ದರೂ ಸೃಂಜ

ಯರೂ, ಪಾಂಡವರೂ ಆ ವಾರ್ತೆಯನ್ನು ಕೇಳಿ ಅವನನ್ನು ಸ್ತುತಿಸಲಾರಂಭಿಸಿದರು ಮದಿಸಿದ ಆನೆಗಳನ್ನು ಕೈಚಪ್ಪಾಳೆದಿಂದ ರೇಗಿಸುವಂತೆ, ಶತ್ರುಗಳು ತಿರುಗಿ ದುರ್ಯೋಧನನನ್ನು ಉತ್ಸಾಹಗೊಳಿಸಿದರು ಆಗ ಜಯಾಭಿಲಾಷಿಗಳಾದ ಪಾಂಡವರ ಕಡೆಯಲ್ಲಿ ಆನೆಗಳು ಗರ್ಜಿಸಿದುವು! ಕುದುರೆಗಳು ಕೆನೆದುವು! ಶಸ್ತ್ರಗಳು ಚೆನ್ನಾಗಿ ಜ್ವಲಿಸಲಾರಂಭಿಸಿದುವು

ಇದು ಮೂವತ್ತುಮೂರನೆಯ ಅಧ್ಯಾಯವು

---

{ ಗದಾಯುದ್ಧಸಮಯಕ್ಕೆ ಸರಿಯಾಗಿ ಬಲರಾಮನು ತೀರ್ಥಯಾತ್ರೆಯಿಂದ ಅಲ್ಲಿಗೆ ಬಂದು ಸೇರಿದುದು }

ಮಹಾರಾಜಾ! ಭಯಂಕರವಾದ ಆ ಗದಾಯುದ್ಧವು ಆರಂಭವಾಗುವುದರಲ್ಲಿದ್ದಿತು. ಪಾಂಡವರೆಲ್ಲ ನೋಡುತ್ತ ಕುಳಿತರು ಇಷ್ಟರಲ್ಲಿ ತಾಳಿಯ ಧ್ವಜವುಳ್ಳವನೂ, ನೇಗಿಲನ್ನು ಆಯುಧವಾಗಿ ಉಳ್ಳವನೂ ಆದ ಬಲರಾಮನು, ತನ್ನ ಶಿಷ್ಯರಾದ ದುರ್ಯೋಧನ ಭೀಮರಿಬ್ಬರಿಗೂ ಗದಾಯುದ್ಧವು ಸಂಭವಿಸಿದುದನ್ನು ಕೇಳಿ, ಅಕಸ್ಮಾತ್ತಾಗಿ ಅಲ್ಲಿಗೆ ಬಂದನು ಆತನನ್ನು ನೋಡಿದೊಡನೆ ಕೃಷ್ಣನೂ, ಪಾಂಡವರೂ ಅಧಿಕಸಂತೋಷದಿಂದ ಸಮೀಪಕ್ಕೆ ಬಂದು ನಮಸ್ಕರಿಸಿ ವಿಧ್ಯುಕ್ತರೀತಿಯಲ್ಲಿ ಆತನನ್ನು ಪೂಜಿಸಿ "ಓ ಬಲಭದ್ರಾ! ನಿನ್ನ ಶಿಷ್ಯರ ಯುದ್ಧಸಾಮರ್ಥ್ಯಗಳನ್ನು ನೋಡು" ಎಂದರು ಆಗ ಬಲರಾಮನು ಪಾಂಡವಸಮೇತನಾದ ವಾಸುದೇವನನ್ನೂ, ಗದಾಪಾಣಿಯಾದ ದುರ್ಯೋಧನನನ್ನೂ ನೋಡಿ "ತೀರ್ಥಯಾತ್ರೆಗಾಗಿ ಹೊರಟ ನನಗೆ ಇಂದಿಗೆ ನಾಲ್ವತ್ತೆರದು ದಿನಗಳಾದುವು ಓ ಮಾಧವಾ! ಇವರಿಬ್ಬರೂ ನನ್ನ ಶಿಷ್ಯರು ಇವರ ಗದಾಯುದ್ಧವನ್ನು ನೋಡಲು ನನಗೂ ಆಸೆಯುಂಟು" ಎಂದನು ಆಮೇಲೆ ಯುಧಿಷ್ಠಿರನು ಬಲರಾಮನನ್ನಪ್ಪಿಕೊಂಡು ಉಚಿತರೀತಿಯಲ್ಲಿ ಕುಶಲಪ್ರಶ್ನೆಗಳನ್ನು ಮಾಡಿದನು ಮಹಾಧನುರ್ಧಾರಿಗಳೂ, ಪರಸ್ಪರ ವಿಶ್ವಾಸವುಳ್ಳವರೂ, ಕೀರ್ತಿವಂತರೂ ಆದ ಕೃಷ್ಣಾರ್ಜುನರಿಬ್ಬರೂ ಅಧಿಕಪ್ರೀತಿಯಿಂದ ಹಲಾಯುಧನಿಗೆ ಅಭಿವಾದನಮಾಡಿ ಆತನನ್ನು ಅಪ್ಪಿಕೊಂಡರು ಹಾಗೆಯೆ

ಮಾದ್ರೀಪುತ್ರರೂ, ದ್ರೌಪದಿಯ ಐದುಮಂದಿ ಮಕ್ಕಳೂ, ಗದಾಪಾಣಿಗಳಾದ ಭೀಮಸೇನದುರ್ಯೋಧನರೂ ಬಲರಾಮನಿಗೆ ಅಭಿವಾದನಮಾಡಿ ಆತನನ್ನು ಪೂಜಿಸಿದರು ಅಲ್ಲಿದ್ದ ರಾಜರೆಲ್ಲರೂ ಬಲರಾಮನಿಗೆ ಸ್ವಾಗತವನ್ನು ಹೇಳಿ ಗೌರವಿಸುತ್ತ ಆತನನ್ನು ಕುರಿತು "ಮಹಾಬಾಹೂ! ಯುದ್ಧವನ್ನು ನೋಡಬೇಕು" ಎಂದರು ಆಗ ಬಲರಾಮನೂ, ಪಾಂಡವರನ್ನು ಪ್ರೇಮದಿಂದಪ್ಪಿಕೊಂಡು, ಮಹಾಪರಾಕ್ರಮಿಗಳಾದ ಆ ಅರಸರೆಲ್ಲರನ್ನೂ ಕುಶಲಪ್ರಶ್ನೆಮಾಡಿದನು ಅವರೂ ಬಲರಾಮನ ಕ್ಷೇಮವನ್ನು ವಿಚಾರಿಸಿದರು ಬಲರಾಮನು ಆ ಕ್ಷತ್ರಿಯಶ್ರೇಷ್ಠರೆಲ್ಲರನ್ನೂ ಗೌರವಿಸಿ ಕುಶಲಪ್ರಶ್ನೆಗಳನ್ನು ಮಾಡಿ, ಅವರವರ ಅಂತಸ್ಥಿಗೆ ತಕ್ಕಂತೆ ಆದರಿಸಿದಮೇಲೆ, ಜನಾರ್ದನನನ್ನೂ, ಸಾತ್ಯಕಿಯನ್ನೂ ಪ್ರೀತಿಯಿಂದಪ್ಪಿಕೊಂಡು, ಅವರ ತಲೆಯನ್ನಾಘ್ರಾಣಿಸಿ ಕುಶಲಪ್ರಶ್ನೆಮಾಡಿದನು ರಾಜಾ! ಇಂದ್ರನೂ, ಉಪೇಂದ್ರನೂ ಸೇರಿ ಲೋಕೇಶನಾದ ಬ್ರಹ್ಮದೇವನನ್ನು ಪೂಜಿಸುವಂತೆ ಅವರಿಬ್ಬರೂ ಸಂತೋಷದೊಡನೆ ಗುರುವಾದ ಆ ಬಲರಾಮನನ್ನು ವಿಧ್ಯುಕ್ತರೀತಿಯಲ್ಲಿ ಪೂಜಿಸಿದರು ಆಮೇಲೆ ಧರ್ಮರಾಜನು ಬಲರಾಮನನ್ನು ಕುರಿತು "ಬಲರಾಮಾ! ಈ ಅಣ್ಣತಮ್ಮಂದಿರ ಯುದ್ಧಚಾತುರ್ಯವನ್ನು ನೋಡು" ಎಂದನು ಬಲರಾಮನೂ ಅವರ ಮಧ್ಯದಲ್ಲಿ ಕುಳಿತುಕೊಂಡನು ನೀಲಾಂಬರಧಾರಿಯಾಗಿ, ಕಾಂತಿಯುಕ್ತನಾಗಿ ಕುಳಿತಿದ್ದ ಬಲರಾಮನು, ಆಕಾಶದಲ್ಲಿ ನಕ್ಷತ್ರಗಳ ಸಮೂಹಗಳಿಂದ ಪರಿವೃತನಾದ ಚಂದ್ರನಂತೆ ಪ್ರಕಾಶಿಸಿದನು ಆಗ ತಮ್ಮೊಳಗಿನ ವೈರವನ್ನು ಕೊನೆಮುಟ್ಟಿಸುವ ಸಂಕಲ್ಪದಿಂದ, ಭೀಮದುರ್ಯೋಧನರಿಬ್ಬರೂ ನೋಡುವವರಿಗೆ ರೋಮಾಂಚವನ್ನೆಬ್ಬಿಸುವವಂತೆ ಯುದ್ಧಮಾಡತೊಡಗಿದರು" ಎಂದು ಸಂಜಯನು ಹೇಳಿದನು" ಎಂದನು.

ಇದು ಮೂವತ್ತುನಾಲ್ಕನೆಯ ಅಧ್ಯಾಯವು



ಜನಮೇಜಯನು ವೈಶಂಪಾಯನನಿಗೆ ಬಲರಾಮನ ತೀರ್ಥ ಯಾತ್ರೆಯ ವಿವರಗಳನ್ನು ತಿಳಿಸಲಾರಂಭಿಸಿ, ಪ್ರಭಾಸತೀರ್ಥಕ್ಕೆ ಆ ಹೆಸರು ಬರಲು ಕಾರಣವನ್ನು ಹೇಳಿದುದು

ಈ ನಡುವೆ ಜನಮೇಜಯನು ವೈಶಂಪಾಯನನನ್ನು ಕುರಿತು "ಮುನೀಂದ್ರಾ ! ಹಿಂದೆ ಯುದ್ಧವು ಪ್ರಾರಂಭಿಸಿದ ತರುಣದಲ್ಲಿ ಬಲರಾಮನು ತಾನು ಧೃತರಾಷ್ಟ್ರಪುತ್ರನಾದ ದುರ್ಯೋಧನನಿಗಾಗಲಿ, ಪಾಂಡವರಿಗಾಗಲಿ ಸಹಾಯಮಾಡುವುದಿಲ್ಲವೆಂದೂ, ತನ್ನ ಇಷ್ಟಾನುಸಾರವಾಗಿ ಹೋಗುವೆನೆಂದೂ ಕೃಷ್ಣನೊಡನೆ ಹೇಳಿ ವೃಷ್ಣಿಗಳೊಡನೆ ಹೊರಟುಹೋದನಲ್ಲವೆ ? ಆತನು ಹೋದ ವೃತ್ತಾಂತವನ್ನೆಲ್ಲ ವಿವರವಾಗಿ ನನಗೆ ತಿಳಿಸು ಬಲರಾಮನು ಹಿಂತಿರುಗಿ ಬಂದುದು, ಅವನು ಯುದ್ಧವನ್ನು ನೋಡಿದುದು ಅವೆಲ್ಲವನ್ನೂ ತಿಳಿಸು " ಎನಲು ವೈಶಂಪಾಯನನು ಹೇಳುವನು

"ಓ ಮಹಾಬಾಹೂ ! ಮಹಾತ್ಮರಾದ ಪಾಂಡವರು ಉಪಪ್ಲಾವ್ಯದಲ್ಲಿದ್ದಾಗ ಲೋಕಕ್ಷೇಮಕ್ಕಾಗಿಯೂ, ಕೌರವಕುಲದಲ್ಲಿರುವ ವೈರವನ್ನಡಗಿಸುವುದಕ್ಕಾಗಿಯೂ ಶ್ರೀವಾಸುದೇವನನ್ನು ದುರ್ಯೋಧನನ ಬಳಿಗೆ ಕಳುಹಿಸಿದರು ಆತನು ಹಸ್ತಿನಾಪುರವನ್ನು ಸೇರಿ, ಧೃತರಾಷ್ಟ್ರನ ಸಮೀಪಕ್ಕೆ ಬಂದು ಧರ್ಮಯುಕ್ತಗಳಾದ ಹಿತವಚನಗಳನ್ನಾಡಿದನು ಆದರೆ ಧೃತರಾಷ್ಟ್ರನು ಕೃಷ್ಣನು ಹೇಳದಂತ ನಡೆಯಲಿಲ್ಲ ಅದರಿಂದ ಕೃಷ್ಣನು ಸಂಧಿಯನ್ನು ನಡೆಸಲಾರದೆ ಉಪಪ್ಲಾವ್ಯಕ್ಕೆ ಹಿಂತಿರುಗಿ ಬಂದುಬಿಟ್ಟನು ದುರ್ಯೋಧನನಿಂದ ನಿರಾಕರಿಸಲ್ಪಟ್ಟು ಕೃಷ್ಣನು ಧರ್ಮರಾಜನಬಳಿಗೆ ಬಂದಮೇಲೆ, ಅಲ್ಲಿ ನಡೆದ ವೃತ್ತಾಂತವನ್ನೆಲ್ಲ ಯಥಾವತ್ತಾಗಿ ತಿಳಿಸುತ್ತ "ಪಾಂಡುಕುಮಾರಾ ! ದುಷ್ಕಾಲವಶದಿಂದ ಕೌರವರು ನನ್ನ ಮಾತಿನಂತೆ ನಡೆಯಲಿಲ್ಲ ಇನ್ನು ನೀವು ಪುಷ್ಯನಕ್ಷತ್ರದಲ್ಲಿ ಯುದ್ಧಕ್ಕೆ ಹೊರಡಿರಿ " ಎಂದನು ಆಮೇಲೆ ಸೈನ್ಯಗಳು ಸಿದ್ಧಪಡಿಸಲ್ಪಡುತ್ತಿರುವಾಗ, ಉದಾರಬುದ್ಧಿಯುಳ್ಳ ಬಲರಾಮನು ಕೌರವರಲ್ಲಿರುವ ಅಭಿಮಾನದಿಂದ ತಮ್ಮನಾದ ಕೃಷ್ಣನನ್ನು ನೋಡಿ "ಓ ಮಹಾಬಾಹೂ ! ಮಧುಸೂಧನಾ ! ನೀನು ಕೌರವರಿಗೂ ಸಹಾಯಮಾಡಬೇಕು " ಎಂದನು

ಕೃಷ್ಣನು ಆತನ ಮಾತಿನಂತೆ ನಡೆಯದಿರಲು, ಬಲರಾಮನು ಕ್ರೋಧಾಂಧನಾಗಿ, ಅನೂರಾಧಾನಕ್ಷತ್ರದ ದಿನದಲ್ಲಿ ತನ್ನ ಕಡೆಯ ಕೆಲವು ಯಾದವರೊಡನೆ ಸರಸ್ವತೀನದಿಯಲ್ಲಿ ತೀರ್ಥಯಾತ್ರೆಮಾಡುವುದಾಗಿ ಉದ್ದೇಶಿಸಿ ಹೊರಟುಬಿಟ್ಟನು ಕೃತವರ್ಮನು ಮಾತ್ರ ದುರ್ಯೋಧನನ ಬಳಿಗೆ ಹೋದನು ವಾಸುದೇವನಾದರೋ ಸಾತ್ಯಕಿಯೊಡನೆ ಪಾಂಡವರಪಕ್ಷದಲ್ಲಿದ್ದನು ಅತ್ತಲಾಗಿ ಬಲರಾಮನು ತೀರ್ಥಯಾತ್ರೆಗೆ ಹೋದಕೂಡಲೆ ಕೃಷ್ಣನು ಪುಷ್ಯನಕ್ಷತ್ರ ದಿನದಲ್ಲಿ ಪಾಂಡವರನ್ನು ಮುಂದೆ ಬಿಟ್ಟುಕೊಂಡು ಕುರುಕ್ಷೇತ್ರಕ್ಕೆ ಹೊರಟನು ಪ್ರಯಾಣಮಾಡುತ್ತ ಬಲರಾಮನು ತನ್ನ ಸೇವಕರನ್ನು ಕುರಿತು "ತೀರ್ಥಯಾತ್ರೆಗಾಗಿ ಬೇಕಾಗುವ ಚಿನ್ನಬೆಳ್ಳಿಗಳನ್ನೂ, ಅಗ್ನಿಹೋತ್ರಗಳನ್ನೂ, ಎಲ್ಲಾ ಉಪಕರಣಗಳನ್ನೂ, ಯಾಗಮಾಡುವವರನ್ನೂ ದ್ವಾರಕೆಯಿಂದ ಕರದುತನ್ನಿರಿ! ಕರೆಯುವ ಹಸುಗಳು, ವಸ್ತ್ರಗಳು, ಆನೆ ಕುದುರೆಗಳು, ರಥಗಳು, ಇವುಗಳೆಲ್ಲವನ್ನೂ ಸಿದ್ಧವಾಗಿ ಒದಗಿಸಿರಿ ಹಾಗೆಯೇ ಕತ್ತೆಗಳು, ಒಂಟೆಗಳು, (ಪಲ್ಲಕ್ಕಿ ಮೊದಲಾದ) ವಾಹನಗಳು, ಇವನ್ನೆಲ್ಲ ಸಿದ್ಧಮಾಡಿ, ಎಲ್ಲಾ ರಾಜಪರಿವಾರಗಳನ್ನೂ ತ್ವರೆಯಿಂದ ಕರದುಕೊಂಡು ಬನ್ನಿರಿ ಸರಸ್ವತೀನದಿಯ ಒಂದೊಂದು ಪುಣ್ಯಕ್ಷೇತ್ರಗಳಿಗೂ ಹೊರಡುವೆನು ನೂರಾರು ಮಂದಿ ಋತ್ವಿಕ್ಕುಗಳನ್ನೂ, ಬ್ರಾಹ್ಮಣೋತ್ತಮರನ್ನೂ ಕರೆತನ್ನಿರಿ" ಎಂದು ಹೇಳಿ, ಬಲರಾಮನು, ಸಮುದ್ರದಿಂದ ಸರಸ್ವತೀತೀರದ ಮಾರ್ಗವಾಗಿಯೇ ತೀರ್ಥಯಾತ್ರೆಗೆ ಹೊರಟನು ಆತನು ಹೋದ ಸ್ಥಳಗಳಿಗೆಲ್ಲ ಋತ್ವಿಕ್ಕುಗಳು, ಸುಹೃತ್ತುಗಳು, ಇತರ ಬ್ರಾಹ್ಮಣೋತ್ತಮರು, ರಥಗಜ ತುರಗ ಪದಾತಿಗಳು, ಗೋವುಗಳು, ಒಂಟೆ, ಕತ್ತೆ ಮುಂತಾದ ವಿವಿಧ ವಾಹನಗಳು, ಇವನ್ನೆಲ್ಲ ಸಂಗಡ ಸಾಗಿಸಿಕೊಂಡು, ಹೊರಟನು ಆಯಾ ಸ್ಥಳಗಳಲ್ಲಿ ಬಡವರಿಗೂ, ಮಕ್ಕಳಿಗೂ, ಮುದುಕರಿಗೂ ಕೊಡಬಹುದಾದ ಆಯಾ ದಾನವಸ್ತುಗಳನ್ನೆಲ್ಲ ಸಂಗ್ರಹಿಸಿಕೊಂಡನು ಅಲ್ಲಲ್ಲಿ ಭೋಜನವನ್ನಪೇಕ್ಷಿಸುವವರಿಗೆ ಆಗಾಗ ಅನ್ನವೂ ಸಿದ್ಧವಾಗುತಿತ್ತು ಯಾವಯಾವ ಕಾಲದಲ್ಲಿ, ಯಾವಯಾವ ಬ್ರಾಹ್ಮಣರು, ಯಾವಯಾವ ಸ್ಥಳದಲ್ಲಿ ಪೂಜಾರ್ಹವಾದ ವಸ್ತುವನ್ನು ಪೂಜೆಗಾಗಿ ಅಪೇಕ್ಷಿಸುವರೋ, ಆಗಾಗ ಆಯಾ ಬ್ರಾಹ್ಮಣರಿಗೆ ಆಯಾ ಸ್ಥಳಗಳಲ್ಲಿಯೇ ಅಪೇ

ಕ್ಷಿತವಸ್ತುಗಳನ್ನು ಆತನ ಕಡೆಯುವರು ಒದಗಿಸುತ್ತಿದ್ದರು. ಬಲರಾಮನ ಆಜ್ಞೆಯಂತೆ ಆತನ ಕಡೆಯವರು ಹೋದಕಡೆಗಳಲ್ಲೆಲ್ಲ ಅನ್ನದ ರಾಶಿಯನ್ನೂ, ವಿವಿಧ ಪಾನೀಯಗಳನ್ನೂ ಸಮೃದ್ಧವಾಗಿ ಸಿದ್ಧಪಡಿಸುತ್ತಿದ್ದರು ಅಲ್ಲಲ್ಲಿ ಅರ್ಥಿಗಳಾದ ಬ್ರಾಹ್ಮಣರ ಪೂಜೆಗಾಗಿ ಅಧಿಕಬೆಲೆಯ ವಸ್ತ್ರಗಳನ್ನೂ, ಮಂಚಗಳನ್ನೂ, ಹೊದಿಕೆಗಳನ್ನೂ ಒದಗಿಸುತ್ತಿದ್ದರು ಯಾವ ಸ್ಥಳದಲ್ಲಿ ಯಾವ ಬ್ರಾಹ್ಮಣನು, ತನಗೆ ಭೋಗ್ಯವಸ್ತುಗಳನ್ನು ಬಯಸಿದರೂ ಆಯಾ ಸ್ಥಳಗಳಲ್ಲಿ ಆ ಬ್ರಾಹ್ಮಣನಿಗೆ ಎಲ್ಲವೂ ಸಿದ್ಧಪಡಿಸಲ್ಪಡುವುವು ಹೀಗೆ ಬಲರಾಮನು ಯಾತ್ರೆಹೊರಟಾಗ ಜನರೆಲ್ಲ ಅವರ ಸೌಕರ್ಯಾನುಸಾರವಾಗಿ ಹೊರಟು, ಅವನು ನಿಂತರೆ, ತಾವೂ ಅಲ್ಲಲ್ಲಿ ತಂಗುವರು ಸಂಚರಿಸಲಪೇಕ್ಷಿಸುವವರಿಗೆ ವಾಹನಗಳನ್ನೂ, ದಾಹಗೊಂಡವರಿಗೆ ಪಾನೀಯಗಳನ್ನೂ, ಹಸಿದವರಿಗೆ ರುಚಿಯಾದ ಅನ್ನಗಳನ್ನೂ, ವಸ್ತ್ರಾಭರಣಗಳನ್ನೂ ಅಲ್ಲಲ್ಲಿ ಒದಗಿಸುತ್ತಿದ್ದರು ರಾಜಾ! ಆ ಪ್ರಯಾಣವು ಎಲ್ಲರಿಗೂ ಸುಖಕರವಾಗಿ, ಸ್ವರ್ಗಸಮಾನವಾಗಿ ತೋರಿತು ಎಲ್ಲೆಲ್ಲಿ ನೋಡಿದರೂ ರುಚಿಕರವಾದ ಭಕ್ಷ್ಯಗಳು! ಎಲ್ಲಿ ಹೋದರೂ ಅಲ್ಲಿ ಜನಸಮೃದ್ಧಿ! ಎಲ್ಲೆಲ್ಲಿ ಅಂಗಡಿಬೀದಿಗಳು! ಅಲ್ಲಲ್ಲಿ ಮಾರಾಟಕ್ಕೆ ಇಕ್ಕಿದ ವಸ್ತುಗಳು! ನಾನಾ ಬಗೆಯ ಜನಸಮೂಹಗಳು! ಹಲವು ಬಗೆಯ ತುರಂಗಗಳು! ವಿಚಿತ್ರ ಧ್ವಜಗಳು! ರತ್ನಗಳಿಂದ ಅಲಂಕೃತವಾದ ಛತ್ರಪೀಠಗಳು! ಅಲ್ಲಲ್ಲಿ ಒದಗುತ್ತಿದ್ದುವು ಅಲ್ಲಲ್ಲಿನ ಪುಣ್ಯತೀರ್ಥಗಳಲ್ಲಿ ಸನ್ಯಾಸಿಗಳಿಗೆ ಬೇಕಾದ ವಸ್ತ್ರವು ಪದಾರ್ಥಗಳನ್ನೂ, ಬ್ರಾಹ್ಮಣರಿಗೆ ಯಾಗದಕ್ಷಿಣೆಗಳನ್ನೂ ಕೊಡುತ್ತಿದ್ದನು ಅಲ್ಲಲ್ಲಿ ಬ್ರಾಹ್ಮಣರಿಗೆ ವಸ್ತ್ರಭೂಷಣಾಲಂಕೃತಗಳಾದ ಸವತ್ಸಗಳಾಗಿ ಕರೆಯುವ ಹಸುಗಳನ್ನೂ, ನಾನಾದೇಶಗಳಲ್ಲಿ ಹುಟ್ಟಿದ ಕುದುರೆಗಳನ್ನೂ ವಾಹನಗಳನ್ನೂ, ಒಳ್ಳೇ ಸೇವಕರನ್ನೂ ದಾನವಾಗಿ ಕೊಡುತ್ತಿದ್ದನು ಮತ್ತು ಅಲ್ಲಲ್ಲಿ ರತ್ನಗಳು, ಮುತ್ತುಗಳು, ಮಣಿಗಳು, ಹವಳಗಳು, ಚಿನ್ನ ಬೆಳ್ಳಿಗಳು, ಕಂಚಿನ ಪಾತ್ರೆಗಳು, ತಾಮ್ರದ ಪಾತ್ರೆಗಳು, ಇವುಗಳನ್ನೆಲ್ಲಾ ಕೊಟ್ಟನು ಹೀಗೆ ಬಲರಾಮನು ಅಲ್ಲಿ ಬಂದವರಿಗೆಲ್ಲಾ ಅಪಾರ ದ್ರವ್ಯವನ್ನು ಕೊಡುತ್ತ, ಯಾತ್ರೆಯನ್ನು ಮುಗಿಸಿಕೊಂಡು ಕುರುಕ್ಷೇತ್ರಕ್ಕೆ ಬಂದು ಸೇರಿದನು ” ಎಂದನು

ಆಗ ಜನಮೇಜಯನು "ಮುನೀಂದ್ರಾ! ಸರಸ್ವತೀನದಿಯ ತೀರ್ಥಘಟ್ಟಗಳ ಮಹಿಮೆಯನ್ನೂ, ಅವುಗಳ ಉತ್ಪತ್ತಿಕ್ರಮವನ್ನೂ, ಅದರಲ್ಲಿ ಸ್ನಾನಮಾಡುವುದರಿಂದಾಗುವ ಫಲಸಿದ್ಧಿಗಳನ್ನೂ ನನಗೆ ವಿವರಿಸಬೇಕು ಅವುಗಳನ್ನು ಕೇಳುವುದರಲ್ಲಿ ಕುತೂಹಲಗೊಂಡಿರುವೆನು" ಎನಲು, ವೈಶಂಪಾಯನನು "ಓ ರಾಜೇಂದ್ರಾ! ಪರಿಶುದ್ಧವಾದ ಆ ತೀರ್ಥಗಳ ಗುಣಗಳನ್ನೂ, ಉತ್ಪತ್ತಿಗಳನ್ನೂ ಪೂರ್ಣವಾಗಿ ವಿವರಿಸುವೆನು ಕೇಳು. ಯಾದವವೀರನಾದ ಬಲರಾಮನು ಮೊದಲು ಪ್ರಭಾಸತೀರ್ಥಕ್ಕೆ ಬಂದನು ಹಿಂದೆ ಕ್ಷಯರೋಗಪೀಡಿತನಾಗಿದ್ದ ಚಂದ್ರನಿಗೆ ಅಲ್ಲಿಯೇ ಶಾಪವಿಮೋಚನವಾಗಿ, ತಿರುಗಿ ಅವನು ತನ್ನ ಪೂರ್ಣಕಲೆಯನ್ನು ಹೊಂದುವಂತಾಯಿತು ಅದರಿಂದಾಚೆಗೆ ಅವನು ಮೊದಲಿನಂತೆ ಪ್ರಪಂಚಕ್ಕೆಲ್ಲಾ ಬೆಳಕನ್ನು ಕೊಡುತ್ತಿರುವನು ಅಂತಹ ಪುಣ್ಯಕರವಾದ ಪ್ರಭಾಸತೀರ್ಥಕ್ಕೆ ಬಲರಾಮನು ಋತ್ವಿಕ್ಕುಗಳೊಡನೆಯೂ, ಬಂಧುಗಳೊಡನೆಯೂ, ಬ್ರಾಹ್ಮಣಸಮೂಹಗಳೊಡನೆಯೂ ಬಂದು ಸೇರಿದನು ಈ ಭೂಮಿಯಲ್ಲಿರುವ ತೀರ್ಥಗಳೊಳಗೆಲ್ಲ ಅದು ಮಹಾಶ್ರೇಷ್ಠವಾದುದು ಇದು ಚಂದ್ರನನ್ನು ಪ್ರಕಾಶಗೊಳಿಸಿದುದರಿಂದಲೇ ಇದಕ್ಕೆ "ಪ್ರಭಾಸತೀರ್ಥ"ವೆಂದು ಹೆಸರಾಯಿತು" ಎಂದನು

ಇದು ಮೂವತ್ತೈದನೆಯ ಅಧ್ಯಾಯವು



{ ಚಂದ್ರನು ಅಶ್ವಿನಿ ಮೊದಲಾದ ಇಪ್ಪತ್ತೇಳು ಪತ್ನಿಯರಲ್ಲಿ, ರೋಹಿಣಿಯಲ್ಲಿಮಾತ್ರವೇ ಅಧಿಕ ಪ್ರೀತಿಯನ್ನು ತೋರಿಸಿದುದರಿಂದ ಅವನಿಗೆ ಕ್ಷಯರೋಗವುಂಟಾಗುವಂತೆ ದಕ್ಷನ ಶಾಪವು ದೇವತೆಗಳ ಪ್ರಾರ್ಥನೆಯಮೇಲೆ ದಕ್ಷನು ಪ್ರಭಾಸತೀರ್ಥಸ್ನಾನದಿಂದ ಆ ರೋಗಪರಿಹಾರವಾಗುವಂತೆ ಅನುಗ್ರಹಿಸಿದುದು ಬಲರಾಮನು ಆ ತೀರ್ಥಗಳಲ್ಲಿ ಸ್ನಾನಾದಿಗಳನ್ನು ಮಾಡಿದುದು }

ಜನಮೇಜಯನು ವೈಶಂಪಾಯನನ್ನು ಕುರಿತು "ಮುನೀಂದ್ರಾ! ಪೂಜ್ಯನಾದ ಚಂದ್ರನಿಗೆ ಕ್ಷಯರೋಗವೆಲ್ಲಿಂದ ಬಂದಿತು? ಆ ಪ್ರಭಾಸತೀರ್ಥದಲ್ಲಿ ಚಂದ್ರನು ಮುಳುಗಿದುದು ಹೇಗೆ? ಚಂದ್ರನು ಆ ತೀರ್ಥದಲ್ಲಿ ಸ್ನಾನಮಾಡಿದುದರಿಂದ ಅವನಿಗೆ ಆ ರೋಗಪರಿಹಾರವಾದುದು ಹೇಗೆ? ಇವನ್ನೆಲ್ಲ ನನಗೆ ವಿವರವಾಗಿ ತಿಳಿಸಬೇಕು" ಎಂದನು ಅದಕ್ಕೆ ವೈಶಂಪಾಯನನು "ರಾಜೇಂದ್ರಾ! ಕೇಳು ದಕ್ಷನಿಗೆ ಹಲವು ಮಂದಿ ಕನ್ಯೆಯರಾದರು ಅವರಲ್ಲಿ ಅಶ್ವಿನಿ ಮೊದಲಾದ ಇಪ್ಪತ್ತೇಳು ಮಂದಿಯನ್ನು ಚಂದ್ರನಿಗೆ ಕೊಟ್ಟು ವಿವಾಹಮಾಡಿದನು ಈ ಇಪ್ಪತ್ತೇಳು ಮಂದಿಯೂ ನಕ್ಷತ್ರಮಂಡಲದಲ್ಲಿ ಸೇರುವ ಆಸೆಯುಳ್ಳವರಾಗಿ, ಆ ನಕ್ಷತ್ರಸಂಖ್ಯೆಯಿಂದಲೇ ಎಣಿಸಲ್ಪಡುತಿದ್ದರು ಅವರೆಲ್ಲರೂ ರೂಪದಲ್ಲಿ ಎಣೆಯಿಲ್ಲದವರಾಗಿದ್ದರು ಅವರಲ್ಲಿಯೂ ರೋಹಿಣಿಯೆಂಬವಳು ರೂಪಸಂಪತ್ತಿನಲ್ಲಿ ಬೇರೆ ಯುವತಿಯರೆಲ್ಲರನ್ನೂ ಮೀರಿಸಿದ್ದಳು ಅವಳ ರೂಪಕ್ಕೆ ಮರುಳಾಗಿ ಚಂದ್ರನು, ಅವಳಲ್ಲಿ ಹೆಚ್ಚು ಪ್ರೀತಿಯನ್ನು ತೋರಿಸುತಿದ್ದನು ಅವಳೂ ಅವನ ಮನಸ್ಸಿಗೆ ಹಿತವಾಗಿ ನಡೆಯುತಿದ್ದಳು ಆಗ ಚಂದ್ರನ ಇತರ ಪತ್ನಿಯರಿಗೆಲ್ಲ ಚಂದ್ರನಲ್ಲಿ ಕೋಪವು ಹುಟ್ಟಿತು ಅವರು ತಮ್ಮ ತಂದೆಯಾದ ದಕ್ಷಪ್ರಜಾಪತಿಯಬಳಿಗೆ ಹೋಗಿ "ಜನಕಾ! ನಮ್ಮ ಪತಿಯಾದ ಚಂದ್ರನು ಯಾವಾಗಲೂ ರೋಹಿಣಿಯಲ್ಲಿಯೇ ಆಸಕ್ತನಾಗಿರುವನು ನಮ್ಮೊಡನೆ ಸೇರುವುದೇ ಇಲ್ಲ ಆದುದರಿಂದ ಇನ್ನುಮೇಲೆ ನಾವೆಲ್ಲರೂ ನಿನ್ನ ಸಂಗಡಲೇ ಇರುವೆವು ನಾವು ಇನ್ನುಮೇಲೆ ವಿರಕ್ತರಾಗಿ

ಆಹಾರನಿಯಮವನ್ನು ಹಿಡಿದು ತಪಸ್ಸಿನಲ್ಲಿಯೇ ಕಾಲವನ್ನು ಕಳೆಯು ವೆವು" ಎಂದರು ಆಗ ದಕ್ಷನು ಅಳಿಯನಾದ ಚಂದ್ರನನ್ನು ಕರೆಸಿ "ನೀನು ನಿನ್ನ ಎಲ್ಲಾ ಪತ್ನಿಯರನ್ನೂ ಸಮವಾಗಿ ನೋಡಬೇಕು ಒಬ್ಬಳಲ್ಲಿ ಯೇ ಪಕ್ಷಪಾತವನ್ನು ತೋರಿಸಿ ಅಧರ್ಮಕ್ಕೆ ಗುರಿಯಾಗಬಾರದು" ಎಂದು ಹೇಳಿ ಆಮೇಲೆ ತನ್ನ ಕನ್ಯೆಯರನ್ನು ಕರೆದು "ಇನ್ನು ನೀವು ನಿಮ್ಮ ಪತಿ ಯ ಮನೆಗೆ ಹೋಗಿರಿ! ನಾನು ಅವನಿಗೆ ನಿಮ್ಮೆಲ್ಲರನ್ನೂ ಸಮವಾಗಿ ಆದ ರಿಸುವಂತೆ ಹೇಳಿರುವೆನು ಇನ್ನುಮೇಲೆ ಅವನು ನನ್ನ ಆಜ್ಞೆಯನ್ನು ಮೀರಲಾರನು" ಎಂದನು ತಂದೆಯ ಮಾತನ್ನು ಕೇಳಿ ಅವರೆಲ್ಲರೂ ಸಂತೋಷದಿಂದ ತಿರುಗಿ ಚಂದ್ರನ ಮನೆಗೆ ಹೋಗಿ ಸೇರಿದರು ಆದ ರೇನು? ಆಗಲೂ ಚಂದ್ರನು ರೋಹಿಣಿಯ ಸಂಗಡಲೇ ಸೇರಿ, ಅವ ಳನ್ನು ಸಂತೋಷಪಡಿಸುತಿದ್ದನೇಹೊರತು, ಬೇರೆಯವರನ್ನು ಅಷ್ಟಾಗಿ ಆದರಿಸುತ್ತಿರಲಿಲ್ಲ ತಿರುಗಿ ಅವರಲ್ಲರೂ ಒಂದಾಗಿ ಸೇರಿ ತಮ್ಮ ತಂದೆ ಯಬಳಿಗೆ ಬಂದು "ಜನಕಾ! ಈಗಲೂ ನಮ್ಮ ಪತಿಯು ನಮ್ಮೊಡನೆ ಸೇರುವುದಿಲ್ಲ. ನಿನ್ನ ಮಾತನ್ನೂ ಅವನು ನಡೆಸುವಹಾಗಿಲ್ಲ ಇನ್ನು ಮೇಲೆ ನಾವು ನಿನ್ನ ಶುಶ್ರೂಷೆಯನ್ನು ಮಾಡುತ್ತ, ನಿನ್ನ ಬಳಿಯಲ್ಲಿಯೇ ಇರುವೆವು" ಎಂದರು ಈ ಮಾತನ್ನು ಕೇಳಿ ದಕ್ಷನು ತಿರುಗಿ ಚಂದ್ರ ನನ್ನು ಕರೆಸಿ "ನೋಡು! ಎಲ್ಲರಲ್ಲಿಯೂ ನೀನು ಸಮಾನವಾಗಿ ನಡೆದು ಕೊಂಡರೆಮಾತ್ರ ನಾನು ನಿನ್ನನ್ನು ಶಪಿಸದಿರುವೆನು ಇಲ್ಲದಿದ್ದರೆ ನಾನು ನಿನ್ನನ್ನು ಶಪಿಸಿ, ರೋಹಿಣಿಯಲ್ಲಿ ನಿನಗಿರುವ ಪ್ರೀತಿಯೆಲ್ಲ ವಿಫಲವಾಗು ವಂತೆ ಮಾಡುವೆ"ನೆಂದು ಹೇಳಿ, ತಿರುಗಿ ತನ್ನ ಕನ್ಯೆಯರನ್ನೆಲ್ಲ ಅವನೊ ಡನೆ ಕಳುಹಿಸಿಕೊಟ್ಟನು ಆಗಲೂ ಚಂದ್ರನು ದಕ್ಷನ ಮಾತನ್ನು ಲಕ್ಷ್ಯ ಮಾಡದೆ, ಯಾವಾಗಲೂ ರೋಹಿಣಿಯ ಸಂಗಡಲೇ ಇರುತಿದ್ದನು ಇತರ ದಕ್ಷಕನ್ಯೆಯರೆಲ್ಲರೂ ತಿರುಗಿ ಕೋಪದಿಂದ ಬಂದು ತಂದೆಯ ಕಾಲಿಗೆ ಬಿದ್ದು ನಮಸ್ಕರಿಸಿ, "ಅಪ್ಪಾ! ಚಂದ್ರನು ನಿನ್ನ ಮಾತನ್ನು ಲಕ್ಷ್ಯಮಾ ಡುವಹಾಗಿಲ್ಲ ಅವನು ನಮ್ಮ ಸಮೀಪಕ್ಕೆ ಬರುವುದೇ ಇಲ್ಲ ಯಾವಾ ಗಲೂ ರೋಹಿಣಿಯ ಪಕ್ಕದಲ್ಲಿಯೇ ಇರುವನು ಇನ್ನು ನೀನೇ ನಮಗೆ ರಕ್ಷಕನಾಗಿರಬೇಕು ನಮ್ಮೆಲ್ಲರನ್ನೂ ನೀನೇ ರಕ್ಷಿಸಬೇಕು ಅಥವಾ ಅವ

ನು ನಮ್ಮೆಲ್ಲರನ್ನೂ ಸಮವಾಗಿ ಆದರಿಸುವಂತೆ ಮಾಡಬೇಕು" ಎಂದರು. ಈ ಮಾತನ್ನು ಕೇಳಿದೊಡನೆ ದಕ್ಷನಿಗೆ ತಡೆಯಲಾರದ ಕೋಪವುಂಟಾಯಿತು ಚಂದ್ರನಿಗೆ ಕ್ಷಯರೋಗವು ಬರುವಂತೆ ಸಂಕಲ್ಪಿಸಿದನು ಒಡನೆಯೇ ಚಂದ್ರನಿಗೆ ಕ್ಷಯರೋಗವು ಹಿಡಿಯಿತು ಆ ರೋಗದಿಂದ ದಿನದಿನಕ್ಕೆ ಅವನ ದೇಹವು ಕ್ಷಯಿಸುತ್ತ ಬಂದಿತು ರೋಗನಿವಾರಣಾರ್ಥವಾಗಿ ಚಂದ್ರನು ಅನೇಕಪ್ರಯತ್ನಗಳನ್ನು ಮಾಡಿದನು ಆದಕ್ಕಾಗಿ ಬೇರಬೇರೆ ಇಷ್ಟಿಗಳನ್ನೂ, (ಯಾಗಗಳನ್ನೂ) ವ್ರತಗಳನ್ನೂ ನಡೆಸಿದನು ಆದರೂ ಆ ಶಾಪವು ಅವನನ್ನು ಬಿಟ್ಟುಹೋಗಲಿಲ್ಲ ಅವನ ದೇಹವು ಕ್ಷಯಿಸುತ್ತಲೇ ಬಂದಿತು. ಚಂದ್ರನ ಕ್ಷಯದಿಂದ ಓಷಧಿಗಳ ಬೆಳವಳಿಕೆಯೂ ತಪ್ಪುತ್ತ ಬಂದಿತು ಬೆಳೆಯಿಲ್ಲದೆ ಪ್ರಜೆಗಳಿಗೆ ಅನ್ನವಿಲ್ಲದಂತಾಯಿತು ದೇವತೆಗಳಿಗೆ ಅಮೃತವಿಲ್ಲದಂತಾಯಿತು ಪ್ರಾಣಿಗಳೆಲ್ಲ ಆಹಾರವಿಲ್ಲದೆ ಶಕ್ತಿಗುಂದಿದುವು ಅನೇಕ ಪ್ರಾಣಿಗಳು ನಷ್ಟವಾದುವು ಪ್ರಜೆಗಳೆಲ್ಲ ಕ್ಷೀಣಿಸಿದರು ಆಗ ದೇವತೆಗಳೆಲ್ಲ ಒಂದಾಗಿ ಸೇರಿ ಚಂದ್ರನ ಬಳಿಗೆ ಬಂದು "ಓ ಸೋಮದೇವಾ! ಇದೇನು ನಿನ್ನ ರೂಪವು ಹೀಗೆ ಕ್ಷಯಿಸಿರುವುದು? ನಿನಗೆ ಇಂತಹ ವಿಪತ್ತು ಬರಲು ಕಾರಣವೇನೆಂಬುದನ್ನು ನಮಗೆ ತಿಳಿಸು ಆ ವಿವರವನ್ನು ತಿಳಿದುಕೊಂಡಮೇಲೆ ಆದಕ್ಕೆ ಪರಿಹಾರವೇನೋ ಅದನ್ನು ಮಾಡುವೆವು" ಎಂದರು ಆಗ ಚಂದ್ರನು ತನಗೆ ಶಾಪವು ಬಂದ ಕಾರಣವನ್ನೆಲ್ಲ ಆ ದೇವತೆಗಳಿಗೆ ತಿಳಿಸಿದನು ಒಡನೆಯೇ ಆ ದೇವತೆಗಳೆಲ್ಲರೂ ದಕ್ಷನ ಬಳಿಗೆ ಬಂದು "ಓ ಮಹಾತ್ಮಾ! ಪೂಜ್ಯಾ! ನೀನು ಚಂದ್ರನಿಗೆ ಕೊಟ್ಟಿರುವ ಶಾಪವನ್ನು ಹಿಂತಿರುಗಿಸಬೇಕು ಚಂದ್ರನ ದೇಹವೆಲ್ಲವೂ ಕ್ಷೀಣಿಸಿ, ಅಲ್ಪಾವಶಿಷ್ಟವಾಗಿರುವುದು ಆ ಚಂದ್ರನು ಕ್ಷೀಣಿಸಿದುದರಿಂದ ಗಿಡಮರಬಳ್ಳಿಗಳೊಂದೂ ಬೆಳೆಯದೆ, ಬಿತ್ತಿದ ಬೀಜಗಳೆಲ್ಲವೂ ನಷ್ಟವಾಗುತ್ತಿವೆ ಆಹಾರವಿಲ್ಲದೆ ಪ್ರಜೆಗಳ ಸಂಖ್ಯೆಯೂ ಕ್ಷಯಿಸುತ್ತಿದೆ. ಲೋಕಗುರುವಾದ ನೀನು ಅನುಗ್ರಹದಿಂದ ಲೋಕವನ್ನು ಕಾಪಾಡಬೇಕು" ಎಂದರು ಅದಕ್ಕೆ ದಕ್ಷನು "ಎಲೈ ದೇವತೆಗಳಿರಾ! ನನ್ನ ಬಾಯಿಂದ ಹೊರಟ ಮಾತನ್ನು ಇಷ್ಟು ಬೇಗನೆ ತಪ್ಪಿಸುವುದು ಸಾಧ್ಯವೇ ಅಲ್ಲ! ಕಾಲಕ್ರಮದಿಂದ ಯಾವುದಾದರೂ ತಕ್ಕ ಕಾರಣವೊದಗಿ ಆ

ಶಾಪಕ್ಕೆ ವಿಮೋಚನವಾಗಬೇಕು ಅದುವರೆಗೆ ಚಂದ್ರನು ತನ್ನ ಎಲ್ಲಾ ಪತ್ನಿಯರಲ್ಲಿಯೂ ಸಮವಾಗಿ ವರ್ತಿಸುತ್ತ, ಸರಸ್ವತೀನದಿಯ ತೀರದಲ್ಲಿದ್ದುಕೊಂಡು, ಆ ತೀರ್ಥದಲ್ಲಿ ಪ್ರತಿದಿನವೂ ಸ್ನಾನಮಾಡುತ್ತ ಬರಲಿ! ಆಗ ಅವನಿಗೆ ತಿರುಗಿ ಮೈತುಂಬಿಕೊಂಡು ಅವನ ರೋಗವು ನಿವೃತ್ತಿಯಾಗುವುದು ಈ ಮಾತನ್ನು ಸತ್ಯವೆಂದು ತಿಳಿಯಿರಿ ಆದರೆ, ಆ ಚಂದ್ರನಿಗೆ ನಾನು ಕೊಟ್ಟ ಶಾಪವು ಪೂರ್ಣವಾಗಿ ಬಿಟ್ಟುಹೋಗಲಾರದು ಅವನು ಇನ್ನು ಮುಂದಕ್ಕೆ ಯಾವಾಗಲೂ ಅರ್ಧತಿಂಗಳ ಕಾಲದವರೆಗೆ ಕ್ಷಯರೋಗದಿಂದ ಪೀಡಿತನಾಗಿ ದೇಹಕ್ಷಯವನ್ನು ಹೊಂದುತ್ತ, ತಿರುಗಿ ಅರ್ಧತಿಂಗಳಲ್ಲಿ ಅವನು ಚೇತರಿಸಿಕೊಂಡು ವೃದ್ಧಿಯನ್ನು ಹೊಂದುವನು. ಇದು ಸತ್ಯವು ಈಗಲೇ ಚಂದ್ರನು ಪಶ್ಚಿಮಸಮುದ್ರದಲ್ಲಿ ಸರಸ್ವತೀ ನದಿಯು ಸಂಗಮವಾಗುವ ಸ್ಥಳಕ್ಕೆ ಹೋಗಿ, ಅಲ್ಲಿ ಭಗವಂತನನ್ನು ಆರಾಧಿಸುತ್ತಿರಲಿ! ಅವನಿಗೆ ಕಳೆಯು ಕೂಡಿಬರುವುದು" ಎಂದನು ಒಡನೆಯೇ ಚಂದ್ರನು ಆ ದಕ್ಷನು ಹೇಳಿದಂತೆ ಸರಸ್ವತೀನದಿಗೆ ಹೋಗಿ, ಮೊದಲು ಆ ನದಿಯಲ್ಲಿ ಪ್ರಭಾಸವೆಂಬ ಮೊದಲನೆಯ ಘಟ್ಟದಲ್ಲಿ ಕುಳಿತು ಅಲ್ಲಿ ಅಮಾವಾಸ್ಯೆಯ ದಿನದಲ್ಲಿ ಸ್ನಾನಮಾಡಿದನು ಅವನ ದೇಹದಲ್ಲಿ ಕಳೆಯು ಕೂಡಿ ಬಂದಿತು ಲೋಕಗಳನ್ನೆಲ್ಲ ತನ್ನ ಕಾಂತಿಯಿಂದ ಬೆಳಗುತ್ತ ಆಗಿನಿಂದ ಶೀತಕಿರಣಗಳನ್ನು ಹೊಂದಿದನು ದೇವತೆಗಳೆಲ್ಲರೂ ದಕ್ಷನ ಅನುಗ್ರಹದಿಂದ ಸಂತುಷ್ಟರಾಗಿ ಚಂದ್ರನೊಡನೆ ಬಂದು ದಕ್ಷನ ಮುಂದೆ ನಿಂತರು ಆಗ ದಕ್ಷನು ದೇವತೆಗಳೆಲ್ಲರನ್ನೂ ಕಳುಹಿಸಿ, ಪ್ರೀತಿಪೂರ್ವಕವಾಗಿ ಚಂದ್ರನನ್ನು ನೋಡಿ, "ಕುಮಾರಾ! ಸ್ತ್ರೀಯರನ್ನು ನಿರಾಕರಿಸಿ ಅವರ ಮನಸ್ಸನ್ನು ನೋಯಿಸಬಾರದು ಬ್ರಾಹ್ಮಣರನ್ನೂ ಅವಮಾನಗೊಳಿಸಬಾರದು ಇನ್ನುಮೇಲಾದರೂ ನೀನು ಎಲ್ಲರಲ್ಲಿಯೂ ಸಮವಾಗಿ ವರ್ತಿಸುತ್ತ ನನ್ನ ಆಜ್ಞೆಯನ್ನು ನೆರವೇರಿಸು" ಎಂದು ಹೇಳಿ ಕಳುಹಿಸಿದನು ಆಮೇಲೆ ಚಂದ್ರನು ಸಂತೋಷದಿಂದ ತನ್ನ ಮನೆಗೆ ಹೋಗಿ ಸೇರಿದನು. ಪ್ರಜೆಗಳೆಲ್ಲರೂ ಸಂತುಷ್ಟರಾಗಿ ಮೊದಲಿನಂತೆ ಯಜ್ಞಾದಿಗಳನ್ನು ನಡೆಸುತಿದ್ದರು

ಓ ಜನಮೇಜಯ ರಾಜೇಂದ್ರಾ! ಚಂದ್ರನಿಗೆ ಶಾಪಬಂದ ಕಾರಣ ವನ್ನೂ, ಪ್ರಭಾಸತೀರ್ಥದ ಮಹಿಮೆಯನ್ನೂ ತಿಳಿಸಿದೆನು ಚಂದ್ರನು ಪ್ರತಿ ಅಮಾವಾಸ್ಯೆಯಲ್ಲಿಯೂ ಆ ಪ್ರಭಾಸತೀರ್ಥದಲ್ಲಿ ಸ್ನಾನಮಾಡಿ, ಉತ್ತಮಕಳೆಯನ್ನು ಹೊಂದುವುದರಿಂದಲೇ ಅದಕ್ಕೆ ಪ್ರಭಾಸವೆಂದು ಹೆಸರಾಯಿತು ಅಲ್ಲಿ ಮುಳುಗಿದುದರಿಂದಲೇ ಚಂದ್ರನು ಉತ್ತಮ ಪ್ರಭೆಯನ್ನು ಹೊಂದಿ ಅದರಿಂದ ಲೋಕಗಳನ್ನೆಲ್ಲ ಬೆಳಗುವನು ಅದರಿಂದಲೇ ದೇಹಪುಷ್ಟಿಯನ್ನೂ ಹೊಂದಿದನು ಅಂತಹ ಪುಣ್ಯತೀರ್ಥದಲ್ಲಿ ಬಲರಾಮನು ಸ್ನಾನಮಾಡಿ ದಾನದಕ್ಷಿಣೆಗಳನ್ನು ಕೊಟ್ಟಮೇಲೆ, ಅಲ್ಲಿಂದ ಚಮಸೋದ್ಭೇದವೆಂದು ಕರಯಲ್ಪಡುವ ಕ್ಷೇತ್ರಕ್ಕೆ ಬಂದನು ಅಲ್ಲಿಯೂ ವಿಶೇಷ ದಾನಾದಿಗಳನ್ನು ಮಾಡಿ, ಒಂದು ರಾತ್ರಿ ಅಲ್ಲಿಯೇ ತಂಗಿದ್ದು, ಸ್ನಾನಾದಿಗಳನ್ನು ಮುಗಿಸಿಕೊಂಡು, ಉದಪಾನವೆಂಬ ಸ್ಥಳಕ್ಕೆ ಬಂದನು ಅಲ್ಲಿ ಬ್ರಾಹ್ಮಣರಿಂದ ಉತ್ತಮಾಶೀರ್ವಾದಗಳನ್ನು ಪಡೆದನು ಓ ರಾಜೇಂದ್ರಾ! ಸರಸ್ವತೀನದಿಯು ಕಣ್ಣಿಗೆ ಕಾಣದೆ ಗುಪ್ತನದಿಯೆನಿಸಿಕೊಂಡಿದ್ದರೂ, ಅಲ್ಲಿನ ಕ್ಷೇತ್ರದ ಮೃದುತ್ವದಿಂದಲೂ, ಫಲವತ್ತಾದ ಮರಗಿಡುಬಳ್ಳಿಗಳಿಂದಲೂ, ಓಷಧಿಗಳ ಸಮೂಹಗಳಿಂದಲೂ ಸಿದ್ಧರು ಆ ನದಿಯು ಅಲ್ಲಿರುವುದನ್ನು ತಿಳಿಯುವರು

ಇದು ಮೂವತ್ತಾರನೆಯ ಅಧ್ಯಾಯವು



ಏಕತ, ದ್ವಿತ, ತ್ರಿತರೆಂಬ ಮೂವರು ಬ್ರಾಹ್ಮಣರ ಕಥೆ

ರಾಜೇಂದ್ರಾ! ಕೇಳು. ಆಮೇಲೆ ಬಲರಾಮನು ಆ ಸ್ಥಳದಿಂದ ಆ ನದಿಗೆ ಸೇರಿದಂತಿದ್ದ ಪ್ರಸಿದ್ಧವಾದ ತ್ರಿತನೆಂಬ ಬ್ರಾಹ್ಮಣನ ಬಾವಿಗೆ ಹೋದನು ಅಲ್ಲಿದ್ದ ಅನೇಕಬ್ರಾಹ್ಮಣರನ್ನು ಪೂಜಿಸಿ, ಅವರಿಗೆ ವಿಶೇಷ ದಕ್ಷಿಣೆಗಳನ್ನು ಕೊಟ್ಟು, ಅಲ್ಲಿ ಸ್ನಾನವನ್ನು ಮಾಡಿ ಸಂತೋಷದಿಂದಿರುತಿದ್ದನು. ಮಹಾರಾಜಾ! ಅಲ್ಲಿ ಮಹಾತಪಸ್ವಿಯೂ, ಧರ್ಮಪರಾಯಣನೂ ಆದ ತ್ರಿತನೆಂಬ ಬ್ರಾಹ್ಮಣನೊಬ್ಬನಿದ್ದನು ಬಾವಿಯಲ್ಲಿಯೇ ವಾಸಿಸುತಿದ್ದ

ಆ ಮಹಾತ್ಮನು, ಅಲ್ಲಿಯೇ ಯಜ್ಞಮಾಡಿ ಸೋಮರಸವನ್ನು ಪಾನ ಮಾಡಿದವನು ಅವನಿಗೆ ಸಹೋದರರಿಬ್ಬರು ಅವರು ಅವನನ್ನು ಆ ಬಾವಿಯಲ್ಲಿ ಬಿಟ್ಟು ಮನೆಗೆ ಹೊರಟುಹೋಗಲು, ತ್ರಿತನು ತನ್ನ ಸಹೋದರರ ಮೇಲೆ ಕೋಪಗೊಂಡು ಅವರನ್ನು ಶಪಿಸಿಬಿಟ್ಟನು" ಎಂದು ವೈಶಂಪಾಯನು ಹೇಳುತ್ತಿರುವಷ್ಟರಲ್ಲಿಯೇ ಜನಮೇಜಯರಾಜನು "ಓ ಮುನೀಂದ್ರಾ! ಅಲ್ಲಿ ಬಾವಿಯು ಉಂಟಾದುದು ಹೇಗೆ? ಅವನ ಸಹೋದರರು ಅವನನ್ನು ಹಾಗೆ ಬಿಟ್ಟುಹೋಗಲು ಕಾರಣವೇನು? ಆ ತ್ರಿತನು ಯಾಗಮಾಡಿದುದು ಹೇಗೆ? ಸೋಮಪಾನಮಾಡಿದುದು ಹೇಗೆ? ಇವನ್ನೆಲ್ಲ ನಾನು ಕೇಳಬಹುದಾದರೆ, ಕೃಪೆಯಿಟ್ಟು ವಿವರಿಸಿ ತಿಳಿಸಬೇಕು" ಎಂದನು. ಅದಕ್ಕೆ ವೈಶಂಪಾಯನನು ಹೇಳುವನು

"ರಾಜೇಂದ್ರಾ! ಪೂರ್ವಯುಗದಲ್ಲಿ ಏಕತ, ದ್ವಿತ, ತ್ರಿತರೆಂಬ ಮೂರುಮಂದಿ ಸಹೋದರರಿದ್ದರು ಅವರೆಲ್ಲರೂ ಸೂರ್ಯನಂತೆ ತೇಜಸ್ಸುಳ್ಳವರು. ಸಾಕ್ಷಾದ್ಬ್ರಹ್ಮನಿಗೆ ಸಮಾನರು ಸಂತತಿಯುಳ್ಳವರು. ಬ್ರಹ್ಮವಾದಿಗಳಾಗಿ ತಮ್ಮ ತಪಸ್ಸಿನಿಂದ ಬ್ರಹ್ಮಲೋಕವನ್ನು ಜಯಿಸಿದವರು ಈ ಮೂವರಿಗೂ ತಂದೆಯಾದ ಗೌತಮನೆಂಬ ಬ್ರಾಹ್ಮಣನು ಬಹಳ ಧರ್ಮನಿಷ್ಠನು ಅವನು ತನ್ನ ಪುತ್ರರ ಆಚಾರನಿಯಮಗಳಿಗೂ, ಇಂದ್ರಿಯನಿಗ್ರಹಕ್ಕೂ, ತಪಸ್ಸಿಗೂ ಮೆಚ್ಚಿ, ಅವರಲ್ಲಿ ವಿಶೇಷ ಪ್ರೀತಿಯಿಂದಿದ್ದನು ಅವನು ಹೀಗೆ ಮಕ್ಕಳ ಪ್ರೀತಿಗೆ ಪಾತ್ರನಾಗಿ ಬಹುಕಾಲವಿದ್ದು, ಕೊನೆಗೆ ತನ್ನ ತಪಸ್ಸಿಗೆ ಯೋಗ್ಯವಾದ ಉತ್ತಮಗತಿಯನ್ನು ಹೊಂದಿದನು ಆ ಗೌತಮನಿಗೆ ಶಿಷ್ಯರಾಗಿದ್ದ ಅನೇಕರಾಜರು, ಅವನು ಸ್ವರ್ಗಸ್ಥನಾದಮೇಲೆ, ಅವನ ಮೂವರು ಮಕ್ಕಳನ್ನೂ ಅದೇ ವಿಧವಾದ ಗುರುಭಾವದಿಂದ ಕಾಣುತಿದ್ದರು ಆ ಮೂವರು ಸಹೋದರರಲ್ಲಿ ತ್ರಿತನು ತನ್ನ ತಂದೆಯಂತೆಯೇ ಕರ್ಮಗಳಲ್ಲಿಯೂ, ವೇದಾಧ್ಯಯನದಲ್ಲಿಯೂ ಮೇಲೆನಿಸಿಕೊಂಡಿದ್ದನು ಮಹಾತ್ಮರಾದ ಮುನಿಗಳೆಲ್ಲರೂ ಅವನನ್ನು ಅವನ ತಂದೆಯಂತೆಯೇ ಗೌರವದಿಂದ ಕಾಣುತಿದ್ದರು ಹೀಗಿರುವಾಗ ಒಮ್ಮೆ ಏಕತ ದ್ವಿತರೆಂಬ ಸಹೋದರರಿಬ್ಬರಿಗೂ ಯಜ್ಞವನ್ನು ಮಾಡಬೇಕೆಂದೂ,

ಹಣವನ್ನು ಸಂಪಾದಿಸಬೇಕೆಂದೂ ಆಸೆಗೊಂಡರು ಅದಕ್ಕಾಗಿ ಅವರು ತಮ್ಮೊಳಗೆ ಹೀಗೆ ಆಲೋಚಿಸಿದರು. “ ಈಗ ನಾವಿಬ್ಬರೂ ತಮ್ಮನಾದ ತ್ರಿತನನ್ನು ಮುಂದಿಟ್ಟುಕೊಂಡು ನಮ್ಮ ಶಿಷ್ಯರೆಲ್ಲರ ಬಳಿಗೆ ಹೋಗಿ, ಅವರಿಂದ ಪಶುಗಳನ್ನು ಸಂಪಾದಿಸಿ, ಒಳ್ಳೇ ಫಲಪ್ರದವಾದ ಯಾಗವನ್ನು ಮಾಡಿ ಅದರಲ್ಲಿ ಸೋಮಪಾನಮಾಡುವೆವು ” ಎಂದು ನಿಶ್ಚಯಿಸಿದರು ಅದರಂತೆಯೇ ಆ ಮೂವರೂ ಅಲ್ಲಲ್ಲಿ ಶಿಷ್ಯರಬಳಿಗೆ ಹೋಗಿ, ಯಾಗಗಳನ್ನು ಮಾಡಿಸಿ, ತಮ್ಮ ಯಾಗಕ್ಕಾಗಿ ಅಲ್ಲಲ್ಲಿಂದ ಅನೇಕಪಶುಗಳನ್ನು ಸಂಗ್ರಹಿಸಿಕೊಂಡು, ಪೂರ್ವದಿಕ್ಕಿನಕಡೆಗೆ ಹೊರಟರು ಆ ಮೂವರಲ್ಲಿ ತ್ರಿತನು ಸಂತೋಷದಿಂದ ಬೇಗಬೇಗನೆ ಹೆಜ್ಜೆಗಳನ್ನಿಡುತ್ತ ಎಲ್ಲರಿಗೂ ಮುಂದಾಗಿ ಹೋಗುತಿದ್ದನು ಏಕತ ದ್ವಿತರಿಬ್ಬರೂ ಹಿಂದಿನಿಂದ ಹಸುಗಳನ್ನು ಅಟ್ಟಿಕೊಂಡು ಬರುತಿದ್ದರು ಆಗ ಅವರಿಬ್ಬರಿಗೂ ಮನಸ್ಸಿನಲ್ಲಿ ಒಂದು ದುರಾಲೋಚನೆ ಹುಟ್ಟಿತು ಆಗ ಅವರಿಬ್ಬರೂ ಅನ್ಯೋನ್ಯವಾಗಿ “ ಈ ಹಸುಗಳನ್ನೆಲ್ಲ ತ್ರಿತನಿಗಿಲ್ಲದಂತೆ ಮಾಡಿ, ನಮ್ಮ ಸ್ವಂತಮಾಡಿಕೊಳ್ಳುವುದಕ್ಕೆ ನಾವು ಏನಾದರೂ ಉಪಾಯವನ್ನು ಮಾಡಬೇಕಲ್ಲಾ ! ಏನುಮಾಡುವುದು ? ” ಎಂದು ವಿಧವಿಧವಾಗಿ ತಂತ್ರಗಳನ್ನಾಲೋಚಿಸುತಿದ್ದರು ಜನಮೇಜಯರಾಜಾ ! ಆಗ ಅವರಿಗೆ ಎಂತಹ ಪಾಪಬುದ್ಧಿಯು ಹುಟ್ಟಿತೋ ಅದನ್ನು ತಿಳಿಸುವೆನು ಕೇಳು ಆಗ ಅವರು ತಮ್ಮೊಳಗೆ “ ಈ ತ್ರಿತನಾದರೋ ಯಜ್ಞಗಳಲ್ಲಿ ಸಮರ್ಥನು ! ವೇದಗಳಲ್ಲಿ ಪಾರಂಗತನು ! ಆದುದರಿಂದ ಅವನಿಗೇ ಹೆಚ್ಚಾಗಿ ಹಸುಗಳು ಲಭಿಸುವುವು ಆದುದರಿಂದ ನಾವಿಬ್ಬರೂ ಒಂದಾಗಿ ಈ ಹಸುಗಳನ್ನು ಬೇರೆ ಕಡೆಗೆ ಓಡಿಸಿಕೊಂಡುಹೋಗುವೆವು ತ್ರಿತನು ನಮ್ಮನ್ನು ಬಿಟ್ಟು ಇಷ್ಟಬಂದಕಡೆಗೆ ಹೋಗಲಿ ” ಎಂದರು ಓ ರಾಜೇಂದ್ರಾ ! ಹೀಗೆ ಆ ಮೂವರೂ ರಾತ್ರಿಯಲ್ಲಿ ದಾರಿನಡೆದು ಬರುತ್ತಿರುವಾಗ, ಒಂದು ತೋಳವು ಅವರಿಗಿದಿರಾಗಿ ಬಂದಿತು ಅವರು ಬರುತಿದ್ದ ದಾರಿಗೆ ಸಮೀಪವಾಗಿ ಸರಸ್ವತೀನದಿಯ ತೀರದಲ್ಲಿ ದೊಡ್ಡದೊಂದು ಬಾವಿಯಿದ್ದಿತು ತೋಳನು ಇದಿರಾಗಿ ಬರುವುದನ್ನು ಮೊದಲು ತ್ರಿತನು ಕಂಡನು ಅದನ್ನು ನೋಡಿ ಅವನು ಭಯಪಟ್ಟು, ಹಿಂದೆಹಿಂದೆ ಸರಿಯುತ್ತ, ಬಹಳ ಭಯಂಕರವೂ, ಆಳವೂ ಆದ ಒಂದು ಬಾವಿಯೊಳಗೆ ಬಿದ್ದ

ಬಿಟ್ಟನು ಹೀಗೆ ರಾತ್ರಿಯಲ್ಲಿ ಕಣ್ಣುಕಾಣದೆ ಬಾವಿಗೆ ಬಿದ್ದ ಆ ತ್ರಿತನು ಬಹಳ ದೈನ್ಯದಿಂದ ಕೂಗಿ ಮೊರೆಯಿಡುತಿದ್ದನು. ಅವನ ಆರ್ತಧ್ವನಿಯು ಈ ಸಹೋದರರ ಕಿವಿಗೆ ಬಿದ್ದಿತು ಆಗ ಏಕತ ದ್ವಿತರಿಬ್ಬರೂ ತಮ್ಮ ಸಹೋದರನು ಬಾವಿಯಲ್ಲಿ ಬಿದ್ದುಹೋದುದನ್ನು ತಿಳಿದುಕೊಂಡರು ತಮ್ಮ ಇಷ್ಟವು ದೈವಗತಿಯಿಂದಲೇ ಪೂರ್ತಿಯಾಯಿತೆಂದು ಅವರಿಗೆ ಸಂತೋಷವಾಯಿತು ಇನ್ನುಮೇಲೆ ಆ ಹಸುಗಳೆಲ್ಲ ತಮ್ಮಿಬ್ಬರಿಗೇ ದಕ್ಕುವುವೆಂಬ ಲೋಭವೊಂದು ಕಡೆ! ಆ ತೋಳದ ಭಯವೊಂದು ಕಡೆ! ಇವೆರಡರಿಂದಲೂ ಅವರು ತಮ್ಮ ಸಹೋದರನನ್ನು ಲಕ್ಷ್ಯಮಾಡದೆ ಬಿಟ್ಟು ಹೊರಟುಹೋದರು ಹೀಗೆ ಲೋಭಿಗಳಾದ ಸಹೋದರರು ತನ್ನನ್ನು ಬಿಟ್ಟುಹೋದಮೇಲೆ, ತ್ರಿತನು ಪೂದಗಳಿಂದಲೂ, ಹುಲ್ಲಿನಿಂದಲೂ ತುಂಬಿ, ಜಲಶೂನ್ಯವಾಗಿ, ಮರಳುತುಂಬಿದ ಆ ಹಾಳುಬಾವಿಯಲ್ಲಿ ತತ್ತಳಿಸುತಿದ್ದನು ಪಾಪಿಯು ನರಕದಲ್ಲಿ ಬಿದ್ದಂತೆ, ಹಾಳುಬಾವಿಯಲ್ಲಿ ಬಿದ್ದ ತನ್ನ ಸ್ಥಿತಿಗಾಗಿ ಅವನು ಶೋಕಿಸುತ್ತ "ಅಯ್ಯೋ! ಸೋಮಪಾನಮಾಡದಿದ್ದವನು ಮೃತಪ್ರಾಯನು ನಾನು ಈ ಬಾವಿಯಲ್ಲಿದ್ದುಕೊಂಡು, ಹೇಗೆತಾನೇ ಸೋಮಪಾನವನ್ನು ಮಾಡಬಲ್ಲೆನು? ಅಯ್ಯೋ! ನನ್ನ ಜನ್ಮವು ಹೀಗಾಯಿತೇ" ಎಂದು ಚಿಂತಿಸುತ್ತ ಸುತ್ತಲೂ ನೋಡಿದನು ಇಷ್ಟರಲ್ಲಿ ಅಕಸ್ಮಾತ್ತಾಗಿ ಆ ಬಾವಿಯಲ್ಲಿ ತೊಂಗುತಿದ್ದ ಒಂದು ಬಳ್ಳಿಯು ಅವನ ಕಣ್ಣಿಗೆ ಬಿದ್ದಿತು ಮರಳು ತುಂಬಿದ ಆ ಬಾವಿಯಲ್ಲಿ ಸ್ವಲ್ಪದೂರದವರಗೆ ಆ ಮರಳನ್ನು ತೋಡಿದನು. ಅಲ್ಲಿ ನೀರು ಬಂದಿತು ಒಡನೆಯೇ ಅಗ್ನಿಯನ್ನು ಸಂಕಲ್ಪದಿಂದ ಸೃಷ್ಟಿಸಿದನು ತನ್ನನ್ನೇ ಹೋತಾರನನ್ನಾಗಿ ಸಂಕಲ್ಪಿಸಿಕೊಂಡನು ಮಹಾತಪೋಬಲವುಳ್ಳ ಆ ಮಹರ್ಷಿಯು, ಮೇಲಿಂದ ತೊಂಗುತಿದ್ದ ಆ ಬಳ್ಳಿಯನ್ನೇ ಸೋಮಲತೆಯನ್ನಾಗಿ ಭಾವಿಸಿಕೊಂಡನು ಋಗ್ಯಜುಸ್ಸಾಮಗಳನ್ನು ಮನಸ್ಸಿನಿಂದಲೇ ಧ್ಯಾನಿಸಿದನು ಬಾವಿಯಲ್ಲಿದ್ದ ಸಣ್ಣ ಕಲ್ಲುಗುಂಡುಗಳನ್ನೇ ಅರಯುವ ಕಲ್ಲನ್ನಾಗಿ ಭಾವಿಸಿದನು ಅದರಲ್ಲಿಯೇ ಸೋಮಲತೆಯನ್ನು ಇಡಿದು ರಸವನ್ನು ಹಿಂಡಿದನು. ಆ ನೀರನ್ನೇ ಆಜ್ಯವನ್ನಾಗಿ ಮಾಡಿ ದೇವತೆಗಳಿಗೆ ಕೊಡಬೇಕಾದ ಹವಿರ್ಭಾಗಗಳನ್ನು ಅಲ್ಲಿಯೇ ಸಲ್ಲಿಸಿದನು ಓ ರಾಜೇಂದ್ರಾ! ಅವನು ಸೋಮಲ

ಯನ್ನು ಹಿಂಡುವಾಗ ದೊಡ್ಡದೊಂದು ಧ್ವನಿಯಾಯಿತು. ಆ ಧ್ವನಿಯೂ, ಮತ್ತು ತ್ರಿತನ ವೇದಧ್ವನಿಯೂ ಒಂದಾಗಿ ಸೇರಿ ಸ್ವರ್ಗವನ್ನು ಮುಟ್ಟಿತು ಶಾಸ್ತ್ರೋಕ್ತವಾಗಿ ತ್ರಿತನು ಆ ಯಾಗವನ್ನು ಮುಗಿಸಿಬಿಟ್ಟನು ತ್ರಿತನು ಯಜ್ಞವನ್ನು ನಡೆಸುತ್ತಿರುವಾಗ, ಸ್ವರ್ಗವೆಲ್ಲವೂ ವ್ಯಾಕುಲವಾಯಿತು ಆದರೆ, ಅದರ ಕಾರಣವೇನೆಂದು ಯಾರಿಗೂ ತಿಳಿಯದು ಬೃಹಸ್ಪತಿಯು ಈ ದೊಡ್ಡ ಶಬ್ದವನ್ನು ಕೇಳಿ ನಿಜಾಂಶವನ್ನು ತಿಳಿದುಕೊಂಡು, ಎಲ್ಲಾ ದೇವತೆಗಳನ್ನೂ ಕುರಿತು "ಎಲೈ ದೇವತೆಗಳಿರಾ! ಚಿಂತಿಸಬೇಡಿರಿ ತ್ರಿತನೆಂಬ ಮಹಾತ್ಮನು ದೊಡ್ಡ ಯಜ್ಞವನ್ನು ನಡೆಸುತ್ತಿರುವನು ನಾವೆಲ್ಲರೂ ಅಲ್ಲಿಗೆ ಹೋಗುವೆವು ಅವನಿಗೆ ಕೋಪವುಂಟಾದರೆ, ಬೇರೆ ದೇವಲೋಕವನ್ನೇ ಅವನು ಸೃಷ್ಟಿಸಿಬಿಡುವನು ಬೇಗನೆ ಹೊರಡಿರಿ" ಎಂದನು ಒಡನೆಯೇ ದೇವತೆಗಳೆಲ್ಲರೂ ತ್ರಿತನಿದ್ದ ಬಾವಿಯಬಳಿಗೆ ಹೊರಟುಬಂದರು ಆ ಬಾವಿಯಲ್ಲಿ ಬಗ್ಗಿನೋಡಿದಾಗ, ಆಳವಾದ ಆ ಬಾವಿಯ ತಳದಲ್ಲಿ ಯಜ್ಞದೀಕ್ಷೆಯನ್ನು ವಹಿಸಿ, ದಿವ್ಯತೇಜಸ್ಸಿನಿಂದ ಬೆಳಗುತ್ತಿರುವ ಆ ಬ್ರಾಹ್ಮಣನನ್ನು ಕಂಡರು ಆಗ ದೇವತೆಗಳು ಅವನನ್ನು ಕುರಿತು "ಓ ಮಹಾತ್ಮಾ! ನಿನ್ನ ಯಜ್ಞದಲ್ಲಿ ಭಾಗಗಳನ್ನು ಪಡೆಯುವುದಕ್ಕಾಗಿ ನಾವು ಸಿದ್ಧವಾಗಿ ಬಂದಿರುವೆವು" ಎಂದರು ಆಗ ಆ ಮಹರ್ಷಿಯು ದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ! ಭಯಂಕರವಾದ ಈ ಬಾವಿಯಲ್ಲಿ ಬಿದ್ದಿರುವ ನನ್ನ ಸ್ಥಿತಿಯನ್ನು ನೋಡಿರಿ" ಎಂದು ಹೇಳಿ, ಅವರವರಿಗೆ ಕೊಡಬೇಕಾದ ಹವಿಸ್ಸುಗಳನ್ನು ಮಂತ್ರಪೂರ್ವಕವಾಗಿ ಅಲ್ಲಿಂದಲೇ ಅವರಿಗೆ ಸಲ್ಲಿಸಿದನು ದೇವತೆಗಳೆಲ್ಲರೂ ತಮ್ಮತಮ್ಮ ಭಾಗಗಳನ್ನು ಸ್ವೀಕರಿಸಿ ಸಂತೋಷಗೊಂಡು ಆ ತ್ರಿತನಿಗೆ ಕೇಳಿದ ವರಗಳನ್ನು ಕೊಡುವುದಾಗಿ ಹೇಳಿದರು ಆಗ ತ್ರಿತನು "ತನ್ನನ್ನು ಆ ಬಾವಿಯಿಂದ ಮೇಲಕ್ಕೆತ್ತಿಬಿಡಬೇಕೆಂದೂ, ಆ ಬಾವಿಯೊಳಗಿನ ನೀರಿನಲ್ಲಿ ಯಾರು ಆಚಮನಮಾಡಿದರೂ ಅವರಿಗೆ ಯಜ್ಞದಲ್ಲಿ ಸೋಮಪಾನಮಾಡಿದವರ ಸದ್ಗತಿಯುಂಟಾಗಬೇಕೆಂದೂ" ಕೇಳಿಕೊಂಡನು ಓ ರಾಜೇಂದ್ರಾ! ಒಡನೆ ಆ ಬಾವಿಯಿಂದ ದೊಡ್ಡ ಅಲೆಗಳೊಡನೆ ಸರಸ್ವತೀನದಿಯು ಮೇಲಕ್ಕೆ ಬಂದು ಪ್ರವಹಿಸಲಾರಂಭಿಸಿತು ದೇವತೆಗಳು ಆ

ತ್ರಿತನನ್ನು ಭೂಮಿಯಮೇಲಕ್ಕೆ ತಂದುಬಿಟ್ಟು, ಅವನು ಕೇಳಿದ ವರಗಳನ್ನು ಕೊಟ್ಟು, ಅವನಿಂದ ಸತ್ಕೃತರಾಗಿ, ತಾವು ಬಂದ ದಾರಿಯಲ್ಲಿ ಹೊರಟುಹೋದರು ತ್ರಿತನೂ ಅಲ್ಲಿಂದ ತನ್ನ ಮನೆಗೆ ಬಂದು ಸೇರಿದನು ಅಲ್ಲಿ ತನ್ನ ಸಹೋದರರನ್ನು ಕಂಡೊಡನೆ ಅವನಿಗೆ ತಡೆಯಲಾರದ ಕೋಪವುಂಟಾಗಿ ಅವರನ್ನು ಹೀಗೆಂದು ಶಪಿಸುವನು "ಎಲೈ ದುರಾತ್ಮರೇ! ಹಸುಗಳಲ್ಲಿ ಲೋಭದಿಂದ ನೀವಿಬ್ಬರೂ ನನ್ನನ್ನು ಆ ಮಹಾವಿಪತ್ತಿನಲ್ಲಿ ಬಿಟ್ಟು ಓಡಿದಿರಲ್ಲವೆ? ನೀವಿಬ್ಬರೂ ಕೋರಹಲ್ಲುಳ್ಳ ತೋಳಗಳ ಆಕೃತಿಯನ್ನು ಹೊಂದಿ ಈ ವನದಲ್ಲಿ ಸಂಚರಿಸುವಿರಿ ನಿಮ್ಮ ಪಾಪಕಾರ್ಯಕ್ಕೆ ತಕ್ಕ ಫಲವನ್ನನುಭವಿಸಿರಿ ಈ ನಿಮ್ಮ ಪಾಪಕಾರ್ಯದಿಂದ ನಿಮಗೆ ಮುಂದೆ ಹುಟ್ಟುವ ಸಂತಾನಗಳೆಲ್ಲವೂ ಕಪಿಗಳಾಗಿಯೂ, ಕರಡಿಗಳಾಗಿಯೂ, ಗೋಲಾಂಗೂಲ (ಸಿಂಗಲೀಕ)ಗಳಾಗಿಯೂ ಇರಲಿ" ಎಂದನು ಈ ಶಾಪವಾಕ್ಯವು ಅವನ ಬಾಯಿಂದ ಹೊರಟೊಡನೆ ಅವರಿಬ್ಬರಿಗೂ ಅದೇ ಆಕಾರವುಂಟಾಯಿತು

ಓ ರಾಜೇಂದ್ರಾ! ಬಲರಾಮನು ಆ ಬಾವಿಯಲ್ಲಿ ಆಚಮನಮಾಡಿ ಬ್ರಾಹ್ಮಣರನ್ನು ಪೂಜಿಸಿ ದಾನಗಳನ್ನು ಕೊಟ್ಟನು ನದಿಗೆ ಸೇರಿದಂತಿದ್ದ ಆ ಬಾವಿಯನ್ನು ನೋಡಿ ಬಾರಿಬಾರಿಗೂ ಪ್ರಶಂಸಿಸುತ್ತ, ಅಲ್ಲಿಂದ ವಿನಶನವೆಂಬ ಸ್ಥಳಕ್ಕೆ ಬಂದು ಸೇರಿದನು

ಇದು ಮೂವತ್ತೇಳನೆಯ ಅಧ್ಯಾಯವು



{ ಬಲರಾಮನು ಸರಸ್ವತೀನದಿಯ ತೀರದಲ್ಲಿ ಸುತ್ತಿಬಂದ ಅನೇಕತೀರ್ಥಗಳ ವರ್ಣನೆ ಮತ್ತು ಅವುಗಳ ಮಹಿಮೆ }

ಓ ರಾಜೇಂದ್ರಾ! ಆಮೇಲೆ ಬಲರಾಮನು ವಿನಶನವೆಂಬ ತೀರ್ಥಕ್ಕೆ ಬಂದನು ಸರಸ್ವತೀನದಿಯು ಆ ಸ್ಥಳದಲ್ಲಿದ್ದ ಶೂದ್ರರನ್ನೂ, ಗೊಲ್ಲರನ್ನೂ ದ್ವೇಷಿಸಿದುದರಿಂದ, ಅಲ್ಲಿ ಅವಳು ನಷ್ಟವಾದಳು. ಆದಕ್ಕಾಗಿಯೇ ಋಷಿಗಳು ಆದನ್ನು ವಿನಶನವೆಂದು ಹೇಳುವರು ಬಲರಾಮನು ಆ ವಿನ

ಶನವೆಂಬ ಘಟ್ಟದಲ್ಲಿಯೂ ಇಳಿದು ಸ್ನಾನಮಾಡಿ, ಅಲ್ಲಿಂದ ಮುಂದೆ ಅದೇ ಸರಸ್ವತೀ ತೀರದಲ್ಲಿರುವ ಸುಭೂಮಿಕವೆಂಬ ಘಟ್ಟಕ್ಕೆ ಬಂದನು. ಅಲ್ಲಿ ಯಾವಾಗಲೂ ಅಪ್ಸರಸ್ಸುಗಳು ಸಂತೋಷದಿಂದ ಕ್ರೀಡಿಸುತ್ತಿರುವರು• ಬ್ರಾಹ್ಮಣಸೇವಿತವಾದ ಆ ತೀರ್ಥಕ್ಕೆ ಒಂದೊಂದು ತಿಂಗಳಲ್ಲಿಯೂ ದೇವತೆಗಳೂ, ಗಂಧರ್ವರೂ ಬಂದು ಅದನ್ನು ಸೇವಿಸಿ ಹೋಗುವರು ಅಲ್ಲಿ ಗಂಧರ್ವರೂ, ಅಪ್ಸರಸ್ಸುಗಳೂ ನರ್ತನಮಾಡುತ್ತ, ಸ್ವೇಚ್ಛೆಯಿಂದ ವಿಹರಿಸುವರು ಪಿತೃಗಳೂ, ದೇವತೆಗಳೂ ಅಲ್ಲಿ ಸದಾ ಸಂತೋಷದಿಂದಿರುವರು ಅಲ್ಲ ಲತೆಗಳೆಲ್ಲವೂ ಪುಷ್ಪಸಮೃದ್ಧವಾಗಿದ್ದು, ಅಲ್ಲಿಗೆ ಬಂದ ದೇವತೆಗಳಮೇಲೆ ಬಾರಿಬಾರಿಗೂ ಪುಷ್ಪಗಳನ್ನೆರಚುತ್ತ ಸಂತೋಷಗೊಳಿಸುವುವು ಹೀಗೆ ಆ ಪ್ರದೇಶವು ಅಪ್ಸರಸ್ಸುಗಳಿಗೆ ಒಳ್ಳೇ ವಿಹಾರಸ್ಥಾನಗಳಾಗಿರುವುದರಿಂದ ಅದಕ್ಕೆ ಸುಭೂಮಿಕೆಯೆಂದು ಹೆಸರಾಯಿತು ಬಲರಾಮನು ಆ ತೀರ್ಥದಲ್ಲಿಯೂ ಇಳಿದು ಸ್ನಾನಮಾಡಿ, ಬ್ರಾಹ್ಮಣರಿಗೆ ವಿಶೇಷ ದಕ್ಷಿಣೆಯನ್ನು ಕೊಟ್ಟು, ಅಲ್ಲಿ ಸದಾ ಕೇಳಿಸುತ್ತಿರುವ ಅಪ್ಸರಸ್ಸುಗಳ ಗಾನವಾದ್ಯಗಳನ್ನು ಕೇಳಿ ಸಂತೋಷಿಸಿದನು ಅಲ್ಲಿ ದೇವ ಗಂಧರ್ವ ರಾಕ್ಷಸರ ದೊಡ್ಡದೊಡ್ಡ ಶಯ್ಯಾಸ್ಥಳಗಳನ್ನೂ ನೋಡಿದನು ಅಲ್ಲಿಂದ ಮುಂದೆ ಬಲರಾಮನು ಗಂಧರ್ವತೀರ್ಥಕ್ಕೆ ಬಂದನು ಅಲ್ಲಿ ವಿಶ್ವಾವಸು ಮೊದಲಾದ ಗಂಧರ್ವರೂ, ಅಪ್ಸರಸ್ಸುಗಳೂ ಯಾವಾಗಲೂ ನೃತ್ತ ಗೀತ ವಾದ್ಯಗಳನ್ನು ಮಾಡುತ್ತಿರುವರು ಅಲ್ಲಿಯೂ ಬಲರಾಮನು ಬ್ರಾಹ್ಮಣರಿಗೆ ಬೇಕಾದ ದ್ರವ್ಯವನ್ನು ದಾನಮಾಡಿದನು ಮತ್ತು ಅಲ್ಲಿದ್ದವರಿಗೆ ಉತ್ತಮವಾದ ಕಂಬಳಿಗಳನ್ನೂ, ಹೇಸರಗತ್ತೆಗಳನ್ನೂ ಒಂಟೆಗಳನ್ನೂ, ಚಿನ್ನ ಬೆಳ್ಳಿಗಳನ್ನೂ ಕೊಟ್ಟನು ಅನೇಕ ಬ್ರಾಹ್ಮಣರಿಗೆ ಭೋಜನಮಾಡಿಸಿದನು ಅವರವರು ಕೇಳಿದ ಬೆಲೆಯುಳ್ಳ ವಸ್ತುಗಳನ್ನೆಲ್ಲ ಕೊಟ್ಟನು ಅಲ್ಲಿದ್ದ ಬ್ರಾಹ್ಮಣರಿಂದ ಸ್ತೋತ್ರಮಾಡಲ್ಪಡುತ್ತ ಆ ಬ್ರಾಹ್ಮಣರೊಡನೆಯೇ ಸೇರಿ ಗಂಧರ್ವತೀರ್ಥದಿಂದ ಮುಂದಕ್ಕೆ ಹೊರಟನು ಮಹಾಬಾಹುವೂ, ಏಕಕುಂಡಲಿಯೂ ಆದ ಆ ಬಲರಾಮನು ಅಲ್ಲಿಂದ ಪ್ರಯಾಣಮಾಡಿ ಗರ್ಗಸ್ರೋತಸ್ಸೆಂಬ ಮಹಾತೀರ್ಥಕ್ಕೆ ಬಂದನು ಆ ಗರ್ಗನೆಂಬ ಮಹರ್ಷಿಯು ಮಹಾತಪಸ್ವಿ! ವಯಸ್ಸಿನಲ್ಲಿ ವೃದ್ಧನು! ಒಳ್ಳೇ ಆತ್ಮ

ಜ್ಞಾನವುಳ್ಳವನು! ಅವನು ಕಾಲಜ್ಞಾನವನ್ನು ಬಲ್ಲವನು! ಜ್ಯೋತಿರ್ಮಂಡಲಗಳಲ್ಲಿ ನಡೆಯುವ ಬದಲಾವಣೆಗಳನ್ನೂ, ಭಯಂಕರವಾದ ಉತ್ಪಾತಗಳನ್ನೂ, ಶುಭಶಕುನಗಳನ್ನೂ ಬಲ್ಲವನು ಆ ಸ್ಥಳದಲ್ಲಿಯೇ ಆ ಮಹರ್ಷಿಯು ಈ ಅಂಶಗಳನ್ನೆಲ್ಲ ಮೊದಲು ತನ್ನ ಜ್ಞಾನಬಲದಿಂದ ಕಂಡುಕೊಂಡನು ಆದರಿಂದಲೇ ಆ ತೀರ್ಥವು ಅವನ ಹೆಸರಿನಿಂದ ಗರ್ಗಸ್ರೋತಸ್ಸೆಂದು ಕರೆಯಲ್ಪಟ್ಟಿತು. ವ್ರತನಿಷ್ಠರಾದ ಅನೇಕ ಮಹರ್ಷಿಗಳು ಕಾಲಜ್ಞಾನವನ್ನು ತಿಳಿಯುವುದಕ್ಕಾಗಿ ಅಲ್ಲಿಗೆ ಹೋಗಿ ಪ್ರತಿದಿನವೂ ಅವನನ್ನು ಸೇವಿಸುತ್ತಿದ್ದರು ಬಲರಾಮನು ಅಲ್ಲಿಗೂ ಹೋಗಿ ಸ್ನಾನಮಾಡಿ, ಶುದ್ಧಮನಸ್ಸುಳ್ಳ ಋಷಿಗಳಿಗೆ ವಿಶೇಷ ಧನವನ್ನು ಕೊಟ್ಟನು ಅಲ್ಲಿನ ಬ್ರಾಹ್ಮಣರಿಗೆ ನಾನಾತರದ ಭಕ್ಷ್ಯಗಳನ್ನೆಲ್ಲ ಮಾಡಿಸಿಕೊಟ್ಟನು ತಾಳಧ್ವಜವುಳ್ಳ ಬಲರಾಮನು ಅಲ್ಲಿಂದ ಹೊರಟು ಶಂಖತೀರ್ಥವೆಂಬ ಸ್ಥಳಕ್ಕೆ ಬಂದನು ಅಲ್ಲಿ ಮೇರುಪರ್ವತದಂತೆ ಎತ್ತರವಾಗಿಯೂ, ಶ್ವೇತಪರ್ವತದಂತೆ ಬಿಳುಪಾಗಿಯೂ, ಅನೇಕ ಋಷಿಸಮೂಹದಿಂದ ಸೇವಿತವಾಗಿಯೂ ಇರುವ ಮಹಾಶಂಖವೆಂಬ ದೊಡ್ಡದೊಂದು ಮರವು ಸರಸ್ವತೀನದಿಯ ತೀರದಲ್ಲಿ ಬೆಳೆದಿರುವುದನ್ನು ಕಂಡನು ವಿದ್ಯಾಧರರೂ, ಯಕ್ಷರಾಕ್ಷಸರೂ, ಪಿಶಾಚರೂ, ಸಿದ್ಧರೂ, ಸಾವಿರಾರು ಸಂಖ್ಯೆಯಿಂದ ಅಲ್ಲಿಗೆ ಬಂದು ಒಳ್ಳೇ ವ್ರತನಿಯಮಗಳನ್ನು ಹಿಡಿದು ಬೇರೆ ಆಹಾರಗಳನ್ನೆಲ್ಲ ನಿರಾಕರಿಸಿ, ಆಯಾ ಕ್ಲುಪ್ತಕಾಲಗಳಲ್ಲಿ ಆ ಮರದ ಹಣ್ಣನ್ನೇ ಭುಜಿಸುತ್ತ, ಬೇರಬೇರೆ ನಿಯಮಗಳನ್ನು ಹಿಡಿದಿರುವರು ಆದರೆ ಅವರು ಮನುಷ್ಯರ ಕಣ್ಣಿಗೆ ಬೀಳದೆ ಸಂಚರಿಸುತ್ತಿರುವರು ಹೀಗೆ ಆ ವೃಕ್ಷವು ಲೋಕದಲ್ಲಿ ಬಹಳ ಪ್ರಖ್ಯಾತವಾಗಿದೆ ಆ ಸ್ಥಳದಲ್ಲಿ ಸರಸ್ವತೀನದಿಯು ಬಹಳ ಪವಿತ್ರವಾದ ತೀರ್ಥವೆನಿಸಿದೆ ಬಲರಾಮನು ಆ ತೀರ್ಥದಲ್ಲಿ ಸ್ನಾನಮಾಡಿ, ಬ್ರಾಹ್ಮಣರಿಗೆ ಒಳ್ಳೇ ಕರೆಯುವ ಹಸುಗಳನ್ನೂ, ತಾಮ್ರ ಮತ್ತು ಕಬ್ಬಿಣದ ಪಾತ್ರೆಗಳನ್ನೂ, ವಿವಿಧವಸ್ತ್ರಗಳನ್ನೂ ಕೊಟ್ಟು ಸಂತೋಷಗೊಳಿಸಿ, ಅಲ್ಲಿದ್ದ ಋಷಿಗಳಿಂದ ತಾನೂ ಪೂಜ್ಯನಾಗಿ, ಮುಂದೆ ಹೊರಟು, ನೈಸರ್ಗಿಕವೆಂಬ ಮತ್ತೊಂದು ಪುಣ್ಯತೀರ್ಥಕ್ಕೆ ಬಂದನು. ಅಲ್ಲಿ ನಾನಾವೇಷವನ್ನು ಧರಿಸಿದ ಋಷಿಗಳನ್ನು ಕಂಡು, ಅಲ್ಲಿನ ತೀರ್ಥದಲ್ಲಿ ಸ್ನಾನಮಾಡಿ ಅಲ್ಲಿದ್ದ ಬ್ರಾ

ಹ್ಮಣರಿಗೂ ಬೇಕುಬೇಕಾದ ಸಾಮಗ್ರಿಗಳನ್ನು ಕೊಟ್ಟು ಸಂತೋಷಗೊಳಿಸಿದನು. ಅಲ್ಲಿಂದಾಚೆಗೆ ಬಲರಾಮನು ಸರಸ್ವತೀನದಿಗೆ ದಕ್ಷಿಣಾಭಿಮುಖವಾಗಿ ಸ್ವಲ್ಪದೂರ ಹೋದಮೇಲೆ, ನಾಗಧನ್ವವೆಂಬ ಮತ್ತೊಂದು ತೀರ್ಥಕ್ಕೆ ಬಂದನು. ಓ ರಾಜೇಂದ್ರಾ! ಅಲ್ಲಿಯೇ ನಾಗರಾಜನಾದ ವಾಸುಕಿಯು ಅನೇಕ ನಾಗಸಮೂಹಗಳೊಡನೆ ವಾಸಮಾಡುತ್ತಿರುವನು. ಹದಿನಾಲ್ಕುಸಾವಿರಮಂದಿ ಋಷಿಗಳು ಅಲ್ಲಿ ಯಾವಾಗಲೂ ವಾಸಮಾಡುತ್ತಿರುವರು. ಅಲ್ಲಿಯೇ ದೇವತೆಗಳೆಲ್ಲರೂ ಬಂದು ವಾಸುಕಿಯನ್ನು ಎಲ್ಲಾ ಪನ್ನಗರಿಗೂ ಅಧಿಪತಿಯನ್ನಾಗಿ ಮಾಡಿ ಪಟ್ಟಾಭಿಷೇಕವನ್ನು ಶಾಸ್ತ್ರೋಕ್ತವಾಗಿ ನಡೆಸಿದರು. ಜನಮೇಜಯರಾಜಾ! ಅಲ್ಲಿ ಯಾರಿಗೂ ಹಾವಿನ ಭಯವಿಲ್ಲ. ಅಲ್ಲಿಯೂ ಬಲರಾಮನು ಶಾಸ್ತ್ರೀಯವಾಗಿ ಬ್ರಾಹ್ಮಣರಿಗೆ ರತ್ನದಾನಗಳನ್ನು ಮಾಡಿ, ಅಲ್ಲಿಂದ ಪೂರ್ವದಿಕ್ಕಿಗೆ ಅಭಿಮುಖವಾಗಿ ಹೊರಟನು. ಅಲ್ಲಿರುವ ತೀರ್ಥಗಳ ಸಂಖ್ಯೆಗೆ ಮಿತಿಯೇ ಇಲ್ಲ. ಅಲ್ಲಿ ಬಹಳ ಹೆಸರುಗೊಂಡ ನೂರುಸಾವಿರ ಸಂಖ್ಯೆಯ ತೀರ್ಥಗಳುಂಟು. ಬಲರಾಮನು ಆ ತೀರ್ಥಗಳೊಳಗೆಲ್ಲ ಅಲ್ಲಲ್ಲಿದ್ದ ಮಹರ್ಷಿಗಳ ಹೇಳಿಕೆಯಂತೆ ವಿಧ್ಯುಕ್ತವಾಗಿ ಸ್ನಾನಾದಿಗಳನ್ನು ಮಾಡಿ, ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಟ್ಟು, ಅಲ್ಲಿದ್ದ ಋಷಿಗಳಿಗೆ ನಮಸ್ಕರಿಸಿ ಮುಂದೆ ಹೊರಟನು. ಆಮೇಲೆ ಸರಸ್ವತೀನದಿಯು ತಿರುಗಿ ಪೂರ್ವಾಭಿಮುಖವಾಗಿ ತಿರುಗುವ ಸ್ಥಳಕ್ಕೆ ಬಂದನು. ಅದು ಅನೇಕ ಋಷಿಗಳಿಂದ ಸೇವಿತವಾಗಿ ಮಹಾಪುಣ್ಯತೀರ್ಥವೆನಿಸಿರುವುದು. ನೈಮಿಶಾರಣ್ಯವಾಸಿಗಳಾದ ಋಷಿಗಳು ಅಲ್ಲಿ ವಾಸಿಸುತ್ತಿರುವರು. ಆ ಋಷಿಗಳ ದರ್ಶನಾರ್ಥವಾಗಿಯೇ ನದಿಯು ಅಲ್ಲಿ ಪೂರ್ವಾಭಿಮುಖವಾಗಿ ಪ್ರವಹಿಸಿತು. ಬಲರಾಮನು ಆ ಸ್ಥಳವನ್ನು ನೋಡಿ ಆಶ್ಚರ್ಯಗೊಂಡನು" ಎಂದನು. ಆಗ ಜನಮೇಜಯನು "ಓ ಬ್ರಾಹ್ಮಣೋತ್ತಮಾ! ಸರಸ್ವತೀನದಿಯು ಅಲ್ಲಿ ಏತಕ್ಕಾಗಿ ಪೂರ್ವಾಭಿಮುಖವಾಗಿ ತಿರುಗಿದಳು? ಆ ಸ್ಥಳವನ್ನು ನೋಡಿದಾಗ ಬಲರಾಮನ ಆಶ್ಚರ್ಯಕ್ಕೆ ಕಾರಣವೇನು? ಈ ವಿವರವನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕಾ ವೈಶಂಪಾಯನನು "ರಾಜೇಂದ್ರಾ! ಹಿಂದೆ ಕೃತಯುಗದಲ್ಲಿ ನೈಮಿಷೇಯರೆಂಬ ತಪಸ್ವಿಗಳು ಒಂದು ದೊಡ್ಡ ಸತ್ರಯಾಗವನ್ನು ಆರಂಭಿ

ಸಿದರು ಹನ್ನೆರಡುವರ್ಷಗಳವರೆಗೆ ನಡೆಯತಕ್ಕ ಆ ಸತ್ರಯಾಗಕ್ಕಾಗಿ ನಾನಾಕಡೆಗಳಿಂದ ಅನೇಕ ಋಷಿಗಳು ಬಂದು ಸೇರಿದರು ನೈಮಿಷಕ್ಷೇತ್ರ ವಾಸಿಗಳಾದ ಆ ಋಷಿಗಳೆಲ್ಲರೂ ಅಲ್ಲಿ ಶಾಸ್ತ್ರೋಕ್ತವಾಗಿ ಯಾಗಗಳನ್ನು ಮುಗಿಸಿದಮೇಲೆ, ತೀರ್ಥಯಾತ್ರೆಯನ್ನುದ್ದೇಶಿಸಿ ಅನೇಕರು ಗುಂಪಾಗಿ ಇಲ್ಲಿಗೆ ಬಂದರು ಋಷಿಗಳ ಸಂಖ್ಯೆಯು ಬಹಳ ಅಧಿಕವಾಗಿದ್ದುದರಿಂದ ಆ ಸರಸ್ವತೀನದಿಯ ದಕ್ಷಿಣೋತ್ತರ ತೀರಗಳಲ್ಲಿದ್ದ ತೀರ್ಥಗಳೆಲ್ಲ ಜನಬಾಹುಳ್ಯದಿಂದ ದೊಡ್ಡ ನಗರಗಳಾದುವು ಅಲ್ಲಿಂದ ಸಮಂತಪಂಚಕಕ್ಷೇತ್ರದವರಗೆ ಆ ನದೀತೀರವೆಲ್ಲ ಬ್ರಾಹ್ಮಣಸಮೂಹದಿಂದ ತುಂಬಿಹೋಯಿತು ಅಲ್ಲಲ್ಲಿ ಹೋಮಮಾಡುವವರೂ, ಅಧ್ಯಾತ್ಮಚಿಂತೆಯಲ್ಲಿರುವವರೂ, ವೇದಾಧ್ಯಯನಮಾಡುವವರೂ ತಮ್ಮತಮ್ಮ ಕಾರ್ಯದಲ್ಲಿ ನಿರತರಾಗಿದ್ದರು ಅವರ ವೇದಘೋಷವು ದಿಕ್ಕುಗಳನ್ನೆಲ್ಲ ತುಂಬಿತು ಅವರ ಅಗ್ನಿಹೋತ್ರದಿಂದ ಸರಸ್ವತೀನದಿಯ ತೀರವೆಲ್ಲ ಬೆಳಗುತಿದ್ದಿತು ಆ ಋಷಿಗಳಲ್ಲಿ ವಾಲಖಿಲ್ಯರು ಕೆಲವರು ! ಅಶ್ಮಕುಟ್ಟರು ಕೆಲವರು ! ದಂತೋಲೂಖಲರು ಕೆಲವರು ! ಹಾಗೆಯೇ ಸಂಪ್ರಕ್ಷಾಲರು ಕೆಲವರು ! ಕೆಲವರು ವಾಯುಭಕ್ಷಕರು ಕೆಲವರು ಜಲಾಹಾರಿಗಳು ! ಕೆಲವರು ಬರೀಗಿಡದೆಲೆಗಳನ್ನೇ ತಿಂದು ಜೀವಿಸುವರು ಬರೀ ನೆಲದಮೇಲೆ ಮಲಗತಕ್ಕವರು ಕೆಲವರು ! ಹೀಗೆ ಅಲ್ಲಿ ನಾನಾನಿಯಮಗಳನ್ನು ಹಿಡಿದ ಮಹರ್ಷಿಗಳು ಬಂದು ಕೂಡಿದ್ದರು ದೇವತೆಗಳಿಂದ ಗಂಗಾತೀರಕ್ಕೆ ಹೇಗೋ ಹಾಗೆ, ಋಷಿಗಳ ಸಮೂಹದಿಂದ ಆ ಸರಸ್ವತೀನದಿಯ ತೀರಕ್ಕೆ ಅಪೂರ್ವಶೋಭೆಯುಂಟಾಗುತ್ತಿದ್ದಿತು ಯಜ್ಞಶೀಲರಾದ ಮಹರ್ಷಿಗಳು ಅಲ್ಲಿ ಮೂರುಸಾವಿರ ಸಂಖ್ಯೆಯಿಂದ ಸೇರಿದರು ಮೇಲೆಮೇಲೆ ಋಷಿಗಳ ಸಂಖ್ಯೆಯು ಹೆಚ್ಚಿದುದರಿಂದ, ಸರಸ್ವತೀನದಿಯ ತೀರದಲ್ಲಿ ಅವರ ವಾಸಕ್ಕೆ ಸ್ಥಳವು ಸಾಲದೆ ಹೋಯಿತು ಅದರಮೇಲೆ ವ್ರತನಿಷ್ಠರಾದ ಆ ಮಹರ್ಷಿಗಳು ಕುರುಕ್ಷೇತ್ರದಲ್ಲಿ ತಮಗೆ ಸ್ಥಳವನ್ನು ನೋಡಿಕೊಂಡರು ಅಲ್ಲಿ ಅವರು ತಮ್ಮ ಯಜ್ಞೋಪವೀತಗಳನ್ನೇ ಸರಸ್ವತೀನದಿಯನ್ನಾಗಿ ಭಾವಿಸಿಕೊಂಡು, ಅಲ್ಲಿಯೇ ಅಗ್ನಿಹೋತ್ರಗಳನ್ನು ಆರಂಭಿಸಿದರು ಇನ್ನೂ ವಿವಿಧಕರ್ಮಗಳನ್ನೂ ಅಲ್ಲಿ ನಡೆಸುತ್ತಿದ್ದರು ಓ ರಾಜೇಂದ್ರಾ ! ಆದರೂ ಅವರಿಗೆ ಸರ

ಸ್ವತೀನದಿಯ ತೀರ್ಥವನ್ನು ಸಾಕ್ಷಾತ್ತಾಗಿ ಸೇವಿಸಬೇಕೆಂಬ ಆಸೆಯೂ ತೀರಲಿಲ್ಲ ಅವರ ಆಶಾಭಂಗವನ್ನು ಸಹಿಸಲಾರದೆ ಸರಸ್ವತೀನದಿಯು ಆ ಋಷಿಗಳಮೇಲೆ ಕರುಣೆಯಿಂದ ತನ್ನ ಪ್ರವಾಹವನ್ನು ತಿರುಗಿಸಿಕೊಂಡು ಅಲ್ಲಲ್ಲಿ ತೀರ್ಥಘಟ್ಟಗಳನ್ನು ಮಾಡಿ ಏವರಿದ್ದ ಸ್ಥಳಕ್ಕೆ ಬಂದಿತು ಹೀಗೆ ಆ ಪುಣ್ಯನದಿಯು ಮಹರ್ಷಿಗಳ ಉದ್ದೇಶಪೂರ್ತಿಗಾಗಿಯೇ ಆಕಡೆಗೆ ಪ್ರವಹಿಸಿ ಆಮೇಲೆ ತಿರುಗಿ ಪಶ್ಚಿಮಾಭಿಮುಖವಾಗಿ ಪ್ರವಹಿಸಿತು ಹೀಗೆ ಆ ನದಿಯು ಆ ಮಹರ್ಷಿಗಳಿಗಾಗಿ ತಿರುಗಿತಿರುಗಿ ಪ್ರವಹಿಸಿದುದರಿಂದ, ಆಶ್ಚರ್ಯಕರವಾದ ತನ್ನ ಪ್ರವಾಹರೀತಿಯನ್ನು ತೋರಿಸಿ ಆಶ್ಚರ್ಯವನ್ನುಂಟು ಮಾಡಿತು ಹೀಗೆ ಸರಸ್ವತೀನದಿಯಿಂದ ಏರ್ಪಟ್ಟ ಆ ತೀರ್ಥವಿಶೇಷಕ್ಕೆ ನೈಮಿಷೀಯವೆಂಬ ಹೆಸರು ಏರ್ಪಟ್ಟಿತು ಬಲರಾಮನು ಅದನ್ನು ನೋಡಿ ಆಶ್ಚರ್ಯಪಟ್ಟ ಕಾರಣವೇ ಇದು! ಓ ಜನಮೇಜಯರಾಜಾ! ನೀನು ಕೂಡ ಆ ಕುರುಕ್ಷೇತ್ರದಲ್ಲಿ ಪ್ರಬಲವಾದ ಕ್ರಿಯೆಗಳನ್ನು ನಡೆಸು ಅಲ್ಲಿರುವ ಅನೇಕ ತೀರ್ಥವಿಶೇಷಗಳನ್ನೂ, ತಿರುಗಿತಿರುಗಿ ಬರುವ ಸರಸ್ವತೀನದಿಯನ್ನೂ ನೋಡಿ ಬಲರಾಮನು ಆಶ್ಚರ್ಯಗೊಂಡು, ಆ ತೀರ್ಥದಲ್ಲಿಯೂ ಸ್ನಾನದಾನಾದಿಕಾರ್ಯಗಳನ್ನು ನಡೆಸಿ, ಅಲ್ಲ ಬ್ರಾಹ್ಮಣರಿಗೆ ಭಕ್ಷ್ಯಭೋಜ್ಯಗಳನ್ನೂ, ಆಭರಣಗಳನ್ನೂ ಕೊಟ್ಟು ಅವರಿಂದ ತಾನೂ ಸತ್ಕೃತನಾದನು ಅಲ್ಲಿಂದ ಮುಂದ ಬಲರಾಮನು ಅನೇಕಬ್ರಾಹ್ಮಣರಿಂದ ತುಂಬಿದ ಸಪ್ತಸಾರಸ್ವತವೆಂಬ ತೀರ್ಥಕ್ಕೆ ಬಂದು ಸೇರಿದನು ಅದು ಎಲಚಿ, ಇಂಗುಲಿಕ, ಶ್ಯಾಮಾಕ, ಆಲ, ಅರಳಿ, ವಿಭೀತಕ, ಕಂಕೋಲ, ಪಲಾಶ, ಕರೀರ, ಪೀಲು, ಕರೂಷಕ, ಬಿಲ್ವ, ಆಮ್ರಾತಕ, ಅತಿಮುಕ್ತ, ಪಾರಿಜಾತ, ಮೊದಲಾದ ಅನೇಕವೃಕ್ಷಗಳಿಂದ ಶೋಭಿತವಾಗಿರುವುದು ಸರಸ್ವತೀನದಿಯ ತೀರದಲ್ಲ ಉದ್ದಕ್ಕೂ ಬೆಳೆದಿರುವ ಸಮೃದ್ಧವಾದ ಬಾಳೆಯ ತೋಟವು ಕಣ್ಣಿಗೂ, ಮನಸ್ಸಿಗೂ ಅತ್ಯಂತ ರಮ್ಯವಾಗಿರುವುದು ಗಾಳಿ, ನೀರು, ಹಣ್ಣು, ಎಲೆ ಮುಂತಾದುವನ್ನೇ ಭಕ್ಷಿಸತಕ್ಕವರೂ, ದಂತೋಲೂಖಲಿಗಳೂ, ಅಶ್ಮಕುಟ್ಟರೂ ಈ ಮೊದಲಾದ ನಾನಾವ್ರತಗಳನ್ನು ಹಿಡಿದ ಮಹರ್ಷಿಗಳು ಅಲ್ಲ ವಾಸಿಸುತ್ತಿರುವರು ವೇದಘೋಷಗಳು ಯಾವಾಗಲೂ ಕೇಳಿಸುತ್ತಿರುವುವು ಅನೇಕಜಾತಿಯ ಮೃಗಗಳು ತುಂಬಿರುವುವು

ಹಿಂಸಾಸ್ವಭಾವವಿಲ್ಲದೆ ಕೇವಲ ಧರ್ಮನಿರತರಾದ ಜನರೇ ತುಂಬಿರುವರು ಹೀಗೆ ಸರಸ್ವತೀನದಿಯ ತೀರಘಟ್ಟಗಳಲ್ಲಿ ಅತ್ಯಂತ ಪುಣ್ಯತಮವೆನಿಸಿದ ಆ ತೀರ್ಥಕ್ಕೆ ಬಲರಾಮನು ಬಂದು ಸೇರಿದನು ಮಂಕಣನೆಂಬ ಮಹರ್ಷಿಯು ಅಲ್ಲಿಯೇ ದೊಡ್ಡ ತಪಸ್ಸನ್ನು ಮಾಡಿ ಸಿದ್ಧಿಯನ್ನು ಹೊಂದಿದನು'' ಎಂದನು

ಇದು ಮೂವತ್ತೆಂಟನೆಯ ಅಧ್ಯಾಯವು

ಸರಸ್ವತೀನದಿಯು ಸಪ್ತಶಾಖೆಗಳಾಗಿ ವಿಭಾಗಿಸಲ್ಪಡುವುದಕ್ಕೆ ಕಾರಣಗಳು ಆ ಏಳು ಶಾಖೆಗಳೂ ಒಂದುಕಡೆಯಲ್ಲಿ ಸೇರಿದುದರಿಂದ ಆ ತೀರ್ಥಕ್ಕೆ ಸಪ್ತಸಾರಸ್ವತವೆಂಬ ಹೆಸರಾದುದು ಮಂಕಣಮುನಿಯ ಕಥೆ

ಆಗ ಜನಮೇಜಯನು ವೈಶಂಪಾಯನನನ್ನು ಕುರಿತು “ಮುನೀಂದ್ರಾ! ಸಪ್ತಸಾರಸ್ವತವೆಂಬ ಹೆಸರು ಹೇಗೆ ಬಂದಿತು? ಮಂಕಣಕನೆಂಬ ಮಹರ್ಷಿಯಾರು? ಅವನು ಯಾವ ವ್ರತವನ್ನು ಹಿಡಿದು ಎಂತಹ ಸಿದ್ಧಿಯನ್ನು ಹೊಂದಿದನು? ಅವನು ಯಾವ ವಂಶದಲ್ಲಿ ಹುಟ್ಟಿದವನು? ಅವನು ಅಧ್ಯಯನಮಾಡಿದ ವಿದ್ಯೆಯಾವುದು? ಇದನ್ನೆಲ್ಲ ವಿವರಿಸಿ ನನಗೆ ತಿಳಿಸಬೇಕು'' ಎಂದನು ಅದಕ್ಕಾ ವೈಶಂಪಾಯನನು “ಓ ರಾಜೇಂದ್ರಾ! ಯಾವ ಏಳು ನದಿಗಳಿಂದ ಈ ಪ್ರಪಂಚವೆಲ್ಲವೂ ವ್ಯಾಪ್ತವಾಗಿದೆಯೋ, ಆ ಏಳು ನದಿಗಳೂ ಸರಸ್ವತೀನದಿಗೆ ಸಂಬಂಧಪಟ್ಟವುಗಳೇ! ಆ ಸರಸ್ವತೀನದಿಯೊಂದೇ ಅಲ್ಲಲ್ಲಿ ಮಹಾತ್ಮರಿಂದ ಬೇರೆಬೇರ ಹೆಸರಿನಿಂದ ಕರೆಯಲ್ಪಡುತ್ತಿದೆ ಆ ಏಳುಶಾಖೆಗಳಿಗೆ ಕ್ರಮವಾಗಿ ಸುಭದ್ರೆ, ಕಾಂಚನಾಕ್ಷಿ, ವಿಶಾಲೆ, ಮನೋರಮೆ, ಓಘವತಿ, ಸುರೇಣು, ವಿಮಲೋದಕೆಯೆಂದು ಹೆಸರು ರಾಜೇಂದ್ರಾ! ಹಿಂದೆ ಬ್ರಹ್ಮದೇವನ ಮಹಾಯಾಗವೊಂದು ನಡೆಯುತಿದ್ದಾಗ, ವಿಶಾಲವಾದ ಯಾಗಶಾಲೆಯಲ್ಲಿ ಅನೇಕಬ್ರಾಹ್ಮಣರು ನೆರೆದಿದ್ದರು ಪುಣ್ಯಾಹಘೋಷಗಳೂ, ವೇದಘೋಷಗಳೂ ಪ್ರಬಲವಾಗಿದ್ದುವು ದೇವತೆಗಳು ಆಯಾ ಕಾರ್ಯಗಳನ್ನು ನಡೆಸುತ್ತಿದರು ಪ್ರಪಿ

ತಾಮಹನಾದ ಬ್ರಹ್ಮದೇವನೇ ಯಜ್ಞದೀಕ್ಷೆಯನ್ನು ವಹಿಸಿದ್ದನು. ಅಪೇಕ್ಷಿತವಾದ ಸಮಸ್ತಸಾಮಗ್ರಿಗಳಿಂದ ತುಂಬಿದ ಆ ಯಾಗದಲ್ಲಿ ಧರ್ಮಾರ್ಥಕುಶಲರಾದ ಬ್ರಾಹ್ಮಣರಿಂದ ಯಾವಯಾವ ಕೋರಿಕೆಯು ಮನಸ್ಸಿನಲ್ಲಿ ನೆನೆಸಲ್ಪಟ್ಟರ, ಆಗಾಗಲೇ ಆಯಾ ಕೋರಿಕೆಗಳು ತಾವಾಗಿ ಬ್ರಾಹ್ಮಣರಿಗೆ ಕೈಸೇರುತ್ತಿದ್ದುವು ಆ ಮಹಾಯಾಗಕಾಲದಲ್ಲಿ ಗಂಧರ್ವರ ಗಾನವೊಂದು ಕಡೆ! ಅಪ್ಸರಸ್ಸುಗಳ ನರ್ತನವೊಂದು ಕಡೆ! ಎಲ್ಲೆಲ್ಲಿಯೂ ಚತುರ್ವಿಧವಾದ್ಯಘೋಷಗಳು ಕೇಳಿಸುತ್ತಿರುವುವು ಆ ಯಾಗದಲ್ಲಿ ತೃಪ್ತಿಹೊಂದದವರಿಲ್ಲ. ದೇವತೆಗಳೆಲ್ಲರೂ ಸಂತುಷ್ಟರಾದರು ಯಾಗಸಮೃದ್ಧಿಯು ಆಶ್ಚರ್ಯಕರವಾಗಿದ್ದಿತು. ಆ ಯಾಗದಿಂದ ಮನುಷ್ಯಜಾತಿಗೆ ಸಂತೋಷವುಂಟಾಗುವುದೇನಾಶ್ಚರ್ಯವು? ಪುಷ್ಕರಕ್ಷೇತ್ರದಲ್ಲ ಬ್ರಹ್ಮನು ದೀಕ್ಷೆ ವಹಿಸಿ ಯಾಗವು ನಡೆಯುತಿದ್ದಾಗ ಅಲ್ಲಿದ್ದ ಋಷಿಗಳು ಸುತ್ತಲೂ ನೋಡಿ "ಆಹಾ! ಇದೇನು? ಈ ಯಾಗವು ಇಷ್ಟು ಪ್ರಬಲವಾಗಿ ನಡೆದರೂ, ಇದರಿಂದ ಫಲವೇನೂ ಕಾಣುವುದಿಲ್ಲ ನದಿಗಳಲ್ಲ ಶ್ರೇಷ್ಠವಾದ ಸರಸ್ವತೀನದಿಯು ಇಲ್ಲ ಕಾಣಿಸುವುದಿಲ್ಲವಲ್ಲ?" ಎಂದರು ಇದನ್ನು ಕೇಳಿದೊಡನೆ ಪೂಜ್ಯನಾದ ಬ್ರಹ್ಮದೇವನು ಸರಸ್ವತಿಯನ್ನು ಸ್ಮರಿಸಿಕೊಂಡನು ಒಡನೆಯೇ ಸರಸ್ವತಿಯು ಎಲ್ಲರ ಕಣ್ಣಿಗೂ ಕಾಣುವಂತೆ ಆ ಪುಷ್ಕರಕ್ಷೇತ್ರದಲ್ಲಿ ಪ್ರವಹಿಸಿದಳು ಅದೇ ಸುಭದ್ರೆಯೆಂದು ಕರೆಯಲ್ಪಡುವುದು ಬ್ರಹ್ಮದೇವನಿಂದ ಪೂಜಿತವಾದ ಆ ಶಾಖೆಯನ್ನು ಕಂಡು ಋಷಿಗಳೆಲ್ಲರೂ ಸಂತುಷ್ಟರಾಗಿ, ಆ ಯಾಗವು ಆಗಲೇ ಪ್ರಶಸ್ತವಾಯಿತೆಂದು ಕೊಂಡಾಡಿದರು ರಾಜೇಂದ್ರಾ! ಹೀಗೆ ಸರಸ್ವತೀನದಿಯು ಬ್ರಹ್ಮದೇವನ ಕೋರಿಕೆಯಿಂದ ಮಹರ್ಷಿಗಳ ಸಂತೋಷಕ್ಕಾಗಿ ಪುಷ್ಕರಕ್ಷೇತ್ರದಲ್ಲಿ ಪ್ರವಹಿಸಿತು

ರಾಜೇಂದ್ರಾ! ನೈಮಿಷಕ್ಷೇತ್ರದಲ್ಲ ಒಮ್ಮೆ ಋಷಿಗಳೆಲ್ಲರೂ ನೆರದಿದ್ದರು ಅಲ್ಲಿ ವೇದದ ವಿಷಯವಾಗಿ ವಿಚಿತ್ರವಾದ ಕಥೆಗಳು ನಡೆಯುತ್ತಿದ್ದುವು ಅನೇಕ ವೇದಗಳನ್ನು ಬಲ್ಲ ಆ ಮಹರ್ಷಿಗಳು ತಮ್ಮಲ್ಲಿಗೆ ಸರಸ್ವತೀನದಿಯು ಬರಬೇಕೆಂಬ ಕೋರಿಕೆಯಿಂದ ಅದನ್ನು ಮನಸ್ಸಿನಲ್ಲಿ ಸ್ಮರಿಸಿದರು ಸತ್ರಯಾಗದಲ್ಲಿದ್ದ ಆ ಮಹರ್ಷಿಗಳ ಸಹಾಯಕ್ಕಾಗಿ ಸರಸ್ವತೀ

ನದಿಯು ಅಲ್ಲಿ ಪ್ರವಹಿಸಿ, ಆ ನೈಮಿಷಕ್ಷೇತ್ರದಲ್ಲಿ **ಕಾಂಚನಾಕ್ಷಿ**ಯೆಂಬ ಹೆಸರಿನಿಂದ ಪ್ರಖ್ಯಾತಿಹೊಂದಿದೆ

ಮತ್ತೊಮ್ಮೆ ಗಯಾಕ್ಷೇತ್ರದಲ್ಲಿ ಗಯನು ಯಜ್ಞಮಾಡುತ್ತಿದ್ದಾಗ ಕಠಿನವ್ರತವುಳ್ಳ ಅನೇಕ ಋಷಿಗಳು ಅಲ್ಲಿ ಸೇರಿದ್ದರು ಆಗ ಅಲ್ಲಿಗೆ ಆ ಸರಸ್ವತೀನದಿಯನ್ನು ಕರೆಯಲು ಆ ಗಯಾಕ್ಷೇತ್ರದಲ್ಲಿ **ವಿಶಾಲೆ**ಯೆಂಬ ಹೆಸರಿನಿಂದ ಸರಸ್ವತೀನದಿಯು ಪ್ರವಹಿಸುತ್ತಿದೆ

ಓ ಜನಮೇಜಯಮಹಾರಾಜೇಂದ್ರಾ! ಕೇಳು! ಮತ್ತೊಮ್ಮೆ ಔದ್ದಾಲಕಿಯೆಂಬ ಮಹರ್ಷಿಯು ಒಂದು ದೊಡ್ಡ ಯಾಗವನ್ನು ಮಾಡುತ್ತಿದ್ದಾಗ, ಅವನ ಕೋರಿಕೆಯಂತೆ ಸರಸ್ವತೀನದಿಯು ಹಿಮಾಲಯಪರ್ವತದ ತಪ್ಪಲಿನಿಂದ ಮಹಾವೇಗದಿಂದ ಹೊರಟು, ಆ ಯಾಗಶಾಲೆಯಲ್ಲಿ ಕಾಣಿಸಿತು ಅಲ್ಲಿ ಉತ್ತರಕೋಸಲವೆಂಬ ಪವಿತ್ರವಾದ ಸ್ಥಳದಲ್ಲಿ ಆ ಯಾಗವು ನಡೆಯುತ್ತಿದ್ದಿತು ಅನೇಕ ಋಷಿಸಮೂಹವೂ ಅಲ್ಲಿ ಕೂಡಿದ್ದಿತು ನಾರು ಮಡಿ, ಕೃಷ್ಣಾಜಿನಗಳನ್ನು ಧರಿಸಿದ ಆ ಎಲ್ಲಾ ಮಹರ್ಷಿಗಳ ಕೋರಿಕೆಯಂತೆ ಅಲ್ಲಿ ಪ್ರವಹಿಸಿದ ಸರಸ್ವತೀನದಿಗೆ **ಮನೋರಮೆ**ಯೆಂಬ ಹಸರಾಯಿತು ರಾಜೇಂದ್ರಾ! ಅಲ್ಲಿದ್ದ ಋಷಿಗಳು ಮನಸ್ಸಿನಿಂದ ಆಗರಿಸಿದುದರಿಂದಲೇ ಅದಕ್ಕೆ ಮನೋರಮೆಯೆಂದು ಹೆಸರಾಯಿತು

ಮತ್ತೊಮ್ಮೆ ಪವಿತ್ರವಾದ ಋಷಭದ್ವೀಪದಲ್ಲಿ ಅನೇಕ ರಾಜಋಷಿಗಳು ಸೇರಿದ್ದಾಗ, ಅಲ್ಲಿ **ಸುರೇಣು**ವೆಂಬ ಹೆಸರಿನಿಂದ ಅದೇ ಸರಸ್ವತೀನದಿಯು ಪ್ರವಹಿಸಿತು

ಮತ್ತೊಮ್ಮೆ ಮಹಾತ್ಮನಾದ ಕುರುರಾಜನು ಯಾಗಮಾಡುತ್ತಿದ್ದ ಕಾಲದಲ್ಲಿ ವಸಿಷ್ಠರಿಂದ ಆಹ್ವಾನಮಾಡಲ್ಪಟ್ಟು ಆ ಸರಸ್ವತಿಯು ಅಲ್ಲಿ **ಓಘವತಿ**ಯೆಂಬ ಹೆಸರಿನಿಂದ ಪ್ರವಹಿಸಿತು

ಮತ್ತೊಮ್ಮೆ ಗಂಗಾದ್ವಾರದಲ್ಲಿ ದಕ್ಷನು ಯಾಗಮಾಡುತಿದ್ದಾಗ ಅಲ್ಲಿ ಅವನಿಂದ ಆಹ್ವಾನಮಾಡಲ್ಪಟ್ಟ ಸರಸ್ವತೀನದಿಯು **ಸುವೇಣಿ**ಯೆಂಬ ಹೆಸರಿನಿಂದ ಪ್ರಸಿದ್ಧಿಗೊಂಡಿದೆ

ಬ್ರಹ್ಮದೇವನು ಮತ್ತೊಮ್ಮೆ ಹಿಮಾಲಯಪರ್ವತದಲ್ಲಿ ಯಾಗವಾ ಡುವಾಗ, ಸರಸ್ವತೀನದಿಯನ್ನು ಧ್ಯಾನಿಸಲು, **ವಿಮಲೋದೆ**ಯೆಂಬ ಹೆಸ ರಿನಿಂದ ಪ್ರವಹಿಸುತ್ತಿದೆ

ಹೀಗೆ ಬೇರಬೇರಯಾಗಿ ಬೇರಬೇರ ಮಹಾತ್ಮರಿಂದ ಕರೆಯಲ್ಪಟ್ಟ ಸರಸ್ವತೀನದಿಯ ಪ್ರವಾಹಗಳು, ತಿರುಗಿ ಒಂದಾಗಿ ಸೇರಿದ ಪ್ರದೇಶವೇ **ಸಪ್ತಸಾರಸ್ವತ**ವೆಂಬ ಹೆಸರಿನಿಂದ ಪ್ರಸಿದ್ಧಿಗೊಂಡ ಪುಣ್ಯತೀರ್ಥವೆನಿಸಿದ

ರಾಜೇಂದ್ರಾ ! ಇನ್ನೂ ಕೌಮಾರಬ್ರಹ್ಮಚಾರಿಯಾಗಿ ನದಿಯಲ್ಲಿಯೇ ಮುಳುಗಿರುವ ಮಂಕಣಮಹರ್ಷಿಯ ಘನವಾದ ಪುಣ್ಯಚರಿತ್ರೆಯನ್ನು ಹೇಳುವೆನು ಕೇಳು ಈ ಮಂಕಣಮಹರ್ಷಿಯು ಒಮ್ಮೆ ಸ್ನಾನಕ್ಕಾಗಿ ಸರಸ್ವತೀನದಿಗೆ ಹೋದಾಗ, ಅಲ್ಲಿ ಅತ್ಯಂತ ಸುಂದರಿಯೂ, ಅಂದವಾದ ಕಡೆಗಣ್ಣುಳ್ಳವಳೂ ಆದ ಉತ್ತಮಸ್ತ್ರೀಯೊಬ್ಬಳು ಮೈಯನ್ನು ಬಟ್ಟೆಯಿಲ್ಲದೆ ಸ್ನಾನಮಾಡುತ್ತಿದ್ದಳು ಅದನ್ನು ಕಂಡೊಡನೆ ಮಂಕಣಮುನಿಗೆ ಆ ನೀರಿ ನಲ್ಲಿಯೇ ವೀರ್ಯಸ್ಖಲನವಾಯಿತು ಆಗ ಮಹಾತಪಸ್ವಿಯಾದ ಆ ಮಂಕಣನು ಧರ್ಮಜ್ಞನಾದುದರಿಂದ, ತನ್ನ ವೀರ್ಯವನ್ನು ಒಂದು ಕಲಶ ದಲ್ಲಿ ರಕ್ಷಿಸಿಟ್ಟನು ಆ ಕಲಶದಲ್ಲಿದ್ದ ವೀರ್ಯವು ಏಳು ವಿಭಾಗಗಳಾ ದುವು ಆ ಏಳು ಶಕಲಗಳೂ ಮರುದ್ಗಣಗಳಲ್ಲಿ ಸೇರಿದ ಏಳುಮಂದಿ ಮಹರ್ಷಿಗಳಾದರು ಅವರಿಗೆ ಕ್ರಮವಾಗಿ ವಾಯುವೇಗ, ವಾಯುಬಲ, ವಾಯುಹಾ, ವಾಯುಮಂಡಲ, ವಾಯುಜ್ವಾಲ, ವಾಯುರೇತಸ್ಸು, ವಾ ಯುಚಕ್ರರೆಂದು ಹೆಸರು ಈ ಏಳುಮಂದಿ ಮಹರ್ಷಿಗಳೇ ಮರುದ್ಗಣ ಗಳ ಉತ್ಪತ್ತಿಗೆ ಕಾರಣಗಳಾಗಿ ಜನಿಸಿದರು ಈ ಮಹರ್ಷಿಯ ಚರಿತ್ರ ದಲ್ಲಿ ಇನ್ನೂ ಅಧಿಕಾಶ್ಚರ್ಯಕರವಾದ ಮತ್ತೊಂದು ವಿಷಯವನ್ನು ಹೇಳು ವೆನು ಕೇಳು ಪೂರ್ವದಲ್ಲಿ ತಪಸ್ಸಿದ್ಧನಾದ ಆ ಮಂಕಣನಿಗೆ ದರ್ಭೆಯ ಮುಳ್ಳು ಚುಚ್ಚಿ ಕೈಯಲ್ಲಿ ಒಂದು ಗಾಯವಾಯಿತಂತೆ ! ಆ ಗಾಯದಿಂದ ರಕ್ತಕ್ಕೆ ಬದಲಾಗಿ ಉತ್ತಮವಾದ ಶಾಕರಸವೆಂಬ ಓಷಧಿಯ ಸಾರ ವೊಂದು ಹೊರಟಿತೆಂದು ಕೇಳುವೆವು ಹೀಗೆ ತನ್ನ ಮೈಯಿಂದ ರಕ್ತಕ್ಕೆ ಬದಲಾಗಿ ಹೊರಟ ಶಾಕರಸವನ್ನು ನೋಡಿ, ಆ ಮಂಕಣಮುನಿಯು

ಸಂತೋಷದಿಂದ ನರ್ತನಮಾಡಲಾರಂಭಿಸಿದನು. ಆಗ ಅವನ ತೇಜಸ್ಸಿನಿಂದ ಮರುಳಾಗಿ ಚರಾಚರಾತ್ಮಕವಾದ ಸಮಸ್ತಪ್ರಪಂಚವೂ ಕುಣಿಯಲಾರಂಭಿಸಿತು ಜಗತ್ತೆಲ್ಲಾ ಆಡುತ್ತಿರುವುದನ್ನು ನೋಡಿ ಬ್ರಹ್ಮಾದಿದೇವತೆಗಳೂ, ತಪಸ್ವಿಗಳಾದ ಮಹರ್ಷಿಗಳೂ ಭಯಪಟ್ಟು, ಮಹಾದೇವನಲ್ಲಿಗೆ ಹೋಗಿ "ಮಹೇಶ್ವರಾ! ಆ ಋಷಿಯು ನರ್ತನಮಾಡದಂತೆ ನೀನು ನಿವಾರಿಸಬೇಕೆಂದು ಪ್ರಾರ್ಥಿಸಿದರು ಒಡನೆಯೇ ಮಹಾದೇವನು ದೇವತೆಗಳ ಹಿತಕ್ಕಾಗಿ ಆ ಮಂಕಣಮುನಿಯಿದ್ದಲ್ಲಿಗೆ ಬಂದು "ಓ ಬ್ರಾಹ್ಮಣಾ! ಧರ್ಮಜ್ಞಾ! ಹೀಗೇಕೆ ನೀನು ಕುಣಿದಾಡುವೆ? ತಪೋನಿಷ್ಠನೂ, ಧರ್ಮನಿರತನೂ ಆದ ನಿನಗೆ ಇಂತಹ ಮಕ್ಕಳಾಟಿಕೆಯಲ್ಲಿ ಬುದ್ಧಿಯು ಹುಟ್ಟಿದ ಕಾರಣವೇನು?" ಎಂದು ಪ್ರಶ್ನೆಮಾಡಿದನು ಅದಕ್ಕಾ ಋಷಿಯು "ಓ ವಿಭೂ! ಇದೋ! ನನ್ನ ಕೈಯಿಂದ ಸುರಿಯುತ್ತಿರುವ ಈ ಓಷಧಿಯನ್ನು ನೋಡಲಿಲ್ಲವೆ? ಇದನ್ನು ನೋಡಿ ನಾನು ವಿಸ್ಮಿತನಾಗಿ ಮಹತ್ತಾದ ಸಂತೋಷದಿಂದ ಕುಣಿದಾಡಿದೆನು" ಎಂದನು ಅದಕ್ಕಾ ಮಹಾದೇವನು ದೊಡ್ಡದಾಗಿ ನಕ್ಕು, "ಓ ಬ್ರಾಹ್ಮಣಾ! ನನಗೇನೂ ಇದರಲ್ಲಿ ಆಶ್ಚರ್ಯವು ಕಾಣಲಿಲ್ಲ ನನ್ನನ್ನು ನೋಡು" ಎಂದು ಹೇಳಿ, ತನ್ನ ಬೆರಳಿನ ತುದಿಯಿಂದ ತನ್ನ ಹೆಬ್ಬೆರಳನ್ನು ಬಲವಾಗಿ ಹೊಡೆದನು ಒಡನೆಯೇ ಅದರ ಗಾಯದಿಂದ ಮಂಜಿನಂತೆ ಬಿಳುಪಾದ ಭಸ್ಮವು ಸುರಿಯಲಾರಂಭಿಸಿತು ಇದನ್ನು ನೋಡಿ ಆ ಮಹರ್ಷಿಗೆ ಆಶ್ಚರ್ಯವಾಯಿತು. ಆಗ ಅವನು ಲಜ್ಜಿತನಾಗಿ, ರುದ್ರನ ಕಾಲಿಗೆ ಬಿದ್ದು, ಅವನಿಗಿಂತಲೂ ಮೇಲಾದ ದೈವವೇ ಇಲ್ಲವೆಂದೆಣಿಸಿ ಹೀಗೆಂದು ಸ್ತುತಿಸುವನು "ದೇವಾ! ನಿನಗಿಂತಲೂ ಮೇಲೆನಿಸಿದ ದೈವವೇ ಇಲ್ಲವೆಂದು ನನಗೆ ತೋರುವುದು ಶೂಲಧಾರಿಯಾದ ನೀನೇ ದೇವಾಸುರಪ್ರಪಂಚಕ್ಕೆಲ್ಲ ಗತಿಯಾಗಿರುವೆ ಈ ಜಗತ್ತೆಲ್ಲ ನಿನ್ನಿಂದಲೇ ಸೃಷ್ಟಿಸಲ್ಪಟ್ಟದೆಂದು ವಿದ್ವಾಂಸರು ಹೇಳುವರು ನಿನ್ನಿಂದ ಸೃಷ್ಟಿಸಲ್ಪಟ್ಟ ಜಗತ್ತೆಲ್ಲವೂ ಪ್ರಳಯದಲ್ಲಿ ನಿನ್ನಲ್ಲಿಯೇ ಐಕ್ಯಹೊಂದುವುವು ನಿನ್ನ ತತ್ವವನ್ನು ದೇವತೆಗಳೂ ತಿಳಿಯಲಾರರು ಇನ್ನು ನನ್ನಂತವನ ಪಾಡೇನು? ಲೋಕದಲ್ಲಿರುವ ಎಲ್ಲಾ ಪದಾರ್ಥಗಳೂ ನಿನ್ನಲ್ಲಿಯೇ ಕಾಣುವುವು ವರಪ್ರದನಾದ ನಿನ್ನನ್ನು ಬ್ರಹ್ಮಾದಿದೇವತೆಗಳೆಲ್ಲರೂ

ಉಪಾಸಿಸುವರು. ದೇವತೆಗಳಿಗೆ ನೀನೇ ಸಮಸ್ತವೂ ಆಗಿರುವೆ. ಅವರಿಗಾಗಿ ಎಲ್ಲವನ್ನೂ ಮಾಡುವವನೂ, ಮಾಡಿಸತಕ್ಕವನೂ ನೀನೇ! ನಿನ್ನ ಅನುಗ್ರಹದಿಂದಲೇ ದೇವತೆಗಳೆಲ್ಲರೂ ಯಾವ ಭಯವೂ ಇಲ್ಲದೆ ಸಂತೋಷದಿಂದಿರುವರು. ನೀನೇ ಪ್ರಭು! ಪರಮೈಶ್ವರ್ಯಕ್ಕಿಂತಲೂ ಮೇಲಾದ ಭಾಗ್ಯವೂ ನೀನೇ! ಓ ಶಂಕರಾ! ಲೋಕಗಳನ್ನೆಲ್ಲ ಅಡಗಿಸಿಕೊಂಡ ಬ್ರಹ್ಮ ವಿಷ್ಣುಗಳಿಬ್ಬರೂ ನಿನ್ನಲ್ಲಿ ಅಡಗಿರುವರು ಚರಾಚರಾತ್ಮಕಗಳಾದ ಸಮಸ್ತಭೂತಗಳಿಂದ ತುಂಬಿದ ಜಗತ್ತಿಗೆಲ್ಲ ನೀನೇ ಮೂಲವು ಶ್ರೇಯಸ್ಸನ್ನು ಕೋರುವವರಿಗೆ ಉತ್ತಮ ಭೋಗಸ್ಥಾನವಾದ ಸ್ವರ್ಗವನ್ನು ಕೊಡುವವನೂ ನೀನೇ! ನೀನು ಪ್ರಸನ್ನನಾಗಿ ಭಕ್ತರಿಗೆ ಬೇಕಾದ ಕೋರಿಕೆಗಳನ್ನೆಲ್ಲ ಈಡೇರಿಸುವೆ. ಮೋಕ್ಷಾರ್ಥಿಗಳಾಗಿ ಕರ್ಮಗಳನ್ನು ನಡೆಸತಕ್ಕವರಿಗೆ, ಆಯಾ ಕರ್ಮಗಳನ್ನು ನೀನು ಧ್ಯಾನದಿಂದಲೇ ತಿಳಿದು, ಅವರಿಗೆ ಪುನರ್ಜನ್ಮವಿಲ್ಲದ ಮುಕ್ತಿಯನ್ನೂ ಕೊಡುವೆ ಓ ಮಹೇಶ್ವರಾ! ನೀನು ಕೊಟ್ಟ ಉಪಕರಣಗಳಿಂದಲೇ ನಾವು ಕರ್ಮಗಳನ್ನು ನಡೆಸತಕ್ಕವರು ನಿನ್ನ ಅನುಗ್ರಹವು ಎಂದಿಗೂ ವಿಫಲವಾಗುವುದಿಲ್ಲ ನಾನು ಯಾವಾಗಲೂ ಸರ್ವವ್ಯಾಪಿಯಾದ ಆ ಶಂಭುವನ್ನೇ ಮನೋವಾಕ್ಕಾಯಗಳಿಂದ ಶರಣುಹೊಂದಿ, ಅವನನ್ನೇ ಭಜಿಸುವೆನು" ಎಂದನು

ಆ ಮಹರ್ಷಿಯು ಹೀಗೆ ಮಹಾದೇವನನ್ನು ಸ್ತುತಿಸಿ, ಸಾಷ್ಟಾಂಗವಾಗಿ ನಮಸ್ಕರಿಸುತ್ತ "ದೇವಾ! ಈಗ ನಾನೇನೋ ಚಪಲಬುದ್ಧಿಯಿಂದ ಹೆಮ್ಮೆಗೊಂಡು ಈ ಅಲ್ಪಸ್ವಭಾವವನ್ನೆಲ್ಲ ತೋರಿಸಿದೆನು. ಅದಕ್ಕಾಗಿ ನಿನ್ನ ಕ್ಷಮೆಯನ್ನು ಬೇಡುವೆನು ನನ್ನ ತಪಸ್ಸು ಇದರಿಂದ ಕ್ಷೀಣವಾಗದಿರಲೆಂದು ನಿನ್ನನ್ನು ಪ್ರಾರ್ಥಿಸಿಕೊಳ್ಳುವೆನು" ಎಂದು ಪ್ರಾರ್ಥಿಸಿದನು. ಆಗ ರುದ್ರನು ಅವನ ಭಕ್ತಿಗೆ ಮೆಚ್ಚಿ "ಬ್ರಾಹ್ಮಣಾ! ನಿನ್ನ ತಪಸ್ಸು ನನ್ನ ಅನುಗ್ರಹದಿಂದ ಇದಕ್ಕಿಂತಲೂ ಸಹಸ್ರಗುಣವಾಗಿ ವೃದ್ಧಿಹೊಂದಲಿ. ಇನ್ನುಮೇಲೆ ನಾನೂ ನಿನ್ನೊಡನೆ ಈ ಆಶ್ರಮದಲ್ಲಿಯೇ ವಾಸಿಸುತ್ತಿರುವೆನು. ಸಪ್ತಸಾರಸ್ವತವೆಂಬ ಈ ಪುಣ್ಯತೀರ್ಥದಲ್ಲಿ ಯಾವ ಮನುಷ್ಯನು ನನ್ನನ್ನು ಅರ್ಚಿಸುವನೋ ಅವನಿಗೆ ಯಾವ ಕೋರಿಕೆಯೂ ದುರ್ಲಭವಲ್ಲ. ಇದರಲ್ಲಿ

ಸಂದೇಹವಿಲ್ಲ'' ಎಂದನು. ಜನಮೇಜಯರಾಜಾ! ಇದೇ ಮಂಕಣಮ ಹರ್ಷಿಯ ಚರಿತ್ರವು ಈ ಮುನಿಯು ಸುಕನ್ಯೆಯಲ್ಲಿ ವಾಯುದೇವನಿಗೆ ಜನಿಸಿದವನು

ಇದು ಮೂವತ್ತೊಂಭತ್ತನೆಯ ಅಧ್ಯಾಯವು

ಬಲರಾಮನು ಕಪಾಲಮೋಚನವೆಂಬ ಔಶನಸತೀರ್ಥಕ್ಕೂ, ಅಲ್ಲಿಂದ ಉಶಂಗವತೀರ್ಥಕ್ಕೂ ಹೋದುದು. ಉಶಂಗು ಚರಿತ್ರೆ ಪೃಥೂದಕತೀರ್ಥಕ್ಕೆ ಬಂದು ಸ್ನಾನಮಾಡಿದುದು

ರಾಜೇಂದ್ರಾ! ಅಲ್ಲಿ ಬಲರಾಮನು ಮಂಕಣಮುನಿಯಲ್ಲಿ ಬಹಳ ಭಕ್ತಿಯನ್ನು ತೋರಿಸುತ್ತ, ಅಲ್ಲಿದ್ದ ಆಶ್ರಮವಾಸಿಗಳನ್ನೆಲ್ಲ ಪೂಜಿಸಿ, ಅಲ್ಲಿಯೇ ಆ ರಾತ್ರಿ ತಂಗಿದ್ದು ಬ್ರಾಹ್ಮಣರಿಗೆ ವಿಶೇಷ ದಾನಗಳನ್ನು ಮಾಡಿದನು. ಅಲ್ಲಿನ ಮಹರ್ಷಿಗಳಿಂದ ತಾನೂ ಸತ್ಕೃತನಾಗಿ, ಮರುದಿನದ ಬೆಳಗ್ಗೆ ಅಲ್ಲಿ ಸ್ನಾನಮಾಡಿ, ಅಲ್ಲಿದ್ದ ಎಲ್ಲಾ ಮಹರ್ಷಿಗಳ ಅನುಜ್ಞೆಯನ್ನು ಪಡೆದು ಅಲ್ಲಿಂದ ಕಪಾಲಮೋಚನವೆಂಬ ಔಶನಸತೀರ್ಥಕ್ಕೆ ಬಂದನು. ಇಲ್ಲಿ ಹಿಂದೆ ರಘುರಾಮನಿಂದ ಕೆಡಹಲ್ಪಟ್ಟ ಒಬ್ಬ ರಾಕ್ಷಸನ ದೊಡ್ಡ ತಲೆಯು ಮಹೋದರನೆಂಬ ಮಹರ್ಷಿಯೊಬ್ಬನ ಮೊಳಕಾಲಿನವರೆಗೆ ಅಂಟಿಕೊಂಡು, ಅದನ್ನು ಭಕ್ಷಿಸುತ್ತ ಬಂದಿತು. ಆ ಮಹರ್ಷಿಗೆ ಈ ಪ್ರದೇಶದಲ್ಲಿ ಆ ಅಪಾಯದಿಂದ ಬಿಡುಗಡೆಯಾಯಿತು ಮತ್ತು ಪೂರ್ವದಲ್ಲಿ ಶುಕ್ರಾಚಾರ್ಯನು ಇಲ್ಲಿ ದೊಡ್ಡ ತಪಸ್ಸನ್ನು ಮಾಡಿದನು ಆಗ ಆ ಮಹಾತ್ಮನಿಗೆ ಇಲ್ಲಿಯೇ ಸಮಸ್ತ ನೀತಿಗಳೂ ಬುದ್ಧಿಗೆ ಭಾಸವಾದುವು. ಇಲ್ಲಿಯೇ ಶುಕ್ರನು ದೈತ್ಯದಾನವರ ಯುದ್ಧವನ್ನು ಕುರಿತು ಮಂತ್ರಾಲೋಚನೆ ಮಾಡುತ್ತಿದ್ದನು. ತೀರ್ಥಗಳಲ್ಲಿ ಮೇಲೆನಿಸಿದ ಆ ಉತ್ತಮಜಲದಲ್ಲಿ ಬಲರಾಮನು ಸ್ನಾನಮಾಡಿ, ಅನೇಕ ಧನರಾಶಿಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು'' ಎಂದನು.

ಆಗ ಜನಮೇಜಯನು ''ಮುನೀಂದ್ರಾ! ಆ ತೀರ್ಥಕ್ಕೆ ಕಪಾಲಮೋಚನವೆಂಬ ಹೆಸರೇಕೆ ಬಂದಿತು? ಇಲ್ಲಿ ಆ ಮಹರ್ಷಿಗೆ ಬಿಡುಗಡೆ

ಯಾದುದು ಹೇಗೆ? ರಾಕ್ಷಸನ ತಲೆಯು ಇಲ್ಲಿ ಯಾವ ಕಾರಣದಿಂದ ಸಿಕ್ಕಿಕೊಂಡಿದ್ದಿತು ?'' ಎಂದು ಕೇಳಲು, ಅದಕ್ಕಾ ವೈಶಂಪಾಯನನು 'ರಾಜಾ! ಕೇಳು! ಹಿಂದೆ ರಾಮನು ದಂಡಕಾರಣ್ಯದಲ್ಲಿದ್ದಾಗ, ಅಲ್ಲಿದ್ದ ಅನೇಕ ರಾಕ್ಷಸರನ್ನು ಕೊಲ್ಲುತ್ತಬಂದನಷ್ಟೆ? ಜನಸ್ಥಾನದಲ್ಲಿದ್ದ ದುರಾತ್ಮನಾದ ಒಬ್ಬ ರಾಕ್ಷಸನ ತಲೆಯನ್ನು ರಾಮನು ತನ್ನ ತೀಕ್ಷ್ಣವಾದ ಕ್ಷುರಾಯುಧದಿಂದ ಕತ್ತರಿಸಿದಾಗ, ಆ ದೊಡ್ಡ ಶಿರಸ್ಸು ಒಂದು ಮಹಾವನಕ್ಕೆ ಹೋಗಿ ಬಿದ್ದಿತು ಅದು ಅಲ್ಲಿ ಆಕಸ್ಮಿಕವಾಗಿ ಸಂಚರಿಸುತ್ತಿದ್ದ ಮಹೋದರನೆಂಬ ಮುನಿಯ ಮೊಳಕಾಲಿಗೆ ತಾಗಿ, ಅದರೊಳಗಿನ ಮೂಳೆಯನ್ನು ಮುರಿದು ಅಲ್ಲಿಯೇ ಅಂಟಿಕೊಂಡುಬಿಟ್ಟಿತು ಆ ತಲೆಯು ಕಾಲಿಗೆ ತಗುಲಿಕೊಂಡಿದ್ದುದರಿಂದ ಪುಣ್ಯತೀರ್ಥಗಳನ್ನೂ, ಪುಣ್ಯಸ್ಥಳಗಳನ್ನೂ ಯಾತ್ರೆಮಾಡುತಿದ್ದ ಅವನಿಗೆ ಮುಂದೆ ನಡೆಯಲು ಸಾಧ್ಯವಿಲ್ಲದಂತಾಯಿತು. ಕಾಲಿನಲ್ಲಿ ನೋವೊಂದುಕಡೆ! ಆ ಮೃತಶರೀರಾವಯವದ ದುರ್ಗಂಧವೊಂದುಕಡೆ! ಇವೆರಡೂ ಅವನಿಗೆ ದುಸ್ಸಹವಾಯಿತು ಆ ತಲೆಯಿಂದ ದುರ್ಗಂಧದ ನೀರು ಪ್ರವಹಿಸುತ್ತಿರುವಹಾಗೆಯೇ ಅವನು ಬಹಳ ಶ್ರಮಪಟ್ಟು, ಅದರ ವಿಮೋಚನಕ್ಕಾಗಿ ಅನೇಕ ಪುಣ್ಯತೀರ್ಥಗಳನ್ನೂ, ಪುಣ್ಯನದಿಗಳನ್ನೂ, ಸಮುದ್ರಗಳನ್ನೂ ಸುತ್ತಿಬಂದುದಾಗಿ ಕೇಳುವೆವು ಕೊನೆಗೆ ಅವನು ಅಲ್ಲಲ್ಲಿ ತಾನು ಕಂಡ ಮಹರ್ಷಿಗಳಿಗೆ ತನ್ನ ಅವಸ್ಥೆಯನ್ನು ತಿಳಿಸಿ, ತಾನು ಅನೇಕತೀರ್ಥಗಳಲ್ಲಿ ಸ್ನಾನಮಾಡಿಬಂದರೂ ತನಗೆ ಅದರಿಂದ ವಿಮೋಚನವಿಲ್ಲವೆಂದು ಹೇಳಿಕೊಳ್ಳುತ್ತಿದ್ದನು ಆಗ ಕೆಲವು ಮಹರ್ಷಿಗಳು ಸರಸ್ವತೀನದಿಗೆ ಸಂಬಂಧಪಟ್ಟ ಔಶನಸತೀರ್ಥವು ಸಮಸ್ತ ಪಾಪಗಳನ್ನೂ ನೀಗಿಸಿ, ಸಮಸ್ತಸಿದ್ಧಿಗಳನ್ನೂ ಕೊಡುವುದೆಂದು ಹೇಳಿದರು. ಅದರಂತೆ ಆ ಬ್ರಾಹ್ಮಣನು ಆ ತೀರ್ಥಕ್ಕೆ ಬಂದು ಸ್ನಾನಮಾಡಿದೊಡನೆ, ಅವನ ಕಾಲಿನಲ್ಲಿ ಅಂಟಿದ್ದ ತಲೆಯು ನೀರಿನೊಳಗೆ ಎಲ್ಲಿಯೋ ಅದೃಶ್ಯವಾಯಿತು ಇದರಿಂದ ಆ ಮುನಿಯು ಬಿಡುಗಡೆಹೊಂದಿ ಸೌಖ್ಯವನ್ನು ಪಡೆದು, ಪರಿಶುದ್ಧನಾಗಿ ತಿರುಗಿ ತನ್ನಾಶ್ರಮಕ್ಕೆ ಬಂದು ಸೇರಿ, ಅಲ್ಲಿದ್ದ ಮಹರ್ಷಿಗಳಿಗೆಲ್ಲ ತನಗೆ ಆ ತೀರ್ಥಪ್ರಭಾವದಿಂದ ವಿಮೋಚನವಾದ ಸಂಗತಿಯನ್ನು ತಿಳಿಸಿದನು ಅಂದಿನಿಂದ ಮಹರ್ಷಿಗಳು ಅದಕ್ಕೆ ಕಪಾಲಮೋಚನವೆಂದು ಹೆಸರಿಟ್ಟರು.

ಆಮೇಲೆ ಆ ಮಹೋದರಮುನಿಯು ತಿರುಗಿ ಆ ತೀರ್ಥಕ್ಕೆ ಬಂದು, ಅಲ್ಲಿಯೇ ಸ್ನಾನಪಾನಾದಿಗಳನ್ನು ನಡೆಸುತ್ತ, ಅದರಿಂದ ಸದ್ಗತಿಯನ್ನು ಪಡೆದುದಾಗಿ ಕಥೆಯುಂಟು ಜನಮೇಜಯರಾಜಾ! ಬಲರಾಮನು ಅಲ್ಲಿ ಬ್ರಾಹ್ಮಣರಿಗೆ ಅನೇಕದಾನಗಳನ್ನು ಮಾಡಿ, ಅವರನ್ನೆಲ್ಲ ಪೂಜಿಸಿ ಅಲ್ಲಿಂದಹೊರಟು ಉಶಂಗುಮುನಿಯ ಆಶ್ರಮಕ್ಕೆ ಬಂದನು ರಾಜಾ! ಅದು ಆರ್ಷ್ಟಿಷೇಣನೆಂಬವನು ಕಠಿನತಪಸ್ಸನ್ನು ಮಾಡಿದ ಸ್ಥಳವು ಹಿಂದೆ ವಿಶ್ವಾಮಿತ್ರಮಹರ್ಷಿಯು ಬ್ರಾಹ್ಮಣ್ಯವನ್ನು ಪಡೆದುದೂ ಅಲ್ಲಿಯೇ! ಆ ಆಶ್ರಮಪ್ರದೇಶದಲ್ಲಿ ಎಲ್ಲಾ ಇಷ್ಟವಸ್ತುಗಳೂ ಸಮೃದ್ಧವಾಗಿರುವುವು ಅನೇಕ ಮಹರ್ಷಿಗಳೂ, ಬ್ರಾಹ್ಮಣರೂ ನಿತ್ಯವಾಸಮಾಡುತ್ತಿರುವರು ಬಲರಾಮನು ಅನೇಕ ಬ್ರಾಹ್ಮಣಸಮೂಹದಿಂದ ಪರಿವೃತನಾಗಿ, ಉಶಂಗುಮುನಿಯು ಶರೀರತ್ಯಾಗಮಾಡಿದ ಆ ಆಶ್ರಮಕ್ಕೆ ಬಂದುಸೇರಿದನು ಆ ಉಶಂಗುವೆಂಬ ಬ್ರಾಹ್ಮಣನು ಯಾವಾಗಲೂ ತಪೋನಿಷ್ಠನಾಗಿ ಬಹಳ ವೃದ್ಧನಾಗಿದ್ದನು ಅವನು ತನ್ನ ದೇಹತ್ಯಾಗಕ್ಕಾಗಿ ನಿಶ್ಚಯಿಸಿ, ಅದಕ್ಕಾಗಿ ನಾನಾವಿಧವಾದ ಆಲೋಚನೆಗಳನ್ನು ಮಾಡುತ್ತ, ಕೊನೆಗೆ ತನ್ನ ಮಕ್ಕಳನ್ನೆಲ್ಲ ಕರೆಸಿಕೊಂಡು "ನೀವು ನನ್ನನ್ನು ಈಗಲೇ ಪೃಥೂದಕವೆಂಬ ಕ್ಷೇತ್ರಕ್ಕೆ ಸಾಗಿಸಬೇಕು" ಎಂದನು ಉಶಂಗುವಿಗೆ ಆಯುಃಕಾಲವು ತೀರುತ್ತಬಂದುದನ್ನು ತಿಳಿದು, ಆ ಋಷಿಕುಮಾರರು ಅವನನ್ನು ಸರಸ್ವತೀ ತೀರಕ್ಕೆ ತಂದರು ಪವಿತ್ರವಾಗಿಯೂ, ನೂರಾರು ಪುಣ್ಯತೀರ್ಥಗಳಿಂದ ಕೂಡಿದುದಾಗಿಯೂ ಇರುವ ಸರಸ್ವತೀನದಿಗೆ ಬಂದಮೇಲೆ, ಉಶಂಗುವು ಅನೇಕಮಹರ್ಷಿಗಳಿಂದ ಸೇವಿತವಾದ ಆ ಪುಣ್ಯತೀರ್ಥದಲ್ಲಿ ಸ್ನಾನಮಾಡಿ, ಆ ತೀರ್ಥದ ಮಹಿಮೆಗಳನ್ನೆಲ್ಲ ಭಾವಿಸಿ, ಸಂತೋಷದಿಂದ ತನ್ನ ಸುತ್ತಲಿದ್ದ ಪುತ್ರರನ್ನು ನೋಡಿ ಹೀಗೆಂದು ಹೇಳುವನು "ಕುಮಾರರೆ! ಸರಸ್ವತೀನದಿಯ ಉತ್ತರತೀರದಲ್ಲಿರುವ ಈ ಪೃಥೂದಕವೆಂಬ ಪವಿತ್ರವಾದ ಸ್ಥಳದಲ್ಲಿ ಯಾವನು ಜಪನಿರತನಾಗಿದ್ದು ದೇಹತ್ಯಾಗವನ್ನು ಮಾಡುವನೋ, ಅವನಿಗೆ ತಿರುಗಿ ಜನನಮರಣದ ಭಯವಿಲ್ಲ ಇದು ನಿಜವು" ಎಂದನು ಹೀಗೆಂದು ಹೇಳಿ ಅವನು ಅಲ್ಲಿಯೇ ತನ್ನ ದೇಹವನ್ನು ಬಿಟ್ಟನು ರಾಜಾ! ಧರ್ಮಾತ್ಮನಾದ ಬಲರಾಮನೂ ಕೂಡ ಅದೇ ತೀರ್ಥ

ದಲ್ಲಿ ಸ್ನಾನಮಾಡಿ, ಬ್ರಾಹ್ಮಣರಿಗೆ ವಿಶೇಷ ದಕ್ಷಿಣೆಗಳನ್ನು ಕೊಟ್ಟನು. ಲೋಕಪಿತಾಮಹನಾದ ಬ್ರಹ್ಮನು ಯಾವ ಸ್ಥಳದಲ್ಲಿ ಲೋಕಗಳ ಸೃಷ್ಟಿ ಕಾರ್ಯವನ್ನು ನಡೆಸಿದನೋ, ವ್ರತನಿಷ್ಠನಾದ ಆರ್ಷ್ಟಿಷೇಣನೆಂಬ ಮಹ ರ್ಷಿಯು ಎಲ್ಲಿ ಮಹಾತಪಸ್ಸಿನಿಂದ ವೇದಗಳನ್ನೆಲ್ಲ ಗ್ರಹಿಸಿದನೋ ಮತ್ತು ಯಾವ ಸ್ಥಳದಲ್ಲಿ ಸಿಂಧುದ್ವೀಪನೆಂಬ ರಾಜರ್ಷಿಯೂ, ಮಹಾತಪಸ್ವಿ ಯಾದ ದೇವಾಪಿಯೂ, ಹಾಗೆಯೇ ಉಗ್ರತೇಜಸ್ಸುಳ್ಳ ಮಹಾತಪಸ್ವಿಯಾದ ವಿಶ್ವಾಮಿತ್ರನೂ ಬ್ರಾಹ್ಮಣ್ಯವನ್ನು ಸಂಪಾದಿಸಿದರೋ, ಆ ಸ್ಥಳಕ್ಕೆ ಬಲರಾ ಮನು ಬಂದನು

ಇದು ನಾಲ್ವತ್ತನೆಯ ಅಧ್ಯಾಯವು

(ಆರ್ಷ್ಟಿಷೇಣನು ಪೃಥೂದಕತೀರ್ಥದಲ್ಲಿ ಸಮಸ್ತ ವೇದಗಳನ್ನೂ ಪಡೆದುದು ವಿಶ್ವಾಮಿತ್ರಾದಿಗಳಿಗೆ ಬ್ರಾಹ್ಮಣ್ಯವುಂಟಾದ ಕಥೆ ಬಲಭದ್ರನು ಅಲ್ಲಿ ಸ್ನಾನಮಾಡಿ ಬಕಾಶ್ರಮಕ್ಕೆ ಹೋದುದು)

ಮುನೀಂದ್ರಾ! ಆರ್ಷ್ಟಿಷೇಣನು ಅಲ್ಲಿ ಮಹಾತಪಸ್ಸನ್ನು ಮಾಡಿದುದು ಹೇಗೆ? ಸಿಂಧುದ್ವೀಪನೂ, ದೇವಾಪಿಯೂ, ವಿಶ್ವಾಮಿತ್ರಮುನಿಯೂ ಅಲ್ಲಿ ಹೇಗೆ ಬ್ರಾಹ್ಮಣ್ಯವನ್ನು ಪಡೆದರು ? ಈ ಅಂಶಗಳನ್ನೆಲ್ಲ ನನಗೆ ತಿಳಿಸಬೇಕು ಅದನ್ನು ಕೇಳುವ ಆಸೆಯು ನನಗೆ ಬಹಳವಾಗಿದೆ" ಎನ ಲು, ವೈಶಂಪಾಯನನು "ರಾಜಾ! ಕೇಳು! ಹಿಂದೆ ಕೃತಯುಗದಲ್ಲಿ ಆರ್ಷ್ಟಿಷೇಣನೆಂಬ ಬ್ರಾಹ್ಮಣೋತ್ತಮನು ಸದಾ ಗುರುಕುಲವಾಸಮಾಡುತ್ತ, ಯಾವಾಗಲೂ ವೇದಾಧ್ಯಯನದಲ್ಲಿಯೇ ನಿರತನಾಗಿದ್ದನು ಅವನು ಗುರುಕುಲದಲ್ಲಿ ಎಷ್ಟು ದಿನಗಳು ಅಭ್ಯಾಸಮಾಡಿದರೂ, ಅವನಿಗೆ ವಿದ್ಯೆಯು ಪೂರ್ಣವಾಗಿ ಬರಲಿಲ್ಲ ವೇದಗಳೂ ಅವನಿಗೆ ಮನದೊಟ್ಟಾಗಲಿಲ್ಲ. ಇದಕ್ಕಾಗಿ ಅವನು ಬೇಸರಗೊಂಡು ಮಹಾವ್ಯಸನದಿಂದ ದೊಡ್ಡ ತಪಸ್ಸನ್ನಾರಂಭಿಸಿದನು ಆ ತಪೋಬಲದಿಂದ ಅವನಿಗೆ ವೇದಗಳೆಲ್ಲ ಸ್ವಾಧೀನವಾಗಿ ಒಳ್ಳೇ ಜ್ಞಾನಿಯೆನಿಸಿಕೊಂಡನು. ಅದರಿಂದ ಬೇರೆ ಎಲ್ಲಾ ಸಿದ್ಧಿಗ

ಳನ್ನೂ ಪಡೆದನು. ಆದರಮೇಲೆ ಆ ಮಹಾತಪಸ್ವಿಯು ಆ ತೀರ್ಥದ ವಿಷ ಯವಾಗಿ ಕೆಳಗಿನ ಮೂರು ವರಗಳನ್ನು ಕೊಟ್ಟನು. 'ಇಂದುಮೊದಲು ಈ ಮಹಾನದಿಯ ತೀರ್ಥದಲ್ಲಿ ಯಾವನು ಸ್ನಾನಮಾಡುವನೋ, ಅವನಿಗೆ ಅಶ್ವಮೇಧಯಾಗವನ್ನು ಮಾಡಿದ ಫಲವುಂಟಾಗಲಿ; ಇಂದುಮೊದಲು ಇಲ್ಲಿ ಯಾರಿಗೂ ಸರ್ಪಭಯವಿಲ್ಲದಿರಲಿ; ಇದುಮೊದಲು ಇಲ್ಲಿ ಅತ್ಯಲ್ಪ ಕಾಲ ತಪಸ್ಸನ್ನು ಮಾಡಿದರೂ ಸಂಪೂರ್ಣವಾದ ಫಲವುಂಟಾಗಲಿ" ಎಂದು ವರಗಳನ್ನು ಕೊಟ್ಟು, ತಾನು ಸ್ವರ್ಗಕ್ಕೆ ಹೊರಟುಹೋದನು ಹೀಗೆ ಆ ತೀರ್ಥದಲ್ಲಿ ಆರ್ಷ್ಟಿಷೇಣನಿಗೆ ವೇದಾಧ್ಯಯನದಲ್ಲಿ ಸಿದ್ಧಿಯುಂ ಟಾಯಿತು ಅದರಂತೆಯೇ ಸಿಂಧುದ್ವೀಪನೂ, ದೇವಾಪಿಯೂ ಅದೇ ತೀರ್ಥದಲ್ಲಿ ಬ್ರಾಹ್ಮಣ್ಯವನ್ನು ಪಡೆದರು ಕೌಶಿಕನೂ ಇಲ್ಲಿ ಜಿತೇಂದ್ರಿ ಯನಾಗಿ ದೊಡ್ಡ ತಪಸ್ಸನ್ನು ಹಿಡಿದು ಬ್ರಾಹ್ಮಣ್ಯವನ್ನು ಹೊಂದಿ ದನು ಹಿಂದೆ ಗಾಧಿಯೆಂಬ ಪ್ರಸಿದ್ಧ ಕ್ಷತ್ರಿಯನೊಬ್ಬನಿದ್ದನು ಅವನಿಗೆ ವಿಶ್ವಾಮಿತ್ರನೆಂಬ ಮಗನಾದನು ಕುಶಿಕಗೋತ್ರದಲ್ಲಿ ಹುಟ್ಟಿದ ಆ ಗಾಧಿ ಯು ದೊಡ್ಡ ಯೋಗಶೀಲನಾಗಿದ್ದನು ಅವನು ತನ್ನ ಮಗನಾದ ವಿಶ್ವಾ ಮಿತ್ರನಿಗೆ ರಾಜ್ಯವನ್ನೊಪ್ಪಿಸಿ, ತಾನು ದೇಹತ್ಯಾಗಮಾಡುವ ಪ್ರಯತ್ನದಲ್ಲಿ ರುವುದನ್ನು ತಿಳಿದು, ಅವನ ಪ್ರಜೆಗಳೆಲ್ಲರೂ ಅವನಲ್ಲಿಗೆ ಬಂದು "ಮಹಾ ರಾಜಾ! ನೀನು ನಮ್ಮನ್ನು ಕೈಬಿಟ್ಟು ಹೋಗಬಾರದು ನಮ್ಮನ್ನು ಮಹಾಭಯದಿಂದ ಕಾಪಾಡತಕ್ಕವನು ನೀನೇ" ಎಂದರು ಇದನ್ನು ಕೇಳಿ ಗಾಧಿಯು ಅವರನ್ನು ಕುರಿತು "ಎಲೈ! ನೀವು ಚಿಂತಿಸಬೇಡಿರಿ! ನನ್ನ ಮಗನಾದ ವಿಶ್ವಾಮಿತ್ರನು ಸಮಸ್ತ ಜಗತ್ತನ್ನೂ ರಕ್ಷಿಸಲು ಸಮ ರ್ಥನು ಅವನೇ ನಿಮ್ಮನ್ನು ಕಾಪಾಡುವನು" ಎಂದು ಹೇಳಿ ಗಾಧಿಯು ಮಗನಿಗೆ ಅಭಿಷೇಕಮಾಡಿ, ತನ್ನ ಸಂಕಲ್ಪದಂತೆ ದೇಹತ್ಯಾಗದಿಂದ ಸ್ವರ್ಗ ಸ್ಥನಾದನು ಆಮೇಲೆ ವಿಶ್ವಾಮಿತ್ರನೇ ರಾಜನಾದನು. ಅವನು ಬಹಳ ಪ್ರಯತ್ನಪರನಾದರೂ ತಂದೆಯಂತೆ ಭೂಮಿಯನ್ನು ರಕ್ಷಿಸಲು ಸಮರ್ಥ ನೆನಿಸಲಿಲ್ಲ ಇಷ್ಟರಲ್ಲಿ ತನ್ನ ದೇಶಕ್ಕೆ ರಾಕ್ಷಸರಿಂದ ಭಯವುಂಟಾಗುವು ದನ್ನು ಕೇಳಿ, ಅವನು ದೊಡ್ಡ ಚತುರಂಗಸೈನ್ಯವನ್ನು ಸೇರಿಸಿಕೊಂಡು ರಾಕ್ಷಸಜಯಕ್ಕಾಗಿ ಪಟ್ಟಣದಿಂದ ಹೊರಟನು ಬಹಳದೂರ ಪ್ರಯಾಣ

ಮಾಡಿ ವಸಿಷ್ಠಾಶ್ರಮಕ್ಕೆ ಬಂದುಸೇರಿದನು ಅಲ್ಲಿ ವಿಶ್ವಾಮಿತ್ರನ ಸೈನಿಕರು ಅನೀತಿಯಿಂದ ಅಲ್ಲಿನ ಆಶ್ರಮವಾಸಿಗಳಿಗೆ ಬಹಳ ಉಪದ್ರವವಾಗುವಂತೆ ಯಥೇಚ್ಛವಾಗಿ ಹಾವಳಿಮಾಡುತ್ತಿದ್ದರು. ಪೂಜ್ಯನಾದ ವಸಿಷ್ಠನಿಗೂ ಅವರ ಚೇಷ್ಟೆಗಳು ದುಸ್ಸಹವಾದುವು ಆಶ್ರಮದ ತೋಟಗಳನ್ನೆಲ್ಲ ಆ ಸೈನಿಕರು ಮುರಿದು ಕೆಡಹುತ್ತಿರುವುದನ್ನು ನೋಡಿ, ವಸಿಷ್ಠನಿಗೆ ಅತ್ಯಾಕ್ರೋಶವು ಹುಟ್ಟಿತು ಆಗ ಅವನು ತನ್ನಲ್ಲಿದ್ದ ಕಾಮಧೇನುವನ್ನು ನೋಡಿ, ಆ ಸೈನಿಕರನ್ನು ನಿಗ್ರಹಿಸುವುದಕ್ಕಾಗಿ ಭಯಂಕರರೂಪವುಳ್ಳ ಅನೇಕ ಶಬರರನ್ನು ಸೃಷ್ಟಿಸುವಂತೆ ನಿಯಮಿಸಿದನು ಆದರಂತೆಯೇ ಕಾಮಧೇನುವು ಭೀಕರರೂಪವುಳ್ಳ ಶಬರಸೈನ್ಯಗಳನ್ನುಂಟುಮಾಡಿತು ಈ ಶಬರಸೈನ್ಯವು ತನ್ನ ಸೈನಿಕರನ್ನೆಲ್ಲ ಬಡಿದೋಡಿಸುತ್ತಿರುವುದನ್ನು ನೋಡಿ ವಿಶ್ವಾಮಿತ್ರನು, ತಪಸ್ಸೇ ಕ್ಷತ್ರಿಯಬಲಕ್ಕಿಂತಲೂ ಮೇಲೆಂದು ತಿಳಿದು, ರಾಜ್ಯವನ್ನು ತೊರೆದು ತಪಸ್ಸಿನಲ್ಲಿಯೇ ಮನಸ್ಸಿಟ್ಟನು ಅವನು ಸರಸ್ವತೀನದಿಗೆ ಸಂಬಂಧಪಟ್ಟ ಆ ತೀರ್ಥದಲ್ಲಿಯೇ ಉಪವಾಸಾದಿ ನಿಯಮಗಳಿಂದ ದೇಹವನ್ನು ದಂಡಿಸುತ್ತ, ದೊಡ್ಡ ತಪಸ್ಸನ್ನು ಹಿಡಿದು ನಿಂತನು. ಗಾಳಿ, ನೀರು, ಎಲೆ ಇವುಗಳನ್ನೇ ಭಕ್ಷಿಸುವನು ನೆಲದಮೇಲೆಯೇ ಮಲಗುವನು ಹೀಗೆಯೇ ಇನ್ನೂ ಬೇರಬೇರ ವ್ರತಗಳನ್ನು ನಡೆಸುತಿದ್ದನು. ದೇವತೆಗಳು ಆಗಾಗ ಅವನ ತಪಸ್ಸಿಗೆ ನಾನಾವಿಧವಾಗಿ ವಿಘ್ನಗಳನ್ನು ಮಾಡುತ್ತಿದ್ದರು ಹಾಗಿದ್ದರೂ ಅವನ ಬುದ್ಧಿಯು ಸ್ವಲ್ಪಮಾತ್ರವೂ ಚಲಿಸಲಿಲ್ಲ. ಹಾಗೆಯೇ ಅವನು ಬಹುವಿಧ ತಪಸ್ಸನ್ನು ಮಾಡಿ, ಪ್ರಬಲಪ್ರಯತ್ನದಿಂದ ಸೂರ್ಯನಿಗೆ ಸಮಾನವಾದ ದಿವ್ಯ ತೇಜಸ್ಸನ್ನು ಪಡೆದನು ಹೀಗೆ ಕಠಿನತಪಸ್ಸಿನಲ್ಲಿರುವ ವಿಶ್ವಾಮಿತ್ರನಿಗೆ ಬ್ರಹ್ಮನು ಪ್ರತ್ಯಕ್ಷನಾಗಿ ಕೇಳಿದ ವರಗಳನ್ನು ಕೊಡುವುದಾಗಿ ಸಮಾಧಾನಮಾಡಿದನು ಆಗ ವಿಶ್ವಾಮಿತ್ರನು ಅವನನ್ನು ಕುರಿತು 'ತಾನು ಬ್ರಾಹ್ಮಣನಾಗಬೇ'ಕೆಂದು ಕೇಳಿಕೊಳ್ಳಲು, ಬ್ರಹ್ಮನು ಹಾಗೆಯೇ ಆಗಲೆಂದು ಸಮ್ಮತಿಸಿದನು ಹೀಗೆ ವಿಶ್ವಾಮಿತ್ರನು ತಾನು ಕೋರಿದಂತೆ ಇಲ್ಲಿ ಬ್ರಾಹ್ಮಣ್ಯವನ್ನು ಪಡೆದು ಭೂಮಿಯನ್ನೆಲ್ಲ ಸಂಚರಿಸುತಿದ್ದನು

ರಾಜೇಂದ್ರಾ! ಅಂತಹ ಪುಣ್ಯತೀರ್ಥದಲ್ಲಿ ಬಲರಾಮನು ಸ್ನಾನ ಮಾಡಿ, ಅಲ್ಲಿದ್ದ ಶ್ರೋತ್ರಿಯರಿಗೆ ಅನೇಕ ಗೋವುಗಳನ್ನೂ, ಧನವನ್ನೂ ವಸ್ತು ವಾಹನಗಳನ್ನೂ, ಶಯನಾಸನಗಳನ್ನೂ, ವಸ್ತ್ರಭೂಷಣಾದ್ಯಲಂಕಾರಗಳನ್ನೂ, ಭಕ್ಷ್ಯ ಭೋಜ್ಯಾದಿಗಳನ್ನೂ ಬಹುವಾಗಿ ದಾನಮಾಡಿದನು. ಅಲ್ಲಿನ ಬ್ರಾಹ್ಮಣರನ್ನೆಲ್ಲ ಪೂಜಿಸಿ ಸಂತೋಷಗೊಳಿಸಿದಮೇಲೆ, ಬಕದಾಲ್ಭ್ಯನೆಂಬ ಮಹರ್ಷಿಯು ತೀವ್ರತಪಸ್ಸನ್ನು ಮಾಡಿದ ಬಕಾಶ್ರಮವೆಂಬ ಸ್ಥಳಕ್ಕೆ ಬಂದು ಸೇರಿದನು

ಇದು ನಾಲ್ವತ್ತೊಂದನೆಯ ಅಧ್ಯಾಯವು

{ಬಲದೇವನು ಅವಕೀರ್ಣತೀರ್ಥಕ್ಕೆ ಹೋದುದು ಬಕಮುನಿಯ ಚರಿತ್ರೆ ಅಲ್ಲಿಂದಾಚೆಗೆ ಬಲರಾಮನು ವಸಿಷ್ಠಾಪವಾಹ ತೀರ್ಥಕ್ಕೆ ಹೋದುದು}

ಆಗ ವೈಶಂಪಾಯನನು ಜನಮೇಜಯನನ್ನು ಕುರಿತು "ರಾಜೇಂದ್ರಾ! ಆಮೇಲೆ ಬಲರಾಮನು ಹಿಂದೆ ಯಾವ ಸ್ಥಳದಲ್ಲಿ ದಾಲ್ಭ್ಯನೆಂಬ ಮಹಾತಪಸ್ವಿಯು ಒಂದು ಪಶುವಿಗಾಗಿ ಧೃತರಾಷ್ಟ್ರನೆಂಬೊಬ್ಬ ಪಾಂಚಾಲರಾಜನ ರಾಷ್ಟ್ರವನ್ನೇ ಹೋಮಮಾಡತೊಡಗಿದನೋ, ಅನೇಕ ಬ್ರಾಹ್ಮಣರಿಂದ ಸೇವಿತವಾದ ಆ ಅವಕೀರ್ಣವೆಂಬ ಕ್ಷೇತ್ರಕ್ಕೆ ಬಂದನು ಆ ದಾಲ್ಭ್ಯನು ಮಹಾಮಹಿಮೆಯುಳ್ಳವನು ಘೋರತಪಸ್ಸಿನಿಂದ ದೇಹವನ್ನು ದಂಡಿಸುತಿದ್ದವನು ರಾಜಾ! ಹಿಂದೊಮ್ಮೆ ನೈಮಿಶಾರಣ್ಯವಾಸಿಗಳು ಹನ್ನೆರಡುವರ್ಷಗಳ ಸತ್ರಯಾಗವೊಂದನ್ನು ನಡೆಸುತ್ತಿರುವಾಗ, ವಿಶ್ವಜಿತ್ತೆಂಬ ಇಷ್ಟಿಯನ್ನು ಮುಗಿಸಿದಮೇಲೆ, ಯಾಗದ ದಕ್ಷಿಣಾದ್ರವ್ಯವನ್ನು ಸಂಪಾದಿಸುವುದಕ್ಕಾಗಿ ಪಾಂಚಾಲದೇಶಕ್ಕೆ ಹೋದರು ಅಲ್ಲಿನ ರಾಜನಾದ ಧೃತರಾಷ್ಟ್ರನೆಂಬವನನ್ನು ಕಂಡು ಉದಾರಬುದ್ಧಿಯುಳ್ಳ ಅವನಲ್ಲಿ ದ್ರವ್ಯವನ್ನು ಯಾಚಿಸಿದರು. ಆದರಮೇಲೆ ಆ ಪಾಂಚಾಲರಾಜನು ಅವರಿಗೆ ಒಳ್ಳೇ ಪುಷ್ಟಿಯಿಂದಲೂ, ಆರೋಗ್ಯದಿಂದಲೂ ಕೂಡಿದ ಎಳವಯಸ್ಸುಳ್ಳ ಇಪ್ಪತ್ತೇಳು ಕಡಸುಗಳನ್ನು ಕೊಟ್ಟನು. ಆಗ ಆ ಮಹರ್ಷಿ

ಗಳಲ್ಲಿ ಬಕದಾಲ್ಭ್ಯನೆಂಬವನು ಇತರ ಮುನಿಗಳನ್ನು ಕುರಿತು ‘ ಈ ಕರುಗಳನ್ನೆಲ್ಲ ನಿಮ್ಮೊಳಗೇ ಹಂಚಿಕೊಳ್ಳಿರಿ ! ನಾನು ನನಗಾಗಿ ಆ ರಾಜನಲ್ಲಿ ಯಾಚಿಸಿ ಬೇರೆ ಕರುವನ್ನು ತೆಗೆದುಕೊಳ್ಳುವೆನು ’’ ಎಂದು ಹೇಳಿ ರಾಜನಾದ ಧೃತರಾಷ್ಟ್ರನಲ್ಲಿಗೆ ಬಂದು, ತನಗೆ ಬೇರೊಂದು ಹಸುವನ್ನು ಕೊಡಬೇಕೆಂದು ಆ ರಾಜನನ್ನು ಯಾಚಿಸಿದನು ಆಗ ಆ ರಾಜನಿಗೆ ಬಹಳ ಕೋಪವುಂಟಾಯಿತು ಆ ಕೋಪದಿಂದ ವಿವೇಚನೆಯಿಲ್ಲದೆ ಆ ರಾಜನು ಅಲ್ಲಿ ಆಕಸ್ಮಾತ್ತಾಗಿ ಸತ್ತುಹೋಗಿದ್ದ ಕೆಲವು ಹಸುಗಳನ್ನು ನೋಡಿ ಆ ದಾಲ್ಭ್ಯನನ್ನು ಕುರಿತು ‘‘ ಓ ಬ್ರಾಹ್ಮಣಾಧಮಾ ! ನಿನಗೆ ಬೇಕಾದರೆ ಅದೋ ! ಅಲ್ಲಿ ಬಿದ್ದಿರುವ ಪಶುಗಳನ್ನು ಹೊತ್ತುಕೊಂಡು ಹೋಗು ! ಈಗಲೇ ಅವುಗಳನ್ನು ಸಾಗಿಸು ’’ ಎಂದನು ಆಗ ಧರ್ಮಜ್ಞನಾದ ಆ ಬಕನಿಗೆ ತನಗುಂಟಾದ ಅವಮಾನಕ್ಕಾಗಿ ಬಹಳ ವ್ಯಸನವಾಯಿತು ತನ್ನಲ್ಲಿತಾನೇ ಸಂಕಟದಿಂದ ಕೊರಗುತ್ತ ‘‘ ಆಹಾ ! ಈ ರಾಜನು ಸಭೆಯಲ್ಲಿ ನನಗೆ ಬಹಳ ಕ್ರೂರವಾದ ಮಾತನ್ನಾಡಿ ಹೀಳನಮಾಡಿದನು. ಇರಲಿ ’’ ಎಂದು ಮುಹೂರ್ತಕಾಲದವರೆಗೆ ಯೋಚಿಸಿ ಕೊನೆಗೆ ಕೋಪಾವೇಶದಿಂದ ಆ ರಾಜನ ರಾಷ್ಟ್ರವನ್ನೇ ನಾಶಮಾಡುವುದಾಗಿ ಸಂಕಲ್ಪಿಸಿಕೊಂಡನು ಒಡನೆಯೇ ಅವನು, ಆ ರಾಜನು ತೋರಿಸಿದ ಸತ್ತ ಹಸುಗಳ ಚರ್ಮವನ್ನು ಸುಲಿದು, ಒಳಗಿನ ಮಾಂಸಗಳನ್ನು ಕತ್ತರಿಸಿ, ಆ ಮಾಂಸಪಿಂಡಗಳನ್ನೇ ಆ ಧೃತರಾಷ್ಟ್ರನ ರಾಜ್ಯಗಳನ್ನಾಗಿ ಸಂಕಲ್ಪಿಸಿ, ಸರಸ್ವತೀ ತೀರದಲ್ಲಿ ಅವಕೀರ್ಣಕ್ಷೇತ್ರದಲ್ಲಿ ಬಹಳ ನಿಯಮದಿಂದ ಹೋಮಮಾಡ ತೊಡಗಿದನು ಹೀಗೆ ಹೋಮಕಾರ್ಯವು ನಡೆಯುತ್ತಿದ್ದಹಾಗೆಲ್ಲ ಆ ಪಾಂಚಾಲರಾಜ್ಯವು ಕ್ಷೀಣವಾಗುತ್ತ ಬಂದಿತು ಕೊಡಲಿಯಿಂದ ಕಾಡನ್ನು ಕಡಿಯುತ್ತ ಬಂದರೆ ಹೇಗೋ ಹಾಗೆ, ಆ ರಾಜ್ಯವು ಕ್ರಮಕ್ರಮವಾಗಿ ಶೂನ್ಯವಾಗುತ್ತ ಬಂದಿತು ಆ ರಾಜ್ಯವು ನೆಲೆದಪ್ಪಿ ನಿಶ್ಚೇತನವಾಗಿ ಚದರಿಹೋಗುತ್ತಿರಲು, ಆಮೇಲೆ ಆ ಧೃತರಾಷ್ಟ್ರರಾಜನಿಗೆ ಮನಸ್ಸಿನಲ್ಲಿ ದೊಡ್ಡ ಭೀತಿಯೂ, ಚಿಂತೆಯೂ ಹುಟ್ಟಿತು ಆಗ ಅವನು ಈ ಆಪತ್ತಿನಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಅನೇಕ ಬ್ರಾಹ್ಮಣರನ್ನು ಕರೆಸಿ, ಎಷ್ಟೋ ವಿಧವಾದ ಶಾಂತ್ಯಾದಿ ಕರ್ಮಗಳಿಂದ ಪ್ರಯತ್ನಪಟ್ಟನು ಅದರಿಂದ ಅವ

ನಿಗೇನೂ ಕ್ಷೇಮವುಂಟಾಗಲಿಲ್ಲ ರಾಜ್ಯವು ಮೇಲೆಮೇಲೆ ಕ್ಷೀಣಿಸುತ್ತಲೇ ಬರುತ್ತಿದ್ದಿತು. ರಾಜನಿಗೆ ಭೀತಿ ಹೆಚ್ಚಿತು. ಬ್ರಾಹ್ಮಣರಿಗೂ ಅವರ ಪ್ರಯತ್ನವೇನೂ ಸಾಗದೆಹೋಯಿತು ರಾಜ್ಯಕ್ಷಯವನ್ನು ತಪ್ಪಿಸುವುದಕ್ಕೆ ದಾರಿಯೇನೂ ತೋರದಿರಲು, ಆ ರಾಜನು ತನ್ನ ಸಮೀಪದಲ್ಲಿದ್ದ ಮಂತ್ರಿ ಬ್ರಾಹ್ಮಣಾದಿಗಳನ್ನು ಅದಕ್ಕುಪಾಯವೇನೆಂದು ಕೇಳಿದನು. ಅದಕ್ಕಾ ಬ್ರಾಹ್ಮಣರು "ರಾಜಾ! ಹಿಂದೆ ನೀನು ಒಂದು ಪಶುವಿನ ವಿಷಯವಾಗಿ ಅವಮಾನಪಡಿಸಿದ ಮಹರ್ಷಿಯು, ಆ ಮೃತಪಶುವಿನ ಮಾಂಸರೂಪದಿಂದ ನಿನ್ನ ರಾಜ್ಯವನ್ನು ಅಗ್ನಿಯಲ್ಲಿ ಹೋಮಮಾಡುತ್ತಿರುವನು ಆದರಿಂದ ನಿನ್ನ ರಾಜ್ಯವು ಹೀಗೆ ಕ್ಷೀಣಿಸುತ್ತಿದೆ. ಅವನ ತಪಶ್ಶಕ್ತಿಯಿಂದಲೇ ನಿನಗೆ ಇಂತಹ ವಿನಾಶವುಂಟಾಗಿದೆ ಈಗಲೂ ನೀನು ನಿನ್ನ ದೇಶಕ್ಕೆ ಶಾಂತಿಯನ್ನು ಬಯಸುವುದಾದರೆ, ಸರಸ್ವತೀನದಿಯ ತೀರದಲ್ಲಿರುವ ಪುಣ್ಯಘಟ್ಟಕ್ಕೆ ಹೋಗಿ, ಅಲ್ಲಿ ಹೋಮಮಾಡುತ್ತಿರುವ ಆ ಮಹರ್ಷಿಯಲ್ಲಿಯೇ ಪ್ರಾರ್ಥಿಸು" ಎಂದರು ಒಡನೆಯೇ ರಾಜನು ಸರಸ್ವತೀನದಿಗೆ ಹೋಗಿ ಬಕಮುನಿಯನ್ನು ಕಂಡು, ಸಾಷ್ಟಾಂಗವಾಗಿ ನಮಸ್ಕರಿಸಿ ಕೈಮುಗಿದು ನಿಂತು "ಹೇ ಭಗವನ್! ನನ್ನ ಅಪರಾಧವನ್ನು ಮನ್ನಿಸಬೇಕೆಂದು ಬೇಡುವೆನು ಮೂರ್ಖನಾದ ನಾನು ವಿವೇಕಹೀನನಾಗಿ ಹಸುವಿನಲ್ಲಿರುವ ಲೋಭದಿಂದ ನಿನ್ನನ್ನು ಅವಮಾನಗೊಳಿಸಿದೆನು ಈಗ ನೀನೇ ನನಗೆ ಗತಿ! ನೀನೇ ರಕ್ಷಕನು! ನನ್ನನ್ನು ಅನುಗ್ರಹಿಸಿ ಕಾಪಾಡಬೇಕು" ಎಂದು ಮೊರೆಯಿಟ್ಟನು ಹೀಗೆ ದುಃಖದಿಂದ ಗೋಳಿಡುತ್ತಿರುವ ಆ ರಾಜನನ್ನು ನೋಡಿ ಆ ಮಹರ್ಷಿಗೆ ಕನಿಕರವುಂಟಾಯಿತು ರಾಜನಲ್ಲಿ ಕೋಪವನ್ನು ಬಿಟ್ಟು ಪ್ರಸನ್ನನಾಗಿ, ಅವನ ರಾಜ್ಯವನ್ನು ಅಪಾಯದಿಂದ ತಪ್ಪಿಸುವುದಕ್ಕಾಗಿ ಬೇರೆ ವಿಧವಾದ ಆಹುತಿಯನ್ನು ಮಾಡತೊಡಗಿದನು ಇದರಿಂದ ರಾಜ್ಯಕ್ಷಯವು ನಿಂತಿತು' ಹೀಗೆ ರಾಜ್ಯವನ್ನು ಬಿಡಿಸಿಕೊಟ್ಟಮೇಲೆ, ಆ ರಾಜನಿಂದ ತನಗೆ ಬೇಕಾದಷ್ಟು ಪಶುಗಳನ್ನು ಪಡೆದುಕೊಂಡು, ಸಂತೋಷದಿಂದ ತಿರುಗಿ ನೈಮಿಶಾರಣ್ಯಕ್ಕೆ ಹೋಗಿ ಸೇರಿದನು ಧೃತರಾಷ್ಟ್ರನೂ ಸಂತೋಷದಿಂದ ಐಶ್ವರ್ಯಸಂಪನ್ನವಾದ ತನ್ನ ರಾಜ್ಯವನ್ನು ಸೇರಿದನು. ಓ ಮಹಾರಾಜಾ! ಅದೇ ತೀರ್ಥದಲ್ಲಿ ಹಿಂದೆ ಬೃಹ

ಸ್ವತಿಯು ದೈತ್ಯವಿನಾಶಕ್ಕಾಗಿಯೂ, ದೇವತೆಗಳ ಅಭಿವೃದ್ಧಿಗಾಗಿಯೂ ಒಂದು ಯಾಗವನ್ನು ಮಾಡಿದನು. ಅವನು ಅಲ್ಲಿ ಮಾಂಸಗಳಿಂದ ಒಂದು ಇಷ್ಟಿಯನ್ನು ಮಾಡಲು, ಅದರಿಂದ ದೈತ್ಯರು ದೇವತೆಗಳಿಂದ ಪರಾಜಿತರಾಗಿ ಕ್ಷೀಣಿಸಿದರು ದೇವತೆಗಳು ಜಯಶೀಲರಾದರು. ಇಂತಹ ತೀರ್ಥದಲ್ಲಿ ಬಲರಾಮನು ಶಾಸ್ತ್ರೀಯವಾದ ಕರ್ಮಗಳನ್ನು ಮಾಡಿ, ಅಲ್ಲಿದ್ದ ಬ್ರಾಹ್ಮಣರಿಗೆ ರಥ ಗಜ ತುರಗಗಳನ್ನೂ, ಧನಧಾನ್ಯ ರತ್ನಗಳನ್ನೂ ಸಮೃದ್ಧಿಯಾಗಿ ದಾನಮಾಡಿದನು. ಅಲ್ಲಿಂದಾಚೆಗೆ ಬಲರಾಮನು ಯಾಯಾತವೆಂಬ ತೀರ್ಥಕ್ಕೆ ಹೋದನು ರಾಜೇಂದ್ರಾ! ಆ ಸ್ಥಳದಲ್ಲಿ ನಹುಷಪುತ್ರನಾದ ಯಯಾತಿಯು ಒಂದು ಯಾಗವನ್ನಾರಂಭಿಸಿದಾಗ, ಆ ಯಜ್ಞಕ್ಕಾಗಿ ಸರಸ್ವತೀನದಿಯೇ ಹಾಲನ್ನೂ, ತುಪ್ಪವನ್ನೂ ಪ್ರವಹಿಸಿದುದಾಗಿ ಕೇಳುವೆವು ಅಲ್ಲಿ ಯಯಾತಿಯು ದೊಡ್ಡ ಯಾಗವನ್ನು ಮಾಡಿ, ಅದರ ಫಲದಿಂದ ಉತ್ತಮವಾದ ಊರ್ಧ್ವಲೋಕಗಳನ್ನು ಹೊಂದಿದನು ಮತ್ತೊಮ್ಮೆ ಅದೇ ಸ್ಥಳದಲ್ಲಿ ಯಯಾತಿಯು ಯಾಗಮಾಡುವಾಗ ತನ್ನ ಮಹೌದಾರ್ಯವನ್ನು ತೋರಿಸುತ್ತ ದಾನಧರ್ಮಗಳನ್ನು ಮಾಡಿ ಬ್ರಾಹ್ಮಣರಿಗೆ ಅವರವರ ಮನಸ್ಸಿನಲ್ಲಿ ನೆನೆಸಿದುದನ್ನೆಲ್ಲ ಒದಗಿಸಿಕೊಟ್ಟನು ಮತ್ತು ಪರಮಾತ್ಮನಲ್ಲಿ ಶಾಶ್ವತವಾದ ಭಕ್ತಿಯನ್ನು ನೆಲೆಗೊಳಿಸಿದನು ಆ ಯಾಗಕ್ಕಾಗಿ ಬಂದವರಲ್ಲಿ ಯಾರುಯಾರು ಯಾವಯಾವ ಸ್ಥಳದಲ್ಲಿದ್ದರೂ ಆಯಾ ಸ್ಥಳದಲ್ಲಿಯೇ ಸರಸ್ವತೀನದಿಯು ತಾನಾಗಿ ವಾಸಸ್ಥಲವನ್ನೂ, ಷಡ್ರಸೋಪೇತವಾದ ಭೋಜನವನ್ನೂ, ಶಯನಾಸನಾದಿ ಸಕಲಭೋಗವಸ್ತುಗಳನ್ನೂ ಇನ್ನೂ ನಾನಾಬಗೆಯ ದಾನಗಳನ್ನೂ ಒದಗಿಸುತ್ತಿದ್ದಿತು ಆ ರಾಜನ ಔದಾರ್ಯವನ್ನು ನೋಡಿ ಜನರೆಲ್ಲರೂ ಅವನನ್ನು ಸಂತೋಷದಿಂದ ಸ್ತುತಿಸಿ, ಶುಭಾಶೀರ್ವಾದಗಳನ್ನು ಮಾಡಿಹೋದರು ದೇವತೆಗಳೂ, ಗಂಧರ್ವರೂ, ಮನುಷ್ಯರೂ ಆ ಯಜ್ಞಸಮೃದ್ಧಿಯನ್ನು ನೋಡಿ ಆಶ್ಚರ್ಯಪಟ್ಟರು ಓ ರಾಜೇಂದ್ರಾ! ಬಲರಾಮನು ಆ ಯಯಾತಿಕ್ಷೇತ್ರವನ್ನು ನೋಡಿದಮೇಲೆ ವಸಿಷ್ಠಾಪವಾಹವೆಂಬ ಮತ್ತೊಂದು ತೀರ್ಥಕ್ಕೆ ಹೋದನು

ಇದು ನಾಲ್ವತ್ತೆರಡನೆಯ ಅಧ್ಯಾಯವು

## ವಸಿಷ್ಠಾಪವಾಹವೆಂಬ ತೀರ್ಥದ ಮಹಿಮೆ ಇದಕ್ಕೆ ಆ ಹೆಸರು ಬಂದ ಕಾರಣವು

ಜನಮೇಜಯನು ವೈಶಂಪಾಯನನನ್ನು ಕುರಿತು "ಬ್ರಾಹ್ಮಣೋತ್ತಮಾ! ವಸಿಷ್ಠಾಪವಾಹವೆಂಬ ಆ ತೀರ್ಥವು ಭಯಂಕರವಾದ ಪ್ರವಾಹವೇಗವುಳ್ಳುದೆಂದು ಕೇಳುವೆನು ಅಲ್ಲಿ ಹಾಗಾಗಲು ಕಾರಣವೇನು? ಆ ನದಿಯು ವಸಿಷ್ಠಮಹರ್ಷಿಯನ್ನು ಕೊಚ್ಚಿಸಿಕೊಂಡುಹೋದ ಕಾರಣವೇನು? ಅವರಲ್ಲಿ ಈ ವೈರವು ಹುಟ್ಟಿದ ಕಾರಣವೇನು? ಈ ಕಥೆಯನ್ನು ಕೇಳಲು ನನಗೆ ಕುತೂಹಲವಿರುವುದರಿಂದ ವಿವರಿಸಬೇಕು ನಿನ್ನಿಂದ ಇಂತಹ ಕಥೆಗಳನ್ನು ಎಷ್ಟೆಷ್ಟು ಕೇಳಿದರೂ ತೃಪ್ತಿಯಿಲ್ಲದಿದೆ" ಎಂದನು

ಅದಕ್ಕಾ ವೈಶಂಪಾಯನನು "ರಾಜೇಂದ್ರಾ! ಕೇಳು! ವಿಶ್ವಾಮಿತ್ರನಿಗೂ, ವಸಿಷ್ಠನಿಗೂ ತಪಸ್ಸಿನ ವಿಷಯದಲ್ಲಿ ಅನ್ಯೋನ್ಯಸ್ಪರ್ಧೆಯಿಂದ ಪ್ರಬಲವಾದ ವೈರವು ಬೆಳೆದುಹೋಯಿತು ಸ್ಥಾಣುತೀರ್ಥವೆಂಬ ಘಟ್ಟದಲ್ಲಿ ವಸಿಷ್ಠನ ಆಶ್ರಮವಿದ್ದಿತು ಅದು ವಿಶ್ವಾಮಿತ್ರನ ಆಶ್ರಮಕ್ಕೆ ಇದಿರಾಗಿ ಪೂರ್ವದಿಕ್ಕಿನಕಡೆಗಿದ್ದಿತು ಆ ಸ್ಥಾಣುತೀರ್ಥದಲ್ಲಿಯೇ ಪೂರ್ವದಲ್ಲಿ ರುದ್ರನು ದೊಡ್ಡ ತಪಸ್ಸನ್ನು ಮಾಡಿದನು ವಿಶ್ವಾಮಿತ್ರನು ನಡೆಸಿದ ಈ ಘೋರಕಾರ್ಯವೂ ಅಲ್ಲಿಯೇ ನಡೆಯಿತೆಂದು ವಿದ್ವಾಂಸರು ಹೇಳುವರು ಪೂರ್ವದಲ್ಲಿ ಪೂಜ್ಯನಾದ ಸ್ಥಾಣುವು ಯಾಗಗಳಿಂದ ಸರಸ್ವತಿಯನ್ನು ಪೂಜಿಸಿ, ಅಲ್ಲಿ ಸ್ಥಾಪನೆಮಾಡಿದುದಕ್ಕಾಗಿ ಅದಕ್ಕೆ ಸ್ಥಾಣುತೀರ್ಥವೆಂಬ ಹೆಸರಾಯಿತು ಆ ತೀರ್ಥದಲ್ಲಿ ಹಿಂದೆ ದೇವತೆಗಳು ಷಣ್ಮುಖನನ್ನು ದೈತ್ಯನಾಶಕ್ಕಾಗಿ ತಮ್ಮ ಸೈನ್ಯಾಧಿಪತ್ಯದಲ್ಲಿ ಅಭಿಷೇಕಿಸಿದರು ಆ ತೀರ್ಥದಲ್ಲಿ ಒಮ್ಮೆ ವಿಶ್ವಾಮಿತ್ರನು ಉಗ್ರವಾದ ಒಂದು ತಪಸ್ಸನ್ನು ಹಿಡಿದು ಅದರಿಂದ ವಸಿಷ್ಠನನ್ನು ನೆಲೆದಪ್ಪಿಸಿಬಿಟ್ಟನು ಆ ವಿವರವನ್ನು ತಿಳಿಸುವೆನು ಕೇಳು ವಿಶ್ವಾಮಿತ್ರ ವಸಿಷ್ಠರಿಬ್ಬರೂ ಇದಿರಿದಿರಾಗಿ ಆಶ್ರಮದಲ್ಲಿದ್ದುಕೊಂಡು, ತಪಸ್ಸಿನ ವಿಷಯವಾಗಿ ಒಬ್ಬರನ್ನೊಬ್ಬರು ದಿನದಿನವೂ ತೀವ್ರವಾಗಿ ಸ್ಪರ್ಧಿಸುತ್ತಿದ್ದರು. ಆ ತಪಸ್ಸಿಗಾಗಿ ವಿಶ್ವಾಮಿತ್ರನು ಬಹಳವಾಗಿ ಕಷ್ಟಪಟ್ಟರೂ, ವಸಿಷ್ಠನ ತೇಜೋವಿಶೇಷವನ್ನು ಕಂಡು ಮನಸ್ಸಿ

ನಲ್ಲಿ ಚಿಂತಾಕುಲನಾದನು ಆ ಚಿಂತೆಯಲ್ಲಿ ತಪಸ್ವಿಯಾದ ವಿಶ್ವಾಮಿತ್ರನಿಗೆ ಇದೊಂದು ಆಲೋಚನೆಯು ಹುಟ್ಟಿತು "ಈ ಸರಸ್ವತೀನದಿಯು ತನ್ನ ಪ್ರವಾಹವೇಗದಿಂದ ವಸಿಷ್ಠನನ್ನು ಇತ್ತಕಡೆಗೆ ಕೊಚ್ಚಿಸಿಕೊಂಡು ನನ್ನ ಸಮೀಪಕ್ಕೆ ತಂದರೆ, ಅವನು ಬಂದೊಡನೆ ನಾನು ಇಲ್ಲಿ ಅವನನ್ನು ಕೊಂದೇ ಬಿಡುವೆನು ಇದರಲ್ಲಿ ಸಂದೇಹವಿಲ್ಲ" ಎಂದು ನಿಶ್ಚಯಿಸಿಕೊಂಡನು ಹೀಗೆಂದು ವಿಶ್ವಾಮಿತ್ರನು ನಿಶ್ಚಯಿಸಿ, ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ಆ ನದಿಯನ್ನು ಸ್ಮರಿಸಿದನು ಇದನ್ನು ತಿಳಿದೊಡನೆ ಸರಸ್ವತಿಯ ಮನಸ್ಸು ಬೆಚ್ಚಿತು ಮಹಾಶಕ್ತಿಯುಳ್ಳವನೂ, ಕೋಪಿಷ್ಠನೂ ಆದ ವಿಶ್ವಾಮಿತ್ರನ ಬಳಿಗೆ ಬಂದು ಬಣ್ಣಗೆಟ್ಟ ಮುಖದೊಡನೆ ಕೈಮುಗಿದು ನಿಂತಳು ವೀರನಾದ ಪತಿಯನ್ನು ಕಳೆದುಕೊಂಡ ಪತ್ನಿಯಂತೆ ಅವಳು ಬಹಳ ದುಃಖಿತೆಯಾಗಿ ಆ ಋಷಿಯನ್ನು ಕುರಿತು 'ನನ್ನಿಂದಾಗಬೇಕಾದುದೇನು?' ಎಂದು ಕೇಳಲು, ಕೋಪದಿಂದ ವಿಶ್ವಾಮಿತ್ರನು 'ಆ ವಸಿಷ್ಠನನ್ನು ನೀನು ಈಗಲೇ ಈ ತೀರಕ್ಕೆ ಸೆಳೆದುತರಬೇಕು ನಾನು ಅವನನ್ನು ಕೊಲ್ಲುವೆನು' ಎಂದನು ಇದನ್ನು ಕೇಳಿ ಸರಸ್ವತಿಯು ದುಃಖಿಸುತ್ತ, ಸುಮ್ಮನೆ ಕೈಜೋಡಿಸಿ, ಬಿರುಗಾಳಿಗೆ ಸಿಕ್ಕಿದ ಬಳ್ಳಿಯಂತೆ ಭಯದಿಂದ ನಡುಗುತ್ತಿದ್ದಳು ಆ ಸ್ಥಿತಿಯಲ್ಲಿಯೂ ವಿಶ್ವಾಮಿತ್ರನು ಕನಿಕರವಿಲ್ಲದೆ 'ಹೋಗು! ನಡೆ! ವಿಚಾರಮಾಡದೆ ಆ ವಸಿಷ್ಠನನ್ನು ನನ್ನ ಬಳಿಗೆ ತಂದು ಬಿಡು' ಎಂದನು ಆಗ ಆ ಸರಸ್ವತೀನದಿಯು ವಿಶ್ವಾಮಿತ್ರನ ಪಾಪಪ್ರವೃತ್ತಿಯನ್ನೂ, ವಸಿಷ್ಠನ ಎಣೆಯಿಲ್ಲದ ಪ್ರಭಾವವನ್ನೂ ಯೋಚಿಸಿ, ನೆಟ್ಟಗೆ ವಸಿಷ್ಠನಲ್ಲಿಗೆ ಹೋಗಿ ವಿಶ್ವಾಮಿತ್ರನು ಹೇಳಿದ ಮಾತನ್ನು ತಿಳಿಸಿದಳು ಮತ್ತು ಅವರಿಬ್ಬರ ಶಾಪಕ್ಕಾಗಿ ಭಯಪಟ್ಟು ಚಿಂತಿಸುತ್ತಿದ್ದಳು ಅವಳ ಮೈ ನಡುಗುತ್ತಿದ್ದಿತು ದೇಹವು ಕಂದಿ ಮುಖವು ವಿವರ್ಣವಾಗಿದ್ದಿತು ಹೀಗೆ ಚಿಂತಾಕುಲೆಯಾದ ಆ ಸರಸ್ವತಿಯನ್ನು ನೋಡಿ ಧರ್ಮಾತ್ಮನಾದ ವಸಿಷ್ಠನು 'ಓ ಮಹಾನದೀ! ನೀನು ನಿನ್ನ ಆತ್ಮರಕ್ಷಣವನ್ನು ಮಾಡಿಕೊ! ಈಗಲೇ ನನ್ನನ್ನು ಕರೆದುಕೊಂಡುಹೋಗಿ ಆ ವಿಶ್ವಾಮಿತ್ರನ ಬಳಿಯಲ್ಲಿ ಬಿಡು. ನಾನು ಸಿದ್ಧನಾಗಿರುವೆನು ವಿಶ್ವಾಮಿತ್ರನು ನಿನ್ನನ್ನು ಶಪಿಸದಂತೆ ನೋಡು. ಇದಕ್ಕಾಗಿ ನೀನು ವಿಚಾರ

ಪಡಬೇಡ' ಎಂದನು ದಯಾಶೀಲನಾದ ಆ ವಸಿಷ್ಠನ ಮಾತನ್ನು ಕೇಳಿ ಸರಸ್ವತೀನದಿಗೆ ಮತ್ತಷ್ಟು ಮನಸ್ಸು ಕರಗಿತು "ಅಯ್ಯೋ! ಈಗ ಏನು ಮಾಡಿದರೆ ಒಳ್ಳೆಯದು? ವಸಿಷ್ಠನೋ ನನ್ನಲ್ಲಿ ಅಷ್ಟೊಂದು ದಯೆಯನ್ನು ತೋರಿಸಿದನು. ಅವನಿಗೆ ನಾನು ಹೇಗೆ ಹಾನಿಯನ್ನುಂಟುಮಾಡಲಿ? ಹೇಗಾದರೂ ಆ ವಸಿಷ್ಠನಿಗೆ ಹಿತವನ್ನೇ ಮಾಡಬೇಕು' ಎಂದು ಚಿಂತಿಸಿದಳು ಆಗ ಆ ನದಿಯು ವಸಿಷ್ಠನು ತನ್ನ ತೀರದಲ್ಲಿ ಜಪ ಹೋಮಾದಿಗಳನ್ನು ಮಾಡುತ್ತಿರುವುದನ್ನು ನೋಡಿದಳು ಆಗ ಅವಳಿಗೆ ಒಂದಾಲೋಚನೆ ಹುಟ್ಟಿತು ಇದೇ ತನಗೆ ಒಳ್ಳೆಯ ಸಮಯವೆಂದು ಯೋಚಿಸಿ, ತನ್ನ ಪ್ರವಾಹವೇಗದಿಂದ ತನ್ನ ದಡವನ್ನು ಕೊಚ್ಚಿಸಿಬಿಟ್ಟಳು ಆ ಪ್ರವಾಹವೇಗದಿಂದ ವಸಿಷ್ಠಮುನಿಯು ಸೆಳೆಯಲ್ಪಡುವಾಗ ಆ ಸರಸ್ವತೀ ನದಿಯನ್ನು ಹೀಗೆಂದು ಸ್ತುತಿಸುವನು "ಓ ಸರಸ್ವತೀ! ನೀನು ಸಾಕ್ಷಾತ್ ಬ್ರಹ್ಮದೇವನ ಶಿರಸ್ಸಿನಿಂದ ಹುಟ್ಟಿದವಳು ಜಗತ್ತೆಲ್ಲವೂ ಪವಿತ್ರವಾದ ನಿನ್ನ ಜಲದಿಂದ ವ್ಯಾಪ್ತವಾಗಿದೆ ನೀನೇ ಆಕಾಶಕ್ಕೆ ಹೋಗಿ ಮೇಘಗಳಲ್ಲಿ ಸೇರಿ ಜಲವನ್ನು ಸೃಷ್ಟಿಸುವೆ ಎಲ್ಲಾ ಜಲವೂ ನೀನೇ ಎಂದು ನಾವು ಓದಿರುವೆವು. ಹೇ ದೇವಿ! ಪುಷ್ಟಿಯೂ, ಕಾಂತಿಯೂ, ಕೀರ್ತಿಯೂ, ಸಿದ್ಧಿಯೂ, ಬುದ್ಧಿಯೂ ಉಮೆಯೂ, ಸರಸ್ವತಿಯೂ, ಸ್ವಾಹಾದೇವಿಯೂ ಎಲ್ಲವೂ ನೀನೇ! ಈ ಜಗತ್ತೆಲ್ಲವೂ ನಿನ್ನ ಅಧೀನವು ನೀನೇ ಸರ್ವಭೂತಗಳಲ್ಲಿಯೂ, ಪರಾ, ಪಶ್ಯಂತಿ, ಮಧ್ಯಮೆ, ವೈಖರಿಯೆಂಬ ನಾಲ್ಕು ವಿಧದಿಂದ ವಾಸಿಸುವೆ" ಎಂದನು

ಹೀಗೆ ವಸಿಷ್ಠನಿಂದ ಸ್ತೋತ್ರಮಾಡಲ್ಪಡುತ್ತ ಆ ನದಿಯು, ಅವನನ್ನು ವಿಶ್ವಾಮಿತ್ರನ ಆಶ್ರಮಕ್ಕೆ ಸೆಳೆದುತಂದು ಆ ಸಂಗತಿಯನ್ನು ವಿಶ್ವಾಮಿತ್ರನಿಗೆ ತಿಳಿಸಿದಳು. ವಸಿಷ್ಠನನ್ನು ಕಂಡೊಡನೆ ವಿಶ್ವಾಮಿತ್ರನು ಕೋಪದಿಂದ ವಸಿಷ್ಠನ ವಧಕ್ಕಾಗಿ ಒಂದು ಆಯುಧವನ್ನು ಬೀಸಿದನು ಇಷ್ಟರಲ್ಲಿ ಆ ಸರಸ್ವತಿಯು, ಕೋಪಗೊಂಡ ವಿಶ್ವಾಮಿತ್ರನನ್ನು ನೋಡಿ, ತಾವಿಬ್ಬರೂ ಬ್ರಹ್ಮಹತ್ಯೆಗೆ ಭಾಗಿಗಳಾಗುವುದನ್ನೂ ಯೋಚಿಸಿ ಹೆದರಿ, ಇಬ್ಬರ ಮಾತನ್ನೂ ನಡೆಸಿದಂತೆ ಮಾಡುವುದಕ್ಕೆ ಉಪಾಯವನ್ನು ನಿಶ್ಚಯಿಸಿ

ಕೊಂಡು, ವಸಿಷ್ಠನನ್ನು ಥಟ್ಟನೆ ಪೂರ್ವತೀರದಕಡೆಗೆ ಎಳೆದುಕೊಂಡು ಹೋಯಿತು ಇದರಿಂದ ವಂಚಿತನಾದ ವಿಶ್ವಾಮಿತ್ರನು ಮಹಾಕೋಪದಿಂದ ಸರಸ್ವತಿಯನ್ನು ನೋಡಿ 'ನೀನು ನನ್ನನ್ನು ವಂಚಿಸಿ, ನನ್ನ ಕೈಯಿಂದ ವಸಿಷ್ಠನನ್ನು ತಪ್ಪಿಸಿ ಹಿಂತಿರುಗಿಸಿಬಿಟ್ಟೆಯಲ್ಲವೆ? ಇದರಿಂದ ರಾಕ್ಷಸರಿಗೆ ಪ್ರಿಯವಾದ ರಕ್ತವನ್ನು ಪ್ರವಹಿಸು' ಎಂದು ಶಪಿಸಿದನು ಈ ಶಾಪ ದಿಂದ ಆ ನದಿಯು ಒಂದು ವರ್ಷದವರೆಗೆ ರಕ್ತಮಿಶ್ರವಾದ ನೀರನ್ನೇ ಪ್ರವ ಹಿಸುತ್ತಿದ್ದಳು ಆಮೇಲೆ ಋಷಿಗಳೂ, ದೇವತೆಗಳೂ, ಗಂಧರ್ವರೂ, ಅಪ್ಸರಸ್ಸುಗಳೂ ಸರಸ್ವತೀನದಿಯ ಆ ಸ್ಥಿತಿಯನ್ನು ನೋಡಿ ಬಹಳ ವ್ಯಸನ ಗೊಂಡರು ಇದರಿಂದಲೇ ಸರಸ್ವತಿಗೆ ಅಲ್ಲಿ **ವಸಿಷ್ಠಾಪವಾಹ**ವೆಂದು ಹೆಸ ರಾಯಿತು ಆಮೇಲೆ ಸರಸ್ವತಿಯು ತನ್ನ ದಾರಿಯನ್ನು ಹಿಡಿದು ಪ್ರವಹಿ ಸಲಾರಂಭಿಸಿದಳು

ಇದು ನಾಲ್ವತ್ತು ಮೂರನೆಯ ಅಧ್ಯಾಯವು

ವಿಶ್ವಾಮಿತ್ರನ ಶಾಪದಿಂದ ರಕ್ತಮಯವಾದ ಪ್ರವಾಹವನ್ನು ಋಷಿಗಳು ತಪಸ್ಸಿನಿಂದ ಶುದ್ಧಿಮಾಡಿದುದು ಇಂದ್ರನು ಸರಸ್ವತೀನದಿಯೂ, ಅರುಣಾನದಿಯೂ ಕೂಡುವ ಸ್ಥಳ ದಲ್ಲಿ ಯಾಗದಿಂದ ತನ್ನ ಬ್ರಹ್ಮಹತ್ಯಾಪಾತಕವನ್ನು ನೀಗಿಸಿಕೊಂಡುದು ಬಲರಾಮನು ಅಲ್ಲಿ ಸ್ನಾನ ಮಾಡಿ ಮುಂದೆ ಸೋಮತೀರ್ಥಕ್ಕೆ ಹೊರಟುದು

ಓ ಜನಮೇಜಯರಾಜಾ! ಕೇಳು! ವಿಶ್ವಾಮಿತ್ರನ ಶಾಪದಿಂದ ಆ ಸರಸ್ವತೀನದಿಯ ನೀರೆಲ್ಲವೂ ರಕ್ತವಾಗಿ ಹರಿಯಲಾರಂಭಿಸಿತು. ಆಮೇಲೆ ಅಲ್ಲಿಗೆ ಅನೇಕರಾಕ್ಷಸರು ಬಂದುಸೇರಿ, ಅಲ್ಲಿನ ರಕ್ತವನ್ನು ಕುಡಿಯುತ್ತ ಸುಖವಾಗಿ ವಾಸಮಾಡತೊಡಗಿದರು ಅನಾಯಾಸವಾಗಿ ದೊರೆತ ಸಮೃ ದ್ಧಿಯಾದ ರಕ್ತದಿಂದ ಅವರು ನಿಶ್ಚಿಂತರಾಗಿ, ಕುಣಿದಾಡುತ್ತಲೂ, ನಗು ತ್ತಲೂ ಸ್ವರ್ಗವನ್ನೇ ಪಡೆದವರಂತೆ ಸಂತೋಷದಿಂದಿರುತ್ತಿದ್ದರು. ಆಮೇಲೆ

ಸ್ವಲ್ಪಕಾಲಕ್ಕೆ ತಪೋಧನರಾದ ಕೆಲವು ಮಹರ್ಷಿಗಳು ಆ ಸರಸ್ವತೀ ನದಿಯ ಎಲ್ಲಾ ತೀರ್ಥಘಟ್ಟಗಳಲ್ಲಿಯೂ ಸ್ನಾನಮಾಡುತ್ತ ಸಂತೋಷ ದಿಂದ ತೀರ್ಥಯಾತ್ರೆಯನ್ನು ಮಾಡುತ್ತಬರುವಾಗ, ರಕ್ತಜಲವುಳ್ಳ ಈ ತೀರ್ಥಕ್ಕೆ ಬಂದು ಸೇರಿದರು. ಅಲ್ಲಿ ಅತಿಭಯಂಕರವಾದ ರಕ್ತಪ್ರವಾಹ ವನ್ನೂ, ಅಲ್ಲಿ ಅನೇಕ ರಾಕ್ಷಸರು ಬಂದು ಸೇರಿ ರಕ್ತಪಾನಮಾಡುತ್ತಿರುವು ದನ್ನೂ ನೋಡಿದರು ಆಗ ವ್ರತನಿಷ್ಠರಾದ ಆ ಮಹರ್ಷಿಗಳಿಗೆ ಈ ದುರ್ದಶೆಯಿಂದ ಆ ಪುಣ್ಯನದಿಯನ್ನು ತಪ್ಪಿಸಿ ಕಾಪಾಡಬೇಕೆಂದು ಮನ ಸ್ಸು ಹುಟ್ಟಿತು. ಆಗ ಅವರೆಲ್ಲರೂ ಗುಂಪಾಗಿ ನಿಂತು ಆ ಸರಸ್ವತಿಯನ್ನು ಕರೆದು "ಎಲೆ ಮಂಗಳಸ್ವರೂಪಿಣೀ! ಪವಿತ್ರವಾದ ನಿನ್ನ ಪ್ರವಾಹವು ಈ ಘಟ್ಟದಲ್ಲಿ ಈ ರೀತಿಯಾಗುವುದಕ್ಕೆ ಕಾರಣವೇನು? ನಿನ್ನ ತೀರ್ಥವು ಹೀಗೆ ಗ್ರಹಣಯೋಗ್ಯವಲ್ಲದೆ ಹೋದುದಕ್ಕೆ ಕಾರಣವನ್ನು ತಿಳಿಸಿದರೆ, ನಾವು ಅದನ್ನು ತಪ್ಪಿಸಲು ಪ್ರಯತ್ನಿಸುವೆವು" ಎಂದರು ಆಗ ಸರಸ್ವ ತಿಯು ತನ್ನ ವೃತ್ತಾಂತವನ್ನೆಲ್ಲ ತಿಳಿಸಿದಳು ದುಃಖದಿಂದಲೂ, ಭಯ ದಿಂದಲೂ ನಡುಗುತ್ತಿರುವ ಅವಳನ್ನು ನೋಡಿ, ಋಷಿಗಳು "ಓ ಪುಣ್ಯ ವತೀ! ನಿನಗೆ ಈ ಸ್ಥಿತಿಯು ಬಂದ ಕಾರಣವನ್ನೂ, ನಿನ್ನ ಶಾಪವೃತ್ತಾಂತ ವನ್ನೂ ಕೇಳಿದೆವು. ಇದಕ್ಕೆ ಇಲ್ಲಿ ಸೇರಿರುವ ಮಹರ್ಷಿಗಳು ಕಾಲೋಚಿತ ವಾದ ಪ್ರಯತ್ನವನ್ನು ಮಾಡುವರು" ಎಂದು ಹೇಳಿ, ಆಮೇಲೆ ತಮ್ಮೊಳಗೆ ತಾವು 'ಈ ಸರಸ್ವತಿಯನ್ನು ನಾವು ಹೇಗಾದರೂ ಶಾಪದಿಂದ ತಪ್ಪಿಸ ಬೇಕು' ಎಂದು ಸಂಕಲ್ಪಿಸಿಕೊಂಡರು ಒಡನೆಯೇ ಅವರೆಲ್ಲರೂ ಬೇರೆ ಬೇರೆಯಾಗಿ ತಪಸ್ಸುಗಳಿಂದಲೂ, ಬೇರೆಬೇರೆ ತರದ ವ್ರತೋಪವಾಸಗ ಳಿಂದಲೂ, ಇಂದ್ರಿಯನಿಗ್ರಹದಿಂದಲೂ, ಕಠಿನನಿಯಮಗಳಿಂದಲೂ ಪಶು ಪತಿಯೂ, ಲೋಕಪ್ರಭುವೂ ಆದ ಮಹಾದೇವನನ್ನು ಆರಾಧಿಸಿ, ಅವನ ಅನುಗ್ರಹದಿಂದ ಸರಸ್ವತಿಗೆ ಶಾಪವಿಮೋಚನವಾಗುವಂತೆ ಮಾಡಿದರು. ಅವರ ತಪಃಪ್ರಭಾವದಿಂದ ಸರಸ್ವತಿಯು ಮೊದಲಿನಂತೆ ಸ್ವಚ್ಛಜಲದಿಂದ ಪ್ರವಹಿಸತೊಡಗಿದಳು ಅವಳಿಗೆ ಶಾಪವಿಮೋಚನವಾಗಿ, ಮೊದಲಿನಂತೆ ಸಹಜತೇಜಸ್ಸುಂಟಾಯಿತು ಆಗ ಅಲ್ಲಿ ರಕ್ತಪಾನಮಾಡುತ್ತಿದ್ದ ರಾಕ್ಷಸ ರೆಲ್ಲರಿಗೂ ಆಹಾರವಿಲ್ಲದಂತಾಯಿತು. ಅವರೆಲ್ಲರೂ ಹಸಿವಿನಿಂದ ಪೀಡಿತ

ರಾಗಿ, ಆ ಮಹರ್ಷಿಗಳಲ್ಲಿಯೇ ಮರೆಹೊಕ್ಕು ಅವರ ಮುಂದೆ ಕೈಜೋಡಿಸಿ ನಿಂತು ಹೀಗೆಂದು ಪ್ರಾರ್ಥಿಸುವರು. "ಓ ಮಹಾತ್ಮರೇ! ನಾವು ಹಸಿವಿನಿಂದ ಸಾಯುತ್ತಿರುವೆವು ಆದರೆ ನಾವೇನೋ ಶಾಶ್ವತ ಧರ್ಮವನ್ನು ಬಿಟ್ಟುಹೋದವರೇ! ಪಾಪವನ್ನು ಮಾಡುವುದು ನಮಗೆ ಜನ್ಮಗುಣವೇ ಹೊರತು ಇದು ನಮ್ಮ ಸ್ವಬುದ್ಧಿಯಿಂದ ಏರ್ಪಟ್ಟುದಲ್ಲ ನಮ್ಮ ಪ್ರಾರಬ್ಧ ಕರ್ಮದಿಂದಲೂ, ನಿಮ್ಮಂತವರ ಅನುಗ್ರಹವು ನಮ್ಮಮೇಲೆ ಇಲ್ಲದುದರಿಂದಲೂ, ನಮ್ಮ ಜನ್ಮಕ್ಕೆ ಕಾರಣವಾದ ಸ್ತ್ರೀಯರ ದೋಷದಿಂದಲೂ, ನಾವು ಹೀಗೆ ಬ್ರಹ್ಮರಾಕ್ಷಸರಾಗಿ ಹುಟ್ಟಿ ಬೆಳೆದಿರುವೆವು ಹೀಗೆಯೇ ವೈಶ್ಯ, ಶೂದ್ರ, ಕ್ಷತ್ರಿಯರಲ್ಲಿ ಬ್ರಾಹ್ಮಣದ್ವೇಷವನ್ನು ಮಾಡುವವರೂ ನಮ್ಮಂತೆಯೇ ರಾಕ್ಷಸರನಿಸುವರು ಶಕ್ತಿಯುಳ್ಳವರಾಗಿದ್ದರೂ ಯಾರು ಮರೆಹೊಕ್ಕವರನ್ನು ಕಾಪಾಡದೆ ಬಿಡುವರೋ, ಅವರೂ ಈ ಲೋಕದಲ್ಲಿ ರಾಕ್ಷಸರೇ ಆಗುವರು ಮತ್ತು ಯಾರು ಆಚಾರ್ಯನನ್ನೂ, ಋತ್ವಿಕ್ಕುಗಳನ್ನೂ, ಗುರುವನ್ನೂ, ದೊಡ್ಡವರನ್ನೂ ಅವಮತಿಸುವರೋ ಅವರೂ ಈ ಲೋಕದಲ್ಲಿ ರಾಕ್ಷಸರಾಗಿ ಹುಟ್ಟುವರು ಆದುದರಿಂದ ಓ ಬ್ರಾಹ್ಮಣೋತ್ತಮರೇ! ನೀವು ಈಗ ಮರೆಹೊಕ್ಕ ನಮ್ಮನ್ನು ಕಾಪಾಡಬೇಕು. ನೀವು ಸಮಸ್ತಲೋಕವನ್ನೂ ಉದ್ಧರಿಸಬಲ್ಲವರು" ಎಂದು ಬಾರಿಬಾರಿಗೂ ನಮಸ್ಕರಿಸಿ ಪ್ರಾರ್ಥಿಸುತ್ತಿದ್ದರು ಈ ಮಾತನ್ನು ಕೇಳಿ ಋಷಿಗಳು, ಆ ರಾಕ್ಷಸರ ಕಷ್ಟವಿಮೋಚನಕ್ಕಾಗಿ ಆ ಸರಸ್ವತೀನದಿಯನ್ನೇ ಸ್ತೋತ್ರಮಾಡಿ ಪ್ರಾರ್ಥಿಸಿದರು ಆಮೇಲೆ ಆ ರಾಕ್ಷಸರನ್ನು ನೋಡಿ 'ಎಲೈ! ಸೀನುವಾಗ ಎಂಜಲು ಬಿದ್ದುದು, ಹುಳುಬಿದ್ದುದು, ಎಂಜಲಿನ ಸಂಬಂಧವುಳ್ಳುದು, ಕೂದಲು ಸೇರಿದುದು, ಹೀನವಾದುದು, ಕಣ್ಣೀರುಬಿದ್ದುದು, ನಾಯಿಗಳು ಮುಟ್ಟಿದುದು, ಇಂತಹ ಆಹಾರಪದಾರ್ಥವಾವುದುಂಟೋ, ಅದು ಈ ಲೋಕದಲ್ಲಿ ರಾಕ್ಷಸರಾದ ನಿಮ್ಮ ಭಾಗವೆಂದು ಹೇಳಲ್ಪಡುವುದು. ಆದುದರಿಂದ ವಿದ್ವಾಂಸರು ಯಾವಾಗಲೂ ಇಂತಹ ದುಷ್ಟಾನ್ನಗಳನ್ನು ತ್ಯಜಿಸಬೇಕು. ಅಂತಹ ಅನ್ನವನ್ನು ಭುಜಿಸಿದವನು ರಾಕ್ಷಸಾನ್ನವನ್ನು ಭುಜಿಸಿದವನಾಗುವನು' ಎಂದು ಹೇಳಿ, ಆ ರಾಕ್ಷಸರ ಮೋಕ್ಷಕ್ಕಾಗಿ ಆ ನದಿಯನ್ನೇ ಪ್ರೇರಿಸಿದರು. ಈ ಮಹರ್ಷಿಗಳ ಅಭಿಪ್ರಾಯವನ್ನು ತಿಳಿದು ಆ ಸರ

ಸ್ವತೀನದಿಯು ಒಡನೆಂಬೋ ಅರುಣೆಯೆಂಬ ತನ್ನ ಪ್ರವಾಹಶಾಖೆಯನ್ನು ಕಾಣಿಸಿತು ಆ ರಾಕ್ಷಸರು ಅರುಣೆಯಲ್ಲಿ ಸ್ನಾನಮಾಡಿ, ದೇಹವನ್ನು ಬಿಟ್ಟು ಸ್ವರ್ಗವನ್ನು ಸೇರಿದರು ಆ ಅರುಣೆಯು ಬ್ರಹ್ಮಹತ್ಯೆಯನ್ನು ನೀಗಿಸತಕ್ಕ ಮಹಿಮೆಯುಳ್ಳದು. ಹಿಂದೆ ದೇವೇಂದ್ರನೂ ಕೂಡ ಇದನ್ನು ತಿಳಿದು ಆ ತೀರ್ಥದಲ್ಲಿ ಸ್ನಾನಮಾಡಿ, ತನ್ನ ಬ್ರಹ್ಮಹತ್ಯೆಯಿಂದ ವಿಮುಕ್ತ ನಾದನು ” ಎಂದನು

ಆಗ ಜನಮೇಜಯನು “ ವೈಶಂಪಾಯಮುನೀಂದ್ರಾ ! ಇಂದ್ರನಿಗೆ ಬ್ರಹ್ಮಹತ್ಯೆಯು ಬಂದ ಕಾರಣವೇನು ? ಅವನು ಈ ತೀರ್ಥಸ್ನಾನದಿಂದ ಪಾಪವಿಮುಕ್ತನಾದುದು ಹೇಗೆ ? ” ಎಂದು ಕೇಳಲು, ವೈಶಂಪಾಯನನು ಹೇಳುವನು “ ಓ ರಾಜಾ ! ಆ ಕಥೆಯನ್ನು ತಿಳಿಸುವೆನು ಹಿಂದೆ ದೇವೇಂದ್ರನು ನಮುಚಿಯ ಒಡಂಬಡಿಕೆಯನ್ನು ಮುರಿದ ಕಥೆಯೊಂ ದುಂಟು ಹಿಂದೆ ನಮುಚಿಯೆಂಬ ರಾಕ್ಷಸನು ಇಂದ್ರನಿಗೆ ಹೆದರಿ ಸೂರ್ಯ ಕಿರಣದಲ್ಲಿ ಪ್ರವೇಶಿಸಿ ಅವಿತುಕೊಂಡನು ಆಗ ಇಂದ್ರನು ಅವನೊ ಡನೆ ಮೆಲ್ಲಗೆ ಸ್ನೇಹವನ್ನು ಬೆಳೆಸಿ, ಅವನನ್ನು ಕೊಲ್ಲುವುದಕ್ಕೆ ಉಪಾ ಯವನ್ನು ಯೋಚಿಸಿಕೊಂಡು, ಅವನನ್ನು ಕರಯಿಸಿ, ‘ ಓ ದೈತ್ಯೇಂದ್ರಾ! ನಿನ್ನನ್ನು ನಾನು ಆರ್ದ್ರವಸ್ತುವಿನಿಂದಾಗಲಿ, ಒಣಗಿದ ವಸ್ತುವಿನಿಂದಾಗಲಿ ರಾತ್ರಿಯಲ್ಲಿಯಾಗಲಿ, ಹಗಲಿನಲ್ಲಿಯಾಗಲಿ, ಕೊಲ್ಲುವುದಿಲ್ಲವೆಂದು ಸತ್ಯ ಮಾಡಿಕೊಡುವೆನು ನೀನು ಧೈರ್ಯವಾಗಿರು ’ ಎಂದನು. ಹೀಗೆ ಇಂದ್ರನು ಪ್ರತಿಜ್ಞೆಮಾಡಿಕೊಟ್ಟು, ಕೊನೆಗೆ ಆರ್ದ್ರವೂ, ಶುಷ್ಕವೂ ಅಲ್ಲದ ನೊರೆಯಿಂದ ಅವನ ಶಿರಶ್ಛೇದನವನ್ನು ಮಾಡಿದನು ಆಗ ನಮು ಚಿಯ ತಲೆಯು ಇಂದ್ರನನ್ನು ನೋಡಿ ‘ ಓ ಮಿತ್ರಘ್ನಾ ! ಪಾಪೀ ! ’ ಎಂದು ಮೂದಲಿಸುತ್ತ, ಇಂದ್ರನನ್ನು ಬಿಡದಹಾಗೆ ಅಂಟಿಕೊಂಡು, ಅವನನ್ನು ಹಿಂಬಾಲಿಸುತ್ತಲೇ ಬಂದಿತು ಹೀಗೆ ತನ್ನ ಹಿಂದೆ ತನ್ನನ್ನು ಬಾರಿಬಾಗ ಗೂ ಮೂದಲಿಸುತ್ತ ಬರುತ್ತಿರುವ ಆ ಶಿರಸ್ಸಿನಿಂದ ತಪ್ಪಿಸಿಕೊಳ್ಳಲಾರದೆ, ಇಂದ್ರನು ವ್ಯಸನದಿಂದ ಬ್ರಹ್ಮನಲ್ಲಿ ಹೋಗಿ ತನ್ನ ಕಷ್ಟವನ್ನು ತಿಳಿಸಿ ಕೊಂಡನು ಆಗ ಬ್ರಹ್ಮನು ‘ ದೇವೇಂದ್ರಾ ! ನೀನು ಅರುಣಾನದಿಗೆ

ಹೋಗಿ ಅಲ್ಲಿ ಸ್ನಾನಮಾಡಿ ವಿಧ್ಯುಕ್ತವಾಗಿ ಯಜ್ಞವನ್ನು ನಡಸು ಆ ನದಿಯು ಋಷಿಗಳಿಂದ ನಿರ್ಮಿತವಾದ ಪುಣ್ಯಜಲವುಳ್ಳದಾಗಿ ಪಾಪಭಯವನ್ನು ನೀಗಿಸತಕ್ಕುದು ಮೊದಲೇ ಈ ನದಿಯ ಸಂಚಾರವು ಸರಸ್ವತೀ ನದಿಯಲ್ಲಿ ಮರಸಿ ಗುಪ್ತವಾಗಿದ್ದಿತು ಆಮೇಲೆ ಆ ಸರಸ್ವತಿಯೇ ಅರುಣೆಯನ್ನು ತನ್ನ ಪ್ರವಾಹದೊಡನೆ ಸೇರಿಸಿ ಕಲೆಸಿಕೊಂಡಿತು ಆ ಎರಡು ನದಿಗಳೂ ಹಾಗೆ ಸೇರಿದ ಸಂಗಮಸ್ಥಳವು ಬಹಳ ಪುಣ್ಯಕರವಾದುದು. ಅಲ್ಲಿ ನೀನು ಯಜ್ಞ ದಾನಗಳನ್ನು ಮಾಡುತ್ತ ತೀರ್ಥಸ್ನಾನವನ್ನು ಮಾಡುತಿದ್ದರೆ, ಆ ಘೋರಪಾತಕದಿಂದ ಮುಕ್ತನಾಗುವೆ' ಎಂದನು ಅದರಂತೆಯೇ ದೇವೇಂದ್ರನು ಸರಸ್ವತಿಯ ತೀರದಲ್ಲಿ ಅರುಣಾನದಿಯು ಸೇರುವ ಸ್ಥಳದಲ್ಲಿ ಸ್ನಾನ ದಾನಾದಿಗಳನ್ನು ಮಾಡಿ ಪಾಪವಿಮುಕ್ತನಾದನು ಅವನನ್ನು ಅಂಟಿಬಂದಿದ್ದ ನಮುಚಿಯ ಶಿರಸ್ಸು ಆ ತೀರ್ಥದಲ್ಲಿ ಮುಳುಗಿದುದರಿಂದ, ಅದು ಅಕ್ಷಯವಾದ ಮತ್ತು ಸಮಸ್ತ ಕೋರಿಕೆಗಳನ್ನೂ ಈಡೇರಿಸತಕ್ಕ ಲೋಕಗಳನ್ನೂ ಹೊಂದಿತು

ಓ ಜನಮೇಜಯರಾಜಾ! ಬಲರಾಮನು ಆ ತೀರ್ಥದಲ್ಲಿ ಸ್ನಾನಮಾಡಿ, ಅನೇಕ ದಾನಗಳನ್ನು ನಡೆಸಿ, ಅಲ್ಲಿಂದ ಸೋಮತೀರ್ಥಕ್ಕೆ ಹೋದನು ಹಿಂದೆ ಅಲ್ಲಿ ಸೋಮನು ಸ್ವತಃ ರಾಜಸೂಯಯಾಗವನ್ನು ನಡೆಸಿದನು ಆ ಯಾಗದಲ್ಲಿ ಮಹಾಧೀಮಂತನೂ, ಸಾಕ್ಷಾತ್ ಬ್ರಹ್ಮದೇವನ ಪುತ್ರನೂ ಆದ ಅತ್ರಿಯೇ ಹೋತೃಸ್ಥಾನದಲ್ಲಿದ್ದನು ಆ ಯಾಗವು ಮುಗಿದಾಗ ದೈತ್ಯ ದಾನವ ರಾಕ್ಷಸರಿಗೆ ದೇವತೆಗಳೊಡನೆ ಪ್ರಬಲಯುದ್ಧವು ನಡೆಯಿತು ತಾರಕನೆಂಬ ಕ್ರೂರರಾಕ್ಷಸನು ಷಣ್ಮುಖನಿಂದ ಆ ಯುದ್ಧದಲ್ಲಿ ಕೊಲ್ಲಲ್ಪಟ್ಟನು ಆದಕ್ಕೆ ಭಯಂಕರವಾದ ತಾರಕಯುದ್ಧವೆಂದೇ ಹೆಸರಾಯಿತು ಆ ತಾರಕಾಸುರನನ್ನು ಕೊಲ್ಲುವುದಕ್ಕಾಗಿಯೇ ಷಣ್ಮುಖನು ಮಹಾಸೇನನೆಂಬ ಬಿರುದನ್ನು ಪಡೆದು ದೇವಸೇನಾಧಿಪತ್ಯದಲ್ಲಿ ಅಭಿಷೇಕಿಸಲ್ಪಟ್ಟನು ಷಣ್ಮುಖನು ಸಾಕ್ಷಾತ್ತಾಗಿ ಅಲ್ಲಿ ಸಾನ್ನಿಧ್ಯಮಾಡುತ್ತಿದ್ದನು ಅಲ್ಲಿ ಅತ್ಯಂತ ದೊಡ್ಡದಾದ ಆಲದ ಮರವೊಂದುಂಟು. ಅಂತಹ ಪುಣ್ಯತೀರ್ಥಕ್ಕೆ ಬಲರಾಮನು ಬಂದುಸೇರಿದನು'' ಎಂದನು

ಇದು ನಾಲ್ವತ್ತುನಾಲ್ಕನೆಯ ಅಧ್ಯಾಯವು.

## ಕುಮಾರೋತ್ಪತ್ತಿ ವೃತ್ತಾಂತವು

ಆಮೇಲೆ ಜನಮೇಜಯನು ವೈಶಂಪಾಯನನನ್ನು ಕುರಿತು "ಮುನೀಂದ್ರಾ! ಸರಸ್ವತೀನದಿಯ ಪ್ರಭಾವವನ್ನು ಹೇಳಿದೆಯಷ್ಟೆ! ಅಲ್ಲಿ ಕುಮಾರಸ್ವಾಮಿಗೆ ಅಭಿಷೇಕವಾದ ವೃತ್ತಾಂತವನ್ನೂ ಸವಿಸ್ತರವಾಗಿ ನನಗೆ ತಿಳಿಸಬೇಕು ಆ ಅಭಿಷೇಕವು ಯಾವ ಸ್ಥಳದಲ್ಲಿ, ಯಾವಾಗ, ಯಾರಿಂದ ಯಾವ ವಿಧಿಯನ್ನನುಸರಿಸಿ ನಡೆಸಲ್ಪಟ್ಟಿತು? ಷಣ್ಮುಖನು ದೈತ್ಯರೊಡನೆ ಪ್ರಬಲಯುದ್ಧವನ್ನು ಮಾಡಿದುದು ಹೇಗೆ? ಇವನ್ನೆಲ್ಲ ನನಗೆ ತಿಳಿಸಬೇಕು ಅದನ್ನು ಕೇಳುವ ಆಸೆಯು ನನಗೆ ಬಹಳವಾಗಿದೆ" ಎಂದನು ಅದಕ್ಕಾ ವೈಶಂಪಾಯನನು, "ರಾಜೇಂದ್ರಾ! ಉತ್ತಮ ಕುರುವಂಶದಲ್ಲಿ ಹುಟ್ಟಿದ ನಿನಗೆ ಈ ಪುಣ್ಯಚರಿತ್ರಶ್ರವಣದಲ್ಲಿ ಕುತೂಹಲವಿರುವುದು ನ್ಯಾಯವೇ ನಿನಗೆ ಸಂತೋಷಕರವಾದ ಆ ವೃತ್ತಾಂತವನ್ನು ಸಾವಧಾನವಾಗಿ ಕೇಳು ಷಣ್ಮುಖನ ಮಹಿಮೆಯನ್ನೂ, ಅವನ ಅಭಿಷೇಕವೃತ್ತಾಂತವನ್ನೂ ತಿಳಿಸುವೆನು ಹಿಂದೊಮ್ಮೆ ರುದ್ರನು ಪಾರ್ವತಿಯೊಡನೆ ರಮಿಸುತಿದ್ದಾಗ, ಅವನಿಗೆ ವೀರ್ಯಸ್ಖಲನವಾಗಿ ಆ ವೀರ್ಯವು ಅಗ್ನಿಯಲ್ಲಿ ಬಿದ್ದಿತು ಅಗ್ನಿಯು ದಿವ್ಯತೇಜಸ್ಸುಳ್ಳವನಾದರೂ, ಆ ರುದ್ರನ ತೇಜಸ್ಸನ್ನು ಭರಿಸಲಾರದೆ ಕಷ್ಟಪಡುತ್ತ, ಬ್ರಹ್ಮದೇವನಲ್ಲಿ ಹೋಗಿ ತನ್ನ ಕಷ್ಟಗಳನ್ನು ತಿಳಿಸಿಕೊಂಡನು ಅದರಮೇಲೆ ಅಗ್ನಿಯು ಬ್ರಹ್ಮದೇವನ ಆಜ್ಞೆಯಂತೆ ತನ್ನಮೇಲೆ ಬಿದ್ದ ಆ ರುದ್ರತೇಜಸ್ಸನ್ನು ಗಂಗೆಯಲ್ಲಿ ಬಿಟ್ಟನು ಗಂಗೆಯೂ ಆ ತೇಜಸ್ಸಿನ ತಾಪವನ್ನು ತಡೆಯಲಾರದೆ ತನಗಿಂತಲೂ ಶೀತಳವಾದ ಹಿಮಾಲಯದಲ್ಲಿ ಆ ಗರ್ಭವನ್ನು ತಂದುಬಿಟ್ಟಳು. ಅಲ್ಲಿಯೂ ಆ ತೇಜಸ್ಸು ಅಗ್ನಿಮಯವಾಗಿ ಲೋಕಗಳನ್ನೆಲ್ಲ ತನ್ನ ಜ್ವಾಲೆಯಿಂದ ದಹಿಸುವಂತೆ ಬೆಳೆಯುತ್ತ ಬಂದಿತು ಹೀಗೆ ಅಗ್ನಿಮಯವಾಗಿ, ಒಂದು ನೊದೆಯಹುಲ್ಲಿನ ತೆನೆಯಲ್ಲಿ (ಶರಸ್ತಂಬದಲ್ಲಿ) ತೊಂಗುತ್ತಿರುವ ತೇಜೋಮಯವಾದ ೀ ಗರ್ಭವನ್ನು ನೋಡಿ, ಆರುಮಂದಿ ಕೃತ್ತಿಕಾದೇವತೆಗಳೂ ಸಂತಾನದ ಆಸೆಯುಳ್ಳವರಾಗಿ, ನನಗೆ ತನಗೆಂದು ಒಬ್ಬರೊಬ್ಬರಿಗೆ ವಾದಿಸುತ್ತಿದ್ದರು ಆಗ ಅವರ ಅಭಿಪ್ರಾಯವನ್ನು ತಿಳಿದು ಷಣ್ಮುಖದೇವನು ಆ ಆರುಮಂ

ಯು ಸ್ತನಗಳಿಂದ ತೊರೆಯಿಕ್ಕುತಿದ್ದ ಹಾಲನ್ನು ಆರು ಮುಖಗಳಿಂದ ಪಾನಮಾಡಿದನು ಎಳೆಯ ಕೂಸಾಗಿರುವಾಗಲೇ ಆ ಶಿಶುವಿನ ಮಹಿಮೆಯನ್ನು ನೋಡಿ, ಕೃತ್ತಿಕಾದೇವತೆಗಳೆಲ್ಲರೂ ಅತ್ಯಂತ ವಿಸ್ಮಿತರಾದರು. ಗಂಗೆಯು ಆ ತೇಜಸ್ಸನ್ನು ಹಿಮವತ್ಪರ್ವತದ ಯಾವ ಶಿಖರದಲ್ಲಿ ಬಿಟ್ಟಿಳೋ, ಆ ಭಾಗವೆಲ್ಲ ಕೇವಲ ಸುವರ್ಣಮಯವಾಗಿ ಮೇರುವಿನಂತೆ ಪ್ರಕಾಶಿಸಿತು ಈ ಗರ್ಭವು ವೃದ್ಧಿಹೊಂದಿ ಅಲ್ಲಲ್ಲಿ ವ್ಯಾಪಿಸಿದುದರಿಂದಲೇ, ಭೂಮಿಯೆಲ್ಲವೂ ಕಾಂಚನವಿಶಿಷ್ಟವಾಗಿ, ಅದರಿಂದ ಪರ್ವತಗಳೆಲ್ಲ ಸ್ವರ್ಣಮಯಗಳೆನಿಸಿಕೊಂಡುವು ಕುಮಾರಸ್ವಾಮಿಯು ಮೊದಲು ಗಂಗಾಪುತ್ರನೆನಿಸಿಕೊಂಡು, ಆಮೇಲೆ ಕಾರ್ತಿಕೇಯನೆಂಬ ಹೆಸರನ್ನು ಹೊಂದಿದುದಕ್ಕೆ ಇದೇ ಕಾರಣವು ಅವನು ಬಾಲ್ಯದಿಂದಲೇ ಮಹಾವೀರ್ಯವುಳ್ಳವನೂ, ಮಹಾಬಲಶಾಲಿಯೂ, ಮಹತ್ತಾದ ಆಕಾರವುಳ್ಳವನೂ ಆಗಿದ್ದನು ಎಣೆಯಿಲ್ಲದ ಕಾಂತಿ, ತಪಸ್ಸು, ವೀರ್ಯ ಇವೆಲ್ಲವೂ ಅವನಲ್ಲಿ ಒಪ್ಪುತ್ತಿದ್ದುವು ಅವನು ಸುವರ್ಣಮಯವಾದ ಆ ನೊದೆಯ ಹುಲ್ಲಿದ್ದ ಸ್ಥಳದಲ್ಲಿಯೇ ಬೆಳೆಯುತ್ತ, ಅಲ್ಲಿಯೇ ಗಂಧರ್ವರಿಂದಲೂ, ಋಷಿಗಳಿಂದಲೂ ಸದಾ ಸ್ತೋತ್ರಮಾಡಲ್ಪಡುತಿದ್ದನು ಚಂದ್ರನಂತೆ ಪ್ರಿಯದರ್ಶನವುಳ್ಳವನಾಗಿ ಕಾಂತಿವಿಶಿಷ್ಟನಾಗಿದ್ದನು ಅವನು ಆ ಶರಸ್ತಂಬದಲ್ಲಿರುವಾಗ, ಅವನ ದಿವ್ಯ ತೇಜಸ್ಸನ್ನು ನೋಡಿ, ನೃತ್ಯವಾದ್ಯಗಳಲ್ಲಿ ನಿಪುಣರಾದ ಸಾವಿರಾರು ಮಂದಿ ದೇವಕನ್ಯೆಯರು ಅವನನ್ನು ಸ್ತುತಿಸುತ್ತ ನರ್ತನಮಾಡತೊಡಗಿದರು ಎಲ್ಲಾ ಅಗ್ನಿಗಳೂ, ಗಂಗಾನದಿಯೂ ಆ ಶಿಶುವನ್ನು ಸಮೀಪದಲ್ಲಿದ್ದು ಉಪಚರಿಸುತಿದ್ದರು ಭೂದೇವಿಯು ಉತ್ತಮರೂಪವನ್ನು ತಾಳಿ ಬಂದು ಆ ಶಿಶುವನ್ನೆತ್ತಿಕೊಂಡಳು ಬೃಹಸ್ಪತಿಯು ಅಲ್ಲಿಯೇ ಅವನಿಗೆ ಜಾತಕರ್ಮಾದಿ ಕಾರ್ಯಗಳನ್ನೆಲ್ಲ ನಡೆಸಿದನು ನಾಲ್ಕು ವೇದಗಳೂ ನಾಲ್ಕು ಪುರುಷಾಕೃತಿಗಳಿಂದ ಅವನ ಮುಂದೆ ಕೈಮುಗಿದು ನಿಂತುವು ಶಸ್ತ್ರಾಸ್ತ್ರಸಂಗ್ರಹಗಳೊಡನೆ ನಾಲ್ಕು ಪಾದಗಳುಳ್ಳ ಧನುರ್ವೇದವು ತಾನಾಗಿ ಬಂದು ಅವನನ್ನು ಸೇವಿಸುತ್ತಿತ್ತು ಸರಸ್ವತಿಯೂ ಸಾಕ್ಷಾತ್ತಾಗಿ ಬಂದು ಅಲ್ಲಿ ಅವನನ್ನು ಸೇವಿಸುತ್ತಿದ್ದಳು ರುದ್ರನು ಪಾರ್ವತೀಸಮೇತನಾಗಿ, ಅನೇಕ ಭೂತಗಣಗಳೊಡನೆ ಅಲ್ಲಿಗೆ ಬಂದನು ಅಲ್ಲಿದ್ದ ಭೂತಸಮೂಹಗಳ

ಆಕಾರಗಳೆಲ್ಲ ನೋಡುವವರಿಗೆ ಅತ್ಯಾಶ್ಚರ್ಯಕರಗಳಾಗಿದ್ದುವು ಮುಖದಲ್ಲಿಯೂ, ಅಂಗಗಳಲ್ಲಿಯೂ ನಾನಾತರದ ವಿಕಾರರೂಪದಿಂದಿದ್ದ ಆ ಭೂತಗಳ ಆಭರಣಗಳೂ, ಇತರ ಚಿಹ್ನಗಳೂ ಎಲ್ಲವೂ ವಿಕಾರವಾಗಿಯೇ ಇದ್ದುವು ಅವುಗಳಲ್ಲಿ ಹುಲಿಯ ಮುಖವುಳ್ಳವು ಕೆಲವು! ಸಿಂಹದ ಮುಖವುಳ್ಳವು ಕೆಲವು! ಹಾಗೆಯೇ ಕರಡಿ, ಬೆಕ್ಕು, ಮೊಸಳೆ, ಪೃಷದಂಶ, (ಒಂದು ಜಾತಿಯ ಬೆಕ್ಕು) ಆನೆ, ಒಂಟೆ, ಗೂಗೆ, ಹದ್ದು, ನರಿ, ಕ್ರೌಂಚ ಪಕ್ಷಿ, ಪಾರಿವಾಳ, ಜಿಂಕೆ, ಮುಳ್ಳುಹಂದಿ, ಉಡು, ಆಡು, ಕುರಿ, ದನ, ಇವುಗಳಂತೆ ಮುಖವೂ, ಮತ್ತು ಅವುಗಳಂತೆಯೇ ಸಮಸ್ತ ದೇಹಾಕೃತಿಯೂ ಉಳ್ಳ ಭೂತಗಳಿದ್ದುವು ಬೆಟ್ಟದಂತೆಯೂ, ಮೇಘದಂತೆಯೂ ಕೆಲಕೆಲವು ಕಾಣುವುವು. ಕೆಲವು ಕಾಡಿಗೆಯ ರಾಶಿಯಂತೆ ಕಾಣುವುವು! ಚಕ್ರಾಕಾರದ ಕೊಳ್ಳಿಗಳನ್ನೂ, ಗದೆಗಳನ್ನೂ ಆಯುಧವಾಗಿ ಉಳ್ಳವು ಕೆಲವು! ಶ್ವೇತಪರ್ವತದಂತೆ ಬಿಳುಪಾಗಿ ದೊಡ್ಡ ಆಕಾರವುಳ್ಳವು ಕೆಲವು! ಇಂತಹ ಅನೇಕ ಭೂತಗಣಗಳು ನೆರೆದಿದ್ದುವು ಆಗ ಅಲ್ಲಿಗೆ ಸಪ್ತಮಾತೃಗಳೂ, ವಿಶ್ವೇದೇವತೆಗಳೂ, ಸಾಧ್ಯರೂ, ಸಪ್ತ ಮರುತ್ತುಗಳೂ, ಅಷ್ಟವಸುಗಳೂ, ಪಿತೃಗಳೂ, ಏಕಾದಶರುದ್ರರೂ, ದ್ವಾದಶಾದಿತ್ಯರೂ, ಸಿದ್ಧಪನ್ನಗ ಗಂಧರ್ವರೂ, ವಿದ್ಯಾಧರರೂ ಬಂದರು ಪೂಜ್ಯನಾದ ಬ್ರಹ್ಮದೇವನು ತನ್ನ ಮಕ್ಕಳೊಡನೆಯೂ, ವಿಷ್ಣುವಿನೊಡನೆಯೂ ಅಲ್ಲಿಗೆ ಬಂದನು ದೇವೇಂದ್ರನೂ ಮತ್ತು ನಾರದನೇ ಮೊದಲಾದ ದೇವರ್ಷಿಗಳೂ, ದೇವಗಂಧರ್ವಪ್ರಮುಖರೂ, ಬೃಹಸ್ಪತಿ ಮೊದಲಾದವರೂ, ದೇವತೆಗಳಿಗೂ ದೇವತೆಗಳಂತೆ ಪೂಜ್ಯರೂ ಪಿತೃಗಳೂ, ಕುಮಾರಸ್ವಾಮಿಯನ್ನು ನೋಡುವ ಕುತೂಹಲದಿಂದ ಅಲ್ಲಿಗೆ ಬಂದು ಸೇರಿದರು ಯಾಮ ಧಾಮರೆಂಬ ದೇವತೆಗಳೂ ಅಲ್ಲಿಗೆ ಬಂದರು ಹೀಗೆ ಎಲ್ಲರೂ ಅಲ್ಲಿ ನೆರೆದಿದ್ದ ಸಮಯದಲ್ಲಿ ಕೇವಲ ಶಿಶುಮಾತ್ರವಾಗಿದ್ದ ಆ ಷಣ್ಮುಖನು, ಶೂಲಹಸ್ತನಾದ ರುದ್ರನಬಳಿಗೆ ತಾನಾಗಿ ಸರಿದುಬರಲಾರಂಭಿಸಿದನು ಆಗ ಅಲ್ಲಿದ್ದ ಶಿವನಿಗೂ, ಪಾರ್ವತಿಗೂ, ಗಂಗೆಗೂ, ಅಗ್ನಿಗೂ ಆ ಮಗುವು ಮೊದಲು ತಮ್ಮಲ್ಲಿ ಯಾರನ್ನು ಪ್ರೀತಿಯಿಂದ ಗೌರವಿಸುವುದೋ ನೋಡಬೇಕೆಂಬ ಕುತೂಹಲವಿದ್ದಿತು. ಆ ನಾಲ್ವರಿಗೂ ಆ ಶಿಶುವು ತನ್ನ ಬಳಿಗೇ ಬರಬಹುದೆಂಬ

ಆಶೋತ್ತರವೂ ಮನಸ್ಸಿನಲ್ಲಿ ಅಂಕುರಿಸಿ, ಎಲ್ಲರೂ ಆತುರದಿಂದ ನಿರೀಕ್ಷಿಸುತ್ತಿದ್ದರು ಇವರೆಲ್ಲರ ಮನೋಭಾವವನ್ನು ತಿಳಿದುಕೊಂಡು, ಆ ಶಿಶುವು ತನ್ನ ಯೋಗಬಲವನ್ನು ಹಿಡಿದು ಕ್ಷಣಮಾತ್ರದಲ್ಲಿ ಬೇರೆಬೇರೆ ನಾಲ್ಕು ಶರೀರಗಳನ್ನು ತಾಳಿದನು ಮೊದಲು ಸ್ಕಂದನೂ ಅವನ ಹಿಂದೆ ಕ್ರಮವಾಗಿ ಶಾಖ, ವಿಶಾಖ, ನೈಗಮೇಯರೆಂಬ ಮೂವರೂ ಕಾಣಿಸಿದರು. ಈ ನಾಲ್ಕು ವ್ಯಕ್ತಿಗಳಲ್ಲಿ ಸ್ಕಂದನು ರುದ್ರನನ್ನೂ, ವಿಶಾಖನು ಪಾರ್ವತಿಯನ್ನೂ, ಶಾಖನು ಅಗ್ನಿಯನ್ನೂ, ನೈಗಮೇಯನು ಗಂಗೆಯನ್ನೂ ಸಮೀಪಿಸಿದರು ಇವರಲ್ಲರೂ ಸಮಾನರೂಪವುಳ್ಳವರಾಗಿ ತೇಜೋಮೂರ್ತಿಗಳಾಗಿದ್ದರು ಹೀಗೆ ಜ್ವಲಿಸುವ ದಿವ್ಯತೇಜಸ್ಸುಳ್ಳ ನಾಲ್ಕು ಶಿಶುಗಳೂ ತಮತಮಗೆ ಬೇಕಾದ ಆಯಾದೇವತೆಗಳ ಸಮೀಪಕ್ಕೆ ಹೋಗುತ್ತಿರುವುದು ನೋಡುವವರಿಗೆ ಅತ್ಯಾಶ್ಚರ್ಯವನ್ನುಂಟುಮಾಡಿತು ದೇವತೆಗಳು ಅದನ್ನು ನೋಡಿ ಬೆರಗಾಗಿ ಹಾಹಾಕಾರಮಾಡಿದರು. ಆಗ ರುದ್ರನೂ, ಪಾರ್ವತಿಯೂ, ಅಗ್ನಿಯೂ, ಗಂಗೆಯೂ, ಸೃಷ್ಟಿಕರ್ತನೂ ಲೋಕಪ್ರಭುವೂ ಆದ ಬ್ರಹ್ಮದೇವನಲ್ಲಿಗೆ ಬಂದು ನಮಸ್ಕರಿಸಿ, ಆ ಷಣ್ಮುಖಕುಮಾರನಿಗೆ ಪ್ರಿಯವನ್ನುಂಟುಮಾಡುವ ಉದ್ದೇಶದಿಂದ ಹೀಗೆಂದು ಹೇಳುವರು॰ “ ದೇವಾ! ಈ ಬಾಲಕನ ತೇಜಸ್ಸಿಗೆ ತಕ್ಕಂತೆಯೂ, ನಮಗೆ ಪ್ರಿಯವಾಗುವಂತೆಯೂ ಇವನಿಗೆ ಒಳ್ಳೇ ಆಧಿಪತ್ಯವೊಂದನ್ನು ಕೊಡಬೇಕು ” ಎಂದರು ಆಗ ಬ್ರಹ್ಮನು ತನ್ನಲ್ಲಿತಾನೇ ಆ ಬಾಲಕನಿಗೆ ಉಚಿತವಾದ ಅಧಿಕಾರವೇನೆಂದು ಆಲೋಚಿಸಿಕೊಂಡು, ಅವನು ದೇವ ಗಂಧರ್ವ ಯಕ್ಷ ರಾಕ್ಷಸ ಭೂತ ಪನ್ನಗಾದಿಗಳಿಗೆಲ್ಲ ಪ್ರಭುವಾಗಿರಲು ಸಮರ್ಥನೆಂದು ತಿಳಿದು, ಆ ಸ್ಕಂದನಿಗೆ ಎಲ್ಲಾ ದೇವತೆಗಳಮೇಲಿನ ಸೇನಾಧಿಪತ್ಯವನ್ನು ಕೊಟ್ಟನು ದೇವತೆಗಳಲ್ಲಿ ಪ್ರಧಾನರಾದವರೂ, ಆ ಸ್ಕಂದನ ಆಜ್ಞಾಧೀನರಾಗಿರಬೇಕೆಂದು ನಿಯಮಮಾಡಿದನು ಆಗ ಬ್ರಹ್ಮಾದಿ ದೇವತೆಗಳೆಲ್ಲರೂ ಕುಮಾರಸ್ವಾಮಿನ್ನೆತ್ತಿಕೊಂಡು, ಅಭಿಷೇಕಾರ್ಥವಾಗಿ ಪರ್ವತರಾಜನಲ್ಲಿಗೆ ತಂದರು ಹಿಮವತ್ಪರ್ವತದಲ್ಲಿ ಹುಟ್ಟಿದ ಯಾವ ಸರಸ್ವತೀನದಿಯು, ಸಮಂತಪಂಚಕದಲ್ಲಿ ತ್ರೈಲೋಕ್ಯವಿಖ್ಯಾತವಾದ ಪುಣ್ಯತೀರ್ಥವೆಂಬ ಹೆಸ

ರುಗೊಂಡಿದೆಯೋ ಆ ತೀರಪ್ರದೇಶಕ್ಕೆ ಬಂದು ಎಲ್ಲರೂ ಅಲ್ಲಿ ಕುಮಾರಾಭಿಷೇಕಕ್ಕಾಗಿ ಸಂತೋಷದಿಂದ ನೆರೆದಿದ್ದರು

ಇದು ನಾಲ್ವತ್ತೈದನೆಯ ಅಧ್ಯಾಯವು.

(ಸ್ಕಂದನಿಗೆ ಸೇನಾಪತ್ಯದಲ್ಲಿ ಅಭಿಷೇಚನವು ಬ್ರಹ್ಮಾದಿಗಳು ಸ್ಕಂದನಿಗೆ ತಮ್ಮತಮ್ಮ ಕಡೆಯ ಪರಿವಾರಗಳನ್ನು ಕೊಟ್ಟುದು)

ಜನಮೇಜಯರಾಜಾ! ಆಗ ದೇವಪುರೋಹಿತನಾದ ಬೃಹಸ್ಪತಿಯು ಶಾಸ್ತ್ರಾನುಸಾರವಾಗಿ ಅಭಿಷೇಕಸಾಮಗ್ರಿಗಳನ್ನೆಲ್ಲ ಸಿದ್ಧಪಡಿಸಿ, ಅಗ್ನಿಯನ್ನು ಪ್ರತಿಷ್ಠಿಸಿ, ವಿಧ್ಯುಕ್ತವಾಗಿ ಹೋಮಕಾರ್ಯಗಳನ್ನು ಮಾಡಿದನು. ಇಷ್ಟರಲ್ಲಿ ಹಿಮವಂತನಿಂದ ತಂದುಕೊಡಲ್ಪಟ್ಟ ದಿವ್ಯರತ್ನಖಚಿತವಾದ ಭದ್ರಾಸನದಲ್ಲಿ ಸ್ಕಂದನನ್ನು ಕುಳ್ಳಿರಿಸಿದರು ಸಮಸ್ತ ಮಂಗಳದ್ರವ್ಯಗಳೊಡನೆ ಮಂತ್ರಪುರಸ್ಸರವಾಗಿ ಸಿದ್ಧಗೊಳಿಸಲ್ಪಟ್ಟ ಅಭಿಷೇಚನದ್ರವ್ಯಗಳನ್ನು ಹಿಡಿದು ದೇವತಾಗಣಗಳೆಲ್ಲವೂ ಸಿದ್ಧರಾದರು ಇಂದ್ರ ವಿಷ್ಣುಗಳೂ, ಸೂರ್ಯಚಂದ್ರರೂ, ಧಾತೃ ವಿಧಾತೃಗಳೂ, ಅಗ್ನಿ ವಾಯುಗಳೂ, ಪೂಷ, ಭಗ, ಅರ್ಯಮ, ವಿವಸ್ವಾ೯ ಎಂಬೀ ಸ್ವಾಂಶಗಳೊಡನೆ ಸೂರ್ಯನೂ, ತನ್ನ ಮಿತ್ರನಾದ ಕುಬೇರ ವರುಣರೊಡನೆ ರುದ್ರನೂ, ವಸುಗಳೂ, ಆದಿತ್ಯರೂ, ಅಶ್ವಿನೀದೇವತೆಗಳೂ, ಇವರ ನಡುವೆ ರುದ್ರನೂ ಅಲ್ಲಿಗೆ ಬಂದನು ಹಾಗೆಯೇ ದೇವರ್ಷಿಗಳು, ಬ್ರಹ್ಮಋಷಿಗಳು, ಗಂಧರ್ವರು, ಅಪ್ಸರಸ್ಸಗಳು, ಯಕ್ಷ ರಾಕ್ಷಸ ಪನ್ನಗರು, ವಾಲಖಿಲ್ಯರು, ವಾಯುಭಕ್ಷಕರು, ಉಷ್ಣಪರು, ಭೃಗುವಂಶದವರು, ಅಂಗಿರಸರು, ಮಹಾತ್ಮರಾದ ಯತಿಗಳು, ವಿದ್ಯಾಧರರು, ಯೋಗಸಿದ್ಧರು, ಇವರೆಲ್ಲರೊಡನೆ ಪಿತಾಮಹನೂ ಬಂದನು. ಪುಲಸ್ತ್ಯನೂ, ಪುಲಹನೂ, ಅಂಗಿರಸ್ಸೂ, ಅತ್ರಿ ಕಶ್ಯಪ ಮರೀಚಿಗಳೂ, ಭೃಗುವೂ, ಋತು, ಹರಿ, ಪ್ರಚೇತಸ್ಸು, ಮನು, ದಕ್ಷನು, ಷಡೃತುಗಳು, ಗ್ರಹಗಳು, ನಕ್ಷತ್ರಗಳು, ಆಕೃತಿಸಹಿತಗಳಾದ ಸಪ್ತನದಿಗಳು, ಸಪ್ತಸಮುದ್ರಗಳು, ಬೇರೆಬೇರೆ ತೀರ್ಥಗಳು, ಮಡುಗಳು, ನಾಲ್ಕು ವೇದಗಳು, ಎಲ್ಲವೂ

ಅಲ್ಲಿ ಬಂದು ನೆರೆದುವು. ಭೂವ್ಯಾಕಾಶಗಳೂ, ದಿಕ್ಕುಗಳೂ, ವೃಕ್ಷಜಾತಿಗಳೂ, ಅಲ್ಲಿ ಕಾಣಿಸಿದುವು ದೇವಮಾತೆಯಾದ ಅದಿತಿ, ಹ್ರೀ, ಶ್ರೀ, ಸ್ವಾಹೆ, ಸರಸ್ವತಿ, ಉಮೆ, ಶಚಿ, ಚಂದ್ರನು ಕಾಣಿಸತಕ್ಕ ಮತ್ತು ಚಂದ್ರನು ಕಾಣಿಸದಿರುವ ಅಮಾವಾಸ್ಯೆಯ ರಾತ್ರಿಗಳು, (ಸಿನೀವಾಲಿ, ಮತ್ತು ಕುಹು) ಅನುಮತಿ, ರಾಕೆ, ಧಿಷಣೆ, ಇನ್ನೂ ಇತರ ದೇವಪತ್ನಿಯರು, ಹಿಮಾಲಯ, ವಿಂಧ್ಯ, ಅನೇಕ ಶಿಖರಗಳುಳ್ಳ ಮೇರು, ತನ್ನ ಪರಿವಾರಗಳೊಡನೆ ಕೂಡಿದ ಐರಾವತ, ಕಲೆ, ಕಾಷ್ಠೆ, ಮಾಸ, ಪಕ್ಷ, ಋತು, ಹಗಲು, ರಾತ್ರಿ, ಮುಂತಾದ ಕಾಲವಿಭಾಗಗಳು, ಉಚ್ಚೈಃಶ್ರವಸ್ಸು, ವಾಸುಕಿ, ಅರುಣಗರುಡರು, ಓಷಧಿಗಳೊಡನೆ ಸಮಸ್ತ ವೃಕ್ಷಗಳು, ಎಲ್ಲವೂ ಬಂದುವು ಧರ್ಮದೇವನೂ ಬಂದನು ಕಾಲನೂ, ಯಮನೂ, ಮೃತ್ಯುವೂ, ಯಮನ ಇತರ ಅನುಚರರೂ, ಬಂದನು ಓ ಜನಮೇಜಯರಾಜಾ ! ಅಲ್ಲಿ ಬಂದು ನೆರೆದ ದೇವತೆಗಳ ಸಂಖ್ಯೆಯನ್ನು ಎಣಿಸುವುದಕ್ಕೇ ಸಾಧ್ಯವಲ್ಲ ಕುಮಾರಸ್ವಾಮಿಯ ಅಭಿಷೇಕಕ್ಕಾಗಿ ಎಲ್ಲರೂ ಸೇರಿದ ಮೇಲೆ, ಆ ದೇವತೆಗಳೆಲ್ಲರೂ ಅಭಿಷೇಕದ ತೀರ್ಥಕಲಶಗಳನ್ನೂ, ಮಂಗಳ ದ್ರವ್ಯಗಳನ್ನೂ ನಾನಾಕಡೆಯಿಂದ ಸಂಗ್ರಹಿಸಿ ತಂದರು ದಿವ್ಯಸಂಭಾರಗಳಿಂದಕೂಡಿದ ಸುವರ್ಣಕಲಶಗಳಿಂದ ಸರಸ್ವತೀನದಿಯ ಪುಣ್ಯತೀರ್ಥವನ್ನು ತುಂಬಿಕೊಂಡು, ಆ ಕುಮಾರನಿಗೆ ದೇವಸೇನಾಧಿಪತ್ಯದಲ್ಲಿ ಅಭಿಷೇಕವನ್ನು ನಡೆಸಿದರು ಹಿಂದೆ ವರುಣನನ್ನು ಜಲೇಶ್ವರನನ್ನಾಗಿ ಅಭಿಷೇಕಿಸಿದಂತೆ, ಲೋಕಪಿತಾಮಹನಾದ ಬ್ರಹ್ಮನೂ, ಮಹಾತೇಜಸ್ವಿಯಾದ ಕಶ್ಯಪನೂ, ಲೋಕಪ್ರಸಿದ್ಧರಾದ ಇತರ ಮಹರ್ಷಿಗಳೂ ಆ ಅಭಿಷೇಕಕಾರ್ಯವನ್ನು ನಡೆಸಿದರು ಆಗ ಬ್ರಹ್ಮನು, ಮಹಾಬಲಾಢ್ಯರೂ, ವಾಯುವಿನಂತೆ ವೇಗವುಳ್ಳವರೂ, ಇಷ್ಟಬಂದಂತೆ ಪರಾಕ್ರಮವನ್ನು ತೋರಿಸಬಲ್ಲವರೂ, ಸಿದ್ಧಿಪಡೆದವರೂ ಆದ ನಾಲ್ಕುಮಂದಿ ಪಾರ್ಷದರನ್ನು ಷಣ್ಮುಖನಿಗೆ ಅನುಚರರನ್ನಾಗಿ ಕೊಟ್ಟನು ಆ ಪಾರ್ಷದರಿಗೆ ನಂದಿಸೇನ, ಲೋಹಿತಾಕ್ಷ, ಘಂಟಾಕರ್ಣ, ಕುಮುದಮಾಲಿಯೆಂದು ಹೆಸರು ಆಗ ಮಹಾತೇಜಸ್ವಿಯಾದ ಸ್ಥಾಣುವು, ಅನೇಕ ಮಾಯೆಗಳನ್ನು ಬಲ್ಲವನೂ, ಕಾಮವೀರ್ಯಬಲಗಳಿಂದ ಕೂಡಿದವನೂ, ದೇವಶತ್ರುಗಳನ್ನೆಲ್ಲ ನಾಶಮಾಡ

ಬಲ್ಲವನೂ ಆದ ಕಾಮನನ್ನು ಷಣ್ಮುಖನಿಗೆ ಪಾರಿಷದನನ್ನಾಗಿ ನಿಯಮಿಸಿದನು ಓ ರಾಜೇಂದ್ರಾ! ಈ ಕಾಮನು ದೇವ ದಾನವಯುದ್ಧದಲ್ಲಿ ಹದಿನಾಲ್ಕುಲಕ್ಷ ದೈತ್ಯರನ್ನು ತನ್ನ ಎರಡು ತೋಳುಗಳಿಂದಲೇ ಧ್ವಂಸಮಾಡಿದನು ಹಾಗೆಯೇ ಆ ಅಭಿಷೇಕಕಾಲದಲ್ಲಿ ದೇವತೆಗಳು ಷಣ್ಮುಖನಿಗೆ ದುರ್ಜಯವಾದ ನಾನಾಕಾರವುಳ್ಳ ದೊಡ್ಡ ರಾಕ್ಷಸಸೈನ್ಯವನ್ನು ಸಹಾಯಕ್ಕಾಗಿ ಕೊಟ್ಟರು ಆಗ ಇಂದ್ರನೊಡಗೂಡಿ ದೇವ, ಗಂಧರ್ವ, ಯಕ್ಷ ರಾಕ್ಷಸರೂ, ಮಹರ್ಷಿಗಳೂ, ಪಿತೃಗಳೂ ಜಯಶಬ್ದಗಳನ್ನು ಮಾಡಿದರು. ಯಮನು ಉನ್ಮಾದ, ಪ್ರಮಾಥರೆಂಬ ಮಹಾವೀರ್ಯವುಳ್ಳ ಇಬ್ಬರು ಅನುಚರರನ್ನು ಅವನಿಗೆ ಕೊಟ್ಟನು ಸೂರ್ಯನು ತನ್ನ ಅನುಚರರಾದ ಸುಭ್ರಾಜ ಭಾಸ್ವರರೆಂಬವರಿಬ್ಬರನ್ನು ಆ ಸ್ಕಂದನಿಗಾಗಿ ಕೊಟ್ಟನು ಚಂದ್ರನು ಕೈಲಾಸಶಿಖರದಂತೆ ಆಕಾರವುಳ್ಳವರಾಗಿ, ಬಿಳೀಗಂಧಪುಷ್ಪಗಳಿಂದಲಂಕೃತರಾದ ಮಣಿ, ಸುಮಣಿಗಳೆಂಬ ತನ್ನ ಅನುಚರರಿಬ್ಬರನ್ನೂ ಅವನಿಗೆ ಕೊಟ್ಟನು ಅಗ್ನಿಯು ಜ್ವಾಲ, ಜಿಹ್ಮಜ್ಯೋತಿಗಳೆಂಬ ತನ್ನ ಅನುಚರರಿಬ್ಬರನ್ನೂ ಆ ಷಣ್ಮುಖನಿಗೆ ಕೊಟ್ಟನು ಆಗ ಸ್ಕಂದನಿಗೆ ಅಂಶನೆಂಬ ದೇವತೆಯು ಪರಿಘ, ವಟ, ಭೀಮ, ದಹತಿ, ದಹನರೆಂಬ ಐದುಮಂದಿ ಅನುಚರರನ್ನು ಕೊಟ್ಟನು ಇಂದ್ರನು ಉತ್ಕ್ರೋಶ, ಪತ್ಕರ, ವಜ್ರ, ದಂಡಧರರೆಂಬ ನಾಲ್ಕುಮಂದಿ ಅನುಚರರನ್ನು ಕೊಟ್ಟನು ಓ ರಾಜೇಂದ್ರಾ! ಈ ವಜ್ರ ದಂಡಧರರೆಂಬವರಿಬ್ಬರೂ ಯುದ್ಧದಲ್ಲಿ ದೇವೇಂದ್ರನ ಬಹುಮಂದಿ ಶತ್ರುಗಳನ್ನು ಕೊಂದವರು ಆಮೇಲೆ ವಿಷ್ಣುವು ಸ್ಕಂದನಿಗಾಗಿ ಚಕ್ರ, ವಿಕ್ರಮ, ಸಂಕ್ರಮರೆಂಬ ಮೂರುಮಂದಿ ಅನುಚರರನ್ನು ಕೊಟ್ಟನು ದೇವವೈದ್ಯರಾದ ಅಶ್ವಿನೀದೇವತೆಗಳಿಬ್ಬರೂ ಸರ್ವವಿದ್ಯಾವಿಶಾರದರಾದ ವರ್ಧನ, ನಂದನರೆಂಬ ಇಬ್ಬರು ಅನುಚರರನ್ನು ಸ್ಕಂದನಿಗಾಗಿ ಕೊಟ್ಟರು ಆಮೇಲೆ ಧಾತನು ಕುಂದ, ಕುಸುಮ, ಕುಮುದ, ಡಂಬರಾಡಂಬರರೆಂಬ ಐದುಮಂದಿ ಅನುಚರರನ್ನು ಕೊಟ್ಟನು ಆಮೇಲೆ ತ್ವಷ್ಟನು ಆಡಿನಂತೆ ಮುಖವುಳ್ಳವರೂ, ಮಾಯಾವಿಗಳೂ, ಬಲಾಢ್ಯರೂ ಆದ ವಕ್ರಾನುವಕ್ರರೆಂಬ ಇಬ್ಬರು ಅನುಚರರನ್ನು ಕೊಟ್ಟನು ಮಿತ್ರನು ತಪಸ್ಸಿನಲ್ಲಿಯೂ, ವಿದ್ಯೆಯಲ್ಲಿಯೂ ನಿಪುಣರಾದ ಸುವ್ರತ, ಸತ್ಯಸಂಧರೆಂಬ

ಇಬ್ಬರು ಅನುಚರರನ್ನು ಕೊಟ್ಟನು ಇವರಿಬ್ಬರೂ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ರೂಪಸಂಪತ್ತುಳ್ಳವರು, ವರಪ್ರದರು ವಿಧಾತನು, ಸುವ್ರತ ಶುಭಕರ್ಮರೆಂಬ ಇಬ್ಬರು ಅನುಚರರನ್ನು ಕೊಟ್ಟನು ಪೂಷನು ಮಹಾಮಾಯಾವಿಗಳಾದ ಪಾಣೀತಕ, ಕಾಳಿಂಗಕರೆಂಬ ಅನುಚರರಿಬ್ಬರನ್ನು ಷಣ್ಮುಖನಿಗೆ ಪಾರ್ಷದರನ್ನಾಗಿ ಕೊಟ್ಟನು ವಾಯುವು ದೊಡ್ಡ ಮುಖವುಳ್ಳವರೂ, ಮಹಾಬಲಾಢ್ಯರೂ ಆದ ಬಲಾತಿಬಲರೆಂಬ ಇಬ್ಬರು ಅನುಚರರನ್ನು ಕೊಟ್ಟನು ವರುಣನು ತಿಮಿಂಗಿಲಗಳಂತೆ ಮುಖವುಳ್ಳ ಯಮಾತಿಯಮರೆಂಬ ಇಬ್ಬರು ಪಾರ್ಷದರನ್ನು ಕೊಟ್ಟನು ಹಿಮವಂತನು ಸುವರ್ಚಸ್ಸು, ಮತ್ತು ಅತಿವರ್ಚಸ್ಸುಗಳೆಂಬೀ ಅನುಚರರಿಬ್ಬರನ್ನು ಕೊಟ್ಟನು ಮೇರುವು ಕಾಂಚನ ಮೇಘಮಾಲಿಗಳೆಂಬ ಇಬ್ಬರನ್ನೂ, ಮತ್ತು ಸ್ಥಿರಾತಿಸ್ಥಿರರೆಂಬ ಬೇರೆ ಇಬ್ಬರನ್ನೂ ಅಗ್ನಿಪುತ್ರನಾದ ಸ್ಕಂದನಿಗೆ ಪಾರ್ಷದರನ್ನಾಗಿ ಕೊಟ್ಟನು ವಿಂಧ್ಯಪರ್ವತವು ಉಚ್ಛ್ರಂಗ ಅತಿಶೃಂಗರೆಂಬ ಇಬ್ಬರು ಅನುಚರರನ್ನು ಒಪ್ಪಿಸಿದನು ಇವರಿಬ್ಬರೂ ದೊಡ್ಡ ಕಲ್ಲುಗಳಿಂದ ಯುದ್ಧಮಾಡತಕ್ಕವರು ಸಮುದ್ರನು ಗದಾಧಾರಿಗಳಾದ ಸಂಗ್ರಹ ವಿಗ್ರಹರೆಂಬ ಇಬ್ಬರು ಅನುಚರರನ್ನು ಕೊಟ್ಟನು ಪಾರ್ವತೀದೇವಿಯು ಉನ್ಮಾದ, ಶಂಕುಕರ್ಣ, ಪುಷ್ಪದಂತರೆಂಬ ಮೂವರನ್ನು ಕೊಟ್ಟಳು ಗಂಗೆಯು ಜಯ ಮಹಾಜಯರೆಂಬವರಿಬ್ಬರನ್ನು ಕೊಟ್ಟಳು ಸರ್ಪರಾಜನಾದ ವಾಸುಕಿಯು ತನ್ನ ಕಡೆಯ ಅನುಚರರನ್ನು ಕೊಟ್ಟನು ರಾಜಾ! ಹೀಗೆ ಸ್ಕಂದನ ಪಟ್ಟಾಭಿಷೇಕಕಾಲದಲ್ಲಿ ಸಿದ್ಧರೂ, ಸಾಧ್ಯರೂ, ವಸುಗಳೂ, ರುದ್ರರೂ, ಪಿತೃಗಳೂ, ಸಮುದ್ರ ಪರ್ವತ ನದಿಗಳೂ ತಮ್ಮ ತಮ್ಮ ಕಡೆಯಿಂದ ಆಯುಧಧಾರಿಗಳೂ, ಸೇನಾಪತ್ಯದಲ್ಲಿ ಸಮರ್ಥರೂ ಆದ ಅನೇಕ ಪಾರ್ಷದರನ್ನು ಉಡುಗೊರೆಗಳನ್ನಾಗಿ ತಂದೊಪ್ಪಿಸಿದರು ಅವರವರಿಂದ ಇನ್ನೂ ಎಷ್ಟೋ ಮಂದಿ ಪಾರ್ಷದರು ಕೊಡಲ್ಪಟ್ಟರು ಎಲ್ಲರೂ ಉತ್ತಮಾಯುಧಗಳನ್ನು ಧರಿಸಿದವರು ಆ ಸ್ಕಂದನಲ್ಲಿದ್ದ ಸೈನಿಕರ ಹೆಸರುಗಳನ್ನೂ ತಿಳಿಸುವೆನು ಕೇಳು ಶಂಕುಕರ್ಣ, ನಿಕುಂಭ, ಪದ್ಮ, ಕುಮುದ, ಅನಂತ, ದ್ವಾದಶಭುಜ, ಕೃಷ್ಣ, ಉಪಕೃಷ್ಣ, ಘ್ರಾಣಶ್ರವಸ್ಸು, ಕಪಿಸ್ಕಂದ, ಕಾಂಚನಾಕ್ಷ, ಜಲಂಧಮ, ಅಕ್ಷ,

ಸಂತರ್ಜನ, ಕುನದೀಕ, ತಮೋಂತಕೃತ್, ಏಕಾಕ್ಷ, ದ್ವಾದಶಾಕ್ಷ, ಏಕ ಜಟಿ, ಸಹಸ್ರಬಾಹು, ವಿಕಟ, ವ್ಯಾಘ್ರಾಕ್ಷ, ಕ್ಷಿತಿಕಂಪನ, ಪುಣ್ಯನಾಮ, ಸುನಾಮ, ಸುಚಕ್ರ, ಪ್ರಿಯದರ್ಶನ, ಪರಿಶ್ರುತ, ಕೋಕನದ, ಪ್ರಿಯಮಾಲ್ಯಾನುಲೇಪನ, ಅಜೋದರ, ಗಜಶಿರಸ್ಸು, ಸ್ಕಂಧಾಕ್ಷ, ಶತಲೋಚನ, ಜ್ವಾಲಾಜಿಹ್ವ, ಕರಾಲಾಕ್ಷ, ಶಿತಿಕೇಶ, ಜಟಿ, ಹರಿ, ಪರಿಶ್ರುತ, ಕೋಕನದ, ಕೃಷ್ಣಕೇಶ, ಜಲಾಧಾರ, ಚತುರ್ದಂಷ್ಟ್ರ, ಅಷ್ಟಜಿಹ್ವ, ಮೇಘನಾದ, ಪೃಥುಶ್ರವ, ವೈದ್ಯುತಾಕ್ಷ, ಧನುರ್ವಕ್ತ್ರ, ಜಾಠರ, ಮಾರುತಾಶನ, ಉದರಾಕ್ಷ, ರಥಾಕ್ಷ, ವಜ್ರನಾಭ, ವಸುಪ್ರಭ, ಸಮುದ್ರವೇಗ, ಶೈಲಕಂಪಿ, ವೃಷ, ಮೇಷ, ಪ್ರವಾಹ, ನಂದ, ಉಪನಂದ, ಧೂಮ್ರ, ಶ್ವೇತ, ಕಳಿಂಗ, ಸಿದ್ಧಾರ್ಥ, ವರದ, ಪ್ರಿಯಕ, ಗೋನಂದ, ಆನಂದ, ಪ್ರಮೋದ, ಸ್ವಸ್ತಿಕ, ಧ್ರುವಕ, ಕ್ಷೇಮವಾಹ, ಸುವಾಹ, ಸಿದ್ಧಪಾತ್ರ, ಗೋವ್ರಜ, ಕನಕಾಪೀಡ, ಗಾಯನ, ಹಸನ, ಬಾಣ, ಖಡ್ಗ, ವೈತಾಳಿ, ಗತಿತಾಲಿ, ಕಥಕ, ವಾದಿಕ, ಹಂಸಜ, ಪಂಕದಿಗ್ಧಾಂಗ, ಸಮುದ್ರೋನ್ಮಾದನ, ರಣೋತ್ಕಟ, ಪ್ರಹಾಸ, ಶ್ವೇತಸಿದ್ಧ, ನಂದನ, ಕಾಲಕಂಠ, ಪ್ರಭಾಸ, ಕುಂಭಾಂಡಕೋದರ, ಕಾಲಕಕ್ಷ, ಸಿತ, ಭೂತಮಥನಕ, ಯಜ್ಞವಾಹ, ಸುವಾಹ, ದೇವಯಾಜಿ, ಸೋಮಪ, ಮಜ್ಜಾನ, ಕ್ರಥ, ಕ್ರಾಥ, ತುಹರ, ತುಹಾರ, ಚಿತ್ರದೇವ, ಮಧುರ, ಸುಪ್ರಸಾದ, ಕಿರೀಟಿ, ವತ್ಸಲ, ಮಧುವರ್ಣ, ಕಲಶೋದರ, ಧರ್ಮದ, ಮನ್ಮಥಕರ, ಸೂಚೀವಕ್ತ್ರ, ಶ್ವೇತವಕ್ತ್ರ, ಸುವಕ್ತ್ರ, ಚಾರುವಕ್ತ್ರ, ಪಾಂಡುರ, ದಂಡಬಾಹು, ಸುಬಾಹು, ಕೋಕಿಲಕ, ರಜಸ್ಸು, ಅಚಲ, ಕನಕಾಕ್ಷ, ಬಾಲಪ್ರಭು, ಸಂಚಾರಕ, ಕೋಕನದ, ಗೃಧ್ರಪತ್ರ, ಜಂಬುಕ, ಲೋಹಾಜಪತ್ರ, ಜವನ, ಕುಂಭವಕ್ತ್ರ, ಕುಂಭಕ, ಸ್ವರ್ಣಗ್ರೀವ, ಕೃಷ್ಣೌಜಸ್ಸು, ಹಂಸವಕ್ತ್ರ, ಚಂದ್ರಭ, ಪಾಣಿಕೂರ್ಚ, ಶಂಬೂಕ, ಪಂಚವಕ್ತ್ರ, ಶಿಕ್ಷಕ, ಚಾಷವಕ್ತ್ರ, ಜಂಬೂಕ, ಶಾಕವಕ್ತ್ರ, ಕುಂಜಲ, ಯೋಗಯೊಕ್ತ್ರೃ, ಇವೇ ಮುಂತಾಗಿ ಇನ್ನೂ ಬೇರೆ ಬೇರೆ ಹೆಸರಿನವರುಂಟು. ಓ ರಾಜೇಂದ್ರಾ! ಇವರೆಲ್ಲರೂ ಮಹಾಬಲವುಳ್ಳವರು ಯಾವಾಗಲೂ ಬ್ರಾಹ್ಮಣಪ್ರಿಯರು ಬ್ರಹ್ಮದೇವನಿಗೆ ಸಂಬಂಧಪಟ್ಟವರು! ಮಹಾಬುದ್ಧಿವಂತರು! ಮಹಾಸಭೆಯಲ್ಲಿ ಸೇರಿದವರು.

ಅದರಲ್ಲಿ ಯುವಕರೂ, ಬಾಲರೂ, ವೃದ್ಧರೂ, ಸೇರಿರುವರು. ಹೀಗೆ ಸಾವಿರಾರು ಪಾರ್ಷದರು ಅಭಿಷೇಕಕಾಲದಲ್ಲಿ ಕುಮಾರನನ್ನು ಸೇವಿಸುತ್ತಿದ್ದರು ಆ ಪಾರ್ಷದಗಣಗಳಲ್ಲಿ ಸೇರಿದವರಿಗೆ ಚಿತ್ರವಿಚಿತ್ರಗಳಾಗಿ, ವೈರಿಭಯಂಕರಗಳಾದ ನಾನಾತರದ ಮುಖಗಳಿದ್ದುವು ಕೆಲವರ ಮುಖವು ಆಮೆಯ ಮುಖದಂತಿರುವುದು, ಕೆಲವರ ಮುಖವು ಕೋಳಿಯ ಮುಖದಂತಿರುವುದು, ಹಾಗೆಯೇ ಮೊಲ, ಗೂಬೆ, ಕತ್ತೆ, ಒಂಟೆ, ಹಂದಿ, ಬೆಕ್ಕು, ಇವುಗಳ ಮುಖದಂತೆಯೇ ಮುಖವುಳ್ಳವರು ಕೆಲವರು, ಕೆಲವರಿಗೆ ಮುಖವು ಅತಿದೀರ್ಘವಾಗಿರುವುದು, ಕೆಲವರಿಗೆ ಮುಂಗಿಸಿಯಂತೆಯೂ, ಕೆಲವರಿಗೆ ಕಾಗೆಯಂತೆಯೂ, ಕೆಲವರಿಗೆ ನವಿಲಿನಂತೆಯೂ, ಕೆಲವರಿಗೆ ಇಲಿ ಹೆಗ್ಗಣಗಳಂತೆಯೂ ಮುಖಗಳುಂಟು. ಮೀನು, ಮೇಕೆ, ಕುರಿ, ಎಮ್ಮೆ, ಹುಲಿ, ಕರಡಿ, ಸಿಂಹ, ಇವುಗಳ ಮುಖದಂತೆ ಮುಖವುಳ್ಳವರೂ ಅನೇಕರಿರುವರು ಆನೆ, ಮೊಸಳೆಗಳಂತೆ ಮುಖವುಳ್ಳವರು ಕೆಲವರು, ಹದ್ದು ಗರುಡಪಕ್ಷಿ, ಇವುಗಳಂತೆ ಮುಖವುಳ್ಳವರು ಕೆಲವರು, ಕೆಲವರಿಗೆ ದೊಡ್ಡ ಹೊಟ್ಟೆ, ಕೆಲವರಿಗೆ ದೊಡ್ಡ ಪಾದಗಳು, ಕೆಲವರಿಗೆ ದೊಡ್ಡ ಮೈ, ನಕ್ಷತ್ರಗಳಂತೆ ಕಣ್ಣುಗಳು, ಪಾರಿವಾಳದಂತೆ ಕೆಲವರಿಗೆ ಕೊಕ್ಕುಗಳು ವೃಷಭದಂತೆ ಮುಖವುಳ್ಳವರು ಕೆಲವರು, ಕೋಗಿಲೆ, ಗಿಡುಗ, ತಿತ್ತಿರಿಪಕ್ಷಿ, ಇವುಗಳಂತೆ ಮುಖವುಳ್ಳವರು ಕೆಲವರು, ಹಾವಿನಂತೆ ಮುಖವುಳ್ಳವರು ಕೆಲವರು, ಕೆಲವರ ಮುಖವು ಶೂಲಾಕಾರದಲ್ಲಿರುವುದು, ಕೆಲವರಿಗೆ ಅತಿಭಯಂಕರವಾದ ಮೂತಿ, ಕೆಲವರು ಮಂಗಳಕರವಾದ ಸೌಮ್ಯಮುಖವುಳ್ಳವರು, ಕೆಲವರು ಶುಭ್ರವಾದ ಬಟ್ಟೆಯನ್ನುಟ್ಟಿರುವರು, ಕೆಲವರಿಗೆ ಹಲ್ಲಿನಲ್ಲಿ ವಿಷವಿರುವುದು ಕೆಲವರು ನಾರುಬಟ್ಟೆಯನ್ನುಟ್ಟಿರುವರು ಕೆಲವರಿಗೆ ಮೂಗೇ ಬಾಯಿ, ಉಬ್ಬಿದ ಹೊಟ್ಟೆಯುಳ್ಳವರು ಕೆಲವರು, ತೆಳುವಾದ ಹೊಟ್ಟೆಯುಳ್ಳವರು ಕೆಲವರು, ಕೆಲವರಿಗೆ ದೊಡ್ಡ ಮೈ, ಕೆಲವರಿಗೆ ಕೃಶವಾದ ಮೈ, ಕೆಲವರಿಗೆ ಕುಗ್ಗಿದ ಕೊರಲು, ದೊಡ್ಡ ಕಿವಿಗಳು, ನಾನಾತರದ ಸರ್ಪಗಳೇ ಕೆಲವರ ಆಭರಣಗಳು, ಕೆಲವರು ಗಜಚರ್ಮವನ್ನೂ, ಕೆಲವರು ಕೃಷ್ಣಾಜಿನವನ್ನೂ ಉಟ್ಟಿರುವರು ಕೆಲವರಿಗೆ ಹೆಗಲಿನಲ್ಲಿ ಬಾಯಿ, ಕೆಲವರಿಗೆ

ಹೊಟ್ಟೆಯಲ್ಲಿ ಬಾಯಿ, ಹಾಗೆಯೇ ಕೆಲವರಿಗೆ ಬೆನ್ನಿನಲ್ಲಿಯೂ, ಕೆಲವರಿಗೆ ದವಡೆಯಲ್ಲಿಯೂ, ಕೆಲವರಿಗೆ ಮೊಳಕಾಲಿನಲ್ಲಿಯೂ, ಕೆಲವರಿಗೆ ಪಾರ್ಶ್ವಗಳಲ್ಲಿಯೂ ಬಾಯಿಗಳುಂಟು ಕೆಲವರಿಗೆ ಶರೀರದ ಎಲ್ಲಾ ಭಾಗಗಳಲ್ಲಿಯೂ ಮುಖಗಳು ಕಾಣುವುವು ಕೆಲವರಿಗೆ ಕಣಜದ ಹುಳದಂತೆಯೂ, ಪತಂಗದಂತೆಯೂ ಮುಖಗಳು ಕೆಲವರಿಗೆ ಅನೇಕ ಬಾಹುಗಳು, ಹಲವು ಕುತ್ತಿಗೆಗಳು, ದೊಡ್ಡ ಮರಗಳಂತೆ ಭುಜಗಳು, ಕೆಲವರಿಗೆ ನೊಂಟದಲ್ಲಿ ತಲೆ, ಕೆಲವರಿಗೆ ಸರ್ಪದೇಹದಂತಿರುವ ಬಾಯಿ, ಕೆಲವರಿಗೆ ಪೊದೆಗಳೇ ಮೈಮೇಲಿನ ಹೊದಿಕೆ, ಕೆಲವರು ನಾರ್ಮಡಿಯನ್ನುಟ್ಟಿರುವರು ಕೆಲವರು ಸರಿಗೆಯ ಬಟ್ಟೆಯನ್ನು ಧರಿಸಿರುವರು ಕೆಲವರು, ಅಂದವಾದ ಕೊರಳಿನಿಂದಲೂ, ಒಳ್ಳೆಯ ತೇಜಸ್ಸಿನಿಂದಲೂ ಶೋಭಿಸುತ್ತಿರುವರು ಕೆಲವರಿಗೆ ಪಂಚಶಿಖೆಗಳು, ಹಾಗೆಯೇ ಎರಡು, ಮೂರು, ಏಳು ಶಿಖೆಗಳನ್ನೂ ಧರಿಸಿದವರುಂಟು ಕೆಲವರಿಗೆ ಚಿನ್ನದ ಸರಿಗೆಯಂತೆ ಕೂದಲು, ತಲೆಯಲ್ಲಿ ಕೂದಲೇ ಇಲ್ಲದವರು ಕೆಲವರು, ಜಡೆಯನ್ನು ಬೆಳೆಸಿದವರು ಕೆಲವರು, ಕೆಲವರು ವಿಚಿತ್ರಮಾಲಿಕೆಯನ್ನು ಧರಿಸಿರುವರು ಕೆಲವರಿಗೆ ಮುಖವೆಲ್ಲ ಕೂದಲು, ದೇವತೆಗಳಿಗೂ ದುರ್ಜಯರಾಗಿ ಯುದ್ಧದಲ್ಲಿಯೇ ಆಸೆಯುಳ್ಳವರು ಕೆಲವರು, ಕೆಲವರ ಬಣ್ಣವು ಕಪ್ಪು, ಮಾಂಸವೇ ಇಲ್ಲದ ಮುಖವುಳ್ಳವರು ಕೆಲವರು, ಕೆಲವರಿಗೆ ಉದ್ದವಾದ ಬೆನ್ನು, ಕೆಲವರಿಗೆ ದೊಡ್ಡ ಬೆನ್ನು, ಕೆಲವರಿಗೆ ಜೋಲುವ ಹೊಟ್ಟೆ, ಕೆಲವರ ಹೊಟ್ಟೆಯು ಕಾಣದಷ್ಟು ಸೂಕ್ಷ್ಮವಾಗಿರುವುದು, ಕೆಲವರ ಭುಜವು ಉದ್ದವಾಗಿಯೂ, ಕೆಲವರದು ಕುರುಚಾಗಿಯೂ ಇರುವುದು, ಕೆಲವರು ಕುಳ್ಳರು, ಕೆಲವರು ಗುಜ್ಜಾರಿಗಳು, ಕೆಲವರು ಕುರುಚುಗಾಲಿನವರು, ಆನೆಯಂತೆ ಕಿವಿಯೂ, ಕತ್ತೂ, ಮೂಗೂ ಉಳ್ಳವರು ಕೆಲವರು, ಆಮೆಯಂತೆಯೂ, ತೋಳಿನಂತೆಯೂ, ಮೂಗುಳ್ಳವರು ಕೆಲವರು, ಕೆಲವರಿಗೆ ಕೋಲಿನಂತೆ ಉದ್ದವಾದ ಮಂಡಿ, ದೀರ್ಘಶ್ವಾಸವುಳ್ಳವರು ಕೆಲವರು, ಕೆಲವರು ನೆಲವನ್ನೇ ನೋಡುವಂತೆ ಅಧೋಮುಖವುಳ್ಳವರು, ಕೆಲವರಿಗೆ ದೊಡ್ಡ ಕೋರೆಗಳು, ಕೆಲವರಿಗೆ ಸಣ್ಣ ಕೋರೆಗಳು, ನಾಲ್ಕು ಕೋರೆಹಲ್ಲುಗಳುಳ್ಳವರು ಕೆಲವರು, ಐರಾವತದಂತೆ ಕಾಣುವವರು ಕೆಲವರು, ಭಯಂಕರವಾದ ರೂಪವುಳ್ಳವರು

ಕೆಲವರು, ಒಳ್ಳೇ ತೇಜೋವಂತರಾಗಿ, ಅಲಂಕೃತರಾಗಿ, ಸ್ಪಷ್ಟವಾದ ಅವಯುವ ವಿಭಾಗವುಳ್ಳವರು ಕೆಲವರು,, ಕೆಲವರಿಗೆ ಪಿಂಗಳದೃಷ್ಟಿ, ಕೆಂಪಾದ ಮೂಗು, ಶಂಕುವಿನಂತೆ ಕಿವಿ, ದಪ್ಪ ತುಟಿ, ಹಸುರಾದ ಕೂದಲು, ಹೀಗೆಲ್ಲ ನಾನಾತರದ ರೂಪಗಳಿಂದಲೂ, ನಾನಾತರದ ಅವಯುವಗಳಿಂದಲೂ ಅನೇಕರು ಕಾಣಿಸುತ್ತಿದ್ದರು ಕಾಲು, ತುಟಿ, ಹಲ್ಲು, ಕೈ, ಕೊರಲು, ಮೈತೊಗಲು, ಆಡುವಭಾಷೆ ಇವೆಲ್ಲವೂ ಅನೇಕರಿಗೆ ಅನೇಕವಿಧವಾಗಿರುವುವು. ದೇಶಭಾಷೆಗಳಲ್ಲಿ ಒಬ್ಬರಿಗೊಬ್ಬರು ಚಮತ್ಕಾರವಾಗಿ ಮಾತಾಡುತ್ತಿದ್ದರು ಇಂತಹ ಮಹಾಪಾರ್ಷದ ಗಣಗಳು ಸಂತೋಷದಿಂದ ಆ ಸ್ಕಂದನ ಸುತ್ತಲೂ ನೆರೆದಿದ್ದರು ಪಿಂಗಳ ನೇತ್ರಗಳು, ಉದ್ದವಾದ ಕೊರಲು, ಉದ್ದವಾದ ಉಗುರುಗಳು, ಕಪ್ಪಾದ ಕತ್ತು, ಜೋಲುವ ಕಿವಿ, ಇಂತಹ ಆಕಾರಗಳಿಂದ ಅಲ್ಲಲ್ಲಿ ಕೆಲವರು ಕಾಣಿಸುತ್ತಿದ್ದರು ಕೆಲವರು ಅಂಜನಪರ್ವತದಂತೆ ಕಪ್ಪುಕಾಂತಿಯುಳ್ಳವರು, ಕೆಲವರು ಬಿಳಿಯ ಕಣ್ಣುಳ್ಳವರು, ಕೆಂಪಾದ ಕತ್ತುಳ್ಳವರು ಕೆಲವರು, ವಿಚಿತ್ರವರ್ಣವುಳ್ಳವರು ಕೆಲವರು, ಚಾಮರದಂತೆ ಬಿಳುಪಾದವರು ಕೆಲವರು, ಬೆಳರ್ಗೆಂಪುಬಣ್ಣದವರು ಕೆಲವರು, ನವಿಲಿನಂತೆ ಬಣ್ಣವುಳ್ಳವರು ಕೆಲವರು, ಹೀಗೆ ನಾನಾವರ್ಣಗಳಿಂದ ಶೋಭಿಸುತ್ತಿದ್ದರು ಇನ್ನು ಅವರ ಆಯುಧಗಳನ್ನು ನೋಡುವುದಾದರೆ, ಕೆಲವರು ಭಯಂಕರವಾದ ಬಾಯನ್ನು ತೆರೆದುಕೊಂಡು ಪಾಶವನ್ನೆತ್ತಿ ಹಿಡಿದಿರುವರು ಬಾಗಿಲಗುಳಿಯಂತೆ ಭುಜಗಳುಳ್ಳ ಕೆಲವರು ಶತಘ್ನಿಗಳನ್ನೂ, ಚಕ್ರಗಳನ್ನೂ, ಮುಸಲಗಳನ್ನೂ ಹಿಡಿದಿರುವರು ಹಾಗೆಯೇ ಕೆಲಕೆಲವರು ಕತ್ತಿ, ಗದೆ, ಭುಸುಂಡಿ, ತೋಮರ, ಮುದ್ಗರ, ದಂಡ, ಮೊದಲಾದ ವಿವಿಧಾಯುಧಗಳನ್ನು ಹಿಡಿದಿರುವರು ಇವರೆಲ್ಲರೂ ಮಹಾವೇಗವುಳ್ಳವರು. ಮಹಾಬಲಾಢ್ಯರು, ಇಂತಹ ಪಾರ್ಷದಗಣಗಳೆಲ್ಲ ಆ ಸ್ಕಂದನ ಅಭಿಷೇಕವನ್ನು ಸಂತೋಷದಿಂದ ನಿಂತು ನೋಡುತ್ತಿದ್ದರು ಕೆಲವರು ಮೈಗೆಲ್ಲ ಗಂಟೆಗಳನ್ನು ಕಟ್ಟಿಕೊಂಡು ಸಂತೋಷದಿಂದ ನರ್ತಿಸುತ್ತಿದ್ದರು ಭೂಮಿಯಲ್ಲಿಯೂ, ಆಕಾಶದಲ್ಲಿಯೂ, ಸ್ವರ್ಗದಲ್ಲಿಯೂ, ಅಂತರಿಕ್ಷದಲ್ಲಿಯೂ ಇದ್ದ ಸಮಸ್ತ ಪ್ರಾಣಿಗಳೂ ಆ ಷಣ್ಮುಖನನ್ನು ಸ್ತುತಿಸುತ್ತಿದ್ದರು. ದೇವತೆಗಳಿಂದ ನಿಯಮಿಸಲ್ಪಟ್ಟ ಅನೇಕ

ಶೂರರು ಲಕ್ಷಕೋಟಿಸಂಖ್ಯೆಯಿಂದ ಆ ಸ್ಕಂದನ ಅಭಿಷೇಕಕಾಲದಲ್ಲಿ ಅವನ ಸುತ್ತಲೂ ನೆರೆದಿದ್ದರು.

ಇದು ನಾಲ್ವತ್ತಾರನೆಯ ಅಧ್ಯಾಯವು

ಮಾತೃಗಣಗಳ ಹೆಸರು ಕುಮಾರನು ತಾರಕಾಸುರನನ್ನು ಸಂಹರಿಸಿದ ಕಥ, ಕ್ರೌಂಚಪರ್ವತವನ್ನು ಭೇದಿಸಿದುದು

ಜನಮೇಜಯರಾಜಾ! ಇನ್ನು ಷಣ್ಮುಖನ ಅನುಚರರಲ್ಲಿ ಶತ್ರುಸಂಹಾರಕರಾದ ಮಾತೃಗಣಗಳನ್ನು ತಿಳಿಸುವೆನು ಕೇಳು ಅವರು ಆಶ್ರಿತರಿಗೆ ಶುಭಕಾರಿಗಳಾಗಿ ಮೂರು ಲೋಕಗಳನ್ನೂ ವ್ಯಾಪಿಸಿರುವರು. ಆ ಮಾತೃದೇವತೆಗಳ ಹೆಸರುಗಳನ್ನೆಲ್ಲ ಕ್ರಮವಾಗಿ ಹೇಳುವೆನು ಕೇಳು ಪ್ರಭಾವತಿ, ವಿಶಾಲಾಕ್ಷಿ, ಪಾಲಿತೆ, ಗೋಸ್ತನಿ, ಶ್ರೀಮತಿ, ಬಹುಳೆ, ಬಹುಪುತ್ರಿಕೆ, ಅಪ್ಸುಜಾತೆ, ಗೋಪಾಲಿ, ಬೃಹದಂಬಾಲಿಕೆ, ಜಯಾವತಿ, ಮಾಲತಿಕೆ, ಧ್ರುವರತ್ನೆ, ಭಯಂಕರಿ, ವಸುದಾಮೆ, ದಾಮೆ, ವಿಶೋಕೆ, ನಂದಿನಿ, ಏಕಚೂಡೆ, ಮಹಾಚೂಡೆ, ಚಕ್ರನೇಮಿ, ಉತ್ತೇಜನಿ, ಜಯತ್ಸೇನೆ, ಕಮಲಾಕ್ಷಿ, ಶತ್ರುಂಜಯೆ, ಕ್ರೋಧನೆ, ಶಲಭಿ, ಖರಿ, ಮಾಧವಿ, ಶುಭವಕ್ತ್ರೆ, ತೀರ್ಥಸೇನಿ, ಗೀತಪ್ರಿಯೆ, ಕಲ್ಯಾಣಿ, ರುದ್ರರೋಮೆ ಅಮಿತಾಶನೆ, ಮೇಘಸ್ವನೆ, ಭೋಗವತಿ, ಸುಭ್ರು, ಕನಕಾವತಿ, ಅಲಾತಾಕ್ಷಿ, ವೀರ್ಯವತಿ, ವಿದ್ಯುಜ್ಜಿಹ್ವೆ, ಪದ್ಮಾವತಿ, ಸುನಕ್ಷತ್ರೆ, ಕಂದರೆ, ಬಹುಯೋಜನೆ, ಸಂತಾನಿಕೆ, ಕಮಲೆ, ಮಹಾಬಲೆ, ಸುದಾಮೆ, ಬಹುದಾಮೆ, ಸುಪ್ರಭೆ, ಯಶಸ್ವಿನಿ, ನೃತ್ಯಪ್ರಿಯೆ, ಶತೋಲೂಖಲೆ, ಮೇಖಲೆ, ಶತಘಂಟೆ, ಶತಾನಂದೆ, ಭಗನಂದೆ, ಭಾಮಿನಿ, ವಪುಷ್ಮತಿ, ಚಂದ್ರಶೀತೆ, ಭದ್ರಕಾಳಿ, ಖುಕ್ಷಾಂಬಿಕೆ, ನಿಷ್ಕುಟಿಕೆ, ವಾಮೆ, ಚತ್ವರವಾಸಿನಿ, ಸುಮಂಗಲೆ, ಸ್ವಸ್ತಿಮತಿ, ಬುದ್ಧಿಕಾಮೆ, ಜಯಪ್ರಿಯೆ, ಧನದೆ, ಭವದೆ, ಜಲೇಶ್ವರಿ, ಸುಪ್ರಸಾದೆ, ಏಡಿ, ಭೇಡಿ, ಸಮೇಡಿ, ಭೇತಾಳಜನನಿ, ಕಂಡೂತಿ, ಕಾಲಿಕೆ, ದೇವಮಿತ್ರೆ, ವಸುಶ್ರೀ, ಕೋಟರೆ, ಚಿತ್ರಸೇನೆ, ಅಚಲೆ, ಕುಕ್ಕುಟಿಕೆ, ಶಂಖಲಿಕೆ, ಶಕುನಿಕೆ, ಕುಂಡಾರಿಕೆ, ಕೌಕಿಲಿಕೆ, ಕುಂಭಿಕೆ, ಶತೋ

ದರೆ, ಉತ್ಕ್ರಾಥಿನಿ, ಜಲೇಲೆ, ಮಹಾವೇಗೆ, ಕಂಕಣೆ, ಮನೋಜವೆ, ಕಂಟಕಿನಿ, ಪ್ರಘಸೆ, ಪೂತನೆ, ಕೇಶಯಂತ್ರಿ, ತ್ರುಟಿ, ವಾಮೆ, ಕ್ರೋಶನೆ, ತಟಿತ್ಪ್ರಭೆ, ಮಂಡೋದರಿ, ಮುಂಡಿ, ಕೋಟರೆ, ಮೇಘವಾಹಿನಿ, ಸುಭಗೆ, ಲಂಬಿನಿ, ಲಂಬೆ, ತಾಮ್ರಚೂಡೆ, ವಿಕಾಸಿನಿ, ಊರ್ಧ್ವವೇಣೀಧರೆ, ಪಿಂಗಾಕ್ಷಿ, ಲೋಹಮೇಖಲೆ, ಪೃಥುವಸ್ತ್ರೆ, ಮಧುಲಿಕೆ, ಮಧುಕುಂಭೆ, ಪಕ್ಷಾಲಿಕೆ, ಮತ್ಕುಲಿಕೆ, ಜರಾಯು, ಜರ್ಜರಾನನೆ, ದಹದಹೆ, ಧಮಧಮೆ, ಖಂಡಖಂಡೆ, ಪೂಷಣೆ, ಮಣಿಕುಟ್ಟಿಕೆ, ಅಮೋಘೆ, ಲಂಬಪಯೋಧರೆ, ವೇಣುವೀಣಾಧರೆ, ಪಿಂಗಾಕ್ಷಿ, ಶಶೋಲೂಕಮುಖಿ, ಕೃಷ್ಣೆ, ಖರಜಂಘೆ, ಮಹಾಜವೆ, ಶಿಂಶುಮಾರಮುಖಿ, ಶ್ವೇತೆ, ಲೋಹಿತಾಕ್ಷಿ, ವಿಭೀಷಣೆ, ಜಟಾಲಿಕೆ, ಕಾಮಚರಿ, ದೀರ್ಘಜಿಹ್ವೆ, ಬಲೋತ್ಕಟೆ, ಕಾಲೇಹಿಕೆ, ವಾಮನಿಕೆ, ಮುಕುಟೆ, ಮಹಾಕಾಯೆ, ಹರಿಪಿಂಡೆ, ಏಕತ್ವಚೆ, ಸುಕುಸುಮೆ, ಕೃಷ್ಣಕರ್ಣೆ, ಕ್ಷುರಕರ್ಣೆ, ಚತುಷ್ಕರ್ಣೆ, ಕರ್ಣಪ್ರಾವರಣೆ, ಚತುಷ್ಪಥನಿಕೇತೆ, ಗೋಕರ್ಣೆ, ಮಹಿಷಾಸನೆ, ಖರಕರ್ಣೆ, ಮಹಾಕರ್ಣೆ, ಭೇರೀಸ್ವನೆ, ಶಂಖಕುಂಭಶ್ರವಸ್ಸು, ಭಗದೆ, ಗಣೆ, ಸುಗಣೆ, ಭೀತಿ, ಕಾಮದೆ, ಚತುಷ್ಪಥರಥೆ, ಭೂತಿ, ತೀರ್ಥಾನ್ಯಗೋಚರೆ, ಪಶುದೆ, ವಿತ್ತದೆ, ಸುಖದೆ, ಪಯೋದೆ, ಗೋಮಹಿಷದೆ, ಸವಿಶಾಲೆ, ಪ್ರತಿಷ್ಠೆ, ಸುಪ್ರತಿಷ್ಠೆ, ರೋಚಮಾನೆ, ಸುರೋಚನೆ, ಸೌಕರ್ಣೆ, ಮುಖಕರ್ಣೆ, ವಿಶಿರಸ್ಸು, ಮಂಥಿನಿ, ಏಕಚಂದ್ರೆ, ಮೇಘಕರ್ಣೆ, ಮೇಘಮಾಲೆ, ವಿರೋಚನೆ, ಇವರೇ ಮೊದಲಾಗಿ ಇನ್ನೂ ಎಷ್ಟೋ ಮಂದಿ ಮಾತೃಗಳಿರುವರು. ಅವರೆಲ್ಲರೂ ನಾನಾರೂಪವುಳ್ಳವರಾಗಿ, ಸಾವಿರಾರು ಸಂಖ್ಯೆಯಿಂದ ಕೃತ್ತಿಕಾಪುತ್ರನಾದ ಷಣ್ಮುಖನ ಅನುಚರಿಯರಾದರು ಅವರಲ್ಲಿ ಉದ್ದವಾದ ನಖವುಳ್ಳವರೂ, ಉದ್ದವಾದ ಹಲ್ಲುಳ್ಳವರೂ, ಉದ್ದವಾದ ಮೂತಿಯುಳ್ಳವರೂ ಎಷ್ಟೋ ಮಂದಿಯಿದ್ದರು ಒಳ್ಳೆಯ ಬಲಾಢ್ಯರೂ, ಅಂದವಾದ ರೂಪವುಳ್ಳವರೂ, ಯೌವನಸ್ಥರೂ, ಒಳ್ಳೆಯ ಅಲಂಕಾರವುಳ್ಳವರೂ ಅದರಲ್ಲಿದ್ದರು. ಎಲ್ಲರೂ ಮಹಾಮಹಿಮೆಯುಳ್ಳವರು. ಇಷ್ಟಬಂದ ರೂಪಗಳನ್ನು ಧರಿಸಬಲ್ಲವರು. ಮಾಂಸವಿಲ್ಲದ ಮೈಯುಳ್ಳವರು ಕೆಲವರು! ಬಣ್ಣದಲ್ಲಿ ಬಿಳುಪಾದವರು ಕೆಲವರು! ಚಿನ್ನದಂತೆ ಥಳಥಳಿಸುವವರು ಕೆಲವರು!

ಕೆಲವರು ಕಪ್ಪಾದ ಮೇಘದ ಬಣ್ಣಕ್ಕಿರುವವರು, ಧೂಮ್ರವರ್ಣವುಳ್ಳವರು ಕೆಲವರು, ಅನೇಕರು ದೊಡ್ಡ ದೇಹದಿಂದಲೂ, ಉದ್ದವಾದ ಕೂದಲುಗಳಿಂದಲೂ, ಬಿಳಿಯುವಸ್ತ್ರದಿಂದಲೂ ಶೋಭಿಸುತ್ತಿರುವವರು ಮೇಲೆತ್ತಿ ಕಟ್ಟಿದ ಜಡೆಯುಳ್ಳವರು ಕೆಲವರು, ಪಿಂಗಲವಾದ ಕಣ್ಣುಳ್ಳವರು ಕೆಲವರು, ತೊಂಗುವ ಡಾಬು, ತೊಂಗುವ ಹೊಟ್ಟೆ, ತೊಂಗುವ ಕಿವಿ, ತೊಂಗುವ ಸ್ತನಗಳು, ಕೆಂಪೇರಿದ ಕಣ್ಣುಗಳು, ತಾಮ್ರದಂತೆ ಕೆಂಪಾದ ಮೈ, ನೀಲವಾದ ಕಣ್ಣುಗಳು, ಇಂತಹ ಬೇರಬೇರೆ ರೂಪವುಳ್ಳವರೆಲ್ಲ ಸೇರಿದ್ದರು. ಅವರೆಲ್ಲರೂ ವರವನ್ನು ಕೊಡಬಲ್ಲವರು ಇಷ್ಟಬಂದಕಡೆಯಲ್ಲಿ ಚರಿಸಬಲ್ಲವರು ಯಾವಾಗಲೂ ಸಂತುಷ್ಟಮನಸ್ಸುಳ್ಳವರು ಅವರಲ್ಲಿ ಯಮನ ಕಡೆಯವರು ಕೆಲವರು. ರುದ್ರನಕಡೆಯವರು ಕೆಲವರು ! ಹಾಗೆಯೇ ಚಂದ್ರ, ವರುಣ, ಕುಬೇರ, ಮಹೇಂದ್ರರ ಮತ್ತು ಅಗ್ನಿ ವಾಯುಗಳ ಕಡೆಯವರೂ ಅನೇಕರಿದ್ದರು ಬ್ರಹ್ಮನಿಗೆ ಸಂಬಂಧಪಟ್ಟವರೂ, ವಿಷ್ಣುವಿಗೆ ಸಂಬಂಧಪಟ್ಟವರೂ, ಸೂರ್ಯನಿಗೆ ಸಂಬಂಧಪಟ್ಟವರೂ ಮಹಾಬಲಾಢ್ಯರಾದ ವಾರಾಹಿಗಳೂ ಅನೇಕರಿದ್ದರು ಕೆಲವರು ರೂಪದಲ್ಲಿ ಅಪ್ಸರಸಿಗೆ ಸಮಾನರು ಮನಸ್ಸನ್ನು ಅಪಹರಿಸತಕ್ಕವರು, ನೋಡುವವರಿಗೆ ಸಂತೋಷವನ್ನುಂಟುಮಾಡುವವರು, ಅವರಲ್ಲಿ ಕೆಲವರು ಮಾತಿನಲ್ಲಿ ಕೋಗಿಲೆಗೂ, ಐಶ್ವರ್ಯದಲ್ಲಿ ಕುಬೇರನಿಗೂ, ಯುದ್ಧವೀರ್ಯದಲ್ಲಿ ದೇವೇಂದ್ರನಿಗೂ, ಕಾಂತಿಯಲ್ಲಿ ಅಗ್ನಿಗೂ ಸಮಾನರು ಯುದ್ಧದಲ್ಲಿ ಶತ್ರುಗಳಿಗೆ ಭಯವನ್ನುಂಟುಮಾಡತಕ್ಕವರು ವೇಗದಲ್ಲಿ ವಾಯುವಿಗೆ ಸಮಾನರು ಇಷ್ಟೆಂದು ಊಹಿಸಲಸಾಧ್ಯವಾದ ಬಲ ವೀರ್ಯ ಪರಾಕ್ರಮವುಳ್ಳವರು ವೃಕ್ಷಗಳಲ್ಲಿಯೂ, ನಾಲ್ಕು ಬೀದಿಗಳು ಕೂಡುವ ಚೌಕಗಳಲ್ಲಿಯೂ ವಾಸಮಾಡತಕ್ಕವರು ಕೆಲವರು ಗುಹೆಗಳಲ್ಲಿಯೂ, ಶ್ಮಶಾನಗಳಲ್ಲಿಯೂ ಇರತಕ್ಕವರು ಕೆಲವರು ಬೆಟ್ಟದ ತೊರೆಗಳಲ್ಲಿ ವಾಸಮಾಡತಕ್ಕವರು ಬಗೆಬಗೆಯ ಗಂಟೆಗಳನ್ನೂ, ಪುಷ್ಪಗಳನ್ನೂ, ವಸ್ತ್ರಗಳನ್ನೂ ಧರಿಸಿರುವವರು. ವಿಚಿತ್ರ ವೇಷಭಾಷೆಗಳುಳ್ಳವರು ಇವರೆಲ್ಲರೂ ದೇವರಾಜನ ನಿಯಮದಂತೆ ಸ್ಕಂದನನ್ನು ಅನುಸರಿಸುತಿದ್ದರು

ಆಮೇಲೆ ಇಂದ್ರನು ಷಣ್ಮುಖನಿಗೆ ಶತ್ರುಸಂಹಾರಕ್ಕಾಗಿ ಒಂದು ಶಕ್ತ್ಯಸ್ತ್ರವನ್ನೂ, ದೊಡ್ಡ ಗಂಟೆಯಿಂದ ಕೂಡಿದುದಾಗಿ, ಅರುಣನಂತೆಯೂ, ಸೂರ್ಯನಂತೆಯೂ ಕಾಂತಿಯುಕ್ತವಾಗಿ, ಬಿಳುಪಾಗಿರುವ ಒಂದು ಪತಾಕೆಯನ್ನೂ ಕೊಟ್ಟನು. ಪಶುಪತಿಯಾದ ರುದ್ರನು ಭಯಂಕರವಾಗಿಯೂ, ನಾನಾಬಗೆಯ ಆಯುಧಗಳಿಂದ ತುಂಬಿದುದಾಗಿಯೂ, ತಪೋವೀರ್ಯಬಲವುಳ್ಳದಾಗಿಯೂ, ಮಜೇಯವಾಗಿಯೂ, ಭೂತಗಣಗಳಿಂದ ತುಂಬಿದುದಾಗಿಯೂ ಇರುವ ಧನಂಜಯವೆಂಬ ದೊಡ್ಡ ಸೈನ್ಯವನ್ನು ಕೊಟ್ಟನು ಆ ಸೈನ್ಯವು ಅವನಿಗೆ (ರುದ್ರನಿಗೆ) ಸಮಾನವಾದ ಬಲವುಳ್ಳ ವ ೂವತ್ತುಸಾವಿರ ಯುದ್ಧವೀರರಿಂದ ಕೂಡಿದುದು ಸಮಸ್ತಭೂತಗಣಗಳೂ ಅದರಲ್ಲಿ ಸೇರಿರುವುವು ಆ ಸೈನ್ಯವು ಯುದ್ಧದಲ್ಲಿ ಯಾವಾಗಲೂ ಬೆನ್ನುತೋರಿಸಿದುದಿಲ್ಲ ಅಂತಹ ಮಹಾಸೈನ್ಯವನ್ನು ರುದ್ರನು ಸ್ಕಂದನಿಗೆ ಕೊಟ್ಟನು ವಿಷ್ಣುವು ಬಲವನ್ನು ವೃದ್ಧಿಗೊಳಿಸತಕ್ಕ ವೈಜಯಂತಿಯೆಂಬ ಮಾಲಿಕೆಯನ್ನು ಕೊಟ್ಟನು ಪಾರ್ವತಿಯು ಶುಭ್ರವಾಗಿ ಥಳಥಳಿಸುವ ಎರಡು ವಸ್ತ್ರಗಳನ್ನು ಕೊಟ್ಟಳು ಗಂಗೆಯು ಅಮೃತಪೂರ್ಣವಾದ ದಿವ್ಯ ಕಮಂಡಲುವನ್ನು ಕೊಟ್ಟಳು ಬೃಹಸ್ಪತಿಯು ಒಂದು ದಂಡವನ್ನು ಕೊಟ್ಟನು ಗರುತ್ಮಂತನು ತನಗೆ ಪ್ರಿಯಸಂತಾನವಾದ ಮತ್ತು ವಿಚಿತ್ರಶಿಖೆಗಳಿಂದ ಕೂಡಿದ ನವಿಲನ್ನು ಅವನ ವಾಹನಕ್ಕಾಗಿ ಕೊಟ್ಟನು ಅರುಣನು ಕೆಂಪಾದ ಶಿಖೆಯುಳ್ಳ ಕೋಳಿಯನ್ನು ಕೊಟ್ಟನು ವರುಣನು ಬಲವೀರ್ಯದಿಂದ ಕೂಡಿದ ಆಡನ್ನು ಕೊಟ್ಟನು ಸೃಷ್ಟಿಕರ್ತನಾದ ಬ್ರಹ್ಮದೇವನು ಒಂದು ಕೃಷ್ಣಾಜಿನವನ್ನೂ, ಯುದ್ಧದಲ್ಲಿ ಜಯವನ್ನೂ ಅನುಗ್ರಹಿಸಿಕೊಟ್ಟನು ಹೀಗೆ ಎಲ್ಲರಿಂದಲೂ ಸತ್ಕೃತನಾಗಿ ದೇವಸೇನಾಧಿಪತ್ಯದಲ್ಲಿ ಅಭಿಷಿಕ್ತನಾದ ಸ್ಕಂದನು, ಜ್ವಾಲೆಯಿಂದ ಕೂಡಿದ ಎರಡನೆಯ ಅಗ್ನಿಯೋ ಎಂಬಂತೆ ಪ್ರಕಾಶಿಸುತ್ತಿದ್ದನು ಹೀಗೆ ಅಭಿಷಿಕ್ತನಾದಮೇಲೆ ಸ್ಕಂದನು ದೇವತೆಗಳ ಸಂತೋಷಾರ್ಥವಾಗಿ ಎಲ್ಲಾ ಪಾರ್ಷದಗಣಗಳೊಡನೆಯೂ, ಮಾತೃಗಣಗಳೊಡನೆಯೂ, ದೈತ್ಯವಿನಾಶವನ್ನುದ್ದೇಶಿಸಿ ಪ್ರಯಾಣ ಹೊರಟನು. ಗಂಟೆಗಳೊಡಗೂಡಿದ ಧ್ವಜಗಳಿಂದಲೂ, ಶಂಖ, ಮೃದಂಗ, ಭೇರೀ ಧ್ವನಿಗಳೊಡನೆಯೂ, ಎಲ್ಲಾ ಬಗೆಯ ಆಯುಧಗಳೊ

ಡನೆಯೂ ಆ ಸ್ಕಂದನನ್ನು ಹಿಂಬಾಲಿಸಿ ಹೊರಟ ದೊಡ್ಡ ಭೂತರಾಕ್ಷಸ ಸೈನ್ಯವು, ಜ್ಯೋತಿರ್ಮಂಡಲಗಳಿಂದ ಕೂಡಿದ ಶರತ್ಕಾಲದ ರಾತ್ರಿಯಂತೆ ಪ್ರಕಾಶಿಸುತ್ತಿದ್ದಿತು ದೇವಗಣಗಳೂ, ಭೂತಗಣಗಳೂ, ಶಂಖ, ಭೇರಿ, ಮೊದಲಾದ ವಾದ್ಯಗಳನ್ನು ನುಡಿಸುತ್ತ ಹೊರಟರು ಪಟಹ, ಜರ್ಝರ, ಕ್ರಕಚ, ಗೋವಿಷಾಣ, ಆಡಂಬರ, ಗೋಮುಖ, ಡಿಂಡಿಮ ಮೊದಲಾದ ನಾನಾವಾದ್ಯಗಳು ಮೊಳಗುತಿದ್ದುವು ಇಂದ್ರಾದಿದೇವತೆಗಳೆಲ್ಲರೂ ಸ್ತೋತ್ರಮಾಡುತ್ತ ಬಂದರು ದೇವಗಂಧರ್ವರು ಗಾನಮಾಡುತ್ತಿದ್ದರು ಅಪ್ಸರಸ್ಸುಗಳು ನರ್ತಿಸುತಿದ್ದರು. ಆಗ ಷಣ್ಮುಖನು ಸಂತೋಷದಿಂದ ತನ್ನ ಸುತ್ತಲಿದ್ದ ದೇವತೆಗಳನ್ನು ನೋಡಿ "ಎಲೈ ದೇವಶ್ರೇಷ್ಠರೇ! ನಿಮಗೆ ಹಾನಿಯನ್ನು ತರಬೇಕೆಂದಿರುವ ಶತ್ರುಗಳನ್ನೆಲ್ಲ ನಾನು ತಪ್ಪದೆ ಕೊಲ್ಲುವೆನು" ಎಂದು ಅಭಯವನ್ನು ಕೊಟ್ಟನು ಹೀಗೆ ವರವನ್ನು ಪಡೆದ ದೇವತೆಗಳು ಪರಮಸಂತುಷ್ಟರಾಗಿ, 'ಇನ್ನು ತಮ್ಮ ಶತ್ರುಗಳು ಹತರಾದ' ರೆಂದೇ ಭಾವಿಸಿದರು ಸಮಸ್ತಭೂತಗಳೂ ಸಂತೋಷದಿಂದ ಸಿಂಹನಾದ ಮಾಡಿದುವು ಆಗ ಮಹಾಸೇನೆಯಿಂದ ಕೂಡಿದ ಆ ಷಣ್ಮುಖನು, ದೈತ್ಯನಾಶಕ್ಕಾಗಿಯೂ, ದೇವತೆಗಳ ರಕ್ಷಣೆಗಾಗಿಯೂ ಸಂಕಲ್ಪಿಸಿ, ಪ್ರಯಾಣ ಹೊರಟನು ಈ ಜೈತ್ರಯಾತ್ರೆಯ ಕಾಲದಲ್ಲಿ ಅವನ ಎಲ್ಲಾ ಸೈನ್ಯಗಳ ಮುಂದೆ ವ್ಯವಸಾಯ, ಜಯ, ಧರ್ಮ, ಸಿದ್ಧಿ, ಲಕ್ಷ್ಮೀ, ಸ್ಮೃತಿ, ಧೃತಿ, ಇವೆಲ್ಲ ಆಕೃತಿಗಳೊಡನೆ ಮುಂದೆ ಹೊರಟುವು ಆ ಸೈನ್ಯದಲ್ಲಿ ಶೂಲ. ಮುದ್ಗರಗಳನ್ನು ಹಿಡಿದವರು ಕೆಲವರು, ಕೆಲವರ ಕೈಯಲ್ಲಿ ಉರಿಯುವ ಕೊಳ್ಳಿಗಳು, ಹಾಗೆಯೇ ಅವರವರು ಗದೆ, ಮುಸಲ, ನಾರಾಚ, ಶಕ್ತಿ, ತೋಮರ ಮೊದಲಾದ ಆಯುಧಗಳನ್ನೂ ಕೈಯಲ್ಲಿ ಹಿಡಿದಿರುವರು, ಎಲ್ಲರೂ ಚಿತ್ರವಿಚಿತ್ರಗಳಾದ ಕವಚಗಳನ್ನೂ, ಆಭರಣಗಳನ್ನೂ ಧರಿಸಿರುವರು ಒಬ್ಬೊಬ್ಬರೂ ಕೊಬ್ಬಿದ ಸಿಂಹದಂತೆ ಗರ್ಜಿಸುತ್ತಿರುವರು ಹೀಗೆ ಭಯಂಕರವಾದ ದೊಡ್ಡ ಸೈನ್ಯದೊಡನೆ ಷಣ್ಮುಖನು ಹೊರಟುಬರುತ್ತಿರುವಾಗ, ಅವನನ್ನು ಕಂಡ ದೈತ್ಯ, ದಾನವ, ರಾಕ್ಷಸರೆಲ್ಲರೂ ಅಲ್ಲಲ್ಲಿ ಭಯದಿಂದ ಓಡಿಹೋಗಲಾರಂಭಿಸಿದರು. ಇತ್ತಲಾಗಿ ದೇವತೆಗಳು ಅವರನ್ನು ನೋಡಿ ಉತ್ಸಾಹದಿಂದ ನಾನಾಯುಧಗಳನ್ನು ಹಿಡಿದು ಬೆನ್ನಟ್ಟಿ ಓಡಿಸು

ತ್ತಿದ್ದರು. ಷಣ್ಮುಖನೂಕೂಡ ಹವಿಸ್ಸಿನಿಂದ ಉರಿಸಲ್ಪಟ್ಟ ಹೋಮಾಗ್ನಿಯಂತೆ ತನ್ನ ತೇಜಸ್ಸನ್ನು ಹೊರಪಡಿಸುತ್ತ, ಭಯಂಕರವಾದ ತನ್ನ ಶಕ್ತ್ಯಸ್ತ್ರವನ್ನು ಬಾರಿಬಾರಿಗೂ ಶತ್ರುಗಳಮೇಲೆ ಬೀಸುತಿದ್ದನು ಇವನು ಆ ಶಕ್ತಿಯನ್ನು ಬೀಸಿದಾಗಲೆಲ್ಲ ಅದರಿಂದ ಕೊಳ್ಳಿಗಳು ಉದಿರುತ್ತ, ಪ್ರಳಯಕಾಲದಲ್ಲಿ ಮಹಾಮೇಘಗಳಿಂದ ಹೊರಟ ಭಯಂಕರವಾದ ಸಿಡಿಲುಗಳಂತೆ ಕಾಣಿಸುತ್ತಿದ್ದುವು ಷಣ್ಮುಖನು ಒಂದಾವರ್ತಿ ತನ್ನ ಶಕ್ತಿಯನ್ನು ಬೀಸಿದೊಡನೆ, ಅದರಿಂದ ಕೋಟ್ಯನುಕೋಟಿ ಶಕ್ತಿಗಳು ಹೊರಟು ಬರುತ್ತಿದ್ದುವು ಹೀಗೆ ಪೂಜ್ಯನಾದ ಷಣ್ಮುಖನು ವೀರ್ಯೋತ್ಸಾಹದಿಂದ ದೈತ್ಯರನ್ನಡಗಿಸುತ್ತ, ತನ್ನ ಮುಂದೆ ಮಹಾಬಲಪರಾಕ್ರಮವುಳ್ಳ ಲಕ್ಷೋಪಲಕ್ಷ ದೈತ್ಯರಿಂದ ಪರಿವೃತನಾದ ತಾರಕನೆಂಬ ದೈತ್ಯನನ್ನು ಕೊಂದುಬಿಟ್ಟನು ಎಂಟು ಪದ್ಮಸಂಖ್ಯೆಯುಳ್ಳ ಸೈನ್ಯದಿಂದಕೂಡಿದ ಮಹಿಷನೆಂಬ ಅಸುರನನ್ನು ಕೊಂದನು ಹಾಗೆಯೇ ಕೋಟಿಸೈನ್ಯವುಳ್ಳ ತ್ರಿಪಾದನನ್ನೂ, ಹತ್ತು ನಿಖರಸಂಖ್ಯೆಯುಳ್ಳ ಕಿಂಕರರಿಂದ ಪರಿವೃತನಾದ ಹ್ರದೋದರನನ್ನೂ ಕೊಂದುಕೆಡಹಿದನು ಹೀಗೆ ಆ ಪ್ರಬಲಶತ್ರುಗಳು ಮೂವರೂ ಹತರಾದಾಗ, ಷಣ್ಮುಖನ ಅನುಚರರು ದಿಕ್ಕುಗಳನ್ನೆಲ್ಲ ತುಂಬುವಂತೆ ಸಂತೋಷದಿಂದ ಸಿಂಹನಾದಮಾಡಿದರು ಕೆಲವರು ನರ್ತಿಸಿದರು ಕೆಲವರು ಹಾರಿಹಾರಿ ಕುಣಿಯುತ್ತಿದ್ದರು ಕೆಲವರು ಅಟ್ಟಹಾಸದಿಂದ ನಕ್ಕರು. ಆ ದೈತ್ಯರು ಹತರಾದಮೇಲೆಯೂಕೂಡ ಆ ಸ್ಕಂದನ ಶಕ್ತ್ಯಸ್ತ್ರದಿಂದ ಹೊರಡುತ್ತಿದ್ದ ಜ್ವಾಲೆಗಳು ಮೇಲೆಮೇಲೆ ಪ್ರಬಲವಾಗಿ ತ್ರೈಲೋಕ್ಯವನ್ನೂ ನಡುಗಿಸುವಂತಿದ್ದುವು ಆ ಷಣ್ಮುಖನ ಸಿಂಹನಾದದಿಂದಲೇ ದೈತ್ಯರು ಸಾವಿರಾರು ಸಂಖ್ಯೆಯಿಂದ ದಗ್ಧರಾಗುತ್ತಿದ್ದರು ಕೆಲವು ದೈತ್ಯರು ಆ ಷಣ್ಮುಖನ ಪತಾಕೆಯ ಒದರಾಟದಿಂದಲೇ ಮೃತರಾದರು ಕೆಲವರು ಅವನ ಘಂಟಾಧ್ವನಿಯಿಂದಲೇ ಭಯಪಟ್ಟು ಮೂರ್ಛಿತರಾದರು ಕೆಲವರು ಆಯುಧದಿಂದ ಕತ್ತರಿಸಲ್ಪಟ್ಟು ಕೆಳಗೆ ಬಿದ್ದರು ಹೀಗೆ ಷಣ್ಮುಖನು ಯುದ್ಧದಲ್ಲಿ ಅನೇಕ ದೇವಶತ್ರುಗಳನ್ನು ಸಂಹರಿಸಿದನು ಇದಾದಮೇಲೆ ಮಹಾಬಲಾಢ್ಯನೂ, ಬಲಿಪುತ್ರನೂ ಆದ ಬಾಣನೆಂಬ ಅಸುರನು ಕ್ರೌಂಚಪರ್ವತದಲ್ಲಿ ಸೇರಿಕೊಂಡು, ದೇವತೆಗಳಿಗೆ ಬಹಳ ಉಪದ್ರವವನ್ನು

ಕೊಡುತ್ತಿದ್ದನು ಇದನ್ನು ಕೇಳಿದೊಡನೆ ಸ್ಕಂದನು ಅವನನ್ನಿದಿರಿಸುವುದ ಕ್ಕಾಗಿ ಹೊರಟನು ಬಾಣನು ಇದನ್ನು ತಿಳಿದು ಭಯದಿಂದ ಓಡಿಹೋಗಿ, ಕ್ರೌಂಚಪರ್ವತದಲ್ಲಿಯೇ ತಲೆಮರೆಸಿಕೊಂಡುಬಿಟ್ಟನು. ಆಗ ಷಣ್ಮುಖನು ಅತ್ಯಂತ ಕೋಪಿಷ್ಠನಾಗಿ, ಅನೇಕ ಕ್ರೌಂಚಪಕ್ಷಿಗಳ ಕೋಲಾಹಲದಿಂದ ಕೂಡಿದ ಆ ಪರ್ವತವನ್ನು ಅಗ್ನಿಯು ತನಗೆ ಕೊಟ್ಟ ಶಕ್ತ್ಯಾಯುಧದಿಂದ ಭೇದಿಸಿಬಿಟ್ಟನು ಆ ಪರ್ವತವೆಲ್ಲವೂ ಛಿನ್ನಭಿನ್ನವಾಯಿತು ವಿಚಿತ್ರ ವಾದ ವೃಕ್ಷಶಾಖೆಗಳಿಂದ ಶೋಭಿತವಾದ ಆ ಪರ್ವತದಲ್ಲಿ ವಾಸಿಸುತ್ತಿದ್ದ ಆನೆಗಳೆಲ್ಲವೂ ಭಯದಿಂದ ತತ್ತಳಿಸಿ ಓಡಿದುವು ಪಕ್ಷಿಗಳೆಲ್ಲವೂ ದಿಕ್ಕು ಗಾಣದೆ ಹಾರುತ್ತಿದ್ದುವು ಅನೇಕ ಸರ್ಪಗಳು ಧೊಪ್ಪನೆ ಬೀಳುತ್ತಿದ್ದುವು. ಸಿಂಗಳೀಕಗಳು, ಕರಡಿಗಳು, ಇವೆಲ್ಲವೂ ಭಯದಿಂದ ಅರುಚುತ್ತ ಓಡುತ್ತಿ ರುವಾಗ, ಅವುಗಳ ಶಬ್ದವು ಎಲ್ಲೆಲ್ಲಿಯೂ ಪ್ರತಿಧ್ವನಿಸುತ್ತಿತ್ತು ಜಿಂಕೆಗಳು ಕಾಡುಗಳನ್ನೆಲ್ಲ ಮೊಳಗಿಸುವಂತೆ ದೊಡ್ಡ ಧ್ವನಿಯೊಡನೆ ಓಡಿದುವು ಸಿಂಹ ಶರಭಾದಿಗಳೆಲ್ಲವೂ ಭಯದಿಂದೋಡುತ್ತ ಅಲ್ಲಲ್ಲ ಸತ್ತುಬೀಳುತ್ತಿದ್ದುವು ಹೀಗೆ ಆ ಪರ್ವತವು ಬಹಳ ಶೋಚನೀಯವಾದ ಸ್ಥಿತಿಯನ್ನು ಹೊಂದಿತು ಆ ಪರ್ವತಶಿಖರದಲ್ಲಿ ವಾಸಮಾಡುತ್ತಿದ್ದ ವಿದ್ಯಾಧರರೂ, ಕಿನ್ನರರೂ ಭಯದಿಂದ ಓಡಿಬಂದರು ಇಷ್ಟರಲ್ಲಿ ಆ ಪರ್ವತದ ನಾನಾಭಾಗದಲ್ಲಿ ಅಡಗಿದ್ದ ದೈತ್ಯಗಣಗಳು ವಿಚಿತ್ರಮಾಲ್ಯಾಭರಣಗಳೊಡನೆ ನೂರುಸಾವಿರ ಸಂಖ್ಯೆಯಿಂದ ಹೊರಗೆ ಬಂದುವು ಅವರಲ್ಲರನ್ನೂ ಷಣ್ಮುಖನ ಅನು ಚರರು ಬೆನ್ನಟ್ಟಿ ಹಿಡಿದು ಸಂಹರಿಸಿದರು ಷಣ್ಮುಖನೂಕೂಡ ಬಲಿಪುತ್ರ ನಾದ ಬಾಣಾಸುರನನ್ನೂ, ಅವನ ಸಹೋದರರನ್ನೂ, ಇಂದ್ರನು ವೃತ್ರ ನನ್ನು ಕೊಂದಂತೆ ಕ್ಷಣಮಾತ್ರದಲ್ಲಿ ಕೊಂದುಬಿಟ್ಟನು ಷಣ್ಮುಖನು ಕ್ರೌಂಚಪರ್ವತವನ್ನು ಭೇದಿಸುವ ಕಾಲದಲ್ಲಿ, ತಾನು ಒಬ್ಬನಾಗಿಯೂ, ಅನೇಕರೂಪಗಳನ್ನು ತಾಳಿಯೂ ಅಲ್ಲಲ್ಲಿ ಆ ಪರ್ವತದ ಸಮಸ್ತಭಾಗ ವನ್ನೂ ಭೇದಿಸುತ್ತ ಬಂದನು ಅವನು ಆ ಪರ್ವತಭೇದನಕ್ಕಾಗಿ ಬೀಸಿದ ಶಕ್ತಿಯು ತಿರುಗಿತಿರುಗಿ ಅವನ ಕೈಗೇ ಬಂದು ಸೇರುತ್ತಿದ್ದಿತು ಓ ಜನಮೇ ಜಯರಾಜಾ! ಸ್ಕಂದನು ಇಂತಹ ಮಹಾಮಹಿಮೆಯುಳ್ಳವನು ಅದರ ಮೇಲೆ ಅವನು ಅಗ್ನಿಪುತ್ರನಾದುದರಿಂದ, ಇಮ್ಮಡಿಯಾದ ತೇಜಸ್ಸಿನಿಂದ

ಯಶಸ್ಸಿನಿಂದಲೂ, ಸಿರಿಯಿಂದಲೂ ಬೆಳಗುತಿದ್ದನು ಅವನು ಹೀಗೆ ಕ್ರೌಂಚಪರ್ವತವನ್ನು ಭೇದಿಸಿ, ಅನೇಕದೈತ್ಯರನ್ನು ಸಂಹರಿಸಿದನು. ಹೀಗೆ ಅವನು ದೇವದ್ವೇಷಿಗಳನ್ನೆಲ್ಲ ಕೊಂದು, ದೇವತೆಗಳಿಂದ ಗೌರವಿಸಲ್ಪಡುತ್ತ ಪರಮಹರ್ಷಿತನಾದನು ಆಗ ಅವನ ಮುಂದೆ ದಿವ್ಯಶಂಖಗಳೂ, ದಿವ್ಯ ದುಂದುಭಿಗಳೂ ಮೊಳಗಿದುವು ದೇವಸ್ತ್ರೀಯರು ಪುಷ್ಪವರ್ಷವನ್ನು ಕರೆದರು ಯೋಗಿಗಳಿಗೆಲ್ಲ ಪ್ರಭುವೂ, ದೇವನೂ ಆದ ಅವನನ್ನು ದೇವತೆಗಳೆಲ್ಲರೂ ಉಪಚರಿಸಿದರು ಗಾಳಿಯು ದಿವ್ಯಗಂಧದೊಡನೆ ಅವನ ಮೇಲೆ ಬೀಸಿತು ಗಂಧರ್ವರು ಸ್ತುತಿಸಿದರು ಯಾಗಶೀಲರಾದ ಮಹರ್ಷಿಗಳಲ್ಲಿ ಕೆಲವರು ಅವನನ್ನು ಅಗ್ನಿಕುಮಾರನೆಂದೂ, ಕೆಲವರು ಪಾರ್ವತೀಪುತ್ರನೆಂದೂ, ಕೆಲವರು ಕೃತ್ತಿಕಾಪುತ್ರನೆಂದೂ, ಕೆಲವರು ಗಂಗಾಪುತ್ರನೆಂದೂ ಹೇಳುತ್ತಿರುವರು. ಆ ಸ್ಕಂದದೇವನನ್ನು ಅವರವರು ಒಂದೇ ವಿಧವಾಗಿಯೂ, ಎರಡು ವಿಧವಾಗಿಯೂ, ನಾಲ್ಕಾರು ವಿಧವಾಗಿಯೂ, ನೂರುಸಾವಿರ ವಿಧವಾಗಿಯೂ ಭಾವಿಸಿ ಕೀರ್ತಿಸುವರು

ಓ ಜನಮೇಜಯರಾಜಾ ! ಕಾರ್ತಿಕೇಯನಾದ ಸ್ಕಂದನ ಅಭಿಷೇಕ ವೃತ್ತಾಂತವನ್ನು ನಿನಗೆ ನಾನು ತಿಳಿಸಿದುದಾಯಿತು ಸರಸ್ವತೀನದಿಯ ತೀರ್ಥವಿಭಾಗಗಳ ಪವಿತ್ರತೆಯನ್ನು ಹೇಳುವೆನು ಕೇಳು ಸ್ಕಂದನಿಂದ ದಾನವರು ಹತರಾದಮೇಲೆ, ಅಲ್ಲಿ ಮತ್ತೊಂದು ಸ್ವರ್ಗದಂತೆ ಉತ್ತಮವಾದ ತೀರ್ಥವೊಂದು ಉಂಟಾಯಿತು ಭಗವಂತನಾದ ಷಣ್ಮುಖನು ಅಲ್ಲಿಯೇ ಇದ್ದುಕೊಂಡು, ಅವರವರಿಗೆ ಬೇರೆಬೇರೆಯಾಗಿ ಅಧಿಕಾರಪದವಿಗಳನ್ನು ಕೊಟ್ಟನು (ತನ್ನ ಕಡೆಯ) ರಾಕ್ಷಸಪ್ರಮುಖರಿಗೆ ತ್ರೈಲೋಕ್ಯವನ್ನೇ ಕೊಟ್ಟನು ಷಣ್ಮುಖನಿಗೆ ಅಭಿಷೇಕವು ನಡೆದ ಆ ಪುಣ್ಯತೀರ್ಥಕ್ಕೆ ಔಶನಸತೀರ್ಥವೆಂದು ಹೆಸರು ಅಲ್ಲಿಯೇ ಹಿಂದೆ ವರುಣನೂ ಸಮುದ್ರಾಧಿಪತಿಯಾಗಿ ಅಭಿಷಿಕ್ತನಾದನು ಬಲರಾಮನು ಆ ಪುಣ್ಯತೀರ್ಥದಲ್ಲಿ ಸ್ನಾನಮಾಡಿ, ಅಲ್ಲಿದ್ದ ಕುಮಾರಸ್ವಾಮಿಯನ್ನು ಪೂಜಿಸಿ, ಬ್ರಾಹ್ಮಣರಿಗೆ ವಸ್ತ್ರಾಭರಣಕನಕಾದಿಗಳನ್ನು ಯಥೇಚ್ಛವಾಗಿ ದಾನಮಾಡಿದನು ಮತ್ತು ಆ ರಾತ್ರಿಯವನು ಅಲ್ಲಿ ತಂಗಿದ್ದು, ಮಾರನೇ ದಿನವೂ ಸ್ನಾನಮಾಡಿ, ತಾನು

ಕೃತಕೃತ್ಯನಾದಂತೆ ಸಂತೋಷಿಸಿದನು ಜನಮೇಜಯರಾಜಾ! ಸ್ಕಂದನು ಬಾಲನಾಗಿದ್ದಾಗಲೇ ದೇವಸೇನಾಪತ್ಯದಲ್ಲಿ ಅಭಿಷಿಕ್ತನಾದ ವೃತ್ತಾಂತಗಳನ್ನೆಲ್ಲ ನಿನಗೆ ವಿವರಿಸಿ ತಿಳಿಸಿದೆನು" ಎಂದನು

ಇದು ನಾಲ್ವತ್ತೇಳನೆಯ ಅಧ್ಯಾಯವು

{ದೇವತೆಗಳು ವರುಣನನ್ನು ಜಲಾಧಿಪತಿಯನ್ನಾಗಿ ಅಭಿಷೇಕ ಮಾಡಿದುದು ಬಲರಾಮನು ಅಗ್ನಿತೀರ್ಥಕ್ಕೂ, ಕುಬೇರ ತೀರ್ಥಕ್ಕೂ ಹೋದುದು ಆ ತೀರ್ಥಗಳ ಮಹಿಮೆ}

ಜನಮೇಜಯನು "ಮುನೀಂದ್ರಾ! ಆಶ್ಚರ್ಯಕರವಾದ ಈ ಕುಮಾರಸ್ವಾಮಿಯ ಅಭಿಷೇಕಚರಿತ್ರವನ್ನು ನಾನು ಯಥಾವತ್ತಾಗಿ ಕೇಳಿದೆನು. ಇದನ್ನು ಕೇಳಿ ನಾನು ಮಹಾಪವಿತ್ರನಾದಂತೆ ಭಾವಿಸುವೆನು ನನ್ನ ಮೈಯಲ್ಲಿ ರೋಮಾಂಚವೇಳುತ್ತಿರುವುದು ನನ್ನ ಮನಸ್ಸಿಗೆ ಅಪಾರ ಹರ್ಷವಾಯಿತು ಕುಮಾರಸ್ವಾಮಿಯ ಅಭಿಷೇಕ ಚರಿತ್ರವನ್ನೂ, ದೈತ್ಯವಧೆ ವೃತ್ತಾಂತವನ್ನೂ ಕೇಳಿದ ನನಗೆ, ಇನ್ನೂ ನಿನ್ನಿಂದ ಅನೇಕ ಕಥೆಗಳನ್ನು ಕೇಳುವ ಕುತೂಹಲವು ಹೆಚ್ಚಾಗಿದೆ ಪ್ರಾಜ್ಞಾ! ಹಿಂದೆ ಈ ತೀರ್ಥದಲ್ಲಿ ದೇವತೆಗಳು ವರುಣನನ್ನು ಜಲಾಧಿಪತಿಯನ್ನಾಗಿ ಅಭಿಷೇಕ ಮಾಡಿದರೆಂದು ಹೇಳಿದೆಯಲ್ಲವೆ? ಆ ವೃತ್ತಾಂತವೇನು? ಆ ವಿಷಯವನ್ನು ನನಗೆ ತಿಳಿಸಬೇಕು" ಎಂದನು

ಆಗ ವೈಶಂಪಾಯನನು "ರಾಜಾ! ಆ ಆಶ್ಚರ್ಯವಿಷಯವನ್ನು ಕೇಳು ಹಿಂದೆ ಕೃತಯುಗದಲ್ಲಿ ದೇವತೆಗಳೆಲ್ಲರೂ ವರುಣನ ಸಮೀಪಕ್ಕೆ ಬಂದು, ಆತನನ್ನು ಕುರಿತು "ಓ ಮಹಾತ್ಮಾ! ದೇವರಾಜನಾದ ಇಂದ್ರನು ಹೇಗೋ ಹಾಗೆ ನದಿಗಳಿಗೊಡೆಯನಾದ ನೀನೂ ನಮ್ಮನ್ನು ಭಯದಿಂದ ಕಾಪಾಡುತ್ತಿರು ಮಕರಗಳಿಗೆ ಆಶ್ರಯಸ್ಥಾನವಾದ ಸಮುದ್ರದಲ್ಲಿಯೇ ಯಾವಾಗಲೂ ನೀನು ವಾಸಮಾಡುತ್ತಿರು. ನದೀರಾಜನಾದ ಈ ಸಮುದ್ರನು ನಿನ್ನ ಅಧೀನನಾಗಿರಲಿ. ಚಂದ್ರನೊಡನೆ ನಿನಗೂ ವೃದ್ಧಿಕ್ಷಯಗಳಿಲ್ಲದೆ

ಗಳುಂಟಾಗಲಿ'' ಎಂದರು. ವರುಣನು ಆಗ ದೇವತೆಗಳನ್ನು ತುರಿತು 'ಹಾಗೆಯೇ ಆಗಲಿ' ಎಂದನು ಆಮೇಲೆ ದೇವತೆಗಳೆಲ್ಲರೂ ಸಾಗರವಾಸಿಯಾದ ವರುಣನ ಬಳಿಗೆ ಬಂದು ವಿಧ್ಯುಕ್ತರೀತಿಯಲ್ಲಿ ಆತನನ್ನು ಜಲಾಧಿಪತಿಯನ್ನಾಗಿ ಅಭಿಷೇಕಮಾಡಿ ಸತ್ಕರಿಸಿ, ತಮ್ಮತಮ್ಮ ಸ್ಥಾನವನ್ನು ಸೇರಿದರು ಹೀಗೆ ಅಭಿಷೇಕಹೊಂದಿ ಕೀರ್ತಿವಂತನಾದ ಆ ವರುಣನು ನದಿಗಳನ್ನೂ, ಸಮುದ್ರಗಳನ್ನೂ, ನದಗಳನ್ನೂ, ತಟಾಕಗಳನ್ನೂ, ದೇವತೆಗಳನ್ನೂ ಇಂದ್ರನು ಹೇಗೋ ಹಾಗೆ ರಕ್ಷಿಸುತ್ತ ಬಂದನು ಬಲರಾಮನು ಆ ತೀರ್ಥದಲ್ಲಿಯೂ ಸ್ನಾನಮಾಡಿ, ದಕ್ಷಿಣೆಗಳನ್ನು ಕೊಡುತ್ತ ಯಾವ ಸ್ಥಳದಲ್ಲಿ ಅಗ್ನಿಯು ಬನ್ನಿಯ ಮರದ ಮಧ್ಯದಲ್ಲಿ ಅವಿತುಕೊಂಡು ಮರಯಾಗಿದ್ದನೋ ಅಲ್ಲಿಗೆ ಬಂದನು ಹಿಂದೆ ಲೋಕಾಲೋಕಪರ್ವತಕ್ಕೆ ವಿಪತ್ತು ಸಂಭವಿಸಿದಾಗ, ದೇವತೆಗಳು, ಪಿತಾಮಹನಾದ ಬ್ರಹ್ಮನ ಬಳಿಗೆ ಹೋಗಿ 'ಅಗ್ನಿಯು ನಮ್ಮ ಕಣ್ಣಿಗೆ ಬೀಳದೆ ಅವಿತುಕೊಂಡಿರುವನು ನಮಗೆ ಕಾರಣವು ತಿಳಿಯಲಿಲ್ಲ ಎಲ್ಲಾ ಪ್ರಾಣಿಗಳಿಗೂ ಕ್ಷಯವುಂಟಾಗುತ್ತಿರುವುದು ನೀನು ಆ ಅಗ್ನಿಯನ್ನು ತೋರಿಸಿಕೊಡಬೇಕು'' ಎಂದು ಬೇಡಿದರು

ಆಗ ಜನಮೇಜಯನು 'ಜಗದ್ರಕ್ಷನಾದ ಅಗ್ನಿಯು ಏತಕ್ಕಾಗಿ ಅವಿತುಕೊಂಡನು? ದೇವತೆಗಳು ಆತನನ್ನು ಹೇಗೆ ಕಂಡುಹಿಡಿದರು? ಅವೆಲ್ಲವನ್ನೂ ಯಥಾವತ್ತಾಗಿ ತಿಳಿಸು' ಎನಲು, ವೈಶಂಪಾಯನನು ''ಅಗ್ನಿಯು ಭೃಗುವಿನ ಶಾಪದಿಂದ ಭಯಪಟ್ಟು ಬನ್ನಿಯ ಮರದ ಮಧ್ಯಕ್ಕೆ ಹೋಗಿ, ಅಲ್ಲಿ ಮರೆಸಿಕೊಂಡನು ಅಗ್ನಿಯು ಕಾಣದೆಹೋಗಲು, ದೇವತೆಗಳೆಲ್ಲರೂ ಇಂದ್ರನೊಡಗೂಡಿ ದುಃಖದಿಂದ ಆ ಅಗ್ನಿಯನ್ನು ಹುಡುಕುವುದಕ್ಕಾಗಿ ಹೊರಟರು ಅವರು ಅಗ್ನಿತೀರ್ಥಕ್ಕೆ ಬಂದಾಗ ಆ ತೀರ್ಥತೀರದ ಬನ್ನಿಯ ಮರದ ಮಧ್ಯದಲ್ಲಿ ಅವಿತುಕೊಂಡಿರುವ ಅಗ್ನಿಯನ್ನು ಕಂಡರು ಆ ದೇವತೆಗಳೆಲ್ಲರೂ, ಬೃಹಸ್ಪತಿಯನ್ನು ಮುಂದೆ ಬಿಟ್ಟುಕೊಂಡು, ಇಂದ್ರನೊಡನೆ ಅಗ್ನಿಯನ್ನು ನೋಡಿ ಸಂತೋಷಗೊಳಿಸಿ ಹಿಂತಿರುಗಿದರು. ಹಿಂದೆ ಭೃಗುಮಹರ್ಷಿಯ ಶಾಪದಿಂದ ಅಗ್ನಿಯು

ಸರ್ವಭಕ್ಷಕನಾಗಿದ್ದನು ಅಗ್ನಿಯು, ಆ ತೀರ್ಥದಲ್ಲಿ ಸ್ನಾನಮಾಡಿ ಬ್ರಾಹ್ಮಣ ಶಾಪದಿಂದ ಶಾಪವಿಮೋಚನೆಯನ್ನು ಪಡೆದನು ರಾಜಾ! ಜಗದೊಡೆಯನಾದ ಬ್ರಹ್ಮದೇವನೂ ಹಿಂದೆ ದೇವತೆಗಳೊಡನೆ ಆ ತೀರ್ಥದಲ್ಲಿ ವಿಧ್ಯುಕ್ತವಾಗಿ ಸ್ನಾನಮಾಡಿ ದೇವತೆಗಳಿಗೆ ಅನ್ನವನ್ನು ಸೃಷ್ಟಿಸಿದನು. ಬಲರಾಮನು ಆ ತೀರ್ಥದಲ್ಲಿ ಸ್ನಾನಮಾಡಿ ನಾನಾಬಗೆಯ ದಾನಗಳನ್ನು ಕೊಟ್ಟಮೇಲೆ, ಯಾವ ತೀರ್ಥದಲ್ಲಿ ಕುಬೇರನು ದೊಡ್ಡ ತಪಸ್ಸನ್ನಾರಂಭಿಸಿ ಧನಾಧ್ಯಕ್ಷಪದವಿಯನ್ನು ಪಡೆದನೋ ಆ ಕುಬೇರತೀರ್ಥವನ್ನು ಕುರಿತು ಹೊರಟನು ಓ ಮನುಜಶ್ರೇಷ್ಠಾ! ಆ ತೀರ್ಥದಲ್ಲಿರುವಾಗಲೇ ಕುಬೇರನಿಗೆ ಧನವೂ, ನಿಧಿಗಳೂ ಲಬ್ಧವಾದುವು ಬಲರಾಮನು ಆ ತೀರ್ಥದಲ್ಲಿಯೂ ಸ್ನಾನಮಾಡಿ, ವಿಧ್ಯುಕ್ತರೀತಿಯಲ್ಲಿ ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಟ್ಟನು ಕುಬೇರನಿಗೆ ಸೇರಿದ ಉತ್ತಮವಾದ ಹೂದೋಟದ ಮಧ್ಯದಲ್ಲಿ ಆ ಸ್ಥಾನವಿದ್ದಿತು ಓ ಮಹಾಬಾಹೂ! ಹಿಂದೆ ಮಹಾತ್ಮನೂ, ಯಕ್ಷರಾಜನೂ ಆದ ಕುಬೇರನು ಆ ತೀರ್ಥದಲ್ಲಿ ದೊಡ್ಡ ತಪಸ್ಸುಮಾಡಿ, ಅನೇಕ ದಿವ್ಯವರಗಳನ್ನು ಪಡೆದನು. ಧನಾಧಿಪತಿಯಾದ ಆತನು ಆ ತೀರ್ಥದಲ್ಲಿ ಧನಾಧಿಪತ್ಯವನ್ನೂ, ಮಹಾಪರಾಕ್ರಮಿಯಾದ ರುದ್ರನೊಡನೆ ಸಮಾನತ್ವವನ್ನೂ, ದೇವತ್ವವನ್ನೂ, ದಿಕ್ಪಾಲಕತ್ವವನ್ನೂ, ನಳಕೂಬರರೆಂಬ ಪುತ್ರರನ್ನೂ ಪಡೆದನು ಮತ್ತು ಆ ತೀರ್ಥದಲ್ಲಿಯೇ ಆ ಕುಬೇರನಿಗೆ ಹಂಸಗಳಿಂದಕೂಡಿದ ಮನೋವೇಗವುಳ್ಳ ದಿವ್ಯ ಪುಷ್ಪಕವಿಮಾನವೂ, ರಾಕ್ಷಸಾಧಿಪತ್ಯವೂ ಕೊಡಲ್ಪಟ್ಟುವು ಅಲ್ಲಿಯೇ ದೇವತೆಗಳು ಕುಬೇರನಿಗೆ ಅಭಿಷೇಕಮಾಡಿದರು ಬಿಳೀ ಗಂಧವನ್ನು ಧರಿಸಿದ ಬಲರಾಮನು, ಆ ತೀರ್ಥದಲ್ಲಿ ಸ್ನಾನಮಾಡಿ, ಯೋಗ್ಯವಸ್ತುಗಳನ್ನು ದಾನಮಾಡಿ, ಬದರಪಾಚನವೆಂಬ ಉತ್ತಮತೀರ್ಥವನ್ನು ಸೇರಿದನು. ಅಲ್ಲಿ ಎಲ್ಲಾ ಬಗೆಯ ಪ್ರಾಣಿಗಳೂ ವಾಸಮಾಡುತ್ತಿರುವುವು ಎಲ್ಲಾ ಋತುಧರ್ಮಗಳನ್ನೂ ತೋರಿಸುವ ವನಗಳಿರುವುವು ಅಲ್ಲಿ ಯಾವಾಗಲೂ ಫಲಪುಷ್ಪಗಳು ತುಂಬಿರುವುವು ಮತ್ತು ಅದು ಮಹಾಮಂಗಳಕರವಾದುದು

ಇದು ನಾಲ್ವತ್ತೆಂಟನೆಯ ಅಧ್ಯಾಯವು

{ ಬಲರಾಮನು ಬದರಪಾಚನತೀರ್ಥಕ್ಕೆ ಹೋದುದು ಶ್ರುತಾವತಿಯ ಮತ್ತು ಅರುಂಧತಿಯ ಮಹಿಮೆ }

ರಾಜಾ ! ಯಾವ ತೀರ್ಥದಲ್ಲಿ ಅಸಮಾನರೂಪವತಿಯಾಗಿದ್ದ ಶ್ರುತಾವತಿಯೆಂಬ ಭರದ್ವಾಜ ಕುಮಾರಿಯು, ಕನ್ಯೆಯಾಗಿದ್ದುಕೊಂಡೇ ವ್ರತನಿಷ್ಠಳಾಗಿದ್ದಳೋ, ಯಾವ ತೀರ್ಥವು ತಪಸ್ವಿಗಳಿಂದಲೂ, ಸಿದ್ಧರಿಂದಲೂ ಸೇವಿತವಾಗಿದ್ದಿತೋ, ಆ ಬದರಪಾಚನವೆಂಬ ತೀರ್ಥಕ್ಕೆ ಬಲರಾಮನು ಬಂದು ಸೇರಿದನು. ಹಿಂದೆ ಶ್ರುತಾವತಿಯು 'ತನಗೆ ದೇವರಾಜನೇ ಪತಿಯಾಗಬೇಕು' ಎಂದು ನಿಶ್ಚಯಿಸಿ, ಹಲವು ನಿಯಮಗಳೊಡನೆ ಅಲ್ಲಿ ಉಗ್ರತಪಸ್ಸನ್ನು ಮಾಡಿದಳು ಆ ಶ್ರುತಾವತಿಯು ಸ್ತ್ರೀಯರಿಂದ ಅನುಷ್ಠಿಸಲಸಾಧ್ಯವಾದ ಹಲವು ಬಗೆಯ ಉಗ್ರ ನಿಯಮಗಳನ್ನು ಹಿಡಿದು ಅನೇಕವರ್ಷಗಳವರೆಗೆ ತಪಸ್ಸನ್ನಾಚರಿಸಿದಳು. ದೇವರಾಜನಾದ ಇಂದ್ರನು ಆಕೆಯ ಭಕ್ತಿಗೆ ಮೆಚ್ಚಿ, ಬ್ರಹ್ಮರ್ಷಿಯಾದ ವಸಿಷ್ಠನ ರೂಪವನ್ನು ಧರಿಸಿ ಆಕೆಯ ಆಶ್ರಮಕ್ಕೆ ಬಂದನು ಆಗ ಆ ಶ್ರುತಾವತಿಯು ಅವನನ್ನು ಮಹಾತ್ಮನಾದ ವಸಿಷ್ಠನೆಂದೇ ಭಾವಿಸಿ, ತಾಪಸರ ವಿಧಿಗನುಸಾರವಾಗಿ ಸತ್ಕರಿಸಿ, ಇಂಪಾದ ನುಡಿಗಳಿಂದ " ಓ ಮುನಿಶ್ರೇಷ್ಠಾ ! ಪ್ರಭೂ ! ಏನಾಜ್ಞಾಪಿಸುವೆ ? ನನ್ನ ಶಕ್ತಿಗೆ ತಕ್ಕಂತೆ ನಿನಗೆ ಬೇಕಾದುದನ್ನು ಕೊಡುವೆನು ಆದರೆ ನನಗೆ ಇಂದ್ರನಲ್ಲಿರುವ ಪ್ರೀತಿಯಿಂದ ನನ್ನ ಕೈಯನ್ನು ಮಾತ್ರ ನಿನಗೆ ಯಾವ ವಿಧದಲ್ಲಿಯೂ ಕೊಡಲಾರೆನು ತ್ರಿಲೋಕಾಧಿಪತಿಯಾದ ಇಂದ್ರನೇ ನನ್ನ ವ್ರತನಿಯಮಗಳಿಗೂ, ತಪಸ್ಸಿಗೂ ಸಂತೋಷಿಸಿ ನನ್ನನ್ನು ಕೈಹಿಡಿಯಬೇಕಾದವನು " ಎಂದಳು ಇದನ್ನು ಕೇಳಿ, ದೇವೇಂದ್ರನು ಆಕೆಯನ್ನು ನೋಡಿ ಮಂದಹಾಸದಿಂದ ಆಕೆಯ ಉದ್ದೇಶವನ್ನರಿತು ಸಮಾಧಾನ ಹೇಳುತ್ತ ' ಓ ದೃಢವ್ರತೇ ! ನೀನು ಉಗ್ರತಪಸ್ಸನ್ನು ಮಾಡುತ್ತಿರುವುದನ್ನು ನಾನು ಬಲ್ಲೆನು ಈ ನಿನ್ನ ತಪಸ್ಸಿನ ಪ್ರಭಾವದಿಂದ ನಿನ್ನ ಮನೋಭಿಪ್ರಾಯವು ಪೂರ್ಣವಾಗಿ ನೆರವೇರುವುದು ಮಂಗಳಾಂಗೀ ! ದೇವತೆಗಳ ದಿವ್ಯಸ್ಥಾನಗಳು ಯಾವುವುಂಟೋ ಅವುಗಳನ್ನೂ ನಿನ್ನ ತಪಃಪ್ರಭಾವದಿಂದ ಪಡೆಯುವೆ ಉತ್ತಮ ಸುಖಕ್ಕೆ ತಪಸ್ಸೇ ಮೂಲವು ಅದರಿಂದಲೇ ಘೋರತಪಸ್ಸನ್ನು ಮಾಡಿ ಶರೀರವನ್ನು ತ್ಯಜಿ

ಸಿದ ನರರು ದೇವಸಮಾನರಾಗುವರು ಕಲ್ಯಾಣೀ! ನಾನೊಂದು ಮಾತನ್ನು ಹೇಳುವೆನು ಕೇಳು ಇದೋ! ಈ ಐದು ಬದರೀಫಲಗಳನ್ನು ಪಕ್ವಮಾಡಿಡು" ಎಂದು ಹೇಳಿ ಅವುಗಳನ್ನು ಕೊಟ್ಟು ಇಂದ್ರನು ಅಲ್ಲಿಂದ ಹೊರಟನು ಆಮೇಲೆ ಆತನು ಒಂದು ಮಂತ್ರವನ್ನು ಜಪಿಸಲು, ಆ ಆಶ್ರಮಕ್ಕೆ ಸಮೀಪದಲ್ಲಿ ಉತ್ತಮವಾದೊಂದು ತೀರ್ಥವುಂಟಾಯಿತು ಇಂದ್ರನು ಯಾವ ಸ್ಥಳದಲ್ಲಿ ದಿವ್ಯ ಮಂತ್ರವನ್ನು ಜಪಿಸಿದನೋ, ಆ ಪ್ರದೇಶದಲ್ಲಿಯೇ ಇಂದ್ರತೀರ್ಥವೆಂದು ಲೋಕಪ್ರಸಿದ್ಧವಾದ ತೀರ್ಥವು ಉತ್ಪನ್ನವಾಯಿತು ಪಾಕವೈರಿಯಾದ ದೇವೇಂದ್ರನು ಪರೀಕ್ಷಾರ್ಥವಾಗಿ ಆ ಎಲಚಿಹಣ್ಣುಗಳನ್ನು ಪಕ್ವವಾಗದಂತೆ ಮಾಡಿದ್ದನು ಮಹಾತಪಸ್ವಿನಿಯೂ, ಮೌನವ್ರತವುಳ್ಳವಳೂ ಆದ ಆ ಸ್ತ್ರೀಯು, ಅವುಗಳನ್ನು ಪಕ್ವಮಾಡುವುದಾಗಿ ಉದ್ದೇಶಿಸಿ ಶುದ್ಧವಸ್ತ್ರವನ್ನು ಧರಿಸಿ, ಆ ಎಲಚಿಯಹಣ್ಣುಗಳನ್ನು ಒಲೆಯಮೇಲಿಟ್ಟು ಪಕ್ವಮಾಡತೊಡಗಿದಳು ಆ ಕಾರ್ಯದಲ್ಲಿಯೇ ಅವಳಿಗೆ ಬಹಳಹೊತ್ತು ಕಳೆದುಹೋಯಿತು ಆದರೂ ಆ ಹಣ್ಣುಗಳು ಪಕ್ವವಾಗಲಿಲ್ಲ ಹಗಲೆಲ್ಲವೂ ಕಳೆಯಿತು! ಆಕೆಯ ಬಳಿಯಲ್ಲಿದ್ದ ಸೌದೆಯೆಲ್ಲವೂ ತೀರಿಹೋಯಿತು ಬೆಂಕಿಗೆ ಸೌದೆಯಿಲ್ಲದಿರುವುದನ್ನು ನೋಡಿ ಆ ಸ್ತ್ರೀಯು ತನ್ನ ಶರೀರವನ್ನೇ ಒಡ್ಡಲಾರಂಭಿಸಿದಳು ಮೊದಲು ತನ್ನ ಎರಡು ಕಾಲುಗಳನ್ನೂ ಒಲೆಗೆ ದೂಡಿದಳು ಅವು ಉರಿದಹಾಗೆಲ್ಲ ಮುಂದುಮುಂದಕ್ಕೆ ದೇಹವನ್ನು ತಳ್ಳಿಕೊಡುತ್ತಿದ್ದಳು ಅವಳಿಗೆ ಕಾಲು ಹತ್ತಿಕೊಂಡು ಉರಿಯುತ್ತಿದ್ದಾಗಲೂ ಆ ಮಹರ್ಷಿಗೆ ಪ್ರಿಯವನ್ನುಂಟುಮಾಡಬೇಕೆಂಬ ಆತುರದಲ್ಲಿ ಅವಳಿಗೆ ಸ್ವಲ್ಪವೂ ಬಾಧೆಯೇನೂ ತೋರಲಿಲ್ಲ ಶರೀರವನ್ನು ಅಗ್ನಿಯಲ್ಲಿ ಉರಿಸುತಿದ್ದಾಗಲೂ ತಣ್ಣೀರಿನಲ್ಲಿದ್ದಂತೆಯೇ ನಿಂತಿದ್ದಳು ಆಕೆಗೆ ಹಣ್ಣುಗಳನ್ನು ಪಚನಮಾಡುವ ಪ್ರಯತ್ನವೂ ನಿಲ್ಲಲಿಲ್ಲ ಹೇಗಾದರೂ ಅವುಗಳನ್ನು ಪಕ್ವಮಾಡಬೇಕೆಂದೇ ನಿಶ್ಚಯಿಸಿಕೊಂಡಳು ಅವು ಪಕ್ವವಾಗಲೇ ಇಲ್ಲ ಅವಳ ಕಾಲುಗಳೆಲ್ಲ ಉರಿದುಹೋದುವು ಆದರೂ ಅವಳು ವ್ಯಸನಪಡಲಿಲ್ಲ ಇಂದ್ರನು ಆಕೆಯ ಸ್ಥಿತಿಯನ್ನು ನೋಡಿ ಮೆಚ್ಚಿ ಕನಿಕರಗೊಂಡು, ಅವಳಿಗೆ ತನ್ನ ನಿಜರೂಪವನ್ನು ತೋರಿಸಿ ಆಕೆಯನ್ನು ಕುರಿತು "ಓ ಕಲ್ಯಾಣೀ! ನಿನ್ನ ಭಕ್ತಿಗೂ,

ತಪಸ್ಸಿಗೂ, ನಿಯಮಕ್ಕೂ ನಾನು ಪ್ರೀತನಾದೆನು. ಮಂಗಳಾಂಗೀ! ನಿನ್ನ ಇಷ್ಟವು ನೆರವೇರುವುದು ಮಹಾಭಾಗ್ಯವತೀ! ನೀನು ಈ ದೇಹವನ್ನು ತ್ಯಜಿಸಿದಮೇಲೆ ಸ್ವರ್ಗದಲ್ಲಿ ನನ್ನೊಡನೆ ವಾಸಮಾಡುವೆ ಈ ಉತ್ತಮತೀರ್ಥವು ಎಲ್ಲಾ ಪಾಪಗಳನ್ನೂ ನೀಗಿಸುವುದು ಇದಕ್ಕೆ ಬದರಪಾಚನವೆಂಬ ಹೆಸರು ಭೂಲೋಕದಲ್ಲಿ ಶಾಶ್ವತವಾಗಿ ನಿಲ್ಲುವುದು ಇದರಲ್ಲಿ ಸದಾ ಬ್ರಹ್ಮರ್ಷಿಗಳು ಸ್ನಾನಮಾಡುವರು ಮೂರು ಲೋಕಗಳಲ್ಲಿಯೂ ಇದು ಪ್ರಸಿದ್ಧಿಹೊಂದುವುದು ಕಲ್ಯಾಣೀ! ಮಂಗಳಕರವೂ, ನಿರ್ದೋಷವೂ ಆದ ಈ ದಿವ್ಯತೀರ್ಥದಲ್ಲಿ ಹಿಂದೊಮ್ಮೆ ಅರುಂಧತಿಯನ್ನು ಬಿಟ್ಟುಬಿಟ್ಟು ಸಪ್ತರ್ಷಿಗಳು ಹಿಮವತ್ಪರ್ವತಕ್ಕೆ ಹೋದರು ಮಹಾತ್ಮರಾದ ಆ ಋಷಿಗಳು ಅಲ್ಲಿ ಉಗ್ರವ್ರತವನ್ನು ಹಿಡಿದು, ಆಹಾರಕ್ಕಾಗಿ ಫಲಗಳನ್ನೂ, ಗೆಡ್ಡೆಗೆಣಸುಗಳನ್ನೂ ಸಂಗ್ರಹಿಸಿಕೊಂಡು ಹೋಗುತ್ತಿದ್ದರಂತೆ ಅವರು ಜೀವನಕ್ಕಾಗಿ ಆ ಹಿಮವತ್ಪರ್ವತಕ್ಕೆ ಸೇರಿದ ವನದಲ್ಲಿ ವಾಸಮಾಡುತ್ತಬರಲು, ಹನ್ನೆರಡು ವರ್ಷಗಳು ಮಳೆಯಿಲ್ಲದಂತಾಯಿತು ಮಹರ್ಷಿಗಳು ತಪೋನಿರತರಾಗಿ ಅಲ್ಲಿದ್ದರು ಇತ್ತಲಾಗಿ ಅರುಂಧತಿಯೂ ತಪಸ್ಸಿನಲ್ಲಿದ್ದಳು ಉಗ್ರನಿಯಮದಲ್ಲಿದ್ದ ಆ ಅರುಂಧತಿಯ ನಿಯಮದಿಂದ ತ್ರಿನೇತ್ರನಾದ ಈಶ್ವರನು ಸಂತುಷ್ಟನಾಗಿ, ಆಕೆಗೆ ವರವನ್ನು ಕೊಡಲು, ಬ್ರಾಹ್ಮಣರೂಪದಿಂದ ಆಕೆಯ ಬಳಿಗೆ ಬಂದು "ಓ ಕಲ್ಯಾಣೀ! ನನಗೆ ಭಿಕ್ಷೆಯನ್ನು ಕೊಡು" ಎಂದನು ಆ ಬಾಲಿಕೆಯು ಆತನನ್ನು ಕುರಿತು 'ಓ ಬ್ರಾಹ್ಮಣಾ! ಈಗ ಅನ್ನವೇನೂ ಸಿದ್ಧವಾಗಿಲ್ಲ ಮುಗಿದುಹೋಯಿತು ಈಗ ಎಲಚಿಯ ಹಣ್ಣುಗಳನ್ನು ಭುಜಿಸು' ಎಂದಳು ಆಗ ಈಶ್ವರನು ಹಾಗಿದ್ದರ ಈ ಹಣ್ಣುಗಳನ್ನೇ ಪಕ್ವಮಾಡಿಕೊಡು' ಎಂದನು ಪ್ರಸಿದ್ಧಳಾದ ಆ ಅರುಂಧತಿಯು ಅದನ್ನು ಕೇಳಿ ಆ ಬ್ರಾಹ್ಮಣನ ಸಂತೋಷಾರ್ಥವಾಗಿ ಆ ಎಲಚಿಯ ಹಣ್ಣುಗಳನ್ನು ಉರಿಯುವ ಬೆಂಕಿಯಲ್ಲಿ ಪಕ್ವಮಾಡುತ್ತ, ಆಗ ಅವನಿಂದ ಮನೋಹರವೂ, ದಿವ್ಯವೂ ಆದ ಪುಣ್ಯಕಥೆಗಳನ್ನು ಕೇಳಿದಳು. ಹನ್ನೆರಡು ವರ್ಷಗಳಕಾಲದಿಂದಿಲ್ಲದ ಮಳೆಯುಸುರಿಯಿತು. ಆಹಾರವನ್ನು ಸೇವಿಸದೆ ಪಚನಮಾಡುತ್ತ, ಪುಣ್ಯಕಥೆಗಳನ್ನು ಕೇಳುತ್ತಿದ್ದ ಆ ಅರುಂಧತಿಗೆ, ಅಷ್ಟು ದೀರ್ಘವಾದ ಕಠಿನಕಾಲವೂ

ಒಂದು ಹಗಲಿಗೆ ಸಮಾನವಾಯಿತು ಆಮೇಲೆ ಋಷಿಗಳು ಹಣ್ಣುಗಳನ್ನು ತೆಗೆದುಕೊಂಡು ಪರ್ವತದಿಂದ ಬಂದರು ಈಶ್ವರನು ಪ್ರೀತನಾಗಿ ಆ ಅರುಂಧತಿಯನ್ನು ಕುರಿತು 'ಓ ಧರ್ಮಜ್ಞಳೇ! ಮೊದಲಿನಂತೆ ನೀನು ಋಷಿಗಳನ್ನು ಹಿಂಬಾಲಿಸು ನಿನ್ನ ತಪಸ್ಸಿಗೂ, ನಿಯಮಕ್ಕೂ ಮೆಚ್ಚಿದೆನು' ಎಂದು ಹೇಳಿ ಅವಳಿಗೆ ತನ್ನ ನಿಜರೂಪವನ್ನು ತೋರಿಸಿ, ಆ ಮಹರ್ಷಿಗಳಿಗೂ ಆಕೆಯ ದಿವ್ಯ ಪ್ರಭಾವವನ್ನು ತಿಳಿಸುತ್ತ 'ಓ ಬ್ರಾಹ್ಮಣರೇ! ಹಿಮಾಲಯಪರ್ವತದಮೇಲೆ ನೀವು ಮಾಡಿದ ಉಗ್ರತಪಸ್ಸು ಕೂಡ ಈಕೆಯು ನಡೆಸುತ್ತಿದ್ದ ಕಠಿನ ತಪಸ್ಸಿಗೆ ಸಮಾನವಾಗಲಾರದು ಆಗ ಆಕೆಯು ದುಸ್ಸಾಧ್ಯವಾದ ತಪಸ್ಸನ್ನು ಹಿಡಿದು, ಆಹಾರಸೇವನೆಯನ್ನೂ ಮಾಡದೆ, ಹನ್ನೆರಡು ವರ್ಷಗಳ ಕಾಲವನ್ನು ಹಾಗೆಯೇ ಕಳೆದಳು' ಎಂದನು ಆಮೇಲೆ ಈಶ್ವರನು ಅರುಂಧತಿಯನ್ನು ಕುರಿತು 'ಕಲ್ಯಾಣೀ! ನಿನಗೆ ಬೇಕಾದ ವರವನ್ನು ಕೇಳು' ಎಂದನು ಆಗ ಅರುಂಧತಿಯು ಸಪ್ತರ್ಷಿಗಳ ಸಭೆಯಲ್ಲಿ ಆ ಮಹಾದೇವನನ್ನು ನೋಡಿ 'ನೀನು ನನ್ನ ವಿಷಯದಲ್ಲಿ ಪ್ರೀತನಾಗಿರುವುದಾದರೆ, ಈ ತೀರ್ಥವು ಲೋಕದಲ್ಲಿ ಅದ್ಭುತತೀರ್ಥವಾಗಲಿ ಇದು ಸಿದ್ಧರಿಗೂ, ದೇವತೆಗಳಿಗೂ, ಋಷಿಗಳಿಗೂ ಪ್ರೀತಿಜನಕವಾಗಿ, ಬದರಪಾಚನವೆಂಬ ಹೆಸರಿನಿಂದ ಪ್ರಸಿದ್ಧವಾಗಲಿ ಓ ದೇವದೇವಾ! ಶುಚಿರ್ಭೂತನಾಗಿ ಹನ್ನೆರಡುವರ್ಷಗಳಕಾಲ ಉಪವಾಸವಿದ್ದವನು ಯಾವ ಫಲವನ್ನು ಪಡೆಯುವನೋ, ಆ ಫಲವು ಈ ತೀರ್ಥದಲ್ಲಿ ಮೂರು ರಾತ್ರಿ ಮಾತ್ರ ವಾಸಮಾಡುವವನಿಗೂ ಉಂಟಾಗಲಿ' ಎಂದು ಬೇಡಿಕೊಂಡಳು ಆಗ ರುದ್ರನು ಅರುಂಧತಿಗೆ 'ಹಾಗೆಯೇ ಆಗಲಿ' ಎಂದು ವರವನ್ನು ಕೊಟ್ಟು, ಸಪ್ತರ್ಷಿಗಳಿಂದ ಸ್ತುತಿಸಲ್ಪಡುತ್ತ ತನ್ನ ಲೋಕಕ್ಕೆ ಹೋದನು ಆಗ ಆ ಋಷಿಗಳು ಆ ಅರುಂಧತಿಯು ಅಷ್ಟು ಕಠಿನನಿಯಮದಲ್ಲಿದ್ದರೂ, ಕಳೆಗುಂದದೆ, ಕೃಶಳಾಗದೆ, ಹಸಿವು ದಾಹಗಳಿಲ್ಲದೆ ಇರುವುದನ್ನು ಕಂಡು ಆಶ್ಚರ್ಯಪಟ್ಟರು ಹೀಗೆಂದು ಹೇಳಿ ಇಂದ್ರನು ಅವಳನ್ನು ಕುರಿತು 'ಓ ಮಹಾಭಾಗ್ಯವತೀ! ನನಗಾಗಿ ಉಗ್ರವ್ರತವನ್ನನುಷ್ಠಿಸಿದವಳೇ! ಈಗ ನೀನು ಹೇಗೆಯೋ ಹಾಗೆಯೇ ಹಿಂದೆ ಪರಿಶುದ್ಧಳಾದ ಅರುಂಧತಿಯೂ ಇಲ್ಲಿ ಉತ್ತಮಸಿದ್ಧಿಯನ್ನು ಹೊಂದಿದಳು. ಆದರೆ ನಿನ್ನ ವ್ರತದಲ್ಲಿ ಇನ್ನೂ

ವಿಶೇಷವುಂಟು. ನಿನ್ನ ವ್ರತದಿಂದ ಸಂತುಷ್ಟನಾದ ನಾನು ಈಗ ನಿನಗೆ ವರವನ್ನು ಕೊಡುವೆನು ಮಹಾತ್ಮಳೇ! ಮಹಾತ್ಮನಾದ ರುದ್ರನಿಂದ ಅರುಂಧತಿಗೆ ಯಾವ ವರವು ಕೊಡಲ್ಪಟ್ಟಿತೋ, ಅದೇ ವರವನ್ನು ನಿನಗೆ ನಾನು ನನ್ನ ಪ್ರಭಾವದಿಂದಲೂ, ತೇಜಸ್ಸಿನಿಂದಲೂ ಕೊಡುವೆನು ಈಗ ನಿನ್ನ ಅದೃಷ್ಟಕ್ಕೆ ತಕ್ಕಂತೆ ಇನ್ನೂ ವಿಶೇಷವಾದ ವರವೊಂದನ್ನು ತಿಳಿಸು ವೆನು ಯಾವನು ಮಹಾನಿಯಮದಿಂದ ಈ ತೀರ್ಥದಲ್ಲಿ ಒಂದು ರಾತ್ರಿ ಯ ಮಟ್ಟಿಗೆ ತಂಗಿ ಸ್ನಾನಮಾಡುವನೋ, ಆತನು ದೇಹವನ್ನು ತ್ಯಜಿಸಿದ ಮೇಲೆ ಬೇರೆ ಯಾವ ರೀತಿಯಿಂದಲೂ ಪಡೆಯಲಾರದ ಲೋಕಗಳನ್ನು ಪಡೆಯುವನು' ಎಂದನು ಸಹಸ್ರಾಕ್ಷನಾದ ದೇವೇಂದ್ರನು ಶ್ರುತಾವತಿ ಯೊಡನೆ ಹೀಗೆಂದು ಹೇಳಿ ಸ್ವರ್ಗಕ್ಕೆ ಹೋದನು ಓ ರಾಜಾ! ಇಂದ್ರನು ಹೊರಟೊಡನೆ ಇತ್ತಲಾಗಿ ಸುಗಂಧವನ್ನು ಬೀರುವ ಪುಷ್ಪವರ್ಷವು ಸುರಿ ಯಲಾರಂಭಿಸಿತು ದೇವದುಂದುಭಿಗಳು ಮೊಳಗಿದುವು ಶುದ್ಧವಾದ ಸುಗಂಧಮಾರುತವು ಬೀಸಿತು ಮಂಗಳಾಂಗಿಯಾದ ಆ ಶ್ರುತಾವತಿಯು ದೇಹವನ್ನು ತ್ಯಜಿಸಿದಮೇಲೆ, ಇಂದ್ರಭಾರ್ಯೆಯಾಗಿ ತನ್ನ ಉಗ್ರತಪಸ್ಸಿನ ಫಲದಿಂದ ಅವನೊಡನೆ ರಮಿಸಿದಳು" ಎಂದನು

ಆಗ ಜನಮೇಜಯನು "ಓ ಮಹಾತ್ಮಾ! ಅವಳು ಯಾರ ಮಗ ಳು? ಎಲ್ಲಿ ಬೆಳೆದಳು? ಅದನ್ನು ಕೇಳಲು ಕುತೂಹಲಗೊಂಡಿರುವೆನು" ಎನಲು, ವೈಶಂಪಾಯನನು 'ಒಮ್ಮೆ ಭರದ್ವಾಜಮುನಿಯು ತನ್ನಿದಿರಿಗೆ ಬರುತ್ತಿದ್ದ ಘೃತಾಚಿಯೆಂಬ ಅಪ್ಸರಸ್ತ್ರೀಯನ್ನು ಕಂಡನು ಒಡನೆ ಅವ ನಿಗೆ ರೇತಸ್ಸು ಸ್ಖಲಿತವಾಯಿತು ಆತನು ಆ ವೀರ್ಯವನ್ನು ತನ್ನ ಕೈ ಯಿಂದ ಧರಿಸಿದನು ಅದು ಕೈಯಿಂದ ಜಾರಿ ಒಂದು ಎಲೆಯಮೇಲೆ ಬಿದ್ದಿತು ಅದರಲ್ಲಿ ಆ ಕನ್ಯೆಯು ಹುಟ್ಟಿದಳು ತಪೋಧನನೂ, ಧರ್ಮಾ ತ್ಮನೂ ಆದ ಭರದ್ವಾಜಮಹರ್ಷಿಯು ಆ ಹೆಣ್ಣುಮಗುವಿಗೆ ಜಾತಕರ್ಮ ವೇ ಮೊದಲಾದ ಎಲ್ಲಾ ಕರ್ಮಗಳನ್ನೂ ಮಾಡಿ ದೇವರ್ಷಿಗಣಗಳ ಸಭೆ ಯಲ್ಲಿ ಆಕೆಗೆ ಶ್ರುತಾವತಿಯೆಂದು ನಾಮಕರಣಮಾಡಿ, ಅವಳನ್ನು ತನ್ನ ಆಶ್ರಮದಲ್ಲಿಯೇ ಬಿಟ್ಟು ಹಿಮಾಚಲಪರ್ವತದ ಕಾಡಿಗೆ ಹೋದನು.

ಮಹಾನುಭಾವನೂ, ವೃಷ್ಣಿಕುಲಶ್ರೇಷ್ಠನೂ ಆದ ಬಲರಾಮನೂ ಈಗ ಆ ತೀರ್ಥದಲ್ಲಿ ಸ್ನಾನಮಾಡಿ ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಟ್ಟು ಅಲ್ಲಿಂದ ಇಂದ್ರತೀರ್ಥಕ್ಕೆ ಹೋದನು

ಇದು ನಾಲ್ವತ್ತೊಂಭತ್ತನೆಯ ಅಧ್ಯಾಯವು

{ ಬಲರಾಮನು ಇಂದ್ರತೀರ್ಥವೇ ಮೊದಲಾದ ತೀರ್ಥಗಳಿಗೆ ಹೊರಟುದು. ಆ ತೀರ್ಥದ ಮಹಿಮೆ. }

ಆಮೇಲೆ ಬಲರಾಮನು ಇಂದ್ರತೀರ್ಥವನ್ನು ಸೇರಿ ಅಲ್ಲಿಯೂ ವಿಧ್ಯುಕ್ತರೀತಿಯಲ್ಲಿ ಸ್ನಾನಮಾಡಿ, ಬ್ರಾಹ್ಮಣರಿಗೆ ಧನಗಳನ್ನೂ, ರತ್ನಗಳನ್ನೂ ಕೊಟ್ಟನು ರಾಜೇಂದ್ರಾ! ಆ ಸ್ಥಳದಲ್ಲಿಯೇ ಇಂದ್ರನು ನೂರು ಯಾಗಗಳನ್ನು ಮಾಡಿದನು ಆಗ ಬೃಹಸ್ಪತಿಗೆ ಅಪಾರಧನವನ್ನು ದಾನಮಾಡಿದನು. ಅಲ್ಲಿಯೇ ಇಂದ್ರನು ವೇದವಿದರಾದ ಬ್ರಾಹ್ಮಣರಿಂದ ಭೂರಿದಕ್ಷಿಣೆಗಳುಳ್ಳ ಹಲವು ದೊಡ್ಡ ಯಾಗಗಳನ್ನು ನಿರ್ವಿಘ್ನವಾಗಿ ನಡೆಸಿದನು ಆದುದರಿಂದಲೇ ಆತನಿಗೆ ಶತಕ್ರತುವೆಂದು ಹೆಸರಾಯಿತು ಮಂಗಳಕರವೂ, ಶಾಶ್ವತವೂ, ಆದ ಆ ತೀರ್ಥವು ಅದರಿಂದಲೇ ಇಂದ್ರತೀರ್ಥವೆಂದು ಪ್ರಸಿದ್ಧಿಹೊಂದಿ, ಎಲ್ಲಾ ಪಾಪಗಳನ್ನೂ ತೊಲಗಿಸುವುದು ಬಲರಾಮನು ಆ ತೀರ್ಥದಲ್ಲಿಯೂ ವಿಧ್ಯುಕ್ತರೀತಿಯಲ್ಲಿ ಸ್ನಾನಮಾಡಿ, ಅನ್ನಪಾನ ವಸ್ತ್ರಗಳಿಂದ ಬ್ರಾಹ್ಮಣರನ್ನು ಪೂಜಿಸುತ್ತ, ಅಲ್ಲಿ ಮಂಗಳಕರವಾದ ರಾಮತೀರ್ಥವೆಂಬ ಉತ್ತಮತೀರ್ಥವನ್ನು ಸೇರಿದನು ಓ ಜನಮೇಜಯರಾಜಾ! ಯಾವ ಸ್ಥಳದಲ್ಲಿ ಮಹಾಭಾಗ್ಯಶಾಲಿಯೂ, ಮಹಾತಪಸ್ವಿಯೂ, ಆದ ಪರಶುರಾಮನು ಭೂಮಿಯಲ್ಲಿ ಅಡಿಗಡಿಗೆ ಕ್ಷತ್ರಿಯೋತ್ತಮರನ್ನು ನಾಶಮಾಡಿ, ಋಷಿಶ್ರೇಷ್ಠನೂ, ಗುರುವೂ ಆದ ಕಾಶ್ಯಪನ ಮೂಲಕವಾಗಿ ವಾಜಪೇಯದಿಂದಲೂ, ನೂರು ಅಶ್ವಮೇಧಗಳಿಂದಲೂ ದೇವತೆಗಳನ್ನಾರಾಧಿಸಿ, ಸಮುದ್ರಮೇಖಲೆಯಾದ ಸಮಸ್ತ ಭೂಮಿಯನ್ನೂ ದಕ್ಷಿಣೆಯಾಗಿ ಕೊಟ್ಟನೋ, ಅದೇ ಸ್ಥಳದಲ್ಲಿ ಬಲರಾಮನು ಬ್ರಾಹ್ಮಣರಿಗೆ ಧನವನ್ನು ಕೊಟ್ಟು, ವಿಧ್ಯುಕ್ತರೀತಿಯಲ್ಲಿ ಸ್ನಾನಮಾಡಿ, ಬ್ರಾಹ್ಮಣರನ್ನು ಪೂಜಿಸಿ

ದನು. ಅಲ್ಲಿನ ಋಷಿಗಳಿಗೆಲ್ಲ ಅಭಿವಾದನಮಾಡಿದನು. ಆಮೇಲೆ ಬಲರಾಮನು, ಹಿಂದೆ ಯಾವ ತೀರ್ಥದಲ್ಲಿ ಜಲಾಧಿದೇವತೆಯಾದ ವರುಣನು ರಾಜಸೂಯವನ್ನು ಮಾಡುವುದಕ್ಕಾಗಿ ಅನೇಕ ಋಷಿಗಳನ್ನು ಬರಮಾಡಿದನೋ, ಮಹಾಭಾಗ್ಯಶಾಲಿಯೂ, ಶ್ವೇತವರ್ಣನೂ ಆದ ಆತನು ಯಾವ ಸ್ಥಳದಲ್ಲಿ ದೈತ್ಯ ದಾನವ ಮನುಷ್ಯರನ್ನೂ, ಗಂಧರ್ವರನ್ನೂ, ರಾಕ್ಷಸರನ್ನೂ ಯುದ್ಧದಲ್ಲಿ ಜಯಿಸಿ ಪ್ರಸಿದ್ಧನಾದನೋ, ಆ ಯಮುನಾತೀರವನ್ನು ಸೇರಿದನು ರಾಜೇಂದ್ರಾ! ಅಲ್ಲಿ ವರುಣನ ಯಾಗವು ಮುಗಿದೊಡನೆ ದೇವತೆಗಳಿಗೂ, ದಾನವರಿಗೂ, ತ್ರಿಲೋಕಭಯಂಕರವಾದ ಯುದ್ಧವು ನಡೆಯಿತು ರಾಜಸೂಯಯಾಗವು ಮುಗಿದಾಗಲೆಲ್ಲ ಕ್ಷತ್ರಿಯರಲ್ಲಿ ಪ್ರಬಲ ಯುದ್ಧವಾಗುವ ಸಂಭವವುಂಟು ಬಲರಾಮನು ಆ ಉತ್ತಮತೀರ್ಥದಲ್ಲಿ ಸ್ನಾನಮಾಡಿ, ಬ್ರಾಹ್ಮಣರಿಗೆ ಧನವನ್ನು ಕೊಟ್ಟು, ಸಂತುಷ್ಟರಾದ ಆ ಬ್ರಾಹ್ಮಣರಿಂದ ಸ್ತುತಿಸಲ್ಪಡುತ್ತ, ಅಲ್ಲಿಂದ ಆದಿತ್ಯತೀರ್ಥಕ್ಕೆ ಹೋದನು ರಾಜಾ! ಸೂರ್ಯನು ಅದೇ ಸ್ಥಳದಲ್ಲಿ ಯಾಗಮಾಡಿ ಜ್ಯೋತಿಯನ್ನೂ, ಜ್ಯೋತಿರ್ಗಣಗಳಲ್ಲಿ ಪ್ರಮುಖನೆಂಬ ಪ್ರಸಿದ್ಧಿಯನ್ನೂ ಪಡೆದನು ಮತ್ತು ಅದೇ ಪುಣ್ಯತೀರ್ಥದಲ್ಲ ಇಂದ್ರನೇ ಮೊದಲಾದ ಎಲ್ಲಾ ದೇವತೆಗಳೂ, ಮರುತ್ತುಗಳೊಡಗೂಡಿದ ವಿಶ್ವೇದೇವರೂ, ಗಂಧರ್ವರೂ, ಅಪ್ಸರಸ್ಸುಗಳೂ, ಕೃಷ್ಣದ್ವೈಪಾಯನನೂ, ಶುಕನೂ, ಮಧುಸೂದನನೂ, ಯಕ್ಷರಾಕ್ಷಸಪಿಶಾಚರೂ ಸಿದ್ಧಿಯನ್ನು ಪಡೆದರು ಹಿಂದೆ ವಿಷ್ಣುವು ಮಧುಕೈಟಭರೆಂಬಿಬ್ಬರು ರಾಕ್ಷಸರನ್ನು ಕೊಂದಮೇಲೆ, ಆ ತೀರ್ಥದಲ್ಲಿ ಸ್ನಾನಮಾಡಿ ಯೋಗವನ್ನೂ, ಸಿದ್ಧಿಯನ್ನೂ ಪಡೆದನು ಧರ್ಮಾತ್ಮನಾದ ದ್ವೈಪಾಯನನೂ ಆ ತೀರ್ಥದಲ್ಲಿಯೇ ಸ್ನಾನಮಾಡಿ ಶ್ರೇಷ್ಠವಾದ ಯೋಗಸಿದ್ಧಿಯನ್ನು ಪಡೆದನು ಮಹಾತಪಸ್ವಿಯಾದ ಅಸಿತದೇವಲನೂ ಅದೇ ತೀರ್ಥದಲ್ಲಿ ಸ್ನಾನಮಾಡಿ ಉತ್ತಮವಾದ ಯೋಗವನ್ನನುಷ್ಠಿಸಿ ಸಿದ್ಧಿಯನ್ನು ಪಡೆದನು

ಇದು ಐವತ್ತನೆಯ ಅಧ್ಯಾಯವು.



—{ ದೇವಲಜೈಗೀಷವ್ಯರ ಚರಿತ್ರವು ಬಲರಾಮನು ಸೋಮ ತೀರ್ಥವನ್ನು ಕುರಿತು ಹೊರಟುದು. }—

ಧರ್ಮಾತ್ಮನೂ, ತಪೋಧನನೂ ಆದ ಅಸಿತದೇವಲನು, ಹಿಂದೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಆ ತೀರ್ಥದಲ್ಲಿಯೇ ವಾಸಮಾಡುತ್ತಿದ್ದನು. ಆ ದೇವಲಋಷಿಯು ಧರ್ಮನಿರತನು! ಪರಿಶುದ್ಧನು! ಇಂದ್ರಿಯಗಳನ್ನು ಅಡಗಿಸಿದವನು! ಯಾವಾಗಲೂ ಯಜ್ಞಮಾಡುವ ಸ್ವಭಾವವುಳ್ಳವನು! ಮಹಾತಪಸ್ವಿ! ಮನೋವಾಕ್ಕಾಯ (ತ್ರಿಕರಣ) ಗಳಿಂದಲೂ ಎಲ್ಲಾ ಪ್ರಾಣಿಗಳ ವಿಷಯದಲ್ಲಿಯೂ ಸಮಬುದ್ಧಿಯುಳ್ಳವನು! ಕೋಪರಹಿತನು! ಸ್ತೋತ್ರ ನಿಂದೆಗಳೆರಡನ್ನೂ ಸಮವಾಗಿ ಎಣಿಸುವವನು! ಪ್ರಿಯಾಪ್ರಿಯಗಳೆರಡರಲ್ಲಿಯೂ ಒಂದೇ ವಿಧವಾಗಿರತಕ್ಕವನು! ಯಮನಂತೆ ಎಲ್ಲರನ್ನೂ ಸಮವಾಗಿ ಕಾಣತಕ್ಕವನು ಹೊನ್ನು ಮಣ್ಣುಗಳಲ್ಲಿ ಸಮಬುದ್ಧಿಯುಳ್ಳವನು ಮಹಾಜ್ಞಾನಿ! ಯಾವಾಗಲೂ ಬ್ರಹ್ಮಚರ್ಯನಿಷ್ಠನು ಧರ್ಮಾಸಕ್ತನು ದೇವಬ್ರಾಹ್ಮಣರನ್ನೂ, ಅತಿಥಿಗಳನ್ನೂ ನಿತ್ಯವೂ ಪೂಜಿಸತಕ್ಕವನು ಓ ರಾಜಾ! ಕೆಲವು ದಿನಗಳಮೇಲೆ ಧೀಮಂತನೂ, ನಿಯಮನಿಷ್ಠನೂ ಆದ ಜೈಗೀಷವ್ಯನೆಂಬ ಮುನಿಯು ಆ ತೀರ್ಥಕ್ಕೆ ಬಂದು, ಯೋಗನಿಯಮದಿಂದ ಆ ದೇವಲನ ಆಶ್ರಮದಲ್ಲಿ ತಪಸ್ಸು ಮಾಡುವುದಕ್ಕಾರಂಭಿಸಿದನು. ಮಹಾತಪಸ್ವಿಯಾದ ಆ ಜೈಗೀಷವ್ಯನೂ ಅಲ್ಲಿಯೇ ಸಿದ್ಧಿಯನ್ನೂ ಪಡೆದನು ಅಲ್ಲಿರುತ್ತಿದ್ದ ಆ ಜೈಗೀಷವ್ಯನನ್ನು ದೇವಲನು ನೋಡುತ್ತಿದ್ದರೂ ಆತನನ್ನು ಧರ್ಮದಿಂದ ಉಪಚರಿಸಲಿಲ್ಲ ಹೀಗೆ ಬಹಳ ಕಾಲವು ಕಳೆದುಹೋಯಿತು. ಆಮೇಲೆ ಒಮ್ಮೆ ಆ ಜೈಗೀಷವ್ಯನು ಸನ್ಯಾಸಿಯಾಗಿ ಭಿಕ್ಷೆಗೆ ಹೋಗುತ್ತ ಏಕಾಕಿಯಾಗಿ ಭೋಜನಸನ್ನಾಹದಲ್ಲಿದ್ದ ದೇವಲನಲ್ಲಿಗೆ ಬಂದನು ಆಗ ದೇವಲನು ಸನ್ಯಾಸಿವೇಷದಿಂದ ಬಂದ ಆ ಮುನೀಶ್ವರನನ್ನು ಕಂಡು, ಅವನಲ್ಲಿ ಅಧಿಕ ಪ್ರೀತಿಗೌರವಗಳನ್ನು ತೋರಿಸಿ ಆದರಿಸಿದನು. ಮತ್ತು ಬಹಳ ಎಚ್ಚರಿಕೆಯಿಂದ ಋಷಿಧರ್ಮವನ್ನು ಹಿಡಿದು ತನ್ನ ಶಕ್ತಿಗನುಸಾರವಾಗಿ ಅನೇಕವರ್ಷಗಳವರೆಗೆ ಅವನನ್ನು ಪೂಜಿಸಿದನು ಕೊನೆಕೊನೆಗೆ ಅವನಿಗೆ ಬೇಸರವು ತೋರಿ ತನ್ನಲ್ಲಿತಾನು "ಈ ಸನ್ಯಾಸಿಯ ಪೂಜೆಯಲ್ಲಿಯೇ ನನಗೆ ಹಲವು ವರ್ಷಗಳು ಕಳೆದು

ಹೋದುವು. ಈ ಸನ್ಯಾಸಿಯಾದರೋ ಸೋಮಾರಿಯಾಗಿ ಬಾಯೆತ್ತದೆ ಸುಮ್ಮನಿರುವನು" ಎಂಬ ಜಿಹಾಸೆಯಿಂದ ಅವನು ತನ್ನ ಕಲಶವನ್ನೆತ್ತಿ ಕೊಂಡು ಆಕಾಶಮಾರ್ಗವಾಗಿ ಮಹಾಸಮುದ್ರಕ್ಕೆ ಹೋದನು. ಆತನು ಸಮುದ್ರಕ್ಕೆ ಬಂದುಸೇರುವಷ್ಟರಲ್ಲಿ, ತನಗೆ ಮೊದಲೇ ಅಲ್ಲಿ ಜೈಗೀಷವ್ಯನು ಬಂದಿರುವುದನ್ನು ಕಂಡನು ಆಗ ಆ ದೇವಲಮಹರ್ಷಿಗೆ ಅತ್ಯಾಶ್ಚರ್ಯ ವಾಯಿತು "ಈ ಸನ್ಯಾಸಿಯು ನನಗೆ ಮೊದಲೇ ಇಲ್ಲಿಗೆ ಬಂದು ಸಮುದ್ರಸ್ನಾನವನ್ನೂ ಮುಗಿಸಿಕೊಂಡಿರುವನು ಈತನು ಅಷ್ಟುಬೇಗನೆ ಇಲ್ಲಿಗೆ ಹೇಗೆ ಬಂದನು?" ಎಂದು ವಿಸ್ಮಿತನಾದನು ಹೀಗೆ ಆಶ್ಚರ್ಯ ದಿಂದ ಬೆರಗಾಗಿ, ಆತನು ಸಮುದ್ರದಲ್ಲಿ ಸ್ನಾನಮಾಡಿ, ಮಂತ್ರಜಪಗಳ ನ್ನೂ, ನಿತ್ಯಕರ್ಮಗಳನ್ನೂ ಮುಗಿಸಿಕೊಂಡು, ಜಲಪೂರ್ಣವಾದ ಪಾತ್ರೆ ಯನ್ನೆತ್ತಿಕೊಂಡು ತನ್ನ ಆಶ್ರಮಕ್ಕೆ ಬಂದು ಸೇರಿದನು ಆತನು ಆಶ್ರ ಮದೊಳಗೆ ಪ್ರವೇಶಿಸುವಾಗ, ತನಗೆ ಮೊದಲೇ ಅಲ್ಲಿ ಜೈಗೀಷವ್ಯನು ಕುಳಿ ತಿರುವುದನ್ನು ಕಂಡನು ಆಗಲೂ ಜೈಗೀಷವ್ಯನು ಈತನನ್ನು ಕಂಡರೂ ಯಾವ ಮಾತನ್ನೂ ಆಡದೆ ಒಂದು ಮರದ ತುಂಡಿನಂತೆ ಮೌನದಿಂದಿ ದ್ದನು ತನಗೆ ಮೊದಲೇ ಸಮುದ್ರಸ್ನಾನವನ್ನು ತೀರಿಸಿಕೊಂಡು, ಆಶ್ರ ಮಕ್ಕೆ ಬಂದು ಕುಳಿತಿದ್ದ ಆ ಜೈಗೀಷವ್ಯನನ್ನು ಕಂಡು ದೇವಲನು ಆತನ ಯೋಗಸಿದ್ಧಿಗೂ, ತಪೋಮಹಿಮೆಗೂ ತನ್ನಲ್ಲಿತಾನು "ಈತನು ನನಗೆ ಮೊದಲೇ ಸಮುದ್ರದಲ್ಲಿದ್ದನು! ಆಮೇಲೆ ಆಶ್ರಮದಲ್ಲಿಯೂ ಹಾಗೆಯೇ ಕಾಣಿಸಿದನು" ಎಂದು ಚಿಂತಿಸುತ್ತ ಆ ಯೋಗಿಯ ಶಕ್ತಿಯನ್ನು ಇನ್ನೂ ಚೆನ್ನಾಗಿ ಪರೀಕ್ಷಿಸಿನೋಡಬೇಕೆಂದು ತನ್ನ ಆಶ್ರಮದಿಂದ ಅಂತರಿಕ್ಷಕ್ಕೆ ಹಾರಿದನು ತನಗೆ ಮೊದಲೇ ಅಲ್ಲಿಯೂ ಜೈಗೀಷವ್ಯನು ಅನೇಕ ಸಿದ್ಧ ರಿಂದ ಪರಿವೃತನಾಗಿ ಪೂಜಿಸಲ್ಪಡುತ್ತಿರುವುದನ್ನು ಕಂಡನು. ಆಗಲೂ ಬಿಡದೆ ದೇವಲನು ಅಲ್ಲಿಂದ ಸ್ವರ್ಗಕ್ಕೆ ಹೋಗಲು, ಅಲ್ಲಿಯೂ ಜೈಗೀಷ ವ್ಯನು ತನಗೆ ಮೊದಲೇ ಬಂದಿರುವುದನ್ನು ಕಂಡನು ಇದೇ ರೀತಿ ಯಲ್ಲಿ ದೇವಲನು ಸ್ವರ್ಗದಿಂದ ಪಿತೃಲೋಕಕ್ಕೂ, ಪಿತೃಲೋಕದಿಂದ ಯಮಲೋಕಕ್ಕೂ, ಯಮಲೋಕದಿಂದ ಆದಿತ್ಯಲೋಕಕ್ಕೂ, ಆದಿತ್ಯ ಲೋಕದಿಂದ ಚಂದ್ರಲೋಕಕ್ಕೂ ಹೋಗುತ್ತ, ಎಲ್ಲಾ ಕಡೆಗಳಲ್ಲಿಯೂ

ತನಗೆ ಮೊದಲೇ ಬಂದು ಕುಳಿತು ಆಯಾ ಲೋಕದವರಿಂದ ಪೂಜಿಸಲ್ಪಡುತಿದ್ದ ಜೈಗೀಷವ್ಯನನ್ನು ಕಂಡನು ಆಗಲೂ ಬಿಡದೆ ದೇವಲನು, ಒಂದೇ ದೇವತೆಯನ್ನು ಏಕಭಕ್ತಿಯಿಂದ ಉಪಾಸಿಸುವವರಿಗೆ ಲಭ್ಯವಾದ ಲೋಕಗಳಿಗೆ ಹೊರಟನು ಅಲ್ಲಿಯೂ ಆ ಯೋಗಿಯಿರುವುದನ್ನು ಕಂಡನು. ಆಮೇಲೆ ಆತನು ಅಗ್ನಿಹೋತ್ರಿಗಳಿಗುಂಟಾಗುವ ದಿವ್ಯಲೋಕಗಳಿಗೆ ಹೋದನು ಆಮೇಲೆ ಪ್ರತಿಯೊಂದು ದರ್ಶಪೂರ್ಣಿಮೆಗಳಲ್ಲಿಯೂ ಯಾಗಮಾಡುವವರ ಲೋಕಗಳಿಗೆ ಹೋದನು. ಆಮೇಲೆ ಹಲವು ಬಗೆಯ ಚಾತುರ್ಮಾಸ್ಯಗಳಿಂದ ದೇವತೆಗಳನ್ನು ಪೂಜಿಸುವ ತಪೋಧನರು ಪಡೆಯುವ ಲೋಕಗಳಿಗೆ ಹೋದನು ಹಾಗೆಯೇ ಕ್ರಮವಾಗಿ ಆ ದೇವಲನು ಅಗ್ನೀಷೋಮ, ವಾಜಪೇಯ, ಮಧುಸುವರ್ಣ, ರಾಜಸೂಯ, ಪೌಂಡರೀಕಗಳನ್ನು ಮಾಡಿದವರು ಪಡೆಯುವ ಬೇರಬೇರೆ ಲೋಕಗಳನ್ನೆಲ್ಲ ಸೇರಿ, ಅಲ್ಲಲ್ಲಿ ತನಗೆ ಮೊದಲೇ ಜೈಗೀಷವ್ಯನಿರುವುದನ್ನು ಕಂಡನು ಹಾಗೆಯೇ ಅಶ್ವಮೇಧ ನರಮೇಧಗಳನ್ನು ಮಾಡಿದವರ ಲೋಕಗಳಲ್ಲಿಯೂ, ಸರ್ವಮೇಧ ಸೌತ್ರಾಮಣಿಗಳನ್ನು ಮಾಡಿದವರ ಲೋಕಗಳಲ್ಲಿಯೂ ದೇವಲನು ಆತನನ್ನು ನೋಡಿದನು ಆಮೇಲೆ ದ್ವಾದಶಾಹಗಳಿಂದಲೂ, ಹಲವು ಬಗೆಯ ಯಾಗಗಳಿಂದಲೂ ದೇವತೆಗಳನ್ನು ಆರಾಧಿಸುವವರು ಪಡೆಯುವ ಲೋಕಗಳಿಗೆ ಹೋಗಲು, ಅಲ್ಲಿಯೂ ಆತನು ಕಾಣಿಸಿದನು ಹಾಗೆಯೇ ಮಿತ್ರ, ವರುಣ, ಮತ್ತು ಆದಿತ್ಯಲೋಕಗಳಲ್ಲಿ (ಸೇರಿ) ಸಾಲೋಕ್ಯವನ್ನು ಪಡೆದವರೊಡನೆಯೂ ಆ ಜೈಗೀಷವ್ಯನಿರುವುದನ್ನು ಕಂಡನ. ಆಮೇಲೆ ರುದ್ರರು, ವಸುಗಳು, ಬೃಹಸ್ಪತಿ ಇವರುಗಳಿರುವ ಲೋಕದಲ್ಲಿಯೂ ಅವನಿರುವುದನ್ನು ನೋಡಿದನು ಅಲ್ಲಿಂದಾಚೆಗೆ ಅವನು ಗೋಲೋಕಕ್ಕೂ, ಬ್ರಹ್ಮಸತ್ರಯಾಗಗಳನ್ನು ಮಾಡಿದವರು ಸೇರುವ ಲೋಕಕ್ಕೂ ಹೋಗುತ್ತ, ಅಲ್ಲಿಯೂ ಅವನನ್ನು ಕಂಡನು ಆತನು ಮೂರು ಲೋಕಗಳಿಗೂಮೇಲೆ ಪತಿವ್ರತೆಯರು ಸೇರುವ ಲೋಕಕ್ಕೆ ಹೋದಾಗ, ಅಲ್ಲಿಯೂ ಆ ಸನ್ಯಾಸಿಯು ಹೋಗುತ್ತಿರುವುದನ್ನು ಕಂಡನು ಅಲ್ಲಿಂದಾಚೆಗೆಮಾತ್ರ ಆ ಜೈಗೀಷವ್ಯನು ದೇವಲನ ಕಣ್ಣಿಗೆ ಕಾಣಿಸದೆ ಅದೃಶ್ಯನಾದನು ಆಗ ದೇವಲನು ಜೈಗೀಷವ್ಯನ ಪ್ರಭಾವವನ್ನೂ, ವ್ರತನಿಷ್ಠೆಯನ್ನೂ, ಎಣೆಯಿಲ್ಲದ ಆತನ ಯೋಗ-

ಸಿದ್ಧಿಯನ್ನೂ ಕಂಡು ಆಶ್ಚರ್ಯದಿಂದ ಅಲ್ಲಲ್ಲಿ ಬ್ರಹ್ಮನಿಷ್ಠರಾದ ಕೆಲವು ಸಿದ್ಧರನ್ನು ನೋಡಿ ಬದ್ಧಾಂಜಲಿಯಾಗಿ ನಿಂತು "ಓ ತಪೋಧನರೇ! ಜೈಗೀಷವ್ಯನು ನನ್ನ ಕಣ್ಣಿಗೆ ಕಾಣಲಿಲ್ಲ ಆತನ ವೃತ್ತಾಂತವನ್ನು ತಿಳುಹಿಸಿರಿ ಅದಕ್ಕಾಗಿ ನಾನು ಅಧಿಕಕುತೂಹಲಗೊಂಡಿರುವೆನು" ಎಂದನು ಆಗ ಸಿದ್ಧರು "ದೇವಲಾ! ನಿಜವೃತ್ತಾಂತವನ್ನು ತಿಳಿಸುವೆವು ಕೇಳು ಜೈಗೀಷವ್ಯನು ಸರ್ವೋತ್ತಮವೂ, ಶಾಶ್ವತವೂ ಆದ ಬ್ರಹ್ಮಲೋಕವನ್ನು ಸೇರಿಬಿಟ್ಟನು" ಎಂದರು ಆ ಮಾತನ್ನು ಕೇಳಿದೊಡನೆ ದೇವಲನು ತಾನೂ ಅಲ್ಲಿಗೆ ಹೋಗಬೇಕೆಂದು ವೇಗದಿಂದ ಮೇಲೆಹಾರಿ, ಧೊಪ್ಪನೆ ಕೆಳಗೆ ಬಿದ್ದನು ಆಗ ಆ ಸಿದ್ಧರು ದೇವಲನನ್ನು ಕುರಿತು "ಓ ತಪೋಧನಾ! ಬ್ರಾಹ್ಮಣೋತ್ತಮಾ! ಆ ಜೈಗೀಷವ್ಯನು ಬ್ರಹ್ಮಲೋಕಕ್ಕೆ ಹೋದನು ನಿನಗೆ ಅಲ್ಲಿ ಹೋಗಲು ಸಾಧ್ಯವಿಲ್ಲ" ಎಂದರು. ಆಗ ದೇವಲನು ಅಲ್ಲಿಂದ ಹಿಂತಿರುಗಿ, ಮೊದಲಿನಂತೆ ಎಲ್ಲಾ ಲೋಕಗಳಿಂದಲೂ ಕ್ರಮವಾಗಿ ಇಳಿದು, ಪಕ್ಷಿಯಂತೆ ಹಾರಿಬಂದು ಪವಿತ್ರವಾದ ತನ್ನ ಆಶ್ರಮವನ್ನು ಸೇರಿದನು ಒಳಗೆ ಪ್ರವೇಶಿಸಿದೊಡನೆ ಅಲ್ಲಿಯೂ ತಿರುಗಿ ಆ ಜೈಗೀಷವ್ಯನನ್ನು ಕಂಡನು ಯೋಗಸಿದ್ಧಿಯಿಂದುಂಟಾದ ಆತನ ತಪೋಮಹಿಮೆಯನ್ನು ಕಂಡು ಪರಮಾಶ್ಚರ್ಯಭರಿತನಾಗಿ ಮಹಾತ್ಮನಾದ ಆ ಜೈಗೀಷವ್ಯಮುನಿಯ ಸಮೀಪಕ್ಕೆ ಹೋಗಿ ವಿನಯದಿಂದ ನಮಸ್ಕರಿಸಿ "ಓ ಮಹಾತ್ಮಾ! ನಾನು ನಿನ್ನಿಂದ ಮೋಕ್ಷಧರ್ಮವನ್ನು ತಿಳಿಯಲಪೇಕ್ಷಿಸುವೆನು" ಎಂದನು ಆಗ ಜೈಗೀಷವ್ಯನು ಶಾಸ್ತ್ರವಿಧಿಗನುಸಾರವಾಗಿ ಕಾರ್ಯಾಕಾರ್ಯನಿರ್ಣಯಗಳೊಡನೆ ಯೋಗದ ಉತ್ತಮವಿಧಿಗಳನ್ನೆಲ್ಲ ಉಪದೇಶಿಸಿದನು ದೇವಲನು ಸನ್ಯಾಸಸ್ವೀಕಾರದಲ್ಲಿ ಆಸಕ್ತನಾಗಿರುವುದನ್ನು ಕಂಡು ಅದಕ್ಕೆ ಬೇಕಾದ ಎಲ್ಲಾ ಕ್ರಿಯೆಗಳನ್ನೂ ಶಾಸ್ತ್ರೋಕ್ತಕರ್ಮಗಳಿಂದ ಆತನಿಗೆ ಮಾಡಿಸಿದನು ದೇವಲನು ಸನ್ಯಾಸದಲ್ಲಿ ಆಸಕ್ತನಾಗಿರುವುದನ್ನು ಕಂಡು ಪಿತೃಗಳೂ, ಸಮಸ್ತ ಭೂತಗಳೂ 'ಇನ್ನು ನಮಗೆ ಅನ್ನವನ್ನೂ, ಹವಿರ್ಭಾಗಗಳನ್ನೂ ಕೊಟ್ಟು ಕಾಪಾಡುವವರಾರು?' ಎಂದು ಕಣ್ಣೀರುಬಿಟ್ಟರು ಆಗ ದೇವಲನು ದಶದಿಕ್ಕುಗಳಿಂದ ಕೇಳಿಸುತ್ತಿರುವ ಪ್ರಾಣಿಗಳ ದೀನವಚನವನ್ನು ಕೇಳಿ ಸನ್ಯಾಸವನ್ನು ತ್ಯಜಿಸಿ,

ತಿರುಗಿ ವಿವಾಹಾಗ್ನಿಯನ್ನು ಆಧಾನಮಾಡುವುದರಲ್ಲಿ ಮನಸ್ಸುಳ್ಳವನಾದನು. ಆಗ ಅಲ್ಲಿದ್ದ ಪರಿಶುದ್ಧವಾದ ಫಲಮೂಲಗಳೂ, ವೃಕ್ಷಗಳೂ, ಔಷಧಿಗಳೂ 'ಅಯ್ಯೋ! ಚಂಚಲಬುದ್ಧಿಯುಳ್ಳ ಅಲ್ಪನಾದ ಈ ದೇವಲನು ತಿರುಗಿ ನಮ್ಮನ್ನು ಕಡಿಯದೆ ಬಿಡಲಾರನು ಹಿಂದೆ ಎಲ್ಲಾ ಭೂತಗಳಿಗೂ ಹಾಗೆ ಅಭಯವನ್ನು ಕೊಟ್ಟ ಈತನು, ಅದನ್ನು ನೆನೆಸಿಕೊಳ್ಳದಂತಿದೆ' ಎಂದು ತಂಡೋಪತಂಡವಾಗಿ ಕೂಗಿಕೊಂಡುವು. ಆಗ ದೇವಲನು ಗೃಹಸ್ಥಾಶ್ರಮ ಸನ್ಯಾಸಾಶ್ರಮಗಳಲ್ಲಿ ಯಾವುದು ಒಳ್ಳೆಯದು ಎಂದು ಆಲೋಚಿಸಿ, ಕೊನೆಗೆ ಗೃಹಸ್ಥಾಶ್ರಮವನ್ನು ಬಿಟ್ಟು ಸನ್ಯಾಸಾಶ್ರಮದಲ್ಲಿಯೇ ಮನಸ್ಸಿಟ್ಟನು. ಈ ನಿಶ್ಚಯಜ್ಞಾನದಿಂದ ಅವನು ಮಹಾಯೋಗಸಿದ್ಧಿಯನ್ನು ಪಡೆದನು ಆಮೇಲೆ ಬೃಹಸ್ಪತಿಯನ್ನು ಮುಂದೆಬಿಟ್ಟುಕೊಂಡು ದೇವತೆಗಳೂ, ತಪಸ್ವಿಗಳೂ ದೇವಲನ ಸಮೀಪಕ್ಕೆ ಬಂದು ಆತನ ತಪಸ್ಸನ್ನು ಕೊಂಡಾಡತೊಡಗಿದರು ಆಗ ನಾರದನು ಆ ದೇವತೆಗಳನ್ನು ಕುರಿತು "ದೇವತೆಗಳಿರಾ! ಈ ಜೈಗೀಷವ್ಯನಲ್ಲಿ ಅಂತಹ ತಪಸ್ಸೇನೂ ಇಲ್ಲ! ಅಸಿತನನ್ನು ಬೆರಗಾಗಿಸಿಬಿಟ್ಟನಲ್ಲಾ!" ಎಂದನು ಆ ನಾರದನ ಮಾತನ್ನು ಕೇಳಿ ದೇವತೆಗಳು 'ಹಾಗಲ್ಲ! ಮಹಾತ್ಮನಾದ ಜೈಗೀಷವ್ಯನ ತೇಜಸ್ಸಿಗೂ, ತಪಸ್ಸಿಗೂ, ಯೋಗಕ್ಕೂ ಮೇಲಾದುದಾಗಲಿ, ಕೊನೆಗೆ ಅದಕ್ಕೆ ಸಮಾನವಾದುದಾಗಲಿ ಇಲ್ಲವೇ ಇಲ್ಲವು' ಎಂದರು ರಾಜಾ! ಜೈಗೀಷವ್ಯನೂ, ಅಸಿತನೂ ಇಂತಹ ಮಹಾಪ್ರಭಾವವುಳ್ಳವರು ಇದು ಮಹಾತ್ಮರಾದ ಅವರಿಬ್ಬರಿಗೂ ನಿವಾಸಸ್ಥಾನವಾದ ಪವಿತ್ರತೀರ್ಥವು ಬಲರಾಮನು ಅಲ್ಲಿಯೂ ಸ್ನಾನಮಾಡಿ, ಬ್ರಾಹ್ಮಣರಿಗೆ ಧನವನ್ನು ಕೊಟ್ಟು ಪುಣ್ಯಭಾಗಿಯಾಗಿ, ಮಹಾಮಹಿಮೆಯುಳ್ಳ ಸೋಮತೀರ್ಥಕ್ಕೆ ಹೊರಟನು.

ಇದು ಐವತ್ತೊಂದನೆಯ ಅಧ್ಯಾಯವು

---

## ದಧೀಚಿ ಸಾರಸ್ವತರ ಚರಿತ್ರೆ.

ಹಿಂದೆ ಚಂದ್ರನು ಯಾವ ಸ್ಥಳದಲ್ಲಿ ರಾಜಸೂಯಯಾಗದಿಂದ ದೇವತೆಗಳನ್ನು ಪೂಜಿಸಿದನೋ, ಎಲ್ಲಿ ತಾರಕಾಸುರಯುದ್ಧವು ನಡೆಯಿತೋ,

ಆ ಸೋಮತೀರ್ಥದಲ್ಲಿಯೂ ಬಲರಾಮನು ಸ್ನಾನವನ್ನು ಮುಗಿಸಿ, ದಾನಗಳನ್ನು ಕೊಟ್ಟು ಅಲ್ಲಿಂದ ಮುಂದಕ್ಕೆ ಹೊರಟನು. ಹಿಂದೆ ಹನ್ನೆರಡು ವರ್ಷಗಳವರೆಗೆ ಮಳೆಯಿಲ್ಲದಿದ್ದಾಗ, ಸಾರಸ್ವತಮುನಿಯು ಉತ್ತಮ ಬ್ರಾಹ್ಮಣರಿಗೆ ವೇದಾಧ್ಯಯನಮಾಡಿಸುತಿದ್ದ ಒಂದು ಪುಣ್ಯತೀರ್ಥವನ್ನು ಸೇರಿದನು " ಎಂದನು.

ಆಗ ಜನಮೇಜಯನು 'ಹಿಂದೆ ಹನ್ನೆರಡುವರ್ಷಗಳು ಮಳೆಯಿಲ್ಲದಿದ್ದಾಗ, ಸಾರಸ್ವತಮುನಿಯು ಬ್ರಾಹ್ಮಣರಿಗೆ ಹೇಗೆ ವೇದಾಧ್ಯಯನ ಮಾಡಿಸಿದನು ?' ಎಂದು ಕೇಳಲು, ವೈಶಂಪಾಯನನು " ಓ ರಾಜಾ ! ಮಹಾಬುದ್ಧಿವಂತನೂ, ತಪಸ್ವಿಯೂ, ಬ್ರಹ್ಮಚಾರಿಯೂ, ಇಂದ್ರಿಯಗಳನ್ನು ಜಯಿಸಿದವನೂ ಆದ ದಧೀಚಿಯೆಂಬ ಮಹಾಮುನಿಯೊಬ್ಬನಿದ್ದನು ಆತನ ಉಗ್ರತಪಸ್ಸಿಗಾಗಿ ಇಂದ್ರನೂಕೂಡ ಭಯಪಡುತ್ತಿದ್ದನು ಎಂತೆಂತಹ ಮೋಹಕವಸ್ತುಗಳನ್ನು ತೋರಿಸಿದರೂ ಆತನು ಯಾವುದಕ್ಕೂ ಮೋಹಗೊಳ್ಳದೆ ಜಿತೇಂದ್ರಿಯನಾಗಿದ್ದನು ಕಡೆಗೆ ಇಂದ್ರನು ಆತನನ್ನು ಮೋಹಗೊಳಿಸುವುದಕ್ಕಾಗಿ ಆತನ ಬಳಿಗೆ ಪರಿಶುದ್ಧಳೂ, ಸರ್ವಲಕ್ಷಣಸಂಪನ್ನೆಯೂ ಆದ ಅಲಂಬುಸೆಯೆಂಬ ಅಪ್ಸರಸ್ತ್ರೀಯನ್ನು ಕಳುಹಿಸಿದನು ಆಕೆಯು ಸರಸ್ವತೀನದಿಯಲ್ಲಿ ದೇವತೆಗಳನ್ನು ತೃಪ್ತಿಗೊಳಿಸುತ್ತಿರುವ ಮಹಾತ್ಮನಾದ ಆ ದಧೀಚಿಯ ಪಕ್ಕದಲ್ಲಿ ಲಜ್ಜೆಯಿಂದ ಬಂದು ನಿಂತಳು ದಿವ್ಯದೇಹವುಳ್ಳ ಆ ಹೆಣ್ಣನ್ನು ಕಂಡು ಜಿತೇಂದ್ರಿಯನಾದ ಆ ಋಷಿಗೂ ವೀರ್ಯಸ್ಖಲನವಾಗಿ ಸರಸ್ವತೀನದಿಯಲ್ಲಿ ಬಿದ್ದಿತು ಆ ವೀರ್ಯವನ್ನು ಸರಸ್ವತೀನದಿಯು ಸಂತೋಷದಿಂದ ತನ್ನ ಗರ್ಭದಲ್ಲಿ ಧರಿಸಿದಳು ಅವಳು ಪುತ್ರಾಪೇಕ್ಷೆಯಿಂದ ದಧೀಚಿಯ ರೇತಸ್ಸನ್ನು ವಹಿಸಿ, ತಕ್ಕ ಕಾಲದಲ್ಲಿ ಸಾರಸ್ವತನೆಂಬ ಉತ್ತಮಪುತ್ರನನ್ನು ಪಡೆದಳು ಆಕೆಯು ಆ ಪುತ್ರನನ್ನೆತ್ತಿಕೊಂಡು ಆ ಋಷಿಯಬಳಿಗೆ ಬಂದಳು ಅನೇಕ ಋಷಿಗಳ ಸಮೂಹದಲ್ಲಿದ್ದ ಆತನನ್ನು ಕಂಡು ಪುತ್ರನನ್ನು ಆತನ ವಶಕ್ಕೆ ಕೊಡುತ್ತ " ಓ ಬ್ರಹ್ಮರ್ಷೀ ! ಈತನು ನಿನ್ನ ಪುತ್ರನು. ನಿನ್ನಲ್ಲಿರುವ ಭಕ್ತಿಯಿಂದ ನಾನು ಈತನನ್ನು ಧರಿಸಿದೆನು ಹಿಂದೆ ನೀನು ಅಲಂಬುಸೆಯೆಂಬ ಅಪ್ಸರಸ್ತ್ರೀಯನ್ನು ಕಂಡಾಗ

ಜಾರಿದ ನಿನ್ನ ವೀರ್ಯವನ್ನು ನೋಡಿ ನಾನು 'ಈ ವೀರ್ಯವು ವೃಥಾ ನಷ್ಟವಾಗಕೂಡ'ದೆಂದು ಅದನ್ನು ಗರ್ಭದಲ್ಲಿ ಧರಿಸಿದೆನು ಈ ನಿನ್ನ ಉತ್ತಮಪುತ್ರನನ್ನು ಸ್ವೀಕರಿಸು' ಎಂದಳು ಆ ಮಾತನ್ನು ಕೇಳಿ ಆ ಬ್ರಾಹ್ಮಣೋತ್ತಮನು ಅಧಿಕ ಪ್ರೀತಿಯಿಂದ ಪುತ್ರನನ್ನೆತ್ತಿಕೊಂಡು, ತಂದೆಯಂತೆ ಅದರ ತಲೆಯನ್ನಾಘ್ರಾಣಿಸಿದನು ಭರತಕುಲೋತ್ತಮಾ! ಆತನು ಆ ಮಗುವನ್ನು ಬಹಳಹೊತ್ತು ಮುದ್ದಾಡುತ್ತಿದ್ದು ಸರಸ್ವತಿಯನ್ನು ಕುರಿತು 'ಓ ಮಂಗಳಾಂಗೀ! ವಿಶ್ವೇದೇವರೂ, ಪಿತೃಗಳೂ, ಗಂಧರ್ವಕೋಟಿಗಳೂ, ಅಪ್ಸರಸ್ಸುಗಳ ಸಮುದಾಯಗಳೂ, ನಿನ್ನ ಜಲದಿಂದ ತೃಪ್ತರಾಗಲಿ' ಎಂದು ವರವನ್ನು ಕೊಟ್ಟನು ಮತ್ತು ಆ ಮಹರ್ಷಿಯು, ಅಧಿಕ ಸಂತೋಷದಿಂದ ಆ ಮಹಾನದಿಯನ್ನು ಸ್ತೋತ್ರಮಾಡಲಾರಂಭಿಸಿದನು "ಓ ಮಹಾಭಾಗ್ಯವತೀ! ನೀನು ಹಿಂದೆ ಬ್ರಹ್ಮಶಿರಸ್ಸಿನಿಂದ ಪ್ರವಹಿಸಿದವಳು ಉಗ್ರತಪಸ್ವಿಗಳಾದ ಮುನಿಗಳು ನಿನ್ನ ಮಹಿಮೆಯನ್ನು ಬಲ್ಲರು. ಓ ಕೋಮಲಾಂಗೀ! ನೀನು ನನಗೆ ಯಾವಾಗಲೂ ಪ್ರಿಯವನ್ನುಂಟುಮಾಡುತ್ತಿರುವೆ ಅದರಿಂದಲೇ ನೀನು ಸಾರಸ್ವತನೆಂಬೀ ಪುತ್ರನನ್ನು ಧರಿಸಿದೆ ನಿನ್ನೀಪುತ್ರನು ನಿನ್ನ ಹೆಸರಿನಿಂದಲೇ ಸಾರಸ್ವತನೆಂದು ಪ್ರಸಿದ್ಧಿಹೊಂದಿ ಜಗತ್ತನ್ನು ರಕ್ಷಿಸುವನು. ಮಹಾತಪಸ್ವಿಯೂ, ಯಶಸ್ವಿಯೂ ಆಗುವನು ಹಿಂದೆ ಪ್ರಪಂಚಕ್ಕೆ ಹನ್ನೆರಡು ವರ್ಷಗಳು ಮಳೆಯಿಲ್ಲದೆಹೋದಾಗ, ನಿನ್ನ ಪುತ್ರನಾದ ಈ ಸಾರಸ್ವತನು ಬ್ರಾಹ್ಮಣೋತ್ತಮರಿಗೆ ವೇದಾಧ್ಯಯನ ಮಾಡಿಸುವನು ಓ ಸರಸ್ವತೀ! ನೀನೂ ನನ್ನ ವರಪ್ರಸಾದದಿಂದ ಯಾವಾಗಲೂ ಇತರ ಪುಣ್ಯನದಿಗಳಿಗಿಂತಲೂ ಹೆಚ್ಚು ಪವಿತ್ರೆಯೆನಿಸುವೆ' ಎಂದನು ಓ ಭರತಕುಲಶ್ರೇಷ್ಠಾ! ಆಮೇಲೆ ಸರಸ್ವತಿಯು ಆ ಪುತ್ರನನ್ನೆತ್ತಿಕೊಂಡು ಸಂತೋಷದಿಂದ ಹೊರಟಳು

ಇದೇ ಕಾಲದಲ್ಲಿ ದೇವಾಸುರರಲ್ಲಿ ಕಲಹವೆದ್ದಿತು ಇಂದ್ರನು ಆಯುಧಗಳನ್ನು ಹುಡುಕುತ್ತ ಮೂರು ಲೋಕಗಳನ್ನೂ ಸಂಚರಿಸುತ್ತಿದ್ದನು. ಆತನಿಗೆ ದೇವಶತ್ರುಗಳನ್ನು ಕೊಲ್ಲಲು ತಕ್ಕ ಆಯುಧವಾವುದೂ ದೊರೆಯಲಿಲ್ಲ. ಆಗ ಆತನು ದೇವತೆಗಳನ್ನು ಕುರಿತು 'ನಮ್ಮ ಶತ್ರುಗ

ಳಾದ ಅಸುರರನ್ನು ದಧೀಚಿಮುನಿಯ ಎಲುಬುಗಳಿಂದಲ್ಲದೆ ಕೊಲ್ಲಲು ಸಾಧ್ಯವಿಲ್ಲ ಆದುದರಿಂದ ನೀವು ಆತನ ಬಳಿಗೆ ಹೋಗಿ ದೈತ್ಯನಿಗ್ರಹಕ್ಕಾಗಿ ಅವನ ಮೈಯೆಲುಬುಗಳನ್ನು ಕೊಡುವಂತೆ ಆ ಮಹರ್ಷಿಶ್ರೇಷ್ಠನನ್ನೇ ಯಾಚಿಸಿರಿ' ಎಂದನು. ಆಮೇಲೆ ದೇವತೆಗಳು ಆ ಋಷಿಯನ್ನು ತಮಗೆ ಸಹಾಯಮಾಡಬೇಕೆಂದು ಬೇಡಲು, ಆತನು ಅವರ ಕೋರಿಕೆಯನ್ನು ನಡೆಸಿಕೊಟ್ಟನು ಹೀಗೆ ದೇವತೆಗಳಿಗೆ ಪ್ರಿಯುವನ್ನುಂಟುಮಾಡಿ ಆ ದಧೀಚಿಯು ಅಕ್ಷಯುವಾದ ಲೋಕಗಳನ್ನು ಪಡೆದನು ಆಮೇಲೆ ಇಂದ್ರನು ಆ ದಧೀಚಿಯ ಎಲುಬುಗಳಿಂದಲೇ ಗದೆಗಳು, ವಜ್ರಗಳು, ದಂಡಗಳು, ಘನವಾದ ಬಾಣಗಳು ಮುಂತಾದ ಹಲವು ಆಯುಧಗಳನ್ನು ಮಾಡಿಸಿದನು ಲೋಕರಕ್ಷಣೆಗಾಗಿಯೇ ಈ ದಧೀಚಿಯು, ಬ್ರಹ್ಮಪುತ್ರನೂ, ಋಷಿಶ್ರೇಷ್ಠನೂ ಆದ ಭೃಗುವಿನಿಂದ ದೊಡ್ಡ ದೇಹದಿಂದಲೂ, ದಿವ್ಯ ತೇಜಸ್ಸಿನಿಂದಲೂ, ಬಲದಿಂದಲೂ ಉಂಟುಮಾಡಲ್ಪಟ್ಟವನು ಪರ್ವತಸಮಾನನೂ, ಶ್ರೇಷ್ಠನೂ ಆದ ಆತನು ತ್ರಿಲೋಕಪ್ರಸಿದ್ಧವಾದ ಮಹಿಮೆಯುಳ್ಳವನು ಮಹೇಂದ್ರನೂ ಆತನ ತೇಜಸ್ಸಿಗಾಗಿ ಯಾವಾಗಲೂ ಭಯಪಡುತ್ತಿದ್ದನು ಮಹಾಮಹಿಮನಾದ ಇಂದ್ರನು ಬ್ರಹ್ಮತೇಜಸ್ಸಿನಿಂದುಂಟಾದ ಆ ವಜ್ರಾಯುಧವನ್ನು ಕೋಪದಿಂದ ಮಂತ್ರಿಸಿ ಬಿಟ್ಟು ಎಂಟುನೂರುಹತ್ತು ಮಂದಿ ದೈತ್ಯದಾನವ ವೀರರನ್ನು ಕೊಂದನು ಓ ರಾಜಾ! ಆಮೇಲೆ ಸ್ವಲ್ಪಕಾಲಕ್ಕೆ ಹನ್ನೆರಡುವರ್ಷಗಳು ಮಳೆಯಿಲ್ಲದೆ ಹೋಯಿತು ಭಯಂಕರವಾದ ದೊಡ್ಡ ಅನಾವೃಷ್ಟಿಯಿಂದ ಮಹರ್ಷಿಗಳು ಹಸಿವಿನಿಂದ ಬಾಧೆಪಡುತ್ತ ಆಹಾರಕ್ಕಾಗಿ ದಿಕ್ಕುಪಾಲಾಗಿ ಓಡಿದರು ಆಗ ಸಾರಸ್ವತಮುನಿಯು ಆ ಋಷಿಗಳನ್ನು ಕಂಡು, ಅವರೊಡನೆ ತಾನೂ ಹೊರಡಬೇಕೆಂದುದ್ದೇಶಿಸಿದನು ಆತನನ್ನು ನೋಡಿ ಸರಸ್ವತಿಯು 'ಓ ಪುತ್ರಾ! ನೀನು ಈ ಸ್ಥಳವನ್ನು ಬಿಟ್ಟುಹೋಗಬೇಡ ನಾನು ಯಾವಾಗಲೂ ನಿನ್ನ ಆಹಾರಕ್ಕಾಗಿ ಮೀನುಗಳನ್ನು ಒದಗಿಸಿಕೊಡುವೆನು ನೀನು ಇಲ್ಲಿಯೇ ವಾಸಮಾಡುತ್ತಿರಬಹುದು' ಎಂದಳು ಅದರಂತೆ ಆ ಸಾರಸ್ವತನು ಅದರಿಂದಲೇ ಪಿತೃಗಳನ್ನೂ, ದೇವತೆಗಳನ್ನೂ ತೃಪ್ತಿಪಡಿಸುತ್ತ, ತನ್ನ ಪ್ರಾಣಗಳನ್ನೂ, ವೇದಗಳನ್ನೂ ಕಾಪಾಡುವುದಕ್ಕಾಗಿ ತಾನೂ ಅದೇ ಆಹಾರವನ್ನು ಸೇವಿಸು

ತ್ತಿದ್ದನು. ಆ ದೊಡ್ಡ ಬರಗಾಲವು ಕಳೆದಮೇಲೆ, ಮಹರ್ಷಿಗಳು ತಮ್ಮೊಳಗೆ ಅನ್ಯೋನ್ಯವಾಗಿ ವೇದದವಿಚಾರವಾಗಿ ಯೋಚಿಸುತ್ತಿದ್ದರು ಹಿಂದೆ ಕ್ಷುದ್ಬಾಧೆಯಿಂದ ನಿಂತಲ್ಲಿನಿಲ್ಲದೆ ಓಡುತ್ತಿದ್ದ ಅವರೆಲ್ಲರಿಗೂ ವೇದಗಳೆಲ್ಲ ಮರೆತುಹೋಗಿದ್ದುವು. ಅವರಿಗೆ ಏನೂ ತೋರದಂತಾಯಿತು ಆಗ ಅವರಲ್ಲಿ ಒಬ್ಬನು ಅಲ್ಲಲ್ಲಿ ಹುಡುಕುತ್ತ ಸಾರಸ್ವತನಿದ್ದಲ್ಲಿಗೆ ಬಂದನು ಆಮೇಲೆ ಆತನು, ನಿರ್ಜನಪ್ರದೇಶವಾದ ಆ ಅಡವಿಯಲ್ಲಿ ನಿರಂಕುಶವಾದ ವಾಗ್ಧೋರಣೆಯಿಂದ ವೇದಪಾರವನ್ನು ಮಾಡುತ್ತಿದ್ದ ಆ ಸಾರಸ್ವತಋಷಿಯನ್ನು ಕಂಡು ಆ ವಿಷಯವನ್ನು ತನ್ನವರಿಗೆ ತಿಳಿಸಿದನು ಆಗ ಮಹರ್ಷಿಗಳೆಲ್ಲರೂ ಒಟ್ಟುಗೂಡಿ ಆ ಸಾರಸ್ವತಮುನಿಯ ಬಳಿಗೆ ಬಂದು ಆತನನ್ನು ಕುರಿತು 'ಓ ಮಹರ್ಷೀ! ನಮಗೆ ವೇದಾಧ್ಯಯನ ಮಾಡಿಸು' ಎಂದರು. ಆ ಋಷಿಯು ಅವರನ್ನು ಕುರಿತು 'ನೀವು ಕ್ರಮಪ್ರಕಾರವಾಗಿ ನನ್ನಲ್ಲಿ ಶಿಷ್ಯವೃತ್ತಿಯನ್ನು ಮಾಡಬೇಕು" ಎಂದನು ಆಗ ಋಷಿಗಳು 'ಮಗೂ! ನೀನಿನ್ನೂ ಬಾಲಕನಲ್ಲವೆ?' ಎಂದರು. ಅದಕ್ಕಾತನು 'ನಾನು ಸಣ್ಣವನಾದರೂ ನನ್ನ ಧರ್ಮವು ಸಣ್ಣದಲ್ಲ ಅಧರ್ಮರೀತಿಯಲ್ಲಿ (ವಿದ್ಯೆಯನ್ನು) ಕಲಿಸುವವನು, ಅಧರ್ಮದಿಂದ ಅದನ್ನು ಪಡೆಯುವವನು, ಇವರಿಬ್ಬರೂ ಶೀಘ್ರದಲ್ಲಿ ಮೃತರಾಗುವರು ಅಥವಾ ದ್ವೇಷಿಗಳಾಗುವರು ವಯಸ್ಸಾಗುವುದು, ತಲೆಕೂದಲು ನೆರೆಯುವುದು, ಐಶ್ವರ್ಯಸಮೃದ್ಧಿ, ಬಂಧುಬಳಗಗಳು, ಇವುಗಳನ್ನು ನೋಡಿ ಋಷಿಗಳು ಧರ್ಮವನ್ನು ವಿಧಿಸಿದವರಲ್ಲ ನಮ್ಮಲ್ಲಿ ಸಾಂಗವಾಗಿ ವೇದಾಧ್ಯಯನ ಮಾಡುವವನಾವನೋ ಆತನೇ ಹಿರಿಯನು' ಎಂದನು ಆಗ ಋಷಿಗಳು ಆ ಸಾರಸ್ವತನ ವಚನವನ್ನು ಕೇಳಿ ಆತನಿಂದ ವಿಧ್ಯುಕ್ತಪ್ರಕಾರವಾಗಿ ವೇದಗಳನ್ನು ಕಲಿತು ತಿರುಗಿ ಧರ್ಮಸ್ಥಾಪನ ಮಾಡಿದರು ವೇದಾಧ್ಯಯನಕ್ಕಾಗಿ ಬ್ರಹ್ಮರ್ಷಿಯಾದ ಸಾರಸ್ವತನಿಗೆ ಅರುವತ್ತುಸಾವಿರಮಂದಿ ಋಷಿಗಳು ಶಿಷ್ಯರಾದರು. ಆಮೇಲೆ ಅವರೆಲ್ಲರೂ ಆತನು ಬಾಲನಾಗಿದ್ದರೂ ಆತನ ಮಾತಿನಂತೆ ನಡೆಯುತ್ತ, ಆಸನಕ್ಕಾಗಿ ದರ್ಭೆಗಳನ್ನು ಹಿಡಿಹಿಡಿಯಾಗಿ ಕುಯ್ದು ತಂದರು. ಬಲರಾಮನು ಅಲ್ಲಿಯೂ ದಾನಾದಿಗಳನ್ನು ಮಾಡಿ ಸಂತೋಷಗೊಂಡು

ಶ್ರೇಷ್ಠವೂ, ಪರಿಶುದ್ಧವೂ ಆದ ವೃದ್ಧಕನ್ಯಾಶ್ರಮದ ಕಡೆಗೆ ಹೊರಟನು' ಎಂದನು

ಇದು ಐವತ್ತೆರಡನೆಯ ಅಧ್ಯಾಯವು

ವೃದ್ಧಕನ್ಯೆಯ ಚರಿತ್ರವು

ಆಗ ಜನಮೇಜಯನು 'ಮಹಾತ್ಮಾ! ಹಿಂದೆ ವೃದ್ಧಕನ್ಯೆಯೆಂಬ ಕುಮಾರಿಯು ಹೇಗೆ ತಪಸ್ಸಿದ್ಧಿಯನ್ನು ಪಡೆದಳು? ಯಾವ ಕಾರಣದಿಂದ ತಪಸ್ಸನ್ನು ಮಾಡಿದಳು? ಇವಳ ತಪೋನಿಯಮವೆಂತಹದು? ಓ ಬ್ರಾಹ್ಮಣಾ! ನೀನು ಹೇಳುವ ತಪಸ್ಸಾದರೋ ಬಹಳ ಕಷ್ಟಸಾಧ್ಯವಾದುದು ಆಕೆಯು ಹೇಗೆ ಅಂತಹ ತಪಸ್ಸಿನಲ್ಲಿ ನೆಲೆಗೊಂಡಳೋ ಆ ವಿವರವನ್ನು ತಿಳಿಸು' ಎನಲು, ವೈಶಂಪಾಯನನು "ರಾಜೇಂದ್ರಾ! ಹಿಂದೆ ಗರ್ಗಕುಲದಲ್ಲಿ ಹುಟ್ಟಿದ ಕುಣಿಯೆಂಬ ಋಷಿಯೊಬ್ಬನಿದ್ದನು ಮಹಾವೀರ್ಯವುಳ್ಳ ತಾಪಸೋತ್ತಮನಾದ ಆತನು ದೊಡ್ಡ ತಪಸ್ಸನ್ನಾರಂಭಿಸಿ, ಆ ತಪೋಬಲದಿಂದ ಸರ್ವಲಕ್ಷಣಸಂಪನ್ನೆಯಾದ ಒಬ್ಬ ಕನ್ಯೆಯನ್ನು ಸೃಷ್ಟಿಸಿದನು. ಆ ಹೆಣ್ಣನ್ನು ನೋಡಿ ಅವನು ಸಂತೋಷಗೊಂಡು ಅವಳನ್ನು ಈ ಭೂಮಿಯಲ್ಲಿ ಬಿಟ್ಟು ಸ್ವರ್ಗಸ್ಥನಾದನು ಅಂದವಾದ ಹುಬ್ಬುಗಳಿಂದಲೂ, ಕಮಲದಳದಂತೆ ಕಣ್ಣುಗಳಿಂದಲೂ ಕೂಡಿದ ಆ ಶುಭಾಂಗಿಯು, ಆಶ್ರಮದಲ್ಲಿದ್ದುಕೊಂಡು ಉಗ್ರತಪಸ್ಸಿನಿಂದಲೂ, ಉಪವಾಸವ್ರತದಿಂದಲೂ, ಪಿತೃಗಳನ್ನೂ, ದೇವತೆಗಳನ್ನೂ ಪೂಜಿಸುತ್ತಿದ್ದಳು ಹಾಗೆಯೇ ಅವಳು ತಪಸ್ಸಿನಲ್ಲಿ ದೀರ್ಘಕಾಲವನ್ನು ಕಳೆದಳು ಆಕೆಯನ್ನು ಅವಳ ತಂದೆಯು ವಿವಾಹ ಮಾಡಿಕೊಡಲು ಸಿದ್ಧನಾಗಿದ್ದರೂ, ಅವಳು ಪತಿಯನ್ನು ಅಪೇಕ್ಷಿಸಲಿಲ್ಲ ಅವಳಿಗೆ ಅನುರೂಪನಾದ ಪತಿಯೂ ದೊರೆಯಲಿಲ್ಲ. ಆಮೇಲೆ ಆ ಕನ್ಯೆಯು ಉಗ್ರತಪಸ್ಸಿನಿಂದ ತನ್ನ ಶರೀರವನ್ನು ದಂಡಿಸುತ್ತ, ನಿರ್ಜನಪ್ರದೇಶವಾದ ಕಾಡಿನಲ್ಲಿದ್ದು, ಪಿತೃಗಳನ್ನೂ, ದೇವತೆಗಳನ್ನೂ ಪೂಜಿಸುವುದರಲ್ಲಿಯೇ ತಾನು ಕೃತಕೃತ್ಯಳೆಂದು ಭಾವಿಸಿದ್ದಳು. ಆ ಬಾಲ್ಯಬ್ರಹ್ಮಚಾರಿಣಿಯಾದ ಆಕೆಗೆ ಹಾಗೆಯೇ ಮುಪ್ಪು ಬಂದಿತು. ಮೊದಲೇ ತಪಸ್ಸಿನಿಂದ

ಕೃಶಳಾದ ಆಕೆಯ ದೇಹವು ಮುಪ್ಪಿನಿಂದ ಇನ್ನೂ ಕೃಶವಾಯಿತು ಅವಳಿಗೆ ಹೆಜ್ಜೆಯಿಟ್ಟು ನಡೆಯುವುದಕ್ಕೂ ತ್ರಾಣವಿಲ್ಲದಂತಾಯಿತು. ಆಗ ಅವಳು ಪರಲೋಕಪ್ರಯಾಣಕ್ಕಾಗಿ ಸಂಕಲ್ಪಮಾಡಿ ದೇಹತ್ಯಾಗಕ್ಕೆ ಸಿದ್ಧಳಾಗಿದ್ದಾಗ, ನಾರದಮುನಿಯು ಅವಳಮುಂದೆ ಗೋಚರಿಸಿ, ಅವಳನ್ನು ಕುರಿತು 'ಎಲೆ ಭದ್ರೆ! (ವಿವಾಹ) ಸಂಸ್ಕಾರವಿಲ್ಲದ ನಿನಗೆ ಪರಲೋಕವೆಲ್ಲಿಯದು? ನಾವು ಈ ಸಂಗತಿಯನ್ನು ದೇವಲೋಕದಲ್ಲಿ ಕೇಳಿಬಲ್ಲೆವು ನೀನೇನೋ ಉತ್ತಮತಪಸ್ಸನ್ನು ಮಾಡಿದವಳೇ! ಆದರೇನು? ನಿನಗೆ ಆ ಪುಣ್ಯಲೋಕಗಳು ಲಭ್ಯವಾಗವು' ಎಂದನು ನಾರದನ ಈ ಮಾತನ್ನು ಕೇಳಿ ಅವಳು ಎಲ್ಲಾ ಮಹರ್ಷಿಗಳ ನಡುವೆ ನಿಂತು 'ನನ್ನನ್ನು ನಿಮ್ಮಲ್ಲಿ ಯಾರಾದರೂ ಮದುವೆಮಾಡಿಕೊಳ್ಳುವುದಾದರ, ನನ್ನ ತಪಸ್ಸಿನಲ್ಲಿ ಅರ್ಧಫಲವನ್ನು ನಿಮಗೆ ಕೊಡುವೆನು' ಎಂದಳು. ಆಗ ಗಾಲವಮುನಿಯ ಪುತ್ರನಾದ ಶೃಂಗವಾನೆಂಬವನು, ತಾನು ವಿವಾಹವಾಗುವುದಾಗಿ ಒಪ್ಪಿದನು ಆದರ ವಿವಾಹಕ್ಕೆಮೊದಲು ಅವಳೊಡನೆ ಒಂದು ಒಡಂಬಡಿಕೆಯನ್ನು ಮಾಡಿಕೊಳ್ಳಲು ಅವಳನ್ನು ಕುರಿತು 'ಎಲೆ ಶುಭಾಂಗೀ! ಒಂದು ಒಪ್ಪಂದದಿಂದ ನಾನು ನಿನ್ನ ಕೈ ಹಿಡಿಯುವೆನು ನಾನು ನಿನ್ನೊಡನೆ ಒಂದು ರಾತ್ರಿಮಾತ್ರ ನಿಲ್ಲುವೆನು' ಎಂದನು ಅವಳೂ ಅದಕ್ಕೆ ಸಮ್ಮತಿಸಿ ಹಾಗೆಯೇ ಆಗಲೆಂದು ಒಪ್ಪಿದಳು ಶಾಸ್ತ್ರೋಕ್ತವಾದ ಹೋಮಾಗ್ನಿಯ ಮುಂದೆ ಅವರಿಬ್ಬರಿಗೂ ಪಾಣಿಗ್ರಹಣವಾಯಿತು ಆ ರಾತ್ರಿಯನ್ನು ಅವಳು ಗಾಲವಪುತ್ರನೊಡನೆ ಸಂತೋಷದಿಂದ ಕಳೆದಳು ಆ ರಾತ್ರಿಯಲ್ಲಿ ಅವಳ ಮೈಗೆ ದಿವ್ಯಾದ್ಭುತಗಳಾದ ರೂಪಲಾವಣ್ಯಗಳುಂಟಾದುವು ಅವಳ ಮೈಮೇಲೆ ದಿವ್ಯವಸ್ತ್ರ, ದಿವ್ಯಾಭರಣ, ದಿವ್ಯ ಗಂಧಾನುಲೇಪನಗಳು ಕಾಣಿಸಿದುವು. ಅವಳು ಒಳ್ಳೇ ನಡುಪ್ರಾಯದ ತರುಣಿಯಂತಾದಳು. ಕಾಂತಿಯಿಂದ ಬೆಳಗುತಿದ್ದ ಆಕೆಯೊಡನೆ ಗಾಲವಪುತ್ರನು ಅತಿಸಂತೋಷದಿಂದ ಆ ರಾತ್ರಿಯನ್ನು ಕಳೆದನು ರಾತ್ರಿಯು ಕಳೆದು ಬೆಳಗಾಯಿತು ಆಗ ಅವಳು ತನ್ನ ಕಾಂತನನ್ನು ಕುರಿತು 'ಓ ಮಹಾತ್ಮಾ! ನಿನಗೆ ಮಂಗಳವಾಗಲಿ! ನೀನು ನನ್ನ ವಿಷಯದಲ್ಲಿ ಯಾವ ಸಂಕೇತವನ್ನು ಮಾಡಿದೆಯೋ, ಅದಕ್ಕೆ ತಕ್ಕಂತೆ ನಿನ್ನೊಡನೆ

ಒಂದು ರಾತ್ರಿ ನಾನಿದ್ದುದಾಯಿತು ಇನ್ನು ನಾನು ಹೋಗುವೆನು' ಎಂದಳು ಆಕೆಯು ತಿರುಗಿ ಸ್ವಲ್ಪಹೊತ್ತು ಧ್ಯಾನಮಾಡಿ, ಯಾವನು ಈ ತೀರ್ಥದಲ್ಲಿ ಚಿತ್ತಶುದ್ಧಿಯಿಂದ ದೇವತೆಗಳಿಗೆ ತರ್ಪಣಮಾಡಿ, ಒಂದು ರಾತ್ರಿ ವಾಸಮಾಡುವನೋ, ಆತನು ಐವತ್ತೆಂಟುವರ್ಷಗಳವರೆಗೆ ಬ್ರಹ್ಮಚರ್ಯ ವನ್ನನುಷ್ಠಿಸಿದವರ ಫಲವನ್ನು ಪಡೆಯಲಿ!'' ಎಂದಳು ಹೀಗೆಂದು ಹೇಳಿ ಆ ಪತಿವ್ರತೆಯು ದೇಹವನ್ನು ಬಿಟ್ಟು ಸ್ವರ್ಗವನ್ನು ಸೇರಿದಳು ಆ ಋಷಿಯೂ ಕೂಡ ಆಕೆಯ ರೂಪವನ್ನು ನೆನೆಸಿಕೊಂಡು ವ್ಯಸನಪಟ್ಟನು ಪ್ರತಿಜ್ಞೆಗನುಸಾರವಾಗಿ ಆಕೆಯ ತಪಸ್ಸಿನ ಫಲದಲ್ಲಿ ಅರ್ಧಭಾಗವನ್ನೂ ಬಹಳ ಕಷ್ಟದೊಡನೆ ಸ್ವೀಕರಿಸಿದನು ಆತನು ಆಕೆಯ ರೂಪಕ್ಕೆ ಮೋ ಹಿತನಾಗಿ, ದುಃಖದಿಂದಲೇ ತನ್ನ ಶರೀರವನ್ನು ಕ್ಷೀಣಿಸುವಂತೆ ಮಾಡಿ ಕೊಂಡು, ತಾನೂ ಆಕೆಯ ಗತಿಯನ್ನೇ ಪಡೆದನು ರಾಜಾ! ವೃದ್ಧಕನ್ಯೆ ಯ ಮಹಿಮೆಯನ್ನೂ, ಅವಳ ಬ್ರಹ್ಮಚರ್ಯೆಯನ್ನೂ, ಆಕೆಯು ಸದ್ಗತಿ ಹೊಂದಿದುದನ್ನೂ ನಿನಗೆ ತಿಳಿಸಿದುದಾಯಿತು ಬಲರಾಮನು ಅಲ್ಲಿದ್ದಾಗ ಲೇ ಶಲ್ಯನು ಕೊಲ್ಲಲ್ಪಟ್ಟ ವೃತ್ತಾಂತವು ಅವನಿಗೆ ತಿಳಿಯಿತು. ಅದಕ್ಕಾಗಿ ಅವನು ಬಹಳ ವ್ಯಸನಪಟ್ಟನು ಆಮೇಲೆ ಅವನು ಅಲ್ಲಿಯೂ ದಾನಾದಿ ಗಳನ್ನು ಮಾಡಿ, ಅಲ್ಲಿಂದಾಚೆಗೆ ಸಮಂತಪಂಚಕದ್ವಾರದಿಂದ ಹೊರಟು ಬರುತ್ತ ಅಲ್ಲಿದ್ದ ಮಹರ್ಷಿಗಳಿಂದ ಕುರುಕ್ಷೇತ್ರದ ಫಲವನ್ನೆಲ್ಲ ಕೇಳಿ ದನು. ಆ ಮಹಾತ್ಮರು ಬಲರಾಮನಿಗೆ ಅದರ ಪ್ರಭಾವಗಳನ್ನೆಲ್ಲ ವಿವ ರಿಸತೊಡಗಿದರು

ಇದು ಐವತ್ತು ಮೂರನೆಯ ಅಧ್ಯಾಯವು

---

**{ ಮಹರ್ಷಿಗಳು ಬಲರಾಮನಿಗೆ ಕುರುಕ್ಷೇತ್ರದ ಮಹಿಮೆ ಯನ್ನು ತಿಳಿಸಿದುದು }**

ಆಗ ಋಷಿಗಳು 'ರಾಮಾ! ಶಾಶ್ವತವಾದ ಸಮಂತಪಂಚಕವು ಬ್ರಹ್ಮದೇವನ ಉತ್ತರವೇದಿಯೆಂದು ಪ್ರಸಿದ್ಧವಾಗಿದೆ ಹಿಂದೆ ವರಪ್ರದ ರಾದ ದೇವತೆಗಳು• ಆ ಸ್ಥಳದಲ್ಲಿ ಉತ್ತಮಯಾಗದಿಂದ ಭಗವಂತನನ್ನು

ವಿಶೇಷವಾಗಿ ಆರಾಧಿಸಿದರು. ರಾಜರ್ಷಿಗಳಲ್ಲಿ ಪ್ರಸಿದ್ಧನೂ, ಮಹಾತ್ಮನೂ ಆದ ಕುರುರಾಜನಿಂದ ಅನೇಕವರ್ಷಗಳವರೆಗೆ ಆ ಕ್ಷೇತ್ರವು ಚೆನ್ನಾಗಿ ಉಳಲ್ಪಟ್ಟಿತು. ಆದುದರಿಂದಲೇ ಅದು ಪ್ರಪಂಚದಲ್ಲಿ ಕುರುಕ್ಷೇತ್ರವೆಂದು ಪ್ರಸಿದ್ಧವಾಯಿತು' ಎಂದರು ಆಗ ಬಲರಾಮನು 'ಮಹಾತ್ಮನಾದ ಕುರುವು ಈ ಕ್ಷೇತ್ರವನ್ನು ಉತ್ತುದೇಕೆ? ಈ ವಿಷಯವನ್ನು ಕೇಳಲಪೇಕ್ಷಿಸುವೆನು' ಎನಲು, ಋಷಿಗಳು ಹೇಳುವರು

"ಓ ಬಲ್ಲರಾಮಾ! ಹಿಂದೆ ದೇವೇಂದ್ರನು ಆ ಕ್ಷೇತ್ರವನ್ನು ಉತ್ಸಾಹದಿಂದ ಉಳುತ್ತಿದ್ದ ಕುರುವಿನ ಬಳಿಗೆ ಬಂದು, ಅದರ ಕಾರಣವನ್ನು ತಿಳಿಯುವುದಕ್ಕಾಗಿ 'ಓ ರಾಜರ್ಷೀ! ಇಷ್ಟು ಪ್ರಯಾಸಪಟ್ಟು ಈ ಕಾರ್ಯವನ್ನು ಮಾಡುತ್ತಿರುವೆಯೇಕೆ? ಏತಕ್ಕಾಗಿ ನೀನು ಈ ಭೂಮಿಯನ್ನುಳುತ್ತಿರುವೆ?' ಎಂದು ಕೇಳಲು, ಕುರುರಾಜನು 'ಓ ಮಹೇಂದ್ರಾ! ಈ ಕ್ಷೇತ್ರದಲ್ಲಿ ಹುಟ್ಟಿದ ಮನುಷ್ಯರು ಪಾಪಿಗಳಿಗೆ ದುರ್ಲಭವಾದ ಪುಣ್ಯಶಾಲಿಗಳ ಲೋಕವನ್ನು ಸೇರುವರು' ಎಂದನು ಆಗ ಇಂದ್ರನು ಆತನನ್ನು ಪರಿಹಾಸಮಾಡಿ ಸ್ವರ್ಗಕ್ಕೆ ಹೋದನು ಆ ರಾಜರ್ಷಿಯೂ ಸ್ವಲ್ಪವೂ ವಿಚ್ಛಿತ್ತಿಯಿಲ್ಲದೆ ಭೂಮಿಯನ್ನು ಉಳುತ್ತಲೇ ಇದ್ದನು ಇಂದ್ರನೂ ಅಡಿಗಡಿಗೆ ಬಂದು ಕೇಳುತ್ತ ಪರಿಹಾಸಮಾಡಿ ಹೋಗುತ್ತಿದ್ದನು ಆ ರಾಜನು ಹಾಗೆ ಉಗ್ರತಪಸ್ಸಿನಿಂದ ಭೂಮಿಯುಳುತ್ತಿರುವುದನ್ನು ನೋಡಿ ಇಂದ್ರನು ದೇವತೆಗಳನ್ನು ಕುರಿತು ಅವರಿಗೂ ಆತನ ಉದ್ದೇಶವನ್ನು ತಿಳಿಸಿದನು ಆಗ ದೇವತೆಗಳು ಇಂದ್ರನ ಮಾತನ್ನು ಕೇಳಿ ಆತನನ್ನು ಕುರಿತು 'ಪ್ರಭೂ! ಸಾಧ್ಯವಾದರೆ ಆ ರಾಜರ್ಷಿಗೆ ನೀನು ವರಗಳ ಆಸೆಯನ್ನಾದರೂ ತೋರಿಸಿ ಆ ಕಾರ್ಯವನ್ನು ತಪ್ಪಿಸಬೇಕು ಇಲ್ಲಿ ಹುಟ್ಟುವ ಮನುಷ್ಯರೆಲ್ಲರೂ ಯಾಗಗಳಿಂದ ನಮ್ಮನ್ನು ಆರಾಧಿಸದೆಯೇ ಸ್ವರ್ಗವನ್ನು ಸೇರುವುದಾದರೆ, ನಮಗೆ ಹವಿರ್ಭಾಗವೆಲ್ಲಿ ದೊರೆಯುವುದು?" ಎಂದರು ಒಡನೆ ಇಂದ್ರನು ಆ ರಾಜರ್ಷಿಯಬಳಿಗೆ ಬಂದು "ರಾಜಾ! ನೀನೇಕೆ ಶ್ರಮಪಡುವೆ? ನನ್ನ ಮಾತನ್ನು ಕೇಳು. ತಿರ್ಯಗ್ಯೋನಿಯಲ್ಲಿ ಹುಟ್ಟಿದರೂ ಯಾರು ಈ ಕ್ಷೇತ್ರದಲ್ಲಿ ಆಹಾರವಿಲ್ಲದೆ ದೇಹದಂಡನೆಯಿಂದ ಶರೀರವನ್ನು ತ್ಯಜಿಸುವರೋ,

ಯಾರು ಇಲ್ಲಿ ಯುದ್ಧದಲ್ಲಿ ಹತರಾಗುವರೋ ಅವರೆಲ್ಲ ಸ್ವರ್ಗವನ್ನು ಸೇರುವರು" ಎಂದನು. ಆಗ ಕುರುರಾಜನು ಇಂದ್ರನನ್ನು ಕುರಿತು 'ಹಾಗೆಯೇ ಆಗಲಿ' ಎಂದನು ಆಮೇಲೆ ಇಂದ್ರನು ಆತನ ಅನುಮತಿಯನ್ನು ಪಡೆದು ಮನಸ್ಸಂತೋಷದಿಂದ ತಿರುಗಿ ಸ್ವರ್ಗವನ್ನು ಕುರಿತು ಹೊರಟನು ಯದುಶ್ರೇಷ್ಠಾ! ಹಿಂದೆ ರಾಜರ್ಷಿಯಾದ ಕುರುವಿನಿಂದ ಈ ಭೂಮಿಯು ಉಳಲ್ಪಟ್ಟ ಕ್ರಮವು ಇದು ಇಂದ್ರನ ಅನುಮತಿಯನ್ನು ಪಡೆದು ಆ ಕುರುರಾಜನು ಈ ಪುಣ್ಯಕ್ಷೇತ್ರದಲ್ಲಿ ಪ್ರಾಣವನ್ನು ಬಿಟ್ಟನು ಈ ಸ್ಥಳವು ಇಂದ್ರನಿಂದಲೂ, ಬ್ರಹ್ಮಾದಿ ದೇವತೆಗಳಿಂದಲೂ ಆದರಿಸಲ್ಪಟ್ಟಿರುವುದು ಇದಕ್ಕಿಂತಲೂ ಶ್ರೇಷ್ಠವಾದ ಪುಣ್ಯಕ್ಷೇತ್ರವು ಈ ಭೂಮಿಯಲ್ಲಿ ಬೇರೊಂದಿಲ್ಲ. ಮುಂದೆ ಹುಟ್ಟುವುದೂ ಇಲ್ಲ ಈ ಕ್ಷೇತ್ರದಲ್ಲಿ ಉಗ್ರತಪಸ್ಸನ್ನು ಮಾಡುವವರೆಲ್ಲರೂ ದೇಹಾವಸಾನದಲ್ಲಿ ಬ್ರಹ್ಮಲೋಕವನ್ನು ಸೇರುವರು ಯಾವ ಪುಣ್ಯಪುರುಷರು ಈ ಸ್ಥಳದಲ್ಲಿ ದಾನಮಾಡುವರೋ ಅವರ ದಾನವು ಅತಿ ಶೀಘ್ರದಲ್ಲಿ ಸಹಸ್ರಗುಣವಾಗುವುದು ಯಾರು ಈ ಸ್ಥಳದಲ್ಲಿ ನಿತ್ಯವೂ ಒಳ್ಳೆಯ ಕಾರ್ಯಗಳಲ್ಲಿ ಮನಸ್ಸುಳ್ಳವರಾಗಿರುವರೋ, ಅವರು ಯಮನ ನಿವಾಸವನ್ನು ಯಾವಾಗಲೂ ನೋಡುವುದಿಲ್ಲ ಯಾವ ರಾಜರು ಇಲ್ಲಿ ಮಹಾಯಾಗಗಳಿಂದ ದೇವತೆಗಳನ್ನು ಪೂಜಿಸುವರೋ, ಅವರಿಗೆ ಪ್ರಪಂಚವಿರುವವರೆಗೂ ಸ್ವರ್ಗವಾಸವು ನಿಶ್ಚಯವು ಬಲರಾಮಾ! ದೇವರಾಜನಾದ ಇಂದ್ರನು ಇದೇಸ್ಥಳದಲ್ಲಿ ಕುರುಕ್ಷೇತ್ರಸಂಬಂಧವಾಗಿ ಹೇಳಿದ ಒಂದು ಗಾಥೆಯುಂಟು 'ಮನುಷ್ಯನು ಎಷ್ಟೇ ಪಾಪಿಯಾಗಿದ್ದರೂ ಗಾಳಿಯಿಂದ ತೂರಿಸಲ್ಪಡುವ ಕುರುಕ್ಷೇತ್ರದ ಬೂದಿಯು ಕೂಡ, ಆತನನ್ನು ಅತ್ಯುತ್ತಮವಾದ ಸದ್ಗತಿಗೆ ಸೇರಿಸುವುದು. ಯಾವ ಮನುಷ್ಯನು 'ನಾನು ಕುರುಕ್ಷೇತ್ರಕ್ಕೆ ಹೋಗುವೆನು ಆ ಕ್ಷೇತ್ರದಲ್ಲಿ ವಾಸಮಾಡುವೆನು' ಎಂದು ಸಂಕಲ್ಪಿಸುವನೋ ಆತನೂ ಸ್ವರ್ಗವನ್ನು ಸೇರುವನು 'ಕುರುಕ್ಷೇತ್ರವನ್ನು ಸೇರುವೆವು ನಾವು ಕುರುಕ್ಷೇತ್ರದಲ್ಲಿದ್ದು ಅಲ್ಲಿ ಮೌನವ್ರತವನ್ನೂ, ಸ್ಥಿರಾಸನವನ್ನೂ, ಧ್ಯಾನವನ್ನೂ ಮಾಡುವೆವು' ಎಂದು ಆಗಾಗ ಮನಸ್ಸಿನಿಂದ ನೆನೆಸಿದರೂ, ಬಾಯಲ್ಲಿ ಹಂಬಲಿಸಿದರೂ ಕೂಡ ಅಂತವನು ಆ ಕ್ಷೇತ್ರಕ್ಕೆ ಎಷ್ಟೇ ದೂರದಲ್ಲಿದ್ದರೂ, ಸಮೀಪದಲ್ಲಿ

ದ್ದರೂ ನಿಜವಾಗಿ ಸ್ವರ್ಗವನ್ನು ಪಡೆಯುವರು' ಎಂಬುದೇ ಆ ಗಾದಾರ್ಥವು ಓ ನರೋತ್ತಮಾ! ಇಲ್ಲಿ ದೇವಶ್ರೇಷ್ಠರೂ, ಬ್ರಾಹ್ಮಣೋತ್ತಮರೂ, ನೃಗನೇ ಮೊದಲಾದ ರಾಜಶ್ರೇಷ್ಠರೂ ದೊಡ್ಡ ಯಾಗಗಳಿಂದ ಪರಮಾತ್ಮನನ್ನು ಆರಾಧಿಸಿ ದೇಹಾವಸಾನದಲ್ಲಿ ಸದ್ಗತಿಯನ್ನು ಪಡೆದರು ತರಂತುಕೆ ಮತ್ತು ರಂತುಕೆಗಳೆಂಬ ಎರಡು ನದಿಗಳಿಗೂ, ರಾಮಹ್ರದಗಳಿಗೂ, ಮಚಕ್ರುಕ ತೀರ್ಥಕ್ಕೂ ನಡುವಣ ಈ ಕುರುಕ್ಷೇತ್ರದಲ್ಲಿರುವ ಸಮಂತಪಂಚಕವು ಬ್ರಹ್ಮದೇವನ ಉತ್ತಮವೇದಿಯೆಂದು ಪ್ರಸಿದ್ಧವಾದುದು. ಮಂಗಳಕರವಾದುದು ಮಹಾಪುಣ್ಯಕರವಾದುದು ಇದರಲ್ಲಿ ಸ್ವರ್ಗದಲ್ಲಿಯ ಗುಣಗಳೆಲ್ಲವೂ ಇರುವುವು ಆದುದರಿಂದ ಇಲ್ಲಿ ಯುದ್ಧದಲ್ಲಿ ಕೊಲ್ಲಲ್ಪಡುವ ಅರಸರಲ್ಲರೂ ಯಾವಾಗಲೂ ಅಕ್ಷಯವಾದ ಪುಣ್ಯಗತಿಯನ್ನು ಪಡೆಯುವರೆಂದು ಇಂದ್ರನೂ, ಬ್ರಹ್ಮಾದಿಗಳೂ ಹೇಳಿರುವರು ತ್ರಿಮೂರ್ತಿಗಳೂ ಅದನ್ನು ಅಂಗೀಕರಿಸಿರುವರು'' ಎಂದರು

ಇದು ಐವತ್ತು ನಾಲ್ಕನೆಯ ಅಧ್ಯಾಯವು



{ ಬಲರಾಮನು ಮಿತ್ರಾವರುಣಾಶ್ರಮದಲ್ಲಿದ್ದಾಗ ನಾರದನಿಂದ ಭೀಮನಿಗೂ, ದುರ್ಯೋಧನನಿಗೂ ಗದಾಯುದ್ಧವು ಪ್ರಾರಂಭಿಸಿದುದನ್ನು ಕೇಳಿ, ಅದನ್ನು ನೋಡುವ ಕೌತೂಹಲದಿಂದ ಕುರುಕ್ಷೇತ್ರಾಭಿಮುಖವಾಗಿ ಹೊರಟುದು }

ಓ ಜನಮೇಜಯರಾಜಾ! ಆಮೇಲೆ ಬಲರಾಮನು ಕುರುಕ್ಷೇತ್ರವನ್ನು ದರ್ಶಿಸಿ, ಅಲ್ಲಿಯೂ ದಾನಾದಿಗಳನ್ನು ಮಾಡಿ, ಅಲ್ಲಿಂದ ವಿಶಾಲವಾದ ಒಂದು ಪುಣ್ಯಾಶ್ರಮಕ್ಕೆ ಬಂದನು. ಅದು ಮಾವು, ಹೊಂಗೆ, ಅತ್ತಿ, ಆಲ, ಬಿಲ್ವ, ಹಲಸು, ಅರ್ಜುನ ಮೊದಲಾದ ವೃಕ್ಷಜಾತಿಗಳಿಂದ ತುಂಬಿ ಪವಿತ್ರವಾಗಿರುವುದು ಯಾದವಶ್ರೇಷ್ಠನಾದ ಬಲರಾಮನು ಅಂದವಾದ ಸನ್ನಿವೇಶವುಳ್ಳ ಆ ಆಶ್ರಮವನ್ನು ಕಂಡು, ಅಲ್ಲಿದ್ದ ಋಷಿಗಳೆಲ್ಲರನ್ನೂ ನೋಡಿ 'ಈ ಉತ್ತಮಾಶ್ರಮವು ಯಾರದು?' ಎಂದು ಕೇಳಿದನು ಆಗ ಅವರು 'ಓ ಬಲರಾಮಾ! ಸೃಷ್ಟಿ ಸ್ಥಿತಿ ಸಂಹಾರಗಳನ್ನೇ ಲೀಲೆಯಾಗಿ

ಉಳ್ಳ ವಿಷ್ಣುವು ಹಿಂದೆ ಇಲ್ಲಿ ಉತ್ತಮತಪಸ್ಸನ್ನು ಮಾಡಿದನು. ವಿಷ್ಣುವಿನ ಶಾಶ್ವತವಾದ ಎಲ್ಲ ಯಜ್ಞಗಳೂ ಯಥಾಕ್ರಮವಾಗಿ ಇಲ್ಲಿಯೇ ನಡೆದುವು. ಓ ರಾಜಾ! ಇಲ್ಲಿಯೇ ಆಬಾಲ್ಯಬ್ರಹ್ಮಚಾರಿಣಿಯಾಗಿದ್ದ ವೃದ್ಧಬ್ರಾಹ್ಮಣ ಸ್ತ್ರೀಯು ಯೋಗವನ್ನೂ, ತಪಸ್ಸನ್ನೂ ಹಿಡಿದು ಸ್ವರ್ಗವನ್ನು ಸೇರಿದಳು. ಶಾಂಡಿಲ್ಯಪುತ್ರಿಯಾದ ಆ ಶ್ರೀಮತಿಯು ದೃಢವ್ರತವನ್ನು ಕೈಕೊಂಡು ನಿತ್ಯಬ್ರಹ್ಮಚರ್ಯೆಯಲ್ಲಿದ್ದಳು ಅವಳು ಆ ಯೋಗಸಿದ್ಧಿಯಿಂದ ಉತ್ತಮವಾದ ಅಶ್ವಮೇಧಫಲವನ್ನೆಲ್ಲ ಅಲ್ಲಿಯೇ ಅನುಭವಿಸುತ್ತಿದ್ದು ಮಹಾತ್ಮರಿಂದ ಪೂಜಿತಳಾಗಿ ಸ್ವರ್ಗಸ್ಥಳಾದಳು' ಎಂದರು ಬಲರಾಮನು ಹಿಮಾಚಲದ ಪಾರ್ಶ್ವದಲ್ಲಿರುವ ಆ ಆಶ್ರಮವನ್ನು ದರ್ಶಿಸಿ, ಅಲ್ಲಿದ್ದ ಋಷಿಗಳಿಗೆ ಅಭಿವಾದನಮಾಡಿ, ಪ್ರಾತಃಕಾಲದ ಆಹ್ನಿಕಗಳೆಲ್ಲವನ್ನೂ ಮುಗಿಸಿಕೊಂಡು ಬೆಟ್ಟದಮೇಲೇರಿದನು ಆತನು ಆ ಬೆಟ್ಟದಮೇಲೆ ಸ್ವಲ್ಪದೂರಕ್ಕೆ ಹೋಗಿ, ಅಲ್ಲಿದ್ದ ಉತ್ತಮವಾದ ಒಂದು ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಬಹಳ ಸಂತೋಷಗೊಂಡನು ಅಲ್ಲಿಂದ ಬಲರಾಮನು ಸರಸ್ವತೀನದಿಗೆ ಉತ್ಪತ್ತಿಸ್ಥಾನವಾಗಿರುವ ಪ್ಲಕ್ಷಪ್ರಸ್ರವಣವನ್ನೂ, ತೀರ್ಥಗಳಲ್ಲಿ ಅತ್ಯಂತಪವಿತ್ರವಾದ ಕಾರಪಚನವನ್ನೂ ಸೇರಿದನು ಆತನು ಅಲ್ಲಿಯೂ ದಾನಗಳನ್ನು ಮಾಡಿ, ಪವಿತ್ರವಾದ ಆ ಶೀತಲತೀರ್ಥಗಳಲ್ಲಿ ಸ್ನಾನಮಾಡಿ, ಪಿತೃಗಳನ್ನೂ, ದೇವತೆಗಳನ್ನೂ ತೃಪ್ತಿಗೊಳಿಸಿದನು ಆ ಸ್ಥಳದಲ್ಲಿದ್ದ ಸನ್ಯಾಸಿಗಳೊಡನೆಯೂ, ಬ್ರಾಹ್ಮಣರೊಡನೆಯೂ ಒಂದು ರಾತ್ರಿ ತಂಗಿದ್ದು, ಆಮೇಲೆ ಪರಿಶುದ್ಧವಾದ ಮಿತ್ರಾವರುಣರ ಆಶ್ರಮವನ್ನು ಸೇರಿದನು ಆಮೇಲೆ ಇಂದ್ರನೂ, ಅಗ್ನಿಯೂ, ಆರ್ಯಮನೂ ಎಲ್ಲಿ ಸಂತೃಪ್ತರಾದರೋ ಆ ಸ್ಥಳಕ್ಕೆ ಬಂದನು ಆತನು ಅಲ್ಲಿಯೂ ಸ್ನಾನಮಾಡಿ, ಅಲ್ಲಿನ ಋಷಿಗಳೊಡನೆಯೂ, ಸಿದ್ಧರೊಡನೆಯೂ ಕಲೆತು ಅವರಿಂದ ಅಲ್ಲ ಪವಿತ್ರ ಕಥೆಗಳನ್ನು ಕೇಳುತ್ತಿದ್ದನು ಇಷ್ಟರಲ್ಲಿ ಅಕಸ್ಮಾತ್ತಾಗಿ ಅಲ್ಲಿ ನಾರದಮುನಿಯು ಕಾಣಿಸಿಕೊಂಡನು ಪೂಜ್ಯನಾದ ಆ ನಾರದನಿಗಾದರೋ ತಲೆಯಲ್ಲಿ ಜಡೆ! ಕೈಯಲ್ಲಿ ದರ್ಭೆಯ ಪವಿತ್ರಗಳು! ನಡುವಿನಲ್ಲಿ ನಾರುಮಡಿಯ ಬಟ್ಟೆ! ಕೈಯಲ್ಲಿ ಸುವರ್ಣವರ್ಣವುಳ್ಳ ದಂಡಕಮಂಡಲುಗಳು! ಇಂಪಾದ ಸ್ವರದಿಂದ ಎಲ್ಲರನ್ನೂ ಆಕರ್ಷಿಸುವ ಮಹತಿಯೆಂಬ ವೀಣೆಯನ್ನು ಹಿಡಿ

ದಿರುವನು. ಗಾನ ನರ್ತನಗಳಲ್ಲಿ ನಿಪುಣನೂ, ದೇವಬ್ರಾಹ್ಮಣ ಪೂಜಿತನೂ, ಲೋಕಕ್ಷೇಮಕ್ಕಾಗಿ ಯಾವಾಗಲೂ ಕಲಹಕಾರಣನೂ ಆದ ನಾರದನು ಬಂದೊಡನೆಯೇ, ಬಲರಾಮನು ಮೇಲೆದ್ದು ಆತನನ್ನು ಪೂಜಿಸಿ ಕೌರವರ ವೃತ್ತಾಂತವನ್ನು ಕೇಳಿದನು ಆಗ ನಾರದನು ಯಥಾವತ್ತಾಗಿ ಅವನಿಗೆ ಕೌರವರ ವಿಷಯಗಳೆಲ್ಲವನ್ನೂ ತಿಳಿಸಲು, ಬಲರಾಮನು ನಾರದನನ್ನು ಕುರಿತು ದೈನ್ಯವಾಕ್ಯಗಳಿಂದ ಹೀಗೆ ಕೇಳುವನು

'ತಪೋಧನಾ! ಕುರುಕ್ಷೇತ್ರದಲ್ಲಿ ನೆರೆದ ರಾಜರ ಗತಿಯೇನಾಗಿದೆ? ಆ ಸಂಗತಿಯನ್ನು ನಾನು ಈಗಾಗಲೇ ಸ್ವಲ್ಪವಾಗಿ ಕೇಳಿರುವೆನು. ಆದರೂ ಅದನ್ನು ನಿನ್ನಿಂದ ವಿಸ್ತಾರವಾಗಿ ಕೇಳಲು ನನಗೆ ಕುತೂಹಲವಾಗಿರುವುದು' ಎಂದನು ಅದಕ್ಕಾ ನಾರದನು 'ರಾಮಾ! ಆಗಲೇ ಭೀಷ್ಮದ್ರೋಣರೂ, ಸಿಂಧುದೇಶದ ರಾಜನಾದ ಜಯದ್ರಥನೂ ಕೊಲ್ಲಲ್ಪಟ್ಟು, ಸೂರ್ಯಪುತ್ರನಾದ ಕರ್ಣನೂ ಮೃತನಾದನಷ್ಟೆ! ಆಮೇಲೆ ಮಹಾರಥರಾದ ಕರ್ಣಪುತ್ರರೂ ಕೊಲ್ಲಲ್ಪಟ್ಟರು. ಹಾಗೆಯೇ ಭೂರಿಶ್ರವನೂ, ಮಹಾವೀರ್ಯವುಳ್ಳ ಮದ್ರರಾಜನಾದ ಶಲ್ಯನೂ ಹತರಾದರು ಇವರಲ್ಲದೆ ಯುದ್ಧದಲ್ಲಿ ಹಿಮ್ಮೆಟ್ಟದ ಶೂರರಾದ ಇನ್ನೂ ಅನೇಕರಾಜರೂ, ರಾಜಪುತ್ರರೂ ಕೌರವರಾಜನಾದ ದುರ್ಯೋಧನನಿಗೆ ಪ್ರಿಯವನ್ನುಂಟುಮಾಡಲು, ತಮ್ಮ ಪ್ರಾಣದಮೇಲಿನ ಆಸೆಯನ್ನು ತೊರೆದು ಯುದ್ಧಮಾಡಿ ಮೃತರಾದರು ಈಗ ಧೃತರಾಷ್ಟ್ರನ ಸೈನ್ಯದಲ್ಲಿ ಕೃಪನೊಬ್ಬನು, ಕೃತವರ್ಮನೊಬ್ಬನು, ವೀರ್ಯವಂತನಾದ ದ್ರೋಣಪುತ್ರನೊಬ್ಬನು ಈ ಮೂವರೇ ಉಳಿದಿರುವರು. ಅವರೂ ಈಗ ಭಯದಿಂದ ದಿಕ್ಕುಪಾಲಾಗಿ ಓಡಿಹೋದರು ತನ್ನ ಸೈನ್ಯವೆಲ್ಲ ನಶಿಸಿ, ಅಲ್ಪಸ್ವಲ್ಪವಾಗಿದ್ದ ಕಾಲಾಳುಗಳೂ ಓಡಿಹೋಗಲು, ದುರ್ಯೋಧನನು, ಬಹಳ ಚಿಂತಾಕುಲನಾಗಿ ದ್ವೈಪಾಯನವೆಂಬ ಮಡುವಿನಲ್ಲಿ ಪ್ರವೇಶಿಸಿಬಿಟ್ಟನು. ಜಲಸ್ತಂಭನಮಾಡಿ, ಆ ಜಲದಲ್ಲಿ ಮಲಗಿದ್ದ ದುರ್ಯೋಧನನಿದ್ದಲ್ಲಿಗೆ ಪಾಂಡವರು ಕೃಷ್ಣನೊಡನೆ ಬಂದು, ಮಹಾಕ್ರೂರವಾಕ್ಯಗಳಿಂದ ಅವನನ್ನು ವ್ಯಥೆಪಡಿಸಿದರು. ಬಲಶಾಲಿಯೂ, ವೀರನೂ ಆದ ಆ ದುರ್ಯೋಧನನು ಆ ತೆರದ ಕ್ರೂರವಾಕ್ಯಗಳನ್ನು

ಕೇಳಿ ವ್ಯಥೆಗೊಂಡು, ದೊಡ್ಡ ಗದೆಯನ್ನು ಕೈಯಲ್ಲಿ ಹಿಡಿದು ಮುಡುವಿ ನಿಂದಿದ್ದನು ಈಗ ಆತನು ಭೀಮಸೇನನೊಡನೆ ಯುದ್ಧಮಾಡುವುದಕ್ಕಾಗಿ ಬಂದು ನಿಂತಿರುವನು ಇನ್ನು ಅವರಿಬ್ಬರಿಗೂ ಭಯಂಕರವಾದ ದೊಡ್ಡ ಯುದ್ಧವು ನಡೆಯುವುದು ಓ ಬಲರಾಮಾ! ನಿನಗೆ ನೋಡುವ ಅಪೇಕ್ಷೆಯಿದ್ದರೆ ಈಗಲೇ ಹೊರಡು ವಿಳಂಬಮಾಡಬೇಡ ನಿನ್ನ ಶಿಷ್ಯರಿಬ್ಬರ ವ. . ಘೋರಯುದ್ಧವನ್ನು ನೋಡು!' ಎಂದನು ಅದನ್ನು ಕೇಳಿ ಬಲರಾಮ . . ಬ್ರಾಹ್ಮಣೋತ್ತಮನಾದ ಆ ನಾರದನನ್ನು ಪೂಜಿಸಿ, ತನ್ನೊಡನೆ ಬಂದಿದ್ದವರೆಲ್ಲರನ್ನೂ ಕಳುಹಿಸಿ, ತನ್ನ ಸೇವಕರನ್ನೆಲ್ಲ ದ್ವಾರಕೆಗೆ ಹೋಗುವಂತೆ ಆಜ್ಞಾಪಿಸಿದನು ಅಮೇಲೆ ಆತನು ಹಿಮಾಚಲಪರ್ವತದಲ್ಲಿರುವ ಮಂಗಳಕರವಾದ ಪ್ಲಕ್ಷಪ್ರಸ್ರವಣವೆಂಬ ತೀರ್ಥದಿಂದ ಕೆಳಗಿಳಿದು, ಆ ತೀರ್ಥದ ಮಹತ್ವವನ್ನು ಕೇಳಿ, ಬ್ರಾಹ್ಮಣರ ಸನ್ನಿಧಿಯಲ್ಲಿ ಈ ಶ್ಲೋಕವನ್ನು ಹೇಳಿದನು.

"ಸರಸ್ವತೀನದಿಯ ತೀರದಲ್ಲಿ ವಾಸಮಾಡುವುದರಿಂದುಂಟಾಗುವ ಸಂತೋಷಕ್ಕೆ ಸಮಾನವಾದ ಸಂತೋಷವೆಲ್ಲಿದೆ? ಸರಸ್ವತೀತೀರವಾಸದಿಂದಾಗುವ ಗುಣಕ್ಕೆ ಸಮಾನವಾದ ಗುಣವೆಲ್ಲಿದೆ? ಸರಸ್ವತೀನದಿಯನ್ನು ಸೇವಿಸಿದ ಜನರೆಲ್ಲರೂ ಸ್ವರ್ಗಗತಿಯನ್ನು ಹೊಂದಿರುವರು ಸರಸ್ವತಿಯನ್ನೇ ಯಾವಾಗಲೂ ಸ್ಮರಿಸುವರು ಸರಸ್ವತೀನದಿಯೇ ನದಿಗಳಲ್ಲೆಲ್ಲ ಪವಿತ್ರವಾದುದು ಇದು ಪ್ರಪಂಚಕ್ಕೆಲ್ಲ ಮಂಗಳವನ್ನುಂಟುಮಾಡುವುದು ಸರಸ್ವತೀನದಿಯನ್ನು ಸೇರಿದ ಜನರು ಇಹಪರಗಳೆರಡರಲ್ಲಿಯೂ ಎಂದೆಂದಿಗೂ ದುಃಖಕ್ಕೊಳಗಾಗುವುದಿಲ್ಲ' ಎಂಬುದೇ ಅದರ ಭಾವವು ಆಮೇಲೆ ಬಲರಾಮನು ಸಂತೋಷದಿಂದ ಆ ಸರಸ್ವತೀನದಿಯನ್ನೇ ಅಡಿಗಡಿಗೆ ನೋಡುತ್ತ, ಉತ್ತಮಾಶ್ವಗಳುಳ್ಳ ತನ್ನ ಬಿಳೀರಥವಮೇಲೇರಿ, ತನ್ನ ಶಿಷ್ಯರ ಅನ್ಯೋನ್ಯಯುದ್ಧವನ್ನು ನೋಡುವ ಅಭಿಲಾಷೆಯಿಂದ ವೇಗದಿಂದ ಬಂದನು ಜನಮೇಜಯಾ! ಹೀಗೆ ಆ ಘೋರಯುದ್ಧವು ನಡೆಯಿತು' ಎಂದನು.

ಆಗ ಧೃತರಾಷ್ಟ್ರನು ದುಃಖದಿಂದ 'ಓ ಸಂಜಯಾ! ಗದಾಯುದ್ಧವು ಸಮಾಪಿಸಿರುವಾಗ ಬಲರಾಮನು ಆ ಸ್ಥಳಕ್ಕೆ ಬಂದಿರುವುದನ್ನು

ಕೇಳಿ ನನ್ನ ಮಗನಾದ ದುರ್ಯೋಧನನು ಹೇಗೆ ಭೀಮನನ್ನಿದಿರಿಸಿ ಯುದ್ಧ ಮಾಡಿದನೋ ಅದನ್ನೆಲ್ಲ ತಿಳಿಸು ?' ಎಂದು ಕೇಳಿದನು.

ಇದು ಐವತ್ತೈದನೆಯ ಅಧ್ಯಾಯವು.

**ಇಲ್ಲಿಗೆ ಹ್ರದಪ್ರವೇಶಪರ್ವವು ಮುಗಿದುದು.**

# ಗದಾಯುದ್ಧಪರ್ವವು.

ಭೀಮ ದುರ್ಯೋಧನರಿಬ್ಬರೂ ಗದಾಯುದ್ಧಕ್ಕೆ ಸಿದ್ಧರಾದುದು

ಸಂಜಯನು ಧೃತರಾಷ್ಟ್ರನನ್ನು ಕುರಿತು "ಓ ಮಹಾರಾಜಾ! ಯುದ್ಧಕ್ಕೆ ಸಿದ್ಧನಾದ ನಿನ್ನ ಮಗನಿಗೆ, ಬಲರಾಮನು ಅಲ್ಲಿಗೆ ಬಂದು ಸೇರಿದುದನ್ನು ಕೇಳಿ ಬಹಳ ಸಂತೋಷವಾಯಿತು ಒಡನೆ ನಿನ್ನ ಮಗನು ಬಲರಾಮನನ್ನು ಕಂಡು ಮೇಲೆದ್ದು ಗೌರವಿಸಿ, ಸಂತೋಷದಿಂದ ಯುಧಿಷ್ಠಿರನನ್ನು ಕುರಿತು ಹೀಗೆಂದು ಹೇಳುವನು 'ಓ ಯುಧಿಷ್ಠಿರಾ! ನಾವು ಸಮಂತಪಂಚಕವೆಂಬ ಪವಿತ್ರಸ್ಥಳಕ್ಕೆ ಹೋಗುವೆವು ಅದನ್ನು ದೇವಲೋಕದಲ್ಲಿ ಬ್ರಹ್ಮದೇವನಿಗೂ ಆದರಣೀಯವಾದ ಉತ್ತಮವೇದಿಯೆನ್ನುವರು. ಮೂರು ಲೋಕಕ್ಕೂ ಪವಿತ್ರತಮವಾಗಿ, ಶಾಶ್ವತವೆನಿಸಿದ ಆ ಕ್ಷೇತ್ರದಲ್ಲಿ ಸತ್ತವರಿಗೆ ನಿಶ್ಚಯವಾಗಿ ಸ್ವರ್ಗಗತಿಯುಂಟು ಆದುದರಿಂದ ನೀನು ಅಲ್ಲಿಯೇ ಯುದ್ಧದಲ್ಲಿ ಮೃತನಾಗಿ ಸ್ವರ್ಗಗತಿಯನ್ನು ಹೊಂದು' ಎಂದನು ಧರ್ಮರಾಜನು ಹಾಗೆಯೇ ಆಗಲೆಂದು ಹೇಳಿ ಸಮಂತಪಂಚಕದ ಕಡೆಗೆ ಹೊರಟನು ದುರ್ಯೋಧನನು, ಗದೆಯನ್ನೆತ್ತಿಕೊಂಡು ಕಾಲ್ನಡೆಯಿಂದಲೇ ಪಾಂಡವರನ್ನು ಹಿಂಬಾಲಿಸಿದನು ಹೀಗೆ ಗದಾಪಾಣಿಯಾಗಿ ಯುದ್ಧಕವಚವನ್ನು ಧರಿಸಿ ಧೈರ್ಯದಿಂದ ಹೋಗುತ್ತಿರುವ ಆ ದುರ್ಯೋಧನನನ್ನು ನೋಡಿ ಆಕಾಶಚಾರಿಗಳಾದ ದೇವಗಣಗಳೆಲ್ಲವೂ 'ಭಲೆ! ಭಲೆ' ಎಂದು ಕೊಂಡಾಡಿದುವು. ವಾದ್ಯವನ್ನು ನುಡಿಸತಕ್ಕವರು ಸಂತೋಷದಿಂದ ವಾದ್ಯಗಳನ್ನು ನುಡಿಸಿದರು. ನಿನ್ನ ಮಗನೂ

ಆ ಪಾಂಡವರ ಹಿಂದೆ ಕೊಬ್ಬಿದ ಆನೆಯಂತೆ ಗಂಭೀರವಾದ ನಡೆಯಿಂದ ಹೊರಟನು ಶಂಖ ಭೇರೀ ಧ್ವನಿಗಳಿಂದಲೂ, ವೀರರ ಸಿಂಹನಾದಗಳಿಂದಲೂ ದಿಕ್ಕುಗಳೆಲ್ಲವೂ ಮೊಳಗುತ್ತಿದ್ದುವು ಅವರೆಲ್ಲರೂ ಪಶ್ಚಿಮಾಭಿಮುಖವಾಗಿ ಹೊರಟು, ಸರಸ್ವತೀನದಿಗೆ ದಕ್ಷಿಣದಲ್ಲಿ ನಿನ್ನ ಮಗನು ನಿರ್ದೇಶಿಸಿದ ಪವಿತ್ರವಾದ ಮತ್ತು ಉತ್ತಮತೀರ್ಥಗಳಿಂದ ಕೂಡಿದ ಕುರುಕ್ಷೇತ್ರಕ್ಕೆ ಬಂದು ಸೇರಿದರು ಶುದ್ಧವಾದ ಆ ಸ್ಥಳವನ್ನು ಅವರು ಯುದ್ಧಕ್ಕಾಗಿ ನಿರ್ಣಯಿಸಿದರು ಒಡನೆಯೇ ಭೀಮನು ಕವಚವನ್ನು ಧರಿಸಿ, ಗದೆಯನ್ನು ಕೈಗೆತ್ತಿಕೊಂಡು, ಗರುಡನಿಗೆ ಸಮಾನವಾದ ರೂಪದಿಂದ ನಿಂತನು. ಇತ್ತಲಾಗಿ ನಿನ್ನ ಮಗನೂಕೂಡ ಶಿರೋವಸ್ತ್ರವನ್ನು ಸುತ್ತಿ, ಶುದ್ಧಸುವರ್ಣಮಯವಾದ (ಅಚ್ಚ ಬಂಗಾರದ) ಕವಚವನ್ನು ಧರಿಸಿ, ಸ್ವರ್ಣಮಯವಾದ ಮೇರುಪರ್ವತದಂತೆ ಕಾಣಿಸುತ್ತ ನಿಂತನು ಭೀಮ ದುರ್ಯೋಧನರಿಬ್ಬರೂ ಒಬ್ಬರನ್ನೊಬ್ಬರು ಇದಿರಿಸಿ, ಕೋಪಗೊಂಡ ಎರಡು ಮದದಾನೆಗಳಂತೆ ಶೋಭಿಸುತ್ತಿದ್ದರು ಸುತ್ತಲೂ ಅನೇಕ ರಥಿಕರನಡುವೆ ನಿಂತಿದ್ದ ಆ ವೀರರಿಬ್ಬರೂ, ಏಕಕಾಲದಲ್ಲಿ ಉದಿಸಿದ ಚಂದ್ರ ಸೂರ್ಯರಂತೆ ಕಾಣಿಸುತ್ತಿದ್ದರು. ಒಬ್ಬರನ್ನೊಬ್ಬರು ಕೊಲ್ಲುವ ಉದ್ದೇಶದಿಂದ ನಿಂತ ಆ ಭೀಮ ದುರ್ಯೋಧನರಿಬ್ಬರೂ ಕಣ್ಣುಗಳಿಂದಲೇ ಒಬ್ಬರನ್ನೊಬ್ಬರು ದಹಿಸುವಂತೆ ನೋಡುತ್ತ, ಕೋಪದಿಂದ ಒಂದನ್ನೊಂದು ನೋಡುತ್ತಿರುವ ಮಹಾಸರ್ಪಗಳಂತೆ ಕಾಣಿಸಿದರು ಆಗ ನಿನ್ನ ಮಗನಿಗೆ ಮೇಲೆಮೇಲೆ ಕೋಪವೂ, ಯುದ್ಧೋತ್ಸಾಹವೂ ಹೆಚ್ಚಿತು ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ಕಡೆಬಾಯಿಗಳನ್ನು ನಕ್ಕುತ್ತ ಭೀಮಸೇನನನ್ನು ದುರದುರನೆ ನೋಡಿ ಯುದ್ಧಕ್ಕೆ ಕರೆದನು ಭೀಮನೂ ಹಾಗೆಯೇ ತನ್ನ ಉಕ್ಕಿನ ಗದೆಯನ್ನು ಹಿಡಿದು ಕಾಡಿನಲ್ಲಿ ಕೊಬ್ಬಿದ ಸಿಂಹವು ಮತ್ತೊಂದು ಸಿಂಹವನ್ನು ಕರೆಯುವಂತೆ ದುರ್ಯೋಧನನನ್ನು ಯುದ್ಧಕ್ಕೆ ಕರೆದನು ಗದಾಪಾಣಿಗಳಾದ ಅವರಿಬ್ಬರೂ ಶಿಖರಗಳಿಂದ ಕೂಡಿದ ಎರಡು ಪರ್ವತಗಳಂತೆ ಕಾಣಿಸಿದರು. ಇಬ್ಬರೂ ಬಹು ಕೋಪಿಷ್ಠರು! ಭಯಂಕರಪರಾಕ್ರಮಿಗಳು! ಇಬ್ಬರೂ ಬಲರಾಮನಲ್ಲಿ ಗದಾಯುದ್ಧವನ್ನು ಅಭ್ಯಸಿಸಿದವರು! ಇಬ್ಬರೂ ವರುಣನಿಗೆ ಸಮಾನವಾದ ಕಾರ್ಯಸಾಮರ್ಥ್ಯವುಳ್ಳವರು! ಮಹಾಬಲಾಢ್ಯರು!

ಇಬ್ಬರೂ ಶ್ರೀಕೃಷ್ಣನಿಗೂ, ಪರಶುರಾಮನಿಗೂ, ಕುಬೇರನಿಗೂ ಸಮಾನರು! ಮಧುಕೈಟಭರಿಗೂ, ಸುಂದೋಪಸುಂದರಿಗೂ ಸಾಟಿಯಾದವರು. ರಾಮ ರಾವಣರಿಗೂ ವಾಲಿ ಸುಗ್ರೀವರಿಗೂ ಸಮಾನರು! ಕಾಲನಂತೆಯೂ, ಮೃತ್ಯುವಿನಂತೆಯೂ ಶತ್ರುಗಳನ್ನು ಧ್ವಂಸಮಾಡತಕ್ಕವರು! ಶರತ್ಕಾಲದಲ್ಲಿ ಮತ್ತೇರಿದ ಎರಡು ಮಹಾಗಜಗಳು ಒಂದು ಹೆಣ್ಣಾನೆಗಾಗಿ ಇದಿರಿಸಿ ಯುದ್ಧಕ್ಕೆ ನಿಂತಂತೆ ಹೆಮ್ಮೆಯಿಂದ ನಿಂತಿರುವರು ಇಬ್ಬರೂ ಕೋಪವೆಂಬ ವಿಷವನ್ನು ಕಾರುವ ಸರ್ಪಗಳಂತೆಯೂ, ಎರಡು ಸಿಂಹಗಳಂತೆಯೂ ಇದಿರಿದಿರಾಗಿ ನಿಂತಿರುವರು. ಗದಾಯುದ್ಧದಲ್ಲಿ ನಿಪುಣರಾದ ಅವರಿಬ್ಬರೂ ಉಗುರುಗಳನ್ನೂ, ಕೋರೆಹಲ್ಲುಗಳನ್ನೂ ಆಯುಧವಾಗಿ ಉಳ್ಳ ಹೆಬ್ಬುಲಿಗಳಂತೆ ಕಾಣುತ್ತಿರುವರು. ಪ್ರಜಾಸಂಹಾರಕ್ಕಾಗಿ ಪ್ರಳಯಕಾಲದಲ್ಲಿ ಕಲಗಿದ ಮಹಾಸಮುದ್ರಗಳಂತೆಯೂ ಕೋಪಗೊಂಡ ಮಂಗಳಗ್ರಹಗಳಂತೆಯೂ ಕಾಣುವರು! ಪೂರ್ವ ಪಶ್ಚಿಮದಿಕ್ಕುಗಳಲ್ಲಿ ಹುಟ್ಟಿದ ಮೇಘಗಳೆರಡೂ ವರ್ಷಾಕಾಲದಲ್ಲಿ ಅತಿದುರ್ಘಟವಾದ ಮಳೆಯನ್ನು ಕರೆಯುತ್ತ ಗರ್ಜಿಸುವಂತೆ ಒಬ್ಬರನ್ನೊಬ್ಬರು ದುರದುರನೆ ನೋಡುತ್ತ ಗರ್ಜಿಸುವರು! ಪ್ರಳಯಕಾಲದಲ್ಲಿ ಉದಿಸಿದ ಇಬ್ಬರು ಸೂರ್ಯರಂತೆ ಜ್ವಲಿಸುತ್ತಿರುವರು ಸಿಂಹಗಳೂ, ಹುಲಿಗಳೂ, ಮೇಘಗಳೂ, ಗರ್ಜಿಸುವಂತೆ ಒಬ್ಬರನ್ನೊಬ್ಬರು ನೋಡಿ ಗರ್ಜಿಸುವರು ಉರಿಯುವ ಎರಡು ಅಗ್ನಿಗಳಂತೆಯೂ, ಶಿಖರಗಳಿಂದ ಕೂಡಿದ ಎರಡು ಪರ್ವತಗಳಂತೆಯೂ ಇದಿರಿದಿರಾಗಿ ನಿಂತಿರುವರು ಇಬ್ಬರಿಗೂ ಕೋಪದಿಂದ ತುಟಿಗಳು ನಡುಗುತ್ತಿರುವುವು! ಇಬ್ಬರೂ ಕೋಪದಿಂದ ಅನ್ಯೋನ್ಯವಾಗಿ ನೋಡುತ್ತಿರುವರು! ಇಬ್ಬರೂ ವೀರ್ಯೋತ್ಸಾಹದಿಂದ ಕುದುರೆಗಳಂತೆಯೂ, ಆನೆಗಳಂತೆಯೂ, ಗೂಳಿಗಳಂತೆಯೂ ಗರ್ಜಿಸುವರು! ಕೊಬ್ಬಿದ ದೈತ್ಯರಂತೆ ಅವರಿಬ್ಬರೂ ಯುದ್ಧಕ್ಕೆ ನಿಂತಿರುವಾಗ, ದುರ್ಯೋಧನನು ಸೃಂಜಯರ ನಡುವೆ ನಿಂತಿದ್ದ ಧರ್ಮರಾಜನನ್ನು ನೋಡಿ "ಯುಧಿಷ್ಠಿರಾ! ಈಗ ಭೀಮನಿಗೂ, ನನಗೂ ಯುದ್ಧವು ಆರಂಭಿಸಿದೆ ನೀವೆಲ್ಲರೂ ಇಲ್ಲಿಯೇ ಕುಳಿತು ಈ ಯುದ್ಧವನ್ನು ನೋಡುತ್ತಿರಿ" ಎಂದನು. ಆಗ ಅಲ್ಲಿದ್ದ ರಾಜಸಮೂಹವೆಲ್ಲವೂ ಒಂದಾಗಿ ಸೇರಿ ಕುಳಿತು ಆಕಾಶ

ದಲ್ಲಿ ಸೂರ್ಯಮಂಡಲದಂತೆ ಕಾಂತಿವಿಶಿಷ್ಟವಾಗಿದ್ದಿತು. ಅವರ ನಡುವೆ ಬಲರಾಮನು ಎಲ್ಲರಿಂದಲೂ ಗೌರವಿಸಲ್ಪಡುತ್ತ, ನಕ್ಷತ್ರಗಳಿಂದ ಪರಿವೃತನಾದ ಚಂದ್ರನಂತೆ ಕಾಣಿಸುತ್ತಿದ್ದನು. ಭೀಮ ದುರ್ಯೋಧನರಿಬ್ಬರೂ ಗದೆಯನ್ನು ಹಿಡಿದು ನಿಂತು, ಮೊದಲು ವಾಗ್ಯುದ್ಧವನ್ನಾರಂಭಿಸಿ, ಒಬ್ಬರಿಗೊಬ್ಬರು ಮರ್ಮಭೇದಕಗಳಾದ ಮಾತಿನಿಂದ ನೋಯಿಸುತ್ತ ಯುದ್ಧಕ್ಕೆ ನಿಂತ ಇಂದ್ರ ವೃತ್ರರಂತೆ ಒಬ್ಬರನ್ನೊಬ್ಬರು ನೋಡುತ್ತಿದ್ದರು.

ಇದು ಐವತ್ತಾರನೆಯ ಅಧ್ಯಾಯವು.

## ಭೀಮ ದುರ್ಯೋಧನರ ವೀರವಾದಗಳು

ಓ ಜನಮೇಜಯರಾಜಾ! ಆಮೇಲೆ ಭೀಮ ದುರ್ಯೋಧನರಿಗೆ ಮಾತಿನಿಂದ ಪ್ರಬಲವಾದ ಯುದ್ಧವು ಆರಂಭಿಸಿತು ಈ ಸಂಗತಿಯನ್ನು ಕೇಳಿದೊಡನೆ ಧೃತರಾಷ್ಟ್ರನು ಮಹಾವ್ಯಸನದಿಂದ ಸಂಜಯನೊಡನೆ ಹೀಗೆಂದು ಹೇಳುವನು 'ಛೀ! ಮನುಷ್ಯಜನ್ಮವನ್ನು ಸುಡಬೇಕು. ಅವನಿಗೆ ಎಂತಹ ಕ್ರೂರಪ್ರಯತ್ನದಲ್ಲಿ ಮನಸ್ಸು ಪ್ರವರ್ತಿಸುವುದು? ಇದಕ್ಕೆ ಬೇರ ನಿದರ್ಶನವೇಕೆ? ಸಂಜಯಾ! ನನ್ನ ಮಗನಾದರೋ ಹನ್ನೊಂದಕ್ಷೌಹಿಣೀಸೈನ್ಯಗಳಿಗೆ ಒಡೆಯನು ಎಲ್ಲಾ ರಾಜರನ್ನೂ ತನಗೆ ಅಧೀನವಾಗಿ ಮಾಡಿಕೊಂಡು ಆಜ್ಞಾಪಿಸುತಿದ್ದವನು ಈ ಭೂಮಿಯನ್ನೆಲ್ಲ ಯಥೇಚ್ಛವಾಗಿ ಅನುಭವಿಸುತಿದ್ದವನು ಇಂತಹ ಉತ್ತಮಸ್ಥಿತಿಯಲ್ಲಿದ್ದ ನನ್ನ ಮಗನು, ಈಗ ಗದೆಯನ್ನು ಹೆಗಲಮೇಲಿಟ್ಟುಕೊಂಡು ಒಂಟಿಯಾಗಿ ಕಾಲ್ನಡೆಯಿಂದ ಯುದ್ಧಭೂಮಿಯನ್ನು ಬಿಟ್ಟು ಹೋದನಲ್ಲ! ಜಗತ್ತಿಗೆಲ್ಲ ನಾಥನೆನಿಸಿದ ನನ್ನ ಪುತ್ರನು ಅನಾಥನಂತೆ ಗದೆಯನ್ನು ಹೊತ್ತುಕೊಂಡು ಹೋದನೆಂದರ, ಇವೆಲ್ಲವೂ ದುರದೃಷ್ಟವಲ್ಲದೆ ಬೇರೇನು? ಅಂತೂ ಓ ಸಂಜಯಾ! ನನ್ನ ಮಗನು ಮಹತ್ತಾದ ದುಃಖಕ್ಕೆ ಗುರಿಯಾದನು' ಎಂದು ಹೇಳಿ ಧೃತರಾಷ್ಟ್ರನು ವ್ಯಸನದಿಂದ ಸುಮ್ಮನಾದನು ಆಗ ಸಂಜಯನು ಧೃತರಾಷ್ಟ್ರನನ್ನು ಕುರಿತು 'ಮಹಾರಾಜಾ! ಮೇಘಧ್ವನಿಯಂತೆ ಗಂಭೀರವಾದ ಧ್ವನಿಯುಳ್ಳ ನಿನ್ನ ಮಗನು ಸಂತೋಷದಿಂದ ಗರ್ಜಿಸುವ

ಮಹಾವೃಷಭದಂತೆ ಆಗಲೂ ತನ್ನ ವೀರ್ಯದ ಕೆಚ್ಚನ್ನು ಬಿಡದೆ ಭೀಮನನ್ನು ಕರೆಯುತ್ತಿರುವಾಗಲೇ ಅಲ್ಲಲ್ಲಿ ನಾನಾವಿಧದ ಉತ್ಪಾತಗಳು ಕಾಣಿಸತೊಡಗಿದುವು. ಸಿಡಿಲಿನ ಧ್ವನಿಯೊಡನೆ ಬಿರುಗಾಳಿಗಳು ಬೀಸಿದುವು. ದೊಡ್ಡ ಧೂಳಿನ ಮಳೆಯು ಸುರಿಯಲಾರಂಭಿಸಿತು ಎಲ್ಲಾ ದಿಕ್ಕುಗಳೂ ಅಂಧಕಾರದಿಂದ ಮುಚ್ಚಿದಂತಾದುವು ಆಕಾಶದಿಂದ ಮಹಾಧ್ವನಿಯೊಡನೆ ನೂರಾರು ಉಲ್ಕೆಗಳು ದಿಕ್ಕುಗಳನ್ನು ಭೇದಿಸುವಂತೆ ಬೀಳುತ್ತಿದ್ದುವು. ಪರ್ವಕಾಲವಿಲ್ಲದಿದ್ದಾಗ ರಾಹುವು ಸೂರ್ಯನನ್ನು ಹಿಡಿದಂತೆ ಗ್ರಹಣವು ಕಾಣಿಸಿತು ದೊಡ್ಡ ಭೂಕಂಪವುಂಟಾದಂತೆ ಭೂಮಿಯು ನಡುಗಿತು ಮರಳಿನ ವರ್ಷದೊಡನೆ ಪ್ರಚಂಡವಾದ ಗಾಳಿಯು ಬೀಸಿತು ಬೆಟ್ಟದ ಶಿಖರಗಳು ತಾವಾಗಿ ಉರುಳಿದುವು ವಿವಿಧಾಕಾರವುಳ್ಳ ಮೃಗಗಳು ನಾನಾ ಕಡೆಗಳಿಂದ ಬರುತ್ತಿದ್ದುವು ಭಯಂಕರವಾಗಿ ಉರಿಯುವ ಬಾಯುಳ್ಳ ನರಿಗಳು ಅಲ್ಲಲ್ಲಿ ಊಳಿಡುತ್ತಿದ್ದುವು ಸಿಡಿಲುಗಳು ಬೀಳುತಿದ್ದುವು ದಿಕ್ಕುಗಳೆಲ್ಲ ಉರಿಯುವಂತೆ ಕಾಣಿಸಿದುವು ಮೃಗಗಳು ಅಮಂಗಳವನ್ನು ಸೂಚಿಸುವಂತೆ ಕೂಗಿಡುತ್ತಿದ್ದುವು. ಕೊಳದ ನೀರು ಇದ್ದಕ್ಕಿದ್ದಹಾಗೆ ಉಕ್ಕಿಬಂದಿತು. ಭಯಂಕರಗಳಾದ ಅಶರೀರಧ್ವನಿಗಳು ಕೇಳಿಸಿದುವು ಇಂತಹ ದುರ್ನಿಮಿತ್ತಗಳನ್ನೆಲ್ಲ ಕಂಡು ಭೀಮನು ಸಮೀಪದಲ್ಲಿದ್ದ ಅಣ್ಣನಾದ ಯುಧಿಷ್ಠಿರನನ್ನು ನೋಡಿ ' ಅಣ್ಣಾ ! ಈಗ ದುರಾತ್ಮನಾದ ದುರ್ಯೋಧನನನ್ನೇನೋ ನಾನು ಜಯಿಸಬಲ್ಲೆನು ನಿಶ್ಚಯವಾಗಿಯೂ ಜಯಿಸುವೆನು ಬಹುಕಾಲದಿಂದ ನನ್ನ ಹೃದಯಗುಹೆಯಲ್ಲಿ ಅಡಗಿಸಿಟ್ಟಿರುವ ಕೋಪವನ್ನೆಲ್ಲ ಈಗ ಹೊರಗೆ ಬಿಡುವೆನು ಅರ್ಜುನನು ಖಾಂಡವವನದಲ್ಲಿ ಅಗ್ನಿಯನ್ನು ಬಿಟ್ಟಹಾಗೆ, ಈಗ ನಾನು ನನ್ನ ಕೋಪಾಗ್ನಿಯನ್ನು ದುರ್ಯೋಧನನಮೇಲೆ ಬಿಡುವೆನು ಅಣ್ಣಾ ! ನಿನ್ನ ಹೃದಯದಲ್ಲಿರುವ ದುಃಖಶಲ್ಯವನ್ನು ಈಗ ಕಿತ್ತುಹಾಕುವೆನು ನೋಡು ಈಗಲೇ ಪಾಪಿಯಾದ ಈ ಕುರುಕುಲಾಂತಕನನ್ನು ನನ್ನ ಗದೆಯಿಂದ ಬಡಿದು ನಿನಗೆ ಕೀರ್ತಿರೂಪವಾದ ಮಾಲೆಯನ್ನಿಟ್ಟು ಅಲಂಕರಿಸುವೆನು ಈಗಲೇ ನಾನು ಆ ಪಾಪಿಯ ತೊಡೆಯನ್ನು ಯುದ್ಧದಲ್ಲಿ ನನ್ನ ಗದೆಯಿಂದ ಮುರಿಯುವೆನು ಈ ದುರ್ಯೋಧನನೇನೋ ತಿರುಗಿ ಇಲ್ಲಿಂದ ಹಸ್ತಿನಾವತಿಗೆ ಹೋಗಲಾರನು

ಹಿಂದೆ ಅವನು ನನ್ನ ಹಾಸಿಗೆಯಲ್ಲಿ ವಿಷಸರ್ಪಗಳನ್ನು ಬಿಟ್ಟು ಕಚ್ಚಿಸಿದುದು, ಅನ್ನದಲ್ಲಿ ವಿಷವನ್ನು ಕಲೆಸಿ ನನಗೆ ಕೊಟ್ಟುದು, ಸಭೆಯಲ್ಲಿ ನನ್ನನ್ನು ನೋಡಿ ಪರಿಹಾಸ್ಯಮಾಡಿದುದು, ಜೂಜಿನ ನೆವದಿಂದ ನಮ್ಮ ಸರ್ವಸ್ವವನ್ನೂ ಅಪಹರಿಸಿದುದು, ಹನ್ನೆರಡುವರ್ಷಗಳ ವನವಾಸವನ್ನೂ, ಒಂದು ವರ್ಷದ ಅಜ್ಞಾತವಾಸವನ್ನೂ ನಮಗೆ ನಿರ್ಣಯಿದುದು, ಈ ನಮ್ಮ ಎಲ್ಲಾ ದುಃಖಗಳನ್ನೂ ಈಗ ಕೊನೆಮುಟ್ಟಿಸುವ ಕಾಲವು ಬಂದಿದೆ ಈ ಮಧ್ಯಾಹ್ನದೊಳಗಾಗಿ ಆ ಪಾಪಿಯನ್ನು ಕೊಂದು ನನ್ನಮೇಲಿನ ಋಣವನ್ನು ನಾನು ತೀರಿಸಿಕೊಳ್ಳುವೆನು ದುರ್ಬುದ್ಧಿಯುಳ್ಳ ಆ ಧಾರ್ತರಾಷ್ಟ್ರನ ಆಯುಸ್ಸು ಇಂದಿಗೆ ತೀರಿತು ಅವನಿಗೆ ತಂದೆತಾಯಿಗಳನ್ನು ನೋಡುವ ಭಾಗ್ಯವೂ ಇಂದಿಗೆ ತೀರಿತು ಅವನ ಸೌಖ್ಯವೆಲ್ಲ ಇಂದಿಗೆ ಕೊನೆಗಂಡಿತು ಅವನು ತನ್ನ ಪತ್ನಿಯರ ಮುಖವನ್ನು ನೋಡುವ ಅದೃಷ್ಟವೂ ಈಗಲೇ ಮುಗಿಯಿತು ಈಗಲೇ ನಾನು ಆ ದುರ್ಯೋಧನನ ಪ್ರಾಣಗಳನ್ನೂ, ಐಶ್ವರ್ಯವನ್ನೂ, ರಾಜ್ಯವನ್ನೂ ಕಿತ್ತುಕೊಳ್ಳುವೆನು ಅವನು ಸಮಸ್ತವನ್ನೂ ತೊರೆದು ಭೂಮಿಯಲ್ಲಿ ಮಲಗುವಂತೆ ಮಾಡುವೆನು ಈ ದಿನವೇ ಧೃತರಾಷ್ಟ್ರನು ತನ್ನ ಪುತ್ರನ ಮರಣವನ್ನು ಕೇಳಿ ಶಕುನಿಯ ದುರ್ಮಂತ್ರಗಳಿಂದ ತನಗೆ ಉಂಟಾದ ಅನರ್ಥವೇನೆಂಬುದನ್ನು ಸ್ಮರಣೆಗೆ ತಂದುಕೊಳ್ಳಲಿ' ಹೀಗೆಂದು ಹೇಳಿ ಭೀಮನು ಗದೆಯನ್ನೆತ್ತಿಕೊಂಡು ಇಂದ್ರನು ವೃತ್ರನನ್ನು ಹೇಗೋ ಹಾಗೆ ನಿನ್ನ ಮಗನನ್ನು ಯುದ್ಧಕ್ಕೆ ಕರೆದನು ತನ್ನಂತೆಯೇ ಗದೆಯನ್ನು ಹಿಡಿದು ಕೈಲಾಸಶಿಖರದಂತೆ ನಿಂತಿರುವ ದುರ್ಯೋಧನನನ್ನು ನೋಡಿ ತಿರುಗಿ ಕೋಪದಿಂದ ಭೀಮನು ಹೀಗೆಂದು ಹೇಳುವನು 'ಎಲ! ದುರ್ಯೋಧನಾ! ಹಸ್ತಿನಾವತಿಯಲ್ಲಿ ನಿನ್ನ ತಂದೆಯಾದ ಧೃತರಾಷ್ಟ್ರನೂ, ನೀನೂ ನಮ್ಮ ವಿಷಯದಲ್ಲಿ ಎಂತೆಂತಹ ದುಷ್ಕೃತ್ಯಗಳನ್ನು ಮಾಡಿದಿರೋ ಅವನ್ನೆಲ್ಲ ನೆನಪಿಗೆ ತಂದುಕೊಳ್ಳಿರಿ ರಜಸ್ವಲೆಯಾದ ದ್ರೌಪದಿಯನ್ನು ಸಭಾಮಧ್ಯಕ್ಕೆ ಸೆಳೆದು ಅವಮಾನಗೊಳಿಸಿದಿರಿ! ನೀನೂ, ಶಕುನಿಯೂ ಸೇರಿ ಜೂಜಿನಲ್ಲಿ ನಮ್ಮ ರಾಜನನ್ನು ವಂಚಿಸಿದಿರಿ! ಕಾಡಿನಲ್ಲಿಯೂ ನಮ್ಮನ್ನು ನಾನಾವಿಧವಾದ ದುಃಖಕ್ಕೆ ಗುರಿಮಾಡಿದಿರಿ ನಾವು ಕಣ್ಣಿಗೆ ಕಾಣಿಸದೆ ತಲೆಮರೆಸಿಕೊಂಡು

ವಿರಾಟನಗರದಲ್ಲಿದ್ದಾಗಲೂ ನಮಗೆ ಎಷ್ಟೋ ವಿಧದಿಂದ ಉಪದ್ರವಗಳನ್ನು ಕೊಟ್ಟೆ! ದುರ್ಯೋಧನಾ! ಅದನ್ನೆಲ್ಲ ಈಗ ಕಕ್ಕಿಸುವೆನು. ದೈವಾಧೀನದಿಂದ ನೀನು ನನ್ನ ಕಣ್ಣಿಗೆ ಸಿಕ್ಕಿರುವೆ ಎಲ ದುರ್ಮತೀ! ನಿನ್ನ ದೆಸೆಯಿಂದಲೇ ರಥಿಕಶ್ರೇಷ್ಠನೂ, ಗಂಗಾಪುತ್ರನೂ ಆದ ನಮ್ಮ ಪಿತಾಮಹನು ಶಿಖಂಡಿಯಿಂದ ಹತನಾಗಿ ಬಾಣದ ಹಾಸಿಗೆಯಲ್ಲಿ ಮಲಗಿರುವನು. ನಿನ್ನ ದೆಸೆಯಿಂದಲೇ ಪ್ರತಾಪಶಾಲಿಗಳೆನಿಸಿದ ದ್ರೋಣ, ಕರ್ಣ, ಶಲ್ಯರೂ ಪ್ರಾಣವನ್ನು ಬಿಟ್ಟರು ನಮ್ಮಲ್ಲಿ ಮೊದಲು ವೈರವೆಂಬ ಬೆಂಕಿಯನ್ನು ಹತ್ತಿಸಿಟ್ಟ ಶಕುನಿಯೂ ಹತನಾದನು ನಿನ್ನ ಆಜ್ಞೆಯಮೇಲೆ ದ್ರೌಪದಿಯನ್ನು ಸಭಾಮಧ್ಯಕ್ಕೆ ಸೆಳೆತರಲು ಹೋದ ಪ್ರಾತಿಕಾಮಿಯೂ ಹತನಾದನು. ಶೂರರಾದ ನಿನ್ನ ಒಡಹುಟ್ಟಿದವರೆಲ್ಲರೂ ಸತ್ತರು ಇನ್ನೂ ಅನೇಕ ರಾಜರು ನಿನ್ನ ದೆಶೆಯಿಂದ ಮೃತರಾದರು ಇಂತಹ ಪಾಪಿಯಾದ ನಿನ್ನನ್ನೂ ಈಗ ನಾನು ನನ್ನ ಗದೆಯಿಂದ ಸಂಹರಿಸುವೆನು ಇದರಲ್ಲಿ ಸಂದೇಹವೇ ಇಲ್ಲ' ಎಂದನು ಹೀಗೆ ಆರ್ಭಟಿಸಿ ಕೂಗುತ್ತಿರುವ ಭೀಮನನ್ನು ನೋಡಿ ನಿನ್ನ ಮಗನು ಮನಸ್ಸಿನಲ್ಲಿ ಸ್ವಲ್ಪವಾದರೂ ಭಯವಿಲ್ಲದೆ 'ವೃಕೋದರಾ! ಸುಮ್ಮನೆ ಹೀಗೆ ಆತ್ಮಸ್ತುತಿಯನ್ನು ಮಾಡಿಕೊಂಡು ಬಗುಳುವುದರಲ್ಲಿ ಫಲವೇನು? ಬಾ! ಮುಂದೆ ಬಾ! ಯುದ್ಧ ಮಾಡು ಎಲೆ ಕುಲಾಧಮಾ! ನಿನಗಿರುವ ಯುದ್ಧದಾತುರವನ್ನು ಇಂದಿಗೆ ನಾನು ಮುಗಿಸಿಬಿಡುವೆನು ಅಲ್ಪಬಲವುಳ್ಳ ನೀನು ಸಾಮಾನ್ಯವಾದ ಪ್ರಾಕೃತ ಮನುಷ್ಯನನ್ನು ಬಾಯಿಮಾತಿನಿಂದ ಬೆದರಿಸುವಂತೆ ನನ್ನನ್ನು ಹೆದರಿಸುವೆ! ಇದು ನಿನಗೆ ಸಾಧ್ಯವಲ್ಲ ಬಹುಕಾಲದಿಂದ ನಿನ್ನೊಡನೆ ಗದಾಯುದ್ಧವನ್ನು ಮಾಡಬೇಕೆಂಬ ಆಶೆಯು ನನ್ನ ಮನಸ್ಸಿನಲ್ಲಿದ್ದಿತು ಈಗ ದೈವಗತಿಯಿಂದ ಅದು ಸಂಘಟಿಸಿತು ಎಲ ದುರ್ಮತೀ! ಬರೀ ಬಾಯಿಬಡಿಯುವುದರಿಂದ ಪ್ರಯೋಜನವೇನು? ಈ ಹರಟೆಯನ್ನು ತಗ್ಗಿಸು ಕಾರ್ಯದಿಂದ ನಿನ್ನ ಪರಾಕ್ರಮವನ್ನು ತೋರಿಸು ವಿಳಂಬ ಮಾಡಬೇಡ' ಎಂದನು. ನಿನ್ನ ಮಗನ ಈ ಧೀರವಾಕ್ಯನ್ನು ಕೇಳಿ, ಸೋಮಕರು ಮೊದಲಾಗಿ ಅಲ್ಲಿ ನೆರೆದಿದ್ದ ಎಲ್ಲಾ ರಾಜರೂ ಅವನನ್ನು ಕೊಂಡಾಡಿದರು ಹೀಗೆ ಎಲ್ಲರಿಂದಲೂ ಗೌರವಿಸಲ್ಪಡುತ್ತ ದುರ್ಯೋಧನನು ಯು

ದ್ಧಕ್ಕೆ ಧೈರ್ಯದಿಂದ ಮುಂದಾದನು  ಸುತ್ತಲೂ ಇದ್ದ ರಾಜರೆಲ್ಲರೂ ಕರತಾಡನಗಳಿಂದ ಅವನನ್ನು ಉತ್ಸಾಹಗೊಳಿಸಿದರು  ಇಷ್ಟರಲ್ಲಿ ಮಹಾ ಬಲವುಳ್ಳ ಭೀಮನೂ ಕೂಡ ಗದೆಯನ್ನೆತ್ತಿಕೊಂಡು ಬಲಾಢ್ಯನಾದ ನಿನ್ನ ಮಗನನ್ನು ಇದಿರಿಸಿ ಬಂದನು  ಆಗ ಪಾಂಡವಸೈನ್ಯದಲ್ಲಿ ಜಯೋತ್ಸಾಹ ದಿಂದ ಆನೆಗಳು ಗರ್ಜಿಸಿದುವು  ಕುದುರೆಗಳು ಸಂತೋಷದಿಂದ ಕೆನೆದುವು  ಶಸ್ತ್ರಗಳು ಕಾಂತಿಯಿಂದ ಜ್ವಲಿಸುತ್ತಿದ್ದುವು

ಇದು ಐವತ್ತೇಳನೆಯ ಅಧ್ಯಾಯವು



## ಭೀಮ ದುರ್ಯೋಧನರ ಗದಾಯುದ್ಧವರ್ಣನೆ

ಆಮೇಲೆ ದೃಢಮನಸ್ಸುಳ್ಳ ದುರ್ಯೋಧನನು ಭೀಮಸೇನನನ್ನು ಕಂಡು ಗರ್ಜಿಸುತ್ತ ಅತಿವೇಗದಿಂದ ಅವನಿಗಿದಿರಾಗಿ ಓಡಿದನು. ಅವರು ಕೊಂಬುಗಳುಳ್ಳ ಎರಡು ವೃಷಭಗಳಂತೆ ಒಬ್ಬರಮೇಲೊಬ್ಬರು ನುಗ್ಗಿದರು ಅವರ ಪ್ರಹಾರಗಳ ಶಬ್ದವು ದೊಡ್ಡ ಗುಡುಗಿನಂತೆ ಕೇಳಿಸಿತು  ಇಂದ್ರ ಪ್ರಹ್ಲಾದರಂತೆ ಒಬ್ಬರನ್ನೊಬ್ಬರು ಹಿಡಿದುಕೊಳ್ಳಬೇಕೆಂದು ಮುಂದೆಬಿದ್ದ ಆ ಇಬ್ಬರಿಗೂ ರೋಮಾಂಚವನ್ನುಂಟುಮಾಡುವ ಮಹಾಯುದ್ಧವು ನಡೆಯಿತು  ಗದೆಯನ್ನು ಕೈಯಲ್ಲಿ ಹಿಡಿದು ರಕ್ತದಿಗ್ಧಗಾತ್ರರಾದ ಆ ಇಬ್ಬರೂ ಪುಷ್ಪಿಸಿರುವ ಪಲಾಶವೃಕ್ಷಗಳಂತೆ ಕಾಣಿಸಿದರು  ಆ ಭಯಂಕರವಾದ ಮಹಾಯುದ್ಧವು ನಡೆಯುತ್ತಿರುವಾಗ, ಆಕಾಶವು ಮಿಂಚುಹುಳಗಳಿಂದ ತುಂಬಿದಂತೆ ದರ್ಶನೀಯವಾಗಿದ್ದಿತು  ಅಂತಹ ಸಂಕುಲ ಯುದ್ಧವು ನಡೆಯುತ್ತಿರುವಾಗ ನಡುವೆ ಅವರಿಬ್ಬರಿಗೂ ಬಳಲಿಕೆ ತೋರಿತು  ಇಬ್ಬರೂ ಮುಹೂರ್ತಕಾಲದವರೆಗೆ ವಿಶ್ರಾಂತಿಯನ್ನು ತೆಗೆದುಕೊಂಡು, ತಿರುಗಿ ವಿಚಿತ್ರವಾದ ತಮ್ಮ ಗದೆಗಳನ್ನೆತ್ತಿಕೊಂಡು ಯುದ್ಧಮಾಡತೊಡಗಿದರು. ಹೆಣ್ಣಾನೆಯ ನಿಮಿತ್ತವಾಗಿ ಹೋರಾಡುವ ಎರಡು ಗಂಡಾನೆಗಳಂತೆ ಸಮಾನವೀರ್ಯವುಳ್ಳ ಅವರಿಬ್ಬರೂ ಕೈಯಲ್ಲಿ ಗದೆಯನ್ನೆತ್ತಿ ನಿಂತಿರುವುದನ್ನು ನೋಡಿ, ದೇವ ದಾನವ ಗಂಧರ್ವರೆಲ್ಲರೂ ಬೆರಗಾದರು. ಎಲ್ಲಾ ಪ್ರಾಣಿಗಳಿಗೂ ಅವರ ಜಯದಲ್ಲಿ ಸಂಶಯವು ಹುಟ್ಟಿತು. ಪರ

ಸ್ಪರಸೋದರರಾಗಿದ್ದೂ ಅವರು ಒಬ್ಬರನ್ನೊಬ್ಬರು ಕೊಲ್ಲುವುದಕ್ಕಾಗಿ ಹೊಂಚುಹಾಕುತ್ತಿದ್ದರು ಅವರಿಬ್ಬರೂ ಯಮದಂಡದಂತೆಯೂ, ಇಂದ್ರನ ವಜ್ರಾಯುಧದಂತೆಯೂ ಭಯಂಕರವೂ, ಶತ್ರುನಾಶಕವೂ ಆದ ಗದಾಯುಧಗಳನ್ನು ಹಿಡಿದು ನಿಂತಿರುವುದನ್ನು ಜನರೆಲ್ಲ ಬೆರಗಾಗಿ ನೋಡುತಿದ್ದರು. ಯುದ್ಧದಲ್ಲಿ ಭೀಮನು ಗದೆಯನ್ನು ಸುತ್ತಿಸುವಾಗ, ಒಂದು ಮುಹೂರ್ತಕಾಲದವರೆಗೆ ಘೋರವಾದ ಶಬ್ದವುಂಟಾಯಿತು ಆಗ ದುರ್ಯೋಧನನೂ ತನ್ನಿದಿರಾಗಿ ಬರುತ್ತಿರುವ ಭೀಮನನ್ನೂ, ಎಣೆಯಿಲ್ಲದ ವೇಗವುಳ್ಳ ಅವನ ಗದೆಯನ್ನೂ ನೋಡಿ ವಿಸ್ಮಿತನಾದನು ವೃಕೋದರನಾದರೋ ವಿಚಿತ್ರಮಂಡಲ ಸಂಚಾರಗಳಿಂದ ನೋಡುವವರಿಗೆ ಆಶ್ಚರ್ಯವುಂಟುಮಾಡುವಂತೆ ಕಾಣಿಸುತಿದ್ದನು ಆಹಾರಕ್ಕಾಗಿ ಹೊಂಚುಹಾಕುವ ಎರಡು ಬೆಕ್ಕುಗಳಂತೆ ಅವರಿಬ್ಬರೂ ಒಬ್ಬರನ್ನೊಬ್ಬರು ಕೊಲ್ಲುವ ಪ್ರಯತ್ನಕ್ಕಾಗಿ ಹೊಂಚುಹಾಕುತ್ತಿದ್ದರು ಆಗ ಭೀಮಸೇನನು ವಿಚಿತ್ರವಾದ ಮಂಡಲಗತಿಗಳು, ಹಿಂದುಮುಂದಕ್ಕೆ ಸರಿಯುವ ಗತಪ್ರತ್ಯಾತಗಳು, ಗೋಮೂತ್ರಿಕಗತಿಗಳು, ಆಗಾಗ ಅಲ್ಲಲ್ಲಿ ನಿಲ್ಲುವ ರೀತಿಗಳು, ಇವುಗಳಿಂದ ವಿಚಿತ್ರವಾಗಿ ಸಂಚರಿಸುತ್ತಿದ್ದನು ಗದಾಯುದ್ಧದಲ್ಲಿ ಸುಶಿಕ್ಷಿತರಾದ ಅವರಿಬ್ಬರೂ ಆಯುಧಗಳನ್ನು ಬೀಸುವುದು, ಆಗಾಗ ಹೊಡೆದಾಟವನ್ನು ನಿಲ್ಲಿಸುವುದು, ಸುತ್ತಿ ಓಡುವುದು, ಇದಿರಿಸಿ ಬರುವುದು, ಹೀಗೆಯೇ ಆಕ್ಷೇಪ, ಅವಸ್ಥಾಪನ, ವಿಗ್ರಹ, ಮತ್ಸ್ಯೋದ್ವೃತ್ತ, ಗುರುವೃತ್ತ, ಅವಪ್ಲುತ, ಉಪಪ್ಲುತ, ಉಪನ್ಯಸ್ತ, ಅಪನ್ಯಸ್ತ, ಮುಂತಾದ ನಾನಾಬಗೆಯ ವರಿಸೆಗಳಿಂದ ಒಬ್ಬರನ್ನೊಬ್ಬರು ಪ್ರಹರಿಸುತ್ತಿದ್ದರು. ಆಗಾಗ ಒಬ್ಬರನ್ನೊಬ್ಬರು ಹೊಂಚುಹಾಕಿ ಹೊಡೆಯುವರು ಇದಿರಾಳಿಯ ಪ್ರಹಾರವನ್ನು ಉಪಾಯದಿಂದ ತಪ್ಪಿಸಿಕೊಂಡು ಅವನನ್ನು ವಂಚಿಸುವರು ತಿರುಗಿ ವಿವಿಧಗತಿಗಳಿಂದ ಸುತ್ತಿಬರುವರು ಹೀಗೆ ಅವರಿಬ್ಬರೂ ಯುದ್ಧಕ್ರೀಡೆಗಳನ್ನೆಲ್ಲ ತೋರಿಸುತ್ತಿದ್ದರು ಎರಡು ಮಹಾಗಜಗಳು ತಮ್ಮ ಕೊಂಬುಗಳಿಂದ ಒಂದನ್ನೊಂದು ಹೊಡೆಯುವಂತೆ ಗದೆಗಳಿಂದ ಹೊಡೆದು ಇಬ್ಬರೂ ರಕ್ತದಿಂದ ತೊಯ್ದು ಮೈಯೊಡನೆ ಕಾಣಿಸುತಿರ್ದರು. ಅವರಿಬ್ಬರಿಗೂ ಮಧ್ಯಾಹ್ನದಮೇಲೆ ಇಂದ್ರವೃತ್ರರಿಗೆ ಹೇಗೋಹಾಗೆ ಭಯಂಕರ ಯುದ್ಧವಾ

ಯಿತು. ವಿಚಿತ್ರಗತಿಗಳಿಂದ ಯುದ್ಧಕ್ರೀಡೆಯನ್ನಾಡುತಿದ್ದ ಅವರಿಬ್ಬರೂ ಮಂಡಲಗತಿಗಳನ್ನು ಹಿಡಿದು ಗದಾಪಾಣಿಗಳಾಗಿ ಹೋರಾಡುವಾಗ, ದುರ್ಯೋಧನನು ಬಲಕ್ಕೂ, ಭೀಮಸೇನನು ಎಡಕ್ಕೂ ಸುತ್ತಿಬರುತ್ತ, ಇಬ್ಬರೂ ಸಂಧಿಸಿದಾಗ, ನಿನ್ನ ಮಗನು ತನ್ನ ಗದೆಯಿಂದ ಭೀಮನ ಪಾರ್ಶ್ವಭಾಗಕ್ಕೆ ಹೊಡೆದನು ಆದರೇನು? ಭೀಮನು ಆ ಪ್ರಹಾರವನ್ನು ಲಕ್ಷ್ಯಮಾಡದೆ, ತನ್ನ ಮಹಾಗದೆಯನ್ನು ಕೈಯಿಂದ ಸುತ್ತಿಸುತಿದ್ದನು ಇಂದ್ರನ ವಜ್ರದಂತೆಯೂ, ಯಮದಂಡದಂತೆಯೂ ಘೋರವಾಗಿ ಭೀಮನ ಕೈಯಲ್ಲಿ ಆಡುತಿದ್ದ ಆ ಗದೆಯನ್ನು ನೋಡಿ ಎಲ್ಲರಿಗೂ ಭೀತಿ ಹುಟ್ಟಿತು ಗದೆಯನ್ನು ಬೀಸುತ್ತ ಬರುವ ಭೀಮನನ್ನು ನೋಡಿದೊಡನೆ ನಿನ್ನ ಮಗನೂ ಕೋಪದಿಂದ ತನ್ನ ಗದೆಯನ್ನು ಸುತ್ತಿಸುತ್ತ ಮುಂದೆ ಬಂದನು ನಿನ್ನ ಮಗನು ಆ ಗದೆಯನ್ನು ಸುತ್ತಿಸಿದಾಗ ಉಂಟಾದ ಗಾಳಿಯ ವೇಗದಿಂದಲೇ ಭಯಂಕರವಾದ ಶಬ್ದವೊಂದುಂಟಾಯಿತು ಆ ಗದೆಯಿಂದ ಕಿಡಿಗಳು ಹೊರಡಲಾರಂಭಿಸಿದುವು ವಿವಿಧಗತಿಗಳಿಂದ ಸುತ್ತಿಸುತ್ತಿಬರುತ್ತಿದ್ದ ನಿನ್ನ ಮಗನು, ಭೀಮನಿಗಿಂತಲೂ ಮೇಲೆಂಬ ಭಾವನೆಯು ಜನಗಳಲ್ಲಿ ಹುಟ್ಟುತಿತ್ತು ಅದರಂತೆಯೇ ಅತ್ತಲಾಗಿ ಭೀಮನು ಬೀಸುತ್ತಿದ್ದ ದೊಡ್ಡ ಗದೆಯಿಂದ ಭಯಂಕರ ಶಬ್ದವೂ, ಉಗ್ರಜ್ವಾಲೆಯೂ ಹೊರಡುತಿದ್ದುವು. ದುರ್ಯೋಧನನು ಅಯೋಮಯವಾದ ತನ್ನ ಗದೆಯನ್ನು ತಿರುಗಿಸುತ್ತ ಬಂದನು ಆ ದುರ್ಯೋಧನನ ಗದಾವೇಗವು ಪಾಂಡವರಿಗೂ, ಸಾತ್ಯಕಿ ಮೊದಲಾದವರಲ್ಲರಿಗೂ ಭೀತಿಜನಕವಾಯಿತು ಕೊನೆಗೆ ಭೀಮ ದುರ್ಯೋಧನರಿಬ್ಬರೂ ಸಮೀಪಿಸಿ ಒಬ್ಬರನ್ನೊಬ್ಬರು ಗದೆಯಿಂದ ಹೊಡೆದರು ಯುದ್ಧಕ್ಕೆ ಎದೆಗೊಟ್ಟು ನಿಶ್ಚಲನಾಗಿ ನಿಂತಿದ್ದ ಭೀಮನನ್ನು ನೋಡಿ, ನಿನ್ನ ಮಗನು ಆಶ್ಚರ್ಯಗತಿಗಳಿಂದ ಮೇಲೆಮೇಲೆ ಪ್ರಹರಿಸುವುದಕ್ಕೆ ಹೊಂಚುಹಾಕಿ ಬರುತಿದ್ದನು ಇಷ್ಟರಲ್ಲಿ ಭೀಮನು ಕೋಪದಿಂದ ದುರ್ಯೋಧನನ ಗದೆಯನ್ನು ತನ್ನ ಗದೆಯಿಂದ ಹೊಡೆದನು ಈ ಎರಡು ಗದಗಳ ಸಂಘಟ್ಟನದಿಂದ ಉಂಟಾದ ಶಬ್ದವೂ, ಅದರಿಂದುಂಟಾದ ಕಿಡಿಗಳೂ ಎರಡು ವಜ್ರಾಯುಧಗಳ ಅನ್ಯೋನ್ಯಘಾತದಿಂದುಂಟಾದ ಶಬ್ದದಂತೆ ಭಯಂಕರವಾಯಿತು. ಭೀಮನ ಗದಾಪ್ರಯೋಗದಿಂದ ಭೂ

ಮಿಯು ಗಡಗಡನೆ ನಡುಗಿತು ಆ ಗದೆಯಿಂದ ತನ್ನ ಗದೆಯ ವೇಗವು ಪ್ರತಿಹತವಾದುದನ್ನು ನೋಡಿ ಇದಿರಾನೆಯನ್ನು ಕಂಡು ಕೋಪಗೊಂಡ ಮದದಾನೆಯಂತೆ ದುರ್ಯೋಧನನು ಅತ್ಯಂತ ಕೋಪಾವಿಷ್ಟನಾದನು. ಆಗ ದುರ್ಯೋಧನನು ಗದೆಯನ್ನು ಎಡಪಾರ್ಶ್ವವಾಗಿ ಸುತ್ತಿಸುತ್ತ, ಭಯಂಕರವೇಗವುಳ್ಳ ಆ ಗದೆಯಿಂದ ಭೀಮನ ತಲೆಯಮೇಲೆ ಹೊಡೆದನು. ಆ ಪ್ರಹಾರವೇಗಕ್ಕೂ ಭೀಮನು ಸ್ವಲ್ಪವೂ ಕದಲದೆ ನಿಂತನು ಹಾಗೆ ಗದೆಯಿಂದ ಹೊಡೆಯಲ್ಪಟ್ಟಾಗಲೂ, ಭೀಮನು ತಾನಿದ್ದ ಸ್ಥಳದಿಂದ ಒಂದು ಅಡಿಯಷ್ಟೂ ಕದಲದೆ, ನಿಶ್ಚಲನಾಗಿ ನಿಂತಿದ್ದುದನ್ನು ನೋಡಿ ಸೈನ್ಯಗಳೆಲ್ಲವೂ ಆಶ್ಚರ್ಯದಿಂದ ಹೊಗಳಿದುವು ಆಮೇಲೆ ಭಯಂಕರ ಪರಾಕ್ರಮವುಳ್ಳ ಆ ಭೀಮನು, ಬಂಗಾರದಿಂದ ಅಲಂಕೃತವಾದ ತನ್ನ ದೊಡ್ಡ ಗದೆಯನ್ನು ದುರ್ಯೋಧನನಮೇಲೆ ಪ್ರಯೋಗಿಸಿದನು ದುರ್ಯೋಧನನೂ ಆ ಪ್ರಹಾರವನ್ನು ತನ್ನ ಸಂಚಾರಲಾಘವದಿಂದ ತಪ್ಪಿಸಿಕೊಂಡು ವ್ಯರ್ಥಮಾಡಿದನು ಆಗ ಎಲ್ಲರೂ ಆಶ್ಚರ್ಯಪಟ್ಟರು. ಭೀಮನಿಂದ ಪ್ರಯೋಗಿಸಲ್ಪಟ್ಟ ಆ ಗದೆಯು, ದೊಡ್ಡ ಸಿಡಿಲಿನಂತೆ ಶಬ್ದಿಸುತ್ತ ಬಂದು ಕೊನೆಗೆ ವ್ಯರ್ಥವಾಗಿ ಭೂಮಿಯಲ್ಲಿ ಬಿದ್ದಾಗ, ಭೂಮಿಯು ನಡುಗಿಬಿಟ್ಟಿತು ಆಗ ದುರ್ಯೋಧನನು ಹುಚ್ಚುಹಿಡಿದವನು ನೆಗೆದಾಡುವಂತೆ ಆಗಾಗ ಮೇಲಕ್ಕೆ ಹಾರುತ್ತ, ಭೀಮನ ಗದೆಯು ವಿಫಲವಾಗಿ ಬೀಳುವಂತೆ ಮಾಡಿ, ಅವನನ್ನು ವಂಚಿಸಿದುದಲ್ಲದೆ ಬಹುಕೋಪದಿಂದ ಭೀಮನ ಎದೆಯನ್ನು ತನ್ನ ಗದೆಯಿಂದ ಹೊಡೆದನು ಆ ಮಹಾಯುದ್ಧದಲ್ಲಿ ನಿನ್ನ ಪುತ್ರನ ಗದೆಯ ಪ್ರಹಾರದಿಂದ ನೊಂದ ಭೀಮನು ಏನುಮಾಡುವುದೆಂದು ತಿಳಿಯದೆ ಸ್ತಬ್ಧನಾಗಿದ್ದನು ಭೀಮನು ಅಂತಹ ಸ್ಥಿತಿಯಲ್ಲಿರುವಾಗ ಸೋಮಕರೂ, ಪಾಂಡವರೂ ತಮ್ಮ ಸಂಕಲ್ಪವು ವ್ಯರ್ಥವಾಯಿತೆಂದು ಮನಸ್ಸಿನಲ್ಲಿ ಅಸಂತುಷ್ಟರಾದರು. ಭೀಮನು ಆ ಪ್ರಹಾರದಿಂದ ಆನೆಯಂತೆ ಬಹಳ ಕೋಪಗೊಂಡವನಾಗಿ ಮತ್ತೊಂದು ಆನೆಯಂತೆ ನಿಂತಿರುವ ನಿನ್ನ ಕುಮಾರನಕಡೆಗೆ ಗದೆಯನ್ನೆತ್ತಿಕೊಂಡು ವೇಗದಿಂದ ಓಡಿದನು. ಗದೆಯನ್ನು ಪ್ರಯೋಗಿಸುವುದರಲ್ಲಿ ಬಹಳ ಸಮರ್ಥನಾದ ಭೀಮನು, ನಿನ್ನ ಕುಮಾರನ ಸಮೀಪಕ್ಕೆ ಬಂದು, ಗದೆಯನ್ನು ಸುತ್ತಿಸಿ ದುರ್ಯೋ

ಧನನ ಪಾರ್ಶ್ವಭಾಗಕ್ಕೆ ಹೊಡೆದನು. ಅವನು ಆ ಪ್ರಹಾರದಿಂದ ಮನ ಗುಂದಿದವನಾಗಿ, ಎರಡು ಮಂಡಿಗಳನ್ನೂ ಭೂಮಿಯಲ್ಲಿ ಊರಿ ಕೆಳಗೆ ಬಿದ್ದನು ದುರ್ಯೋಧನನು ಬಿದ್ದೊಡನೆ ಸೃಂಜಯರಲ್ಲಿ ದೊಡ್ಡ ಕೋಲಾ ಹಲವು ಆರಂಭವಾಯಿತು. ನಿನ್ನ ಕುಮಾರನು ಆ ಸೃಂಜಯರ ಕೂಗಾ ಟವನ್ನು ಕೇಳಿ ಸಹಿಸದೆ ಮತ್ತಷ್ಟು ಕೋಪಗೊಂಡನು ಮಹಾಬಲ ಶಾಲಿಯಾದ ದುರ್ಯೋಧನನು ಮಹಾಸರ್ಪದಂತೆ ಬುಸುಗುಟ್ಟುತ್ತ ಎದ್ದು ಬಂದು, ಎರಡು ಕಣ್ಣುಗಳಿಂದಲೂ ಭೀಮಸೇನನನ್ನು ದಹಿಸುವಂತೆ ನೋಡಿದನು. ಆಮೇಲೆ ಭರತಶ್ರೇಷ್ಠನಾದ ದುರ್ಯೋಧನನು ಆ ಯುದ್ಧ ದಲ್ಲಿ ಭೀಮನ ತಲೆಯನ್ನು ಭೇದಿಸುವವನಂತೆ ಕೈಯಲ್ಲಿ ಗದೆಯನ್ನೆತ್ತಿ ಕೊಂಡು ಭೀಮನಿಗಿದಿರಾಗಿ ಓಡಿಬಂದು ಭೀಮನ ಹಣೆಯಮೇಲೆ ಹೊಡೆ ದನು ಆದರೇನು? ಆಗಲೂ ಭೀಮನು ಕದಲಲಿಲ್ಲ ಗದಾಪ್ರಹಾರ ದಿಂದ ಮೈಯಲ್ಲಿ ಹರಿಯುವ ರಕ್ತಧಾರೆಯೊಡನೆ ಆಗ ಭೀಮನು ಮದೋ ತ್ಕಟವಾದ ಆನೆಯಂತೆ ಪ್ರಕಾಶಿಸಿದನು ಆಮೇಲೆ ಭೀಮನು ವಜ್ರಾ ಯುಧಕ್ಕೂ ಸಿಡಿಲಿಗೂ ಸಮಾನವಾದ ಶಬ್ದವುಳ್ಳ ತನ್ನ ಮಹಾಗದೆಯನ್ನು ಕೈಗೆತ್ತಿಕೊಂಡು ಬಂದು, ಬಲವಾಗಿ ವೈರಿಯನ್ನು ಹೊಡೆದನು ಭೀಮ ಸೇನನಿಂದ ಹೊಡೆಯಲ್ಪಟ್ಟ ದುರ್ಯೋಧನನಿಗೆ ಆಗ ದೇಹದ ಕೀಲುಗಳೆಲ್ಲ ಕದಲಿದುದರಿಂದ, ಕಾಡಿನಲ್ಲಿ ಚೆನ್ನಾಗಿ ಪುಷ್ಪಿಸಿ ಬಿರುಗಾಳಿಯ ವೇಗಕ್ಕೆ ಸಿಕ್ಕಿ ಆಡುತ್ತಿರುವ ದೊಡ್ಡ ಸಾಲವೃಕ್ಷದಂತೆ ಕೆಳಗೆ ಬಿದ್ದನು ಆಗ ಪಾಂಡವರು ನೆಲದಲ್ಲಿ ಬಿದ್ದ ನಿನ್ನ ಪುತ್ರನನ್ನು ನೋಡಿ ಸಂತೋಷದಿಂದ ಅಟ್ಟಹಾಸಮಾಡಿದರು. ಇಷ್ಟರಲ್ಲಿಯೇ ನಿನ್ನ ಕುಮಾರನು ಚೇತರಿಸಿ ಕೊಂಡು, ಮಡುವಿನಿಂದ ಮೇಲೆದ್ದು ಬರುವ ಮದದಾನೆಯಂತೆ ಎದ್ದು ನಿಂತು, ತನ್ನ ಶಿಕ್ಷಾಚಾತುರ್ಯಗಳೆಲ್ಲ ತೋರುವಂತೆ ವಿಚಿತ್ರಗತಿಗಳಲ್ಲಿ ಸುತ್ತಿ ಬಂದು ಇದಿರಿಗೆ ನಿಂತಿದ್ದ ಪಾಂಡವನನ್ನು ಹೊಡೆದನು ಒಡನೆ ಭೀಮನು ಜರ್ಝರಿತಗಾತ್ರನಾಗಿ ಕೆಳಗೆ ಬಿದ್ದನು ಆಗ ಕುರುರಾಜನು ಯುದ್ಧದಲ್ಲಿ ಭೀಮನನ್ನು ಕೆಳಗೆ ಕೆಡಹಿದ ಉತ್ಸಾಹದಿಂದ ಸಿಂಹನಾದ ವನ್ನು ಮಾಡಿದನು ವಜ್ರಾಯುಧಕ್ಕೆ ಸಮಾನವಾದ ಅವನ ಕವಚ ವನ್ನು ಗದೆಯಿಂದ ಭೇದಿಸಿದನು. ಆಗ ಅಂತರಿಕ್ಷದಲ್ಲಿ ದೇವತೆಗಳ ಮತ್ತು

ಅಪ್ಸರಸ್ಸುಗಳ ಹಾಹಾಕಾರವು ಕೇಳಿಸಿತು ವಿಚಿತ್ರವರ್ಣದ ಪುಷ್ಪವೃಷ್ಟಿಯು ಸುರಿಯಿತು. ಆಗ ಭೂಮಿಯಲ್ಲಿ ಬಿದ್ದಿರುವ ಭೀಮನನ್ನೂ, ಬಲೋತ್ಕಟನಾದ ದುರ್ಯೋಧನನನ್ನೂ, ದೃಢವಾದ ಆ ಕವಚಭಂಗವನ್ನೂ ಕಂಡು ಶತ್ರುಗಳು ಬಹಳ ಭಯಪಟ್ಟರು ಆಮೇಲೆ ವೃಕೋದರನು ಒಂದು ಮುಹೂರ್ತಕಾಲದೊಳಗಾಗಿ ಪ್ರಜ್ಞೆಯನ್ನು ಹೊಂದಿ, ರಕ್ತಮಯವಾದ ತನ್ನ ಮುಖವನ್ನು ಒರಸಿಕೊಂಡು, ಕೋಪದಿಂದ ಕಣ್ಣಾಲೆಗಳನ್ನು ತಿರುಗಿಸುತ್ತ ಸ್ಥಿರವಾಗಿ ನಿಂತನು ಆಮೇಲೆ ನಕುಲ ಸಹದೇವರೂ, ಸಾತ್ಯಕಿಯೂ ನಿನ್ನ ಕುಮಾರನನ್ನು ಕೊಲ್ಲಬೇಕೆಂದು ನಾನುತಾನೆಂದು ಮುಂದೆ ಬಂದರು ಇಷ್ಟರಲ್ಲಿ ಭೀಮನು ಶ್ರಮಪರಿಹಾರವನ್ನು ಹೊಂದಿ, ಅವರನ್ನು ಹಿಂದಕ್ಕೆ ಕಳುಹಿಸಿ, ದೇವರಾಜನು ನಮುಚಿಯನ್ನಿದಿರಿಸಿದ ಹಾಗೆ ತಾನೇ ನಿನ್ನ ಮಗನನ್ನು ಇದಿರಿಸಿಹೋದನು

ಇದು ಐವತ್ತೆಂಟನೆಯ ಅಧ್ಯಾಯವು



### ಭೀಮಸೇನನು ದುರ್ಯೋಧನನ ತೊಡೆಯನ್ನು ಭೇದಿಸಿದುದು

ಆಮೇಲೆ ಆ ಕೌರವಶ್ರೇಷ್ಠರಿಬ್ಬರಿಗೂ ಯುದ್ಧವು ಪ್ರಬಲವಾದುದನ್ನು ಕಂಡ, ಅರ್ಜುನನು ವಾಸುದೇವನನ್ನು ನೋಡಿ "ಕೃಷ್ಣಾ! ಈ ಇಬ್ಬರು ವೀರರಲ್ಲಿ ಯಾವನು ಯುದ್ಧದಲ್ಲಿ ಅಧಿಕನಿಪುಣನೆಂದು ನಿನಗೆ ತೋರುವುದು? ಜನಾರ್ದನಾ! ಯಾವನಲ್ಲ ಯಾವಯಾವ ಗುಣವು ಪ್ರಬಲವಾಗಿದೆ? ಇದನ್ನು ನನಗೆ ವಿವರಿಸಬೇಕು" ಎಂದನು.

ಆಗ ವಾಸುದೇವನು 'ಪಾರ್ಥಾ! ಶಿಕ್ಷಣವೇನೋ ಇಬ್ಬರಿಗೂ ಸಮಾನವೇ ಭೀಮನಾದರೋ ಹೆಚ್ಚು ಬಲವುಳ್ಳವನು ದುರ್ಯೋಧನನು ಭೀಮನಿಗಿಂತಲೂ ಚತುರನು ಪ್ರಯತ್ನಪರನು! ಭೀಮಸೇನನು ಧರ್ಮದಿಂದ ಯುದ್ಧಮಾಡುವುದಾದರ, ದುರ್ಯೋಧನನನ್ನು ಎಂದಿಗೂ ಜಯಿಸಲಾರನು. ಅನ್ಯಾಯದಿಂದ ಯುದ್ಧಮಾಡಿದರೆಮಾತ್ರ ಸುಯೋಧನನನ್ನು ಕೊಲ್ಲಬಹುದು. ಹಿಂದೆ ದೇವತೆಗಳು ಅಸುರರನ್ನು ಮಾಯೆಯಿಂದಲೇ

ಜಯಿಸಿದರೆಂದು ನಾವು ಕೇಳಿರುವೆವು. ವಿರೋಚನನೂ ಇಂದ್ರನಿಂದ ಮಾಯೆಯಿಂದಲೇ ಜಯಿಸಲ್ಪಟ್ಟನು ಇಂದ್ರನೂ ವೃತ್ರನ ಪರಾಕ್ರಮವನ್ನು ಮಾಯೆಯಿಂದಲೇ ನಾಶಮಾಡಿದನು. ಆದುದರಿಂದ ವೀರನಾದ ಈ ವೃಕೋದರನೂ ಮಾಯೆಯನ್ನೇ ಅನುಸರಿಸಬೇಕು. ಧನಂಜಯಾ! ದ್ಯೂತ ಸಭೆಯಲ್ಲಿ 'ನಿನ್ನ ಎರಡು ತೊಡೆಗಳನ್ನೂ ಯುದ್ಧದಲ್ಲಿ ಗದೆಯಿಂದ ಭೇದಿಸುವೆನು' ಎಂದು ದುರ್ಯೋಧನನನ್ನು ನೋಡಿ ಭೀಮನು ಪ್ರತಿಜ್ಞೆಮಾಡಿರುವನು ಭೀಮನು ಆ ತನ್ನ ಪ್ರತಿಜ್ಞೆಯನ್ನು ಹೇಗಾದರೂ ನೆರವೇರಿಸಿಯೇ ತೀರಬೇಕು ಕಪಟಿಯಾದ ರಾಜನನ್ನು ಕಪಟದಿಂದಲೇ ನಾಶ ಮಾಡಬೇಕು ಇವನು ತನ್ನ ಬಲವನ್ನೇ ನಂಬಿ ನ್ಯಾಯದಿಂದ ಯುದ್ಧ ಮಾಡುವುದಾದರೆ, ರಾಜನಾದ ಯುಧಿಷ್ಠಿರನಿಗೆ ಅಪಾಯವುಂಟಾಗುವುದು ನಿಶ್ಚಯವೇ! ನಾನು ಸಾರಿಸಾರಿ ಹೇಳುವೆನು. ಚೆನ್ನಾಗಿ ಗಮನಿಸು! ಈಗಲೂ ಧರ್ಮರಾಜನ ಅಪರಾಧದಿಂದ ತಿರುಗಿ ನಮಗೆ ಒಂದು ಭಯವುಂಟಾಗಿದೆ ಮಹತ್ತಾದ ಸಾಹಸಕಾರ್ಯಗಳಿಂದ ಭೀಷ್ಮನೇ ಮೊದಲಾದ ಕೌರವವೀರರನ್ನು ಕೊಂದು ಜಯವನ್ನೂ, ಒಳ್ಳೆಯ ಕೀರ್ತಿಯನ್ನೂ ಸಂಪಾದಿಸಿದೆವು ವೈರವನ್ನೂ ತೀರಿಸಿಕೊಂಡಾಯಿತು ನಮಗೆ ಪ್ರಾಪ್ತವಾದ ಜಯವು ತಿರುಗಿ ಈಗ ಸಂಶಯಾಸ್ಪದವಾಗಿದೆ ತಮ್ಮಲ್ಲಿ ಒಬ್ಬನನ್ನು ಜಯಿಸಿದರೂ ಎಲ್ಲರನ್ನೂ ಜಯಿಸಿದಂತೆಯೇ ಎಂದು ಧರ್ಮರಾಜನು ಬುದ್ಧಿಯಿಲ್ಲದೆ ಮಾತುಕೊಟ್ಟನು ಅವನಲ್ಲಿ ಇದೊಂದು ದೊಡ್ಡ ಲೋಪವು! ದುರ್ಯೋಧನನೋ ಸಮರ್ಥನು! ವೀರನು! ಒಂದೇ ಸಂಕಲ್ಪವನ್ನು ಹಿಡಿದಿರುವನು ಇದೇ ಅರ್ಥದಲ್ಲಿ ಪುರಾತನವಾದ ತತ್ವಾರ್ಥದಿಂದ ಕೂಡಿದ ಈ ಶ್ಲೋಕವೊಂದು ಶುಕ್ರಾಚಾರ್ಯರಿಂದ ಗಾನಮಾಡಲ್ಪಟ್ಟಿದೆ ಅದರ ಅರ್ಥವೇನಂದರೆ, 'ಸಂಪೂರ್ಣವಾಗಿ ಜಯಿಸಲ್ಪಟ್ಟು ತಿರುಗಿ ಯುದ್ಧಕ್ಕೆ ಬರುವ ಜೀವಿತಾಶೆಯುಳ್ಳ ಹತಶೇಷಶತ್ರುಗಳಿಂದ ಭಯಪಡಬೇಕು. ಅವರು ಒಂದೇ ನಿಶ್ಚಯವುಳ್ಳವರು' ಎಂಬುದೇ!

ಪ್ರಾಣದಮೇಲೆ ಆಸೆಯಿಲ್ಲದೆ ಸಾಹಸದಿಂದ ಇದಿರಿಸುವ ವೀರರಿಗಿದಿರಾಗಿ ನಿಲ್ಲುವುದು ಇಂದ್ರನಿಗೂ ಅಸಾಧ್ಯವೇ! ಈಗ ಪೂರ್ಣವಾಗಿ

ಸೋತು, ಸೈನ್ಯವನ್ನೆಲ್ಲ ಕಳೆದುಕೊಂಡು, ಮಡುವಿನಲ್ಲಿ ಪ್ರವೇಶಿಸಿ, ತನಗೆ ಅಪಜಯವಾದುದರಿಂದ ಕಾಡಿಗೆ ಹೋಗಬೇಕೆಂದು ನಿರ್ಧರಿಸಿ ಇನ್ನು ರಾಜ್ಯವನ್ನು ಪಡೆಯಬೇಕೆಂಬ ಆಸೆಯೇ ಇಲ್ಲದಿದ್ದ ಈ ದುರ್ಯೋಧನನನ್ನು, ಪ್ರಾಜ್ಞನಾದ ಯಾವನು ತಾನಾಗಿ ಹುಡುಕಿಕೊಂಡುಹೋಗಿ ದ್ವಂದ್ವಯುದ್ಧಕ್ಕೆ ಕರೆಯುವನು? ಯಾವನು ಭೀಮಸೇನನನ್ನು ಕೊಲ್ಲಬೇಕೆಂದು ಹದಿಮೂರುವರ್ಷಗಳವರೆಗೆ ಗದಾಯುದ್ಧದಲ್ಲಿ ಒಳ್ಳೆಯ ಅಭ್ಯಾಸವನ್ನು ಪಡೆದು ಬಂದು, ಮೇಲಕ್ಕೂ, ಅಡ್ಡಲಾಗಿಯೂ ಹಾರಾಡುತ್ತಿರುವನೋ ಅಂತಹ ದುರ್ಯೋಧನನು ನಮ್ಮ ರಾಜ್ಯವನ್ನು ಅಪಹರಿಸದಿರುವನೇ? ಮಹಾಭುಜಬಲವುಳ್ಳ ಭೀಮನು ಈಗ ಕಪಟತಂತ್ರದಿಂದ ಇವನನ್ನು ಕೊಲ್ಲದೆಹೋದಪಕ್ಷದಲ್ಲಿ, ಕುರುವಂಶದಲ್ಲಿ ಉದಿಸಿದ ಆ ಧಾರ್ತರಾಷ್ಟ್ರನೇ ನಿಮಗೆ ರಾಜನಾಗುವನು'' ಎಂದನು ಧನಂಜಯನಾದರೋ ಮಹಾತ್ಮನಾದ ಕೇಶವನ ಈ ವಚನವನ್ನು ಕೇಳಿ, ಭೀಮಸೇನನು ನೋಡುತ್ತಿರುವಾಗಲೇ ತನ್ನ ಎಡತೊಡೆಯನ್ನು ತಟ್ಟಿ ತೋರಿಸಿದನು ಭೀಮನು ಆ ಸಂಜ್ಞೆಯನ್ನು ತಿಳಿದುಕೊಂಡು, ಗದೆಯೊಡನೆ ಯುದ್ಧರಂಗದಲ್ಲಿ ವಿಚಿತ್ರವಾದ ಮಂಡಲಗತಿಗಳಲ್ಲಿಯೂ, ತೊಡಕುಗಳಲ್ಲಿಯೂ, ಇನ್ನೂ ಬೇರೆ ಗತಿಗಳಲ್ಲಿಯೂ ಸಂಚರಿಸಿದನು. ಮತ್ತು ಬಲಕ್ಕೂ, ಎಡಕ್ಕೂ ಗೋಮೂತ್ರಿಗ[ಳ]ಯಿಂದಲೂ ಸುತ್ತಿಸುತ್ತಿ ಶತ್ರುವನ್ನು ಭ್ರಮೆಗೊಳಿಸುವಂತೆ ಸಂಚಾ[ರ] ಮಾಡಿದನು ಹಾಗೆಯೇ ಗದಾಮಾರ್ಗದಲ್ಲಿ ನಿಪುಣನಾದ ನಿನ್ನ ಪು[ತ್ರ]ನೂ, ಭೀಮನನ್ನು ಕೊಲ್ಲಬೇಕೆಂಬ ಅಪೇಕ್ಷೆಯಿಂದ ಆಶ್ಚರ್ಯಕರವಾ[ದ] ಲಾಘವದಿಂದ ಸಂಚರಿಸಿದನು ಅವರಿಬ್ಬರೂ ಯುದ್ಧದಲ್ಲಿ ಕೋಪಗೊಂ[ಡ] ಎರಡು ದೇವತೆಗಳಂತೆ ಕಾಣುವರು ಚಂದನದಿಂದಲೂ ಅಗಿಲುಚಂದ[ನ]ದಿಂದಲೂ ಪರಿಷ್ಕೃತವಾದ ಘೋರವಾದ ಎರಡು ಗದೆಗಳನ್ನು ಸುತ್ತಿಸು[ತ್ತಿ]ರುವರು! ಒಬ್ಬರನ್ನೊಬ್ಬರು ಕೊಂದು ವೈರವನ್ನು ಕೊನೆಗಾಣಿಸಬೇಕೆ[ಂದಿ]ರುವರು! ಅವರಿಬ್ಬರೂ ಸರ್ಪದ ಮಾಂಸದಲ್ಲಿ ಪ್ರಿಯವುಳ್ಳ ಎರಡು ಗರು[ಡ]ಪಕ್ಷಿಗಳು ಜಗಳವಾಡುವಂತೆ ಯುದ್ಧಮಾಡುವರು ಮಂಡಲಗತಿಗ[ಳಲ್ಲಿ] ಸಂಚರಿಸುತ್ತ ಒಬ್ಬರನ್ನೊಬ್ಬರು ಸಮಾನವಾಗಿ ಪ್ರಹರಿಸುವರು ಎರ[ಡು] ಸಮುದ್ರಗಳು ಬಿರುಗಾಳಿಗೆ ಸಿಕ್ಕಿ ಅಲೆದಾಡುವಂತೆ ತೂಗಾಡುವರು

ಭೀಮದುರ್ಯೋಧನರ ಗದೆಗಳು ಒಂದರಮೇಲೊಂದು ತಾಗುವುದರಿಂದ ಅಗ್ನಿಜ್ವಾಲೆಗಳು ಹೊರಟುವು. ಮದದಿಂದ ಕೊಬ್ಬಿದ ಎರಡು ಆನೆಗಳಂತೆ, ಸಮಾನವಾಗಿ ಪ್ರಹರಿಸುವ ಅವರಿಬ್ಬರ ಗದೆಗಳ ತಾಗುವಿಕೆಯಿಂದ ದೊಡ್ಡ ಶಬ್ದವು ಕೇಳಿಸಿತು ಭಯಂಕರವಾದ ಆ ಸಂಕುಲಯುದ್ಧದಲ್ಲಿ ಅವರಿಬ್ಬರೂ ಬಹಳ ಪರಿಶ್ರಾಂತರಾಗಿ, ಒಂದು ಮುಹೂರ್ತಕಾಲದವರೆಗೆ ವಿಶ್ರಾಂತಿಯನ್ನು ತೆಗೆದುಕೊಂಡು, ತಿರುಗಿ ಕೋಪದಿಂದ ದೊಡ್ಡ ಗದೆಗಳನ್ನು ಕೈಯಲ್ಲಿತ್ತಿಕೊಂಡು, ಒಬ್ಬರಿಗೊಬ್ಬರು ಹೊಡೆಯಲಾರಂಭಿಸಿದರು ಗದೆಯ ಪ್ರಹಾರಗಳಿಂದ ಪರಸ್ಪರ ಗಾಯಪಡುತ್ತಿರುವ ಅವರಿಬ್ಬರಿಗೂ ಮಹಾಘೋರವಾದ ಮತ್ತು ಅಸಂವೃತವಾದ ಯುದ್ಧವು ನಡೆಯಿತು. ವೃಷಭದ ಕಣ್ಣುಗಳಂತೆ ಕಣ್ಣುಳ್ಳವರೂ, ಬಲಶಾಲಿಗಳೂ ಆದ ಆ ವೀರರಿಬ್ಬರೂ ಕೆಸರಿನಲ್ಲಿ ಹೊರಳಾಡುವ ಎರಡು ಎಮ್ಮೆಗಳಂತೆ ಒಬ್ಬರಿಗೊಬ್ಬರು ಹೆಣಗಾಡಿದರು ಅವರಿಬ್ಬರಿಗೂ ಸರ್ವಾವಯವಗಳೂ ಜರ್ಝರಿತಗಳಾಗಿ, ಮೈಯೆಲ್ಲ ರಕ್ತಮಯವಾಗಿದ್ದಾಗ, ಹಿಮಾಚಲದಲ್ಲಿ ಪುಷ್ಪಿಸಿರುವ ಎರಡು ಪಲಾಶವೃಕ್ಷಗಳಂತೆ ಕಾಣಿಸಿದರು ಆಗ ದುರ್ಯೋಧನನಾದರೋ ಭೀಮನು ತನ್ನಮೇಲೆ ಬೀಳುವುದಕ್ಕೆ ತನಗೆ ಸ್ವಲ್ಪ ಅವಕಾಶವನ್ನು ಕೊಟ್ಟಂತೆ ಕಾಣಿಸಿರುವುದನ್ನು ನೋಡಿ ನಗುಮುಖದೊಡನೆ ಧಟ್ಟನೆ ಮುಂದೆ ಹೋದನು ಆಗ ವೃಕೋದರನು ದುರ್ಯೋಧನನು ಸಮೀಪಕ್ಕೆ ಬಂದುದನ್ನು ಕಂಡು, ಅತಿವೇಗದಿಂದ ಅವನಮೇಲೆ ಗದೆಯನ್ನು ಪ್ರಯೋಗಿಸಿದನು ನಿನ್ನ ಕುಮಾರನು ತಟ್ಟನೆ ಒಂದು ಪಕ್ಕವಾಗಿ ಸರಿದು ಆ ಪ್ರಹಾರವನ್ನೂ ತಪ್ಪಿಸಿಕೊಂಡನು ಭೀಮನ ಪ್ರಯತ್ನವು ವಿಫಲವಾದಮೇಲೆ ನಿನ್ನ ಮಗನು ವೇಗದಿಂದ ಮುಂದೆ ಸರಿದು, ಭೀಮಸೇನನನ್ನು ಗದೆಯಿಂದ ಹೊಡೆದನು ಆಗ ಭೀಮನಿಗೆ ಬಲವಾಗಿ ಪೆಟ್ಟುಬಿದ್ದುದರಿಂದ ರಕ್ತಸ್ರಾವವಾಗಿ ಹಾಗೆಯೇ ಮೂರ್ಛಿತನಾದನು ಭೀಮನು ಹೀಗೆ ನೊಂದಿರುವುದು ನಿನ್ನ ಮಗನಿಗೆ ತಿಳಿಯಲಿಲ್ಲ. ಭೀಮನು ಹೇಗೋ ಪ್ರಯತ್ನದಿಂದ ಆ ಬಾಧೆಯನ್ನು ಸಹಿಸಿಕೊಂಡಿದ್ದನು. ನಿನ್ನ ಕುಮಾರನಾದರೋ ಭೀಮಸೇನನು ತನ್ನನ್ನು ಪ್ರಹರಿಸುವುದಕ್ಕೆ ಇನ್ನೂ ಸನ್ನದ್ಧನಾಗುತ್ತಿರುವನೆಂದೇ ಎಣಿಸಿದ್ದನು. ಅದರಿಂದ ತಿರುಗಿ ಅವನನ್ನು ಹೊಡೆಯಲಿಲ್ಲ.

ಇಷ್ಟರಲ್ಲಿ ಭೀಮನು ಒಂದು ಮುಹೂರ್ತಕಾಲ ವಿಶ್ರಮಿಸಿಕೊಂಡು, ಗದೆಯನ್ನೆತ್ತಿ ಸಮೀಪದಲ್ಲಿ ನಿಂತಿದ್ದ ದುರ್ಯೋಧನನ ಕಡೆಗೆ ವೇಗದಿಂದ ಇದಿರಿಸಿಹೋದನು ಸಂಭ್ರಮದಿಂದ ಇದಿರಿಸಿ ಬರುವ ಭೀಮನನ್ನು ಕಂಡೊಡನೆ ನಿನ್ನ ಮಗನು, ಭೀಮನನ್ನು ವಂಚಿಸಿ, ಅವನ ಪ್ರಹಾರವನ್ನು ವ್ಯರ್ಥಗೊಳಿಸಬೇಕೆಂಬ ತಂತ್ರದಿಂದ ಅಲ್ಲಿಯೇ ನಿಂತಿದ್ದಹಾಗೆ ತೋರಿಸಿ, ಥಟ್ಟನೆ ಮೇಲಕ್ಕೆ ಹಾರಲು ಯತ್ನಿಸಿದನು ಆದರೆ ಇಷ್ಟರಲ್ಲಿ ಭೀಮಸೇನನು ನಿನ್ನ ಮಗನ ಆ ಪ್ರಯತ್ನವನ್ನು ತಿಳಿದುಕೊಂಡು, ಗತಿಭೇದಗಳಿಂದ ತನ್ನನ್ನು ವಂಚಿಸುತ್ತ ಮೇಲಕ್ಕೆ ಹಾರುವ ಪ್ರಯತ್ನದಲ್ಲಿದ್ದ ಆ ದುರ್ಯೋಧನನಿಗೆ ಇದಿರಾಗಿ ಹೋಗಿ, ಸಿಂಹದಂತೆ ತಾನೂ ಮೇಲೆ ಹಾರಿ, ಅವನ ಎರಡು ತೊಡೆಗಳಿಗೂ ಲಕ್ಷ್ಯವಿಟ್ಟು ವೇಗದಿಂದ ಗದೆಯನ್ನು ಪ್ರಯೋಗಿಸಿದನು ಭಯಂಕರ ಸಾಹಸವುಳ್ಳ ಭೀಮನಿಂದ ಪ್ರಯೋಗಿಸಲ್ಪಟ್ಟ ವಜ್ರಸಮಾನವಾದ ಆ ಗದಾಯುಧವು, ಸುಂದರವಾದ ದುರ್ಯೋಧನನ ಎರಡು ತೊಡೆಗಳನ್ನೂ ಭೇದಿಸಿತು. ಭೀಮನಿಂದ ತೊಡೆಮುರಿಯಲ್ಪಟ್ಟ ನಿನ್ನ ಕುಮಾರನು ಭೂಮಿಯಲ್ಲಿ ಪ್ರತಿಧ್ವನಿ ಹುಟ್ಟಿಸುವಂತೆ ಕೆಳಗೆ ಬಿದ್ದನು ಆಗ ಸಿಡಿಲುಗಳೊಡನೆ ಗಾಳಿಯು ಬೀಸಿತು ಧೂಳಿನ ವರ್ಷವುಂಟಾಯಿತು ಮರಗಿಡಗಳಿಂದಲೂ, ಪರ್ವತಗಳಿಂದಲೂ ಕೂಡಿದ ಸಮಸ್ತ ಭೂಮಿಯೂ ನಡುಗಿತು ಭೂನಾಥನಾದ ಆ ದುರ್ಯೋಧನನು ಬಿದ್ದೊಡನೆ, ಮಹಾಶಬ್ದದೊಡನೆ ಜ್ವಲಿಸುವ ಮಹೋಲ್ಕೆಯು ಸಿಡಿಲಿನಂತೆ ಭಯಂಕರವಾಗಿ ಆಕಾಶದಿಂದ ಕೆಳಗೆ ಬಿದ್ದಿತು ನಿನ್ನ ಪುತ್ರನು ಬಿದ್ದೊಡನೆ ಇಂದ್ರನು ರಕ್ತವರ್ಷವನ್ನೂ, ಪಾಂಸುವರ್ಷವನ್ನೂ ವರ್ಷಿಸಿದನು. ಆಕಾಶದಲ್ಲಿ ಯಕ್ಷ ರಾಕ್ಷಸ ಪಿಶಾಚಗಳ ದೊಡ್ಡ ಕೂಗಾಟವು ಕೇಳಿಸಿತು ಘೋರವಾದ ಈ ಶಬ್ದದೊಡನೆ ಎಲ್ಲಾ ದಿಕ್ಕುಗಳಿಂದಲೂ (ಭಯಪಟ್ಟ) ಅನೇಕ ಮೃಗಪಕ್ಷಿಗಳ ಘೋರಶಬ್ದವೂ ಕೇಳಿಸಿತು. ನಿನ್ನ ಕುಮಾರನು ಬಿದ್ದೊಡನೆ ಅಲ್ಲಿ ಸತ್ತುಳಿದಿದ್ದ ಕುದುರೆಗಳೂ, ಆನೆಗಳೂ, ಪದಾತಿಗಳೂ 'ಹೋ!' ಎಂದು ಅರಚಿದುವು. ಭೇರಿ, ಶಂಖ, ಮೃದಂಗಗಳ ದೊಡ್ಡ ಶಬ್ದವು ತಲೆದೋರಿತು ಈ ಶಬ್ದಗಳೆಲ್ಲ ಒಂದಾಗಿ ಪಾತಾಳದವರೆಗೆ ವ್ಯಾಪಿಸಿತು ಆ ಸಮಯದಲ್ಲಿ ಎಲ್ಲಾ

ದಿಕ್ಕುಗಳಲ್ಲಿಯೂ, ಹಲವು ಕೈಕಾಲುಗಳಿಂದಲೂ, ಭಯಂಕರವಾದ ಘೋರರೂಪದಿಂದಲೂ ಕೂಡಿದ ತಲೆಯಿಲ್ಲದ ಮುಂಡಗಳು ಎದ್ದೆದ್ದು ಕುಣಿಯುತಿದ್ದುವು ಶಸ್ತ್ರಾಸ್ತ್ರಧ್ವಜಗಳೆಲ್ಲ ನಡುಗಿದುವು ಮಡುಗಳೂ, ಬಾವಿಗಳೂ ರಕ್ತವನ್ನು ಕಾರಿದುವು ಅತಿವೇಗವುಳ್ಳ ನದೀಪ್ರವಾಹಗಳು ಥಟ್ಟನೆ ಹಿಮ್ಮೊಗವಾಗಿ ತಿರುಗಿದುವು ನಿನ್ನ ಪುತ್ರನಾದ ದುರ್ಯೋಧನನು ಬಿದ್ದೊಡನೆ ಸ್ತ್ರೀಯರು ಪುರುಷರಂತೆಯೂ, ಪುರುಷರೆಲ್ಲರೂ ಸ್ತ್ರೀಯರಂತೆಯೂ ಕಾಣಿಸಿದರು ಅಂತಹ ಆಶ್ಚರ್ಯಕರವಾದ ಉತ್ಪಾತಗಳನ್ನು ಕಂಡು, ಪಾಂಚಾಲ ಪಾಂಡವರೆಲ್ಲರೂ ಮನಸ್ಸಿನಲ್ಲಿ ಕಳವಳಪಟ್ಟರು ದೇವತೆಗಳೂ, ಗಂಧರ್ವರೂ, ಅಪ್ಸರಸರೂ ಆ ನಿನ್ನ ಇಬ್ಬರು ಕುಮಾರರ ಆಶ್ಚರ್ಯಕರವಾದ ಯುದ್ಧವನ್ನು ಕುರಿತು ಸಂಭಾಷಿಸುತ್ತ ಹಿಂತಿರುಗಿದರು ಹಾಗೆಯೇ ಸಿದ್ಧರೂ, ಚಾರಣರೂ ಭೀಮ ದುರ್ಯೋಧನರನ್ನು ಪ್ರಶಂಸಿಸುತ್ತ ತಾವು ಬಂದ ದಾರಿಯಿಂದ ಹಿಂತಿರುಗಿದರು

ಇದು ಐವತ್ತೊಂಭತ್ತನೆಯ ಅಧ್ಯಾಯವು

---

ಭೀಮನು ದುರ್ಯೋಧನನು ತನಗೆ ಮಾಡಿದ ಅನ್ಯಾಯಗಳನ್ನೆಲ್ಲ ಅವನಿಗೆ ಜ್ಞಾಪಕಪಡಿಸಿ, ಎಡಗಾಲಿನಿಂದ ಅವನ ತಲೆಯನ್ನು ಒದೆದುದು ಯುಧಿಷ್ಠಿರನು ದುರ್ಯೋಧನನನ್ನು ಶಾಂತಗೊಳಿಸಿದುದು

ರಾಜೇಂದ್ರಾ! ಮುರಿದುಬಿದ್ದ ಮಹಾವೃಕ್ಷದಂತೆ ನೆಲಕ್ಕೆ ಕೆಡಹಲ್ಪಟ್ಟ ಆ ದುರ್ಯೋಧನನನ್ನು ನೋಡಿದೊಡನೆ ಪಂಚಪಾಂಡವರೂ ಮನಸ್ಸಿನಲ್ಲಿ ಉತ್ಸಾಹಗೊಂಡರು ಸಿಂಹದಿಂದ ಕೆಡಹಲ್ಪಟ್ಟ ಮದದಾನೆಯಂತೆ ಬಿದ್ದಿರುವ ಆ ದುರ್ಯೋಧನನನ್ನು ಪಾಂಡವರೂ, ಸೋಮಕರೂ ರೋಮಾಂಚಿತಗಾತ್ರರಾಗಿ ನೋಡುತಿದ್ದರು ಆಗ ಭೀಮಸೇನನು ತನ್ನಿಂದ ಕೆಳಗೆ ಕೆಡಹಲ್ಪಟ್ಟ ಕೌರವರಾಜನನ್ನು ನೋಡಿ 'ಎಲ ದುರ್ಮತೀ! ದುರಾತ್ಮಾ! ಹಿಂದೆ ನೀನು ಮಹಾಸಭೆಯಲ್ಲಿ ಏಕವಸ್ತ್ರವನ್ನು ಧರಿಸಿದ್ದ ದ್ರೌಪದಿಯನ್ನು ಹಾಸ್ಯಮಾಡಿ 'ಪಶು! ಪಶು!' ಎಂದು ಕರೆದೆಯಲ್ಲವೆ?

ಆದಕ್ಕೆ ಈಗ ತಕ್ಕ ಶಿಕ್ಷೆಯನ್ನು ಪಡೆದೆ’ ಎಂದನು. ಹೀಗೆಂದು ಹೇಳಿ ಭೀಮಸೇನನು, ರಾಜಸಿಂಹನಾದ ಆ ದುರ್ಯೋಧನನ ತಲೆಯನ್ನು ತನ್ನ ಎಡಗಾಲಿನಿಂದ ಅಡಿಗಡಿಗೆ ತಿಕ್ಕಿ ಅತ್ತಿತ್ತ ಹೊರಳಿಸಿ ಹೊರಳಿಸಿ ಒದೆಯು ತಿದ್ದನು. ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ಆ ಭೀಮನು ಬಾರಿ ಬಾರಿಗೂ ಅದೇ ಮಾತನ್ನು ಹೇಳುತ್ತ ಅಲ್ಲಿದ್ದವರನ್ನು ನೋಡಿ ‘ಎಲ್ಲರೂ ಕೇಳಿರಿ! ಯಾವ ಮೂಢರು ನಮ್ಮನ್ನು ‘ಪಶುಗಳೆಂ’ದು ಕರೆದು ಕುಣಿ ದಾಡಿ ಅಟ್ಟಹಾಸವನ್ನು ಮಾಡಿದರೋ, ಅವರನ್ನು ಈಗ ನಾವೂ ಅದಕ್ಕೆ ಪ್ರತಿಯಾಗಿ ‘ಪಶುಗಳೆಂ’ದು ಕರೆಯುವೆವು ಇವರಿಗೆ ಪ್ರತೀಕಾರಮಾ ಡಲು ನಮಗೆ ಅವರಿಗಿದ್ದಂತೆ ಬೆಂಕಿಯಿಲ್ಲ! ಅಕ್ಷದ್ಯೂತವಿಲ್ಲ! ಬೇರೆ ವಂಚನೆಯಾಗಲಿ ಯಾವುದೂ ಇಲ್ಲ ನಾವು ನಮ್ಮ ಭುಜಬಲದಿಂದಲೇ ನಮ್ಮ ವೈರಿಗಳಿಗೆ ಪ್ರತೀಕಾರಮಾಡತಕ್ಕವರು’ ಎಂದು ಹೇಳಿ, ಚಿರಕಾಲದ ತನ್ನ ವೈರವನ್ನು ಪಾರಗಾಣಿಸಿದ ಆ ಭೀಮನು, ಮೆಲ್ಲಗೆ ನಗುತ್ತ, ಅಲ್ಲಿ ಸುತ್ತಲೂ ನೆರೆದಿದ್ದ ಯುಧಿಷ್ಠಿರನನ್ನೂ, ಕೃಷ್ಣನನ್ನೂ, ಸೃಂಜಯರನ್ನೂ ಧನಂಜಯನನ್ನೂ, ಮಾದ್ರೀಪುತ್ರರನ್ನೂ ನೋಡಿ ಹೀಗೆಂದು ಹೇಳು ವನು. ‘ಯಾರು ರಜಸ್ವಲೆಯಾದ ದ್ರೌಪದಿಯನ್ನು ಸಭೆಗೆ ಸೆಳೆತಂದು, ಅಲ್ಲಿ ಅವಳನ್ನು ಮೈಮೇಲೆ ವಸ್ತ್ರವಿಲ್ಲದಂತೆ ಮಾಡಿದರೋ, ಆ ಈ ಧಾರ್ತರಾಷ್ಟ್ರರು, ಈಗ ದ್ರೌಪದಿಯ ತಪೋಬಲದಿಂದಲೇ ಕೊಲ್ಲಲ್ಪಟ್ಟಿ ರುವುದನ್ನು ಎಲ್ಲರೂ ನೋಡಿರಿ ಕರಿನಾತ್ಮರಾಗಿ ಹಿಂದೆ ನಮ್ಮನ್ನು ಎಳ್ಳಿ ನ ಜಳ್ಳುಗಳೆಂದು ಕರೆದ ಈ ಧಾರ್ತರಾಷ್ಟ್ರರೆಲ್ಲ ತಮ್ಮ ಪರಿವಾರಗಳೊಡನೆ ಕೆಳಗೆ ಸತ್ತುಬಿದ್ದಿರುವುದನ್ನು ಎಲ್ಲರೂ ನೋಡಿರಿ! ನಾವೇನೋ ನಮ್ಮ ಕರ್ಮಕ್ಕೆ ತಕ್ಕಂತೆ ಸ್ವರ್ಗಕ್ಕೋ, ಅಥವಾ ನರಕಕ್ಕೋ ಹೋಗುವೆವು’ ಎಂದು ಹೇಳಿ, ತಿರುಗಿ ಭೀಮನು ದುರ್ಯೋಧನನ ಹೆಗಲ ಕೆಳಗೆ ಸಿಕ್ಕಿದ್ದ ಅವನ ಗದೆಯನ್ನು ಕಿತ್ತೊಗೆದು ಅವನ ತಲೆಯನ್ನು ಮತ್ತೊಮ್ಮೆ ಎಡ ಗಾಲಿನಿಂದ ಒದೆದು, ‘ಎಲ ವಂಚಕಾ!’ ಎಂದು ಕೂಗಿದನು ರಾಜಾ! ಸಂತೋಷದಿಂದಲೂ, ಕೋಪದಿಂದಲೂ ಮೈಮರೆತು, ಭೀಮನು, ಕೌರವ ರಾಜನನ್ನು ಕಾಲಿಂದೊದೆದುದನ್ನು ನೋಡಿ ಅಲ್ಲಿದ್ದ ಧರ್ಮಾತ್ಮರಾದ ಸೋಮಕರಿಗೆ ಅತೃಪ್ತಿಯುಂಟಾಯಿತು ನಿನ್ನ ಪುತ್ರನನ್ನು ಹೀಗೆ



ಪುಟ ೨೭೮ ಭೀಮನೂ ಗದಾಯುದ್ಧದಲ್ಲಿ ದುರ್ಯೋಧನನ ತೊಡಯನ್ನು ಮುರಿದು ಅವನ ಕಿರೀಟವನ್ನು ಕಾಲಿಂದ ತಳ್ಳಿದುದು.

ಕೊಂದಮೇಲೆಯೂ ತನ್ನನ್ನು ತಾನೇ ಸ್ತೋತ್ರಮಾಡಿಕೊಳ್ಳುತ್ತಿದ್ದ ಆ ಭೀಮಸೇನನನ್ನು ಕುರಿತು ಧರ್ಮರಾಜನು 'ಭೀಮಸೇನಾ! ನಿನ್ನ ವೈರದ ಸಾಲವನ್ನು ತೀರಿಸಿಕೊಂಡಾಯಿತು ನ್ಯಾಯದಿಂದಲೋ, ಅನ್ಯಾಯದಿಂದಲೋ ನಿನ್ನ ಪ್ರತಿಜ್ಞೆಯೂ ನೆರವೇರಿತು ಈಗ ವಿಶ್ರಾಂತಿಯನ್ನು ಹೊಂದು ಇವನ ತಲೆಯನ್ನು ಕಾಲಿಂದ ಒದೆಯಬಾರದು! ಧರ್ಮವನ್ನು ಮೀರಿ ಹೋಗಬೇಡ ಇವನು ಅರಸನು! ಮತ್ತು ಬಂಧು! ಬಹಳವಾಗಿ ಗಾಯ ಪಟ್ಟಿರುವನು! ಇದು ನಿನಗೆ ನ್ಯಾಯವಲ್ಲ ಹನ್ನೊಂದಕ್ಷೌಹಿಣೀಸೇನೆಗೆ ಅಧಿಪತಿಯೆನಿಸಿ, ಕೌರವರಿಗೆಲ್ಲ ಅರಸನೂ, ನಮಗೆ ಜ್ಞಾತಿಯೂ ಆದ ಇವನಮೇಲೆ ನೀನು ಕಾಲನ್ನು ಸೋಕಿಸಲೇ ಬಾರದು ಎಲ್ಲಾ ಬಂಧುಗಳನ್ನೂ, ಮಂತ್ರಿಗಳನ್ನೂ, ಸೇನೆಯನ್ನೂ ಕಳೆದುಕೊಂಡು ಯುದ್ಧದಲ್ಲಿ ಹತನಾದ ಇವನ ವಿಷಯದಲ್ಲಿ, ನಾವು ಈಗ ಕನಿಕರವನ್ನೇ ತೋರಿಸಬೇಕು ಅರಸನಾಗಿದ್ದ ಇವನು ನಮ್ಮ ಪರಿಹಾಸಕ್ಕೆ ತಕ್ಕವನಲ್ಲ ಇವನು ಬಂಧುಗಳನ್ನೂ, ಸಹೋದರರನ್ನೂ ಕಳೆದುಕೊಂಡು, ಸಂತಾನವೂ ಇಲ್ಲದಂತೆ ಸತ್ತನು ಹಿರಿದೆ ಜನರು ನಿನ್ನನ್ನು 'ಭೀಮಸೇನನು ಧರ್ಮಾತ್ಮನೆಂದು' ಹೇಳಿದರು ಹಾಗಿರುವ ನೀನು ಈಗೇಕೆ ಅವನನ್ನು ಕಾಲಿನಿಂದ ಒದೆದು ಅಪವಾದಕ್ಕೀಡಾಗುವೆ' ಎಂದನು ಯುಧಿಷ್ಠಿರನು ಭೀಮನನ್ನು ಕುರಿತು ಹೀಗೆ ಹೇಳಿ ಕಣ್ಣೀರು ಸುರಿಯುತ್ತ ದುರ್ಯೋಧನನ ಬಳಿಗೆ ಬಂದು, ದೈನ್ಯದಿಂದ 'ಅಪ್ಪಾ! ದುರ್ಯೋಧನಾ! ನೀನು ನಮ್ಮಮೇಲೆ ಕೋಪಿಸಬೇಡ ಈ ನಿನ್ನ ಸ್ಥಿತಿಗಾಗಿ ನೀನು ದುಃಖಿಸಲೂ ಬಾರದು ಯಾರಾದರೂ ತಾವು ಮಾಡಿದ ದುಷ್ಕರ್ಮಗಳಿಗೆ ಫಲವನ್ನು ಅನುಭವಿಸದೆ ತೀರದು ನಾವು ನಿನ್ನನ್ನು ಕೊಲ್ಲಲು ಯತ್ನಿಸಿದುದೂ, ನೀನು ನಮ್ಮನ್ನು ಕೊಲ್ಲುವುದಕ್ಕೆ ಯತ್ನಿಸಿದುದೂ, ಬ್ರಹ್ಮನಿಂದ ನಮಗೆ ವಿಧಿಸಲ್ಪಟ್ಟ ಆಜ್ಞೆಯೆಂದೇ ತಿಳಿ! ಇದು ನಿಶ್ಚಯವು ನಿನ್ನ ಪೇರಾಸೆಯಿಂದಲೂ, ಮದದಿಂದಲೂ, ಹುಡುಗುತನದಿಂದಲೂ, ತಪ್ಪಿನಿಂದಲೂ ಈ ದೊಡ್ಡ ಕಷ್ಟವ್ಯಸನವನ್ನು ನೀನಾಗಿ ತಂದುಕೊಂಡಿರುವೆ! ಮಿತ್ರರನ್ನೂ, ಸಹೋದರರನ್ನೂ ಪಿತೃಗಳನ್ನೂ, ಪುತ್ರರನ್ನೂ, ಪೌತ್ರರನ್ನೂ ಮತ್ತು ಇತರರನ್ನೂ ಸಾಯುವ ಹಾಗೆ ಮಾಡಿ ನೀನೂ ಮರಣಕ್ಕೆ ಗುರಿಯಾದೆ ನಿನ್ನ ಅಪರಾಧದಿಂದ

ಲೇ ನಿನ್ನ ಸಹೋದರರೆಲ್ಲರೂ ಕೊಲ್ಲಲ್ಪಟ್ಟರು ಜ್ಞಾತಿಗಳೂ ಕೊಲ್ಲಲ್ಪಟ್ಟರು ದೈವವನ್ನು ಮೀರುವುದು ಸಾಧ್ಯವೇ? ನಿರ್ದುಷ್ಟನಾದ ನಿನಗೆ ಈ ಮರಣವೇನೋ ಶ್ಲಾಘ್ಯವಾದುದೇ ನಿಮ್ಮೆಲ್ಲರಿಗಿಂತಲೂ ನಾವೇ ಈಗ ಹೆಚ್ಚು ದುಃಖಿಸತಕ್ಕವರು. ಬಂಧುಗಳನ್ನೆಲ್ಲ ಕಳೆದುಕೊಂಡು ನಾವು ಇಷ್ಟು ಹೀನಸ್ಥಿತಿಯಲ್ಲಿ ಜೀವಿಸಬೇಕಾಗಿದೆಯಲ್ಲವೆ? ಈಗ ವಿಧವೆಯರಾಗಿ ಮಹಾದುಃಖಪೀಡಿತೆಯರಾದ ಸಹೋದರರ ಪತ್ನಿಯರನ್ನೂ, ಸೊಸೆಯರನ್ನೂ ನಾವು ಹೇಗೆ ನೋಡುವುದು? ರಾಜಾ! ಈಗ ನೀನು ನಮ್ಮನ್ನು ಬಿಟ್ಟು ಸ್ವರ್ಗವನ್ನು ಹೊಂದುವೆ ನಿನಗೆ ಸ್ವರ್ಗವು ಶಾಶ್ವತವಾಗಿರುವುದು ನಾವು ನರಕವೆಂದು ಹೆಸರುಗೊಂಡ ಕ್ರೂರವಾದ ದುಃಖದಲ್ಲಿ ಮುಳುಗಿರುವೆವು. ದುಃಖಪೀಡಿತರಾಗಿ ವಿಧವೆಯರಾಗಿರುವ ಧೃತರಾಷ್ಟ್ರನ ಸೊಸೆಯರೂ, ಅವರ ಸೊಸೆಯರೂ ನಿಶ್ಚಯವಾಗಿ ನಮ್ಮನ್ನು ನಿಂದಿಸದೆ ಬಿಡರು' ಎಂದನು. ಧರ್ಮಾತ್ಮನಾದ ಯುಧಿಷ್ಠಿರನು ಹೀಗೆ ಹೇಳಿ ದುಃಖದಿಂದ ನಿಟ್ಟುಸಿರನ್ನು ಬಿಡುತ್ತ ದೀರ್ಘಕಾಲದವರೆಗೆ ಹಲುಬಿದನು

ಇದು ಅರುವತ್ತನೆಯ ಅಧ್ಯಾಯವು

ಭೀಮನು ದುರ್ಯೋಧನನ ವಿಷಯದಲ್ಲಿ ಮಾಡಿದ ಅನ್ಯಾಯಕ್ಕಾಗಿ ಬಲರಾಮನು ಕೋಪಗೊಂಡು ನೇಗಿಲನ್ನೆತ್ತಿ ಆತನನ್ನು ಕೊಲ್ಲಲು ಹೊರಟುದು ಕೃಷ್ಣನು ಸಮಾಧಾನಪಡಿಸಿದುದು. ಬಲರಾಮನು ದ್ವಾರಕೆಗೆ ಹೋದುದು. ಯುಧಿಷ್ಠಿರ ಕೃಷ್ಣ ಭೀಮರ ಸಂಭಾಷಣಗಳು

ಆಗ ಧೃತರಾಷ್ಟ್ರನು 'ಸಂಜಯಾ! ದುರ್ಯೋಧನನು ಹಾಗೆ ಅಧರ್ಮದಿಂದ ಕೊಲ್ಲಲ್ಪಟ್ಟುದನ್ನು ಕಂಡು ಬಲರಾಮನಾದರೂ ಸುಮ್ಮನಿದ್ದನೇ? ಗದಾಯುದ್ಧದ ಮರ್ಮಗಳನ್ನರಿತವನೂ, ಸಮರ್ಥನೂ ಆದ ಬಲರಾಮನು ಆಗ ಏನು ಮಾಡಿದನೋ ನನಗೆ ತಿಳಿಸು' ಎಂದನು

ಆಗ ಸಂಜಯನು 'ಭೀಮನು ನಿನ್ನ ಮಗನ ತಲೆಯನ್ನು ತುಳಿದುದನ್ನು ಕಂಡು ಬಲರಾಮನಿಗೆ ಬಹಳ ಕೋಪವು ಬಂದಿತು. ಆಗ ಆತನು

ರಾಜಸಭೆಯ ಮಧ್ಯದಲ್ಲಿ ಕೈಯನ್ನು ಮೇಲಕ್ಕೆತ್ತಿ, ದೀನಸ್ವರದಿಂದ 'ಭೀಮಾ! ಛೀ! ಛೀ! ಧರ್ಮಯುದ್ಧದಲ್ಲಿ ನಾಭಿಯ ಕೆಳಗೆ ಹೊಡೆಯುವುದು ನಿಂದಾಸ್ಪದವಲ್ಲವೆ? ಹೀಗೆ ನೀನು ಗದಾಯುದ್ಧದಲ್ಲಿ ಇದುವರೆಗೆ ಅನ್ಯಾಯಮಾಡಿದುದನ್ನು ನಾವು ನೋಡಿಲ್ಲ ರಾಜರೆ! ಕೇಳಿರಿ! ನಾಭಿಯಕೆಳಗೆ ಹೊಡೆಯಬಾರದೆಂದು ಶಾಸ್ತ್ರವಿಧಿ! ಇವನಾದರೋ ಆ ಶಾಸ್ತ್ರನಿಯಮವನ್ನು ಮೀರಿ ತನ್ನ ಇಷ್ಟಾನುಸಾರವಾಗಿ ನಡೆದಿರುವನು' ಎಂದನು ಅವನಿಗೆ ಮೇಲೆಮೇಲೆ ಕೋಪವು ಮಿತಿಮೀರುತ್ತಬಂದಿತು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ದುರ್ಯೋಧನನನ್ನು ನೋಡುತ್ತ ಕೃಷ್ಣನನ್ನು ಕುರಿತು 'ಕೃಷ್ಣಾ! ಈ ದುರ್ಯೋಧನನು ಸೋತುಬಿದ್ದನೆಂಬುದನ್ನು ನಾನು ಸಮ್ಮತಿಸಲಾರೆನು ಗದಾಯುದ್ಧದಲ್ಲಿ ನಾನುಹೊರತು ಇವನಿಗೆ ಬೇರೆ ಸಮಾನರೇ ಇಲ್ಲ ಆಶ್ರಿತನ ದೌರ್ಬಲ್ಯದಿಂದ ಆಶ್ರಯವೂ ಅಲಕ್ಷ್ಯಮಾಡಲ್ಪಟ್ಟಂತಾಯಿತು' ಎಂದು ಹೇಳಿ, ನೇಗಿಲನ್ನು ಮೇಲೆತ್ತಿ ಹಿಡಿದು ಕೋಪದಿಂದ ಭೀಮನನ್ನಿದಿರಿಸಿ ಹೊರಟನು ಮೇಲೆತ್ತಿದ ನೀಡಿದ ತೋಳುಳ್ಳ ಆತನ ರೂಪವು ಆಗ ಗೈರಿಕಧಾತುಗಳಿಂದ ಕೂಡಿದ ಶ್ವೇತಪರ್ವತಕ್ಕೆ ಸಮಾನವಾಗಿದ್ದಿತು ರಾಜಾ! ಬಲರಾಮನ ಕ್ರೋಧವನ್ನು ಕಂಡಾಗಲೂ ಅರ್ಜುನನೇ ಮೊದಲಾಗಿ ಶಸ್ತ್ರಧಾರಿಗಳಾದ ಸಹೋದರರ ನಡುವೆ ಇದ್ದ ಭೀಮನು ಎದೆಗುಂದದೆ ಸುಮ್ಮನೆ ನೋಡುತಿದ್ದನು ಇಷ್ಟರಲ್ಲಿ ಕೃಷ್ಣನು ವಿನಯದಿಂದ ಬಂದು ಎರಡು ಕೈಗಳಿಂದಲೂ ಪ್ರಯತ್ನಪೂರ್ವಕವಾಗಿ ಬಲರಾಮನನ್ನು ತಡೆದು ನಿಲ್ಲಿಸಿಕೊಂಡನು ಶ್ವೇತಕೃಷ್ಣವರ್ಣದಿಂದೊಪ್ಪುವ ಆ ರಾಮಕೃಷ್ಣರಿಬ್ಬರೂ, ಕೈಲಾಸವೂ, ಅಂಜನಾದ್ರಿಯೂ ಒಂದನ್ನೊಂದು ಸಂಧಿಸಿದಂತೆಯೂ, ಸಂಧ್ಯಾಕಾಲದಲ್ಲಿ ಆಕಾಶದಲ್ಲಿ ಕಾಣಿಸುವ ಚಂದ್ರಸೂರ್ಯರಂತೆಯೂ ಪ್ರಕಾಶಿಸಿದರು ಆಗ ಕೃಷ್ಣನು ಕೋಪಗೊಂಡ ಬಲರಾಮನನ್ನು ಸಮಾಧಾನಪಡಿಸುತ್ತ 'ಅಣ್ಣಾ! ತಮ್ಮ ವೃದ್ಧಿ, ತಮ್ಮ ಮಿತ್ರರ ಅಭಿವೃದ್ಧಿ, ಮಿತ್ರಮಿತ್ರರ ಅಭಿವೃದ್ಧಿ, ಇದರಂತೆಯೇ ಶತ್ರುಕ್ಷಯ, ಶತ್ರುಮಿತ್ರಕ್ಷಯ, ಆ ಶತ್ರುಗಳ ಮಿತ್ರಮಿತ್ರರ ಕ್ಷಯ, ಇವಾರೂ ಒಬ್ಬನಿಗೆ ವೃದ್ಧಿಕರವಾದುವು ಯಾವಾಗ ಇವು ತನ್ನಲ್ಲಿಯೂ, ತನ್ನ ಮಿತ್ರರಲ್ಲಿಯೂ ವಿಪರೀತವಾಗುವುದೋ ಆಗ ಬಹಳ ಸಂಕಟಕ್ಕೆ ಒಳ

ಗಾಗಬೇಕಾಗುವುದು ಆಗ ದ್ವೇಷಶಾಂತಿಯನ್ನು ತ್ವರೆಯಿಂದ ಮಾಡಿ ಕೊಳ್ಳಬೇಕು ಪಾಂಡವರು ನಮಗೆ ಸಹಜಮಿತ್ರರು ಶುದ್ಧವಾದ ಪೌರು ಷವುಳ್ಳವರು ನಮ್ಮ ಅತ್ತೆಯ ಮಕ್ಕಳು ! ಅವರು ಶತ್ರುಗಳಿಂದ ಬಹಳ ಕಷ್ಟಕ್ಕೊಳಗಾಗಿದ್ದವರು ! ಅಲ್ಲದೆ ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳು ವುದೂ ಕ್ಷತ್ರಿಯಧರ್ಮವೆಂದು ತಿಳಿ ಭೀಮನು ತನ್ನ ಗದೆಯಿಂದ ಮಹಾ ಯುದ್ಧದಲ್ಲಿ ದುರ್ಯೋಧನನ ತೊಡೆಗಳೆರಡನ್ನೂ ಮುರಿಯುವೆನು' ಎಂದು ಹಿಂದೆ ಸಭೆಯ ಮಧ್ಯದಲ್ಲ ಪ್ರತಿಜ್ಞೆಮಾಡಿದ್ದನಲ್ಲವೆ ? 'ನಿನ್ನ ತೊಡೆಗ ಳೆರಡನ್ನೂ ಭೀಮನು ತನ್ನ ಗದೆಯಿಂದ ಮುರಿಯುವನು' ಎಂದು ಮೈ ತ್ರೇಯಮಹರ್ಷಿಯೂ ಮೊದಲೇ ದುರ್ಯೋಧನನನ್ನು ಶಪಿಸಿದ್ದನಲ್ಲವೆ? ಆದುದರಿಂದ ನನಗೆ ಭೀಮನ ಕಾರ್ಯದಲ್ಲ ಯಾವ ದೋಷವೂ ತೋರುವು ದಿಲ್ಲ ನೀನು ಕೋಪಿಸಿಕೊಳ್ಳಬಾರದು ನಮ್ಮೊಡನೆ ನೇರಿ ನಮ್ಮಲ್ಲಿ ವಿಶ್ವಾಸವುಳ್ಳ ಪಾಂಡವರಲ್ಲಿ ನಮಗೆ ಜನ್ಮಸಿದ್ಧವಾದ ಪ್ರೀತಿಯು ಏರ್ಪಟ್ಟಿ ರುವುದು ಅವರ ಅಭಿವೃದ್ಧಿಯೇ ನಮ್ಮ ಅಭಿವೃದ್ಧಿಯಲ್ಲವೆ ? ಅಣ್ಣಾ ! ಶಾಂತನಾಗು !' ಎಂದನು ಧರ್ಮವಿದನಾದ ಬಲರಾಮನು ಕೃಷ್ಣನ ಮಾತನ್ನು ಕೇಳಿ 'ಕೃಷ್ಣಾ ! ಹಾಗಲ್ಲ ! ಸಾಧುಗಳು ಧರ್ಮವನ್ನು ಅವ ಲಂಬಿಸುವರು ಆ ಧರ್ಮವು ಅರ್ದ ಕಾಮಗಳೆಂಬೆರಡರಿಂದಲೂ ಕ್ಷಯಿ ಸುವುದು ಅತ್ಯಾಶೆಯುಳ್ಳವನಿಗೆ ಅರ್ಥವೇ ಪ್ರಧಾನವಾಗಿಯೂ, ಅತ್ಯಂತ ಕಾಮುಕನಿಗೆ ಕಾಮವೇ ಪ್ರಧಾನವಾಗಿಯೂ ಇರುವುದರಿಂದ, ಅವೆರಡೂ ಧರ್ಮವನ್ನು ಮೆಟ್ಟಬಿಡುವುದು ಯಾವಾತನು ಧರ್ಮಾರ್ಥಗಳನ್ನೂ, ಧರ್ಮ ಕಾಮಗಳನ್ನೂ, ಕಾಮಾರ್ಥಗಳನ್ನೂ ಕೆಡಿಸದೆ ಸಮವಾಗಿ ಅನುಷ್ಠಿ ಸುವನೋ ಆತನು ಅಧಿಕ ಸುಖವನ್ನು ಪಡೆಯುವನು ಭೀಮಸೇನನು ಈಗ ಧರ್ಮವನ್ನು ಕೆಡಿಸಿದುದರಿಂದ, ನನ್ನ ಮನಸ್ಸು ಕಲಗಲು ಕಾರಣವಾ ಯಿತು. ಈಗ ಬಂದ ವ್ಯಾಕುಲವೆಲ್ಲವೂ 'ಈ ಕಾರಣದಿಂದಲೇ !' ಎಂದನು.

ಆಗ ಕೃಷ್ಣನು 'ನೀನು ಕೋಪವಿಲ್ಲದವನು! ಧರ್ಮಾತ್ಮನು! ಯಾವಾಗಲೂ ಧರ್ಮಾಸಕ್ತನೆಂದು ಪ್ರಪಂಚದಲ್ಲಿ ಪ್ರಸಿದ್ಧಿಗೊಂಡವನು! ಆದುದರಿಂದ ತಾಳ್ಮೆಯನ್ನವಲಂಬಿಸು ಕೋಪವನ್ನು ಪ್ರಕಟಿಸಬೇಡ.

ಈಗ ಕಲಿಯುಗವು ಬಂದುಬಿಟ್ಟಿತು ಭೀಮನ ಪ್ರತಿಜ್ಞೆಯನ್ನು ನೆರವೇರಿಸು ಪ್ರತಿಜ್ಞಾಪಾಲನಕ್ಕಾಗಿ ಭೀಮನು, ವಂಚಕನಾದ ದುರ್ಯೋಧನನನ್ನು ಕೊಂದು ದ್ವೇಷಪ್ರತಿಜ್ಞೆಗಳೆರಡರ ವಿಷಯದಲ್ಲಿಯೂ ತನ್ನ ಋಣವನ್ನು ತೀರಿಸಿಕೊಂಡಂತಾಗಲಿ ಯಾವನು ವಂಚಕನಾದ ಶತ್ರುವನ್ನು ಯುದ್ಧದಲ್ಲಿ ವಂಚನೆಯಿಂದ ಕೊಲ್ಲುವನೋ, ಆತನು ಆ ಯುದ್ಧದಿಂದ ಅಧರ್ಮಕ್ಕೆ ಗುರಿಯಾಗುವುದಿಲ್ಲ ಈ ದುರ್ಯೋಧನನಿಂದ ಪ್ರೇರಿತನಾಗಿಯೇ ಅಲ್ಲವೆ ಹಿಂದೆ ಕರ್ಣನು, ವೀರನೂ, ಕೌರವ ವೃಷ್ಣಿಕುಲಗಳೆರಡಕ್ಕೂ ಕೀರ್ತಿಯನ್ನು ತರತಕ್ಕವನೂ ಆದ ಅಭಿಮನ್ಯುವಿನ ಬಿಲ್ಲನ್ನು ಆತನ ಹಿಂದೆ ನಿಂತು ಭೇದಿಸಿದನು ಬಿಲ್ಲು ಮುರಿದು, ರಥವು ಹೋದರೂ ಪೌರುಷವನ್ನು ವ್ಯಕ್ತಪಡಿಸುತ್ತ ಯುದ್ಧಕ್ಕೆ ನಿಂತ ಆ ಅಭಿಮನ್ಯುವನ್ನು ನಿರಾಯುಧನನ್ನಾಗಿ ಮಾಡಿ, ಅನೇಕರು ಒಂದಾಗಿ ಸೇರಿ ಕೊಂದರಲ್ಲವೆ ? ಹುಟ್ಟಿದಾಗಿನಿಂದಲೂ ಕೆಟ್ಟಗುಣವುಳ್ಳವನೂ, ಪಾಪಕೃತ್ಯಗಳಲ್ಲಿಯೇ ಆಸಕ್ತನೂ, ದುಷ್ಟನೂ, ಕುಲಗೇಡಿಯೂ ಆದ ಈ ದುರ್ಯೋಧನನು ಭೀಮಸೇನನಿಂದ ಕೊಲ್ಲಲ್ಪಟ್ಟುದು ನ್ಯಾಯವೇ ? ಭೀಮಸೇನನು ಹದಿಮೂರು ವರ್ಷಗಳ ಕಾಲದಿಂದ ಮಾಡಿದ್ದ ಪ್ರತಿಜ್ಞೆಯನ್ನು ದುರ್ಯೋಧನನೇಕೆ ತಿಳಿದುಕೊಳ್ಳಲಿಲ್ಲ? ಮೇಲೆ ಬಿದ್ದು ತನ್ನನ್ನು ಕೊಲ್ಲುವ ಪ್ರಯತ್ನದಲ್ಲಿದ್ದಾಗ ಆ ದುರ್ಯೋಧನನ ತೊಡೆಗಳೆರಡನ್ನೂ ಭೀಮನು ತನ್ನ ಗದೆಯಿಂದ ಪ್ರಹರಿಸಿದನಲ್ಲದೆ, ಆತನು ಸುಮ್ಮನೆ ನಿಂತಿರುವಾಗಾಗಲಿ, ಮಂಡಲಗತಿಯಲ್ಲಿದ್ದಾಗಲಾಗಲಿ ಹೊಡೆಯಲಿಲ್ಲ' ಎಂದನು ಕೃಷ್ಣನ ಈ ಕುಯುಕ್ತಿಯನ್ನು ಕೇಳಿ ಬಲರಾಮನಿಗೆ ತೃಪ್ತಿಯಾಗಲಿಲ್ಲ ಧರ್ಮಾತ್ಮನಾದ ದುರ್ಯೋಧನನನ್ನು ಭೀಮನು ಅಧರ್ಮದಿಂದ ಕೊಂದುದರಿಂದ, ಈ ಲೋಕದಲ್ಲೆಲ್ಲ ಕಪಟಯುದ್ಧ ಮಾಡುವವನೆಂಬ ಪ್ರಸಿದ್ಧಿಯನ್ನೇ ಪಡೆಯುವನು. ದುರ್ಯೋಧನನೋ ಧರ್ಮಯುದ್ಧಮಾಡಿದವನು ಧರ್ಮರೀತಿಯಲ್ಲಿ ರಾಜ್ಯಭಾರಮಾಡಿದವನು ಯುದ್ಧದೀಕ್ಷೆಯನ್ನು ಹಿಡಿದು, ಯುದ್ಧರಂಗವೆಂಬ ಯಜ್ಞಶಾಲೆಯನ್ನು ಹೊಡಿ, ಶತ್ರುಗಳೆಂಬ ಅಗ್ನಿಯಲ್ಲಿ ತನ್ನ ದೇಹವನ್ನು ಹೋಮಮಾಡಿ, ಕೀರ್ತಿಯೆಂಬ ಅವಭೃಥವನ್ನು ಪಡೆದುದರಿಂದ ಅವನು ನಂಟರೊಡನೆಯೂ, ಜ್ಞಾತಿಗಳೊಡನೆಯೂ, ಬಂಧುಗಳೊಡನೆಯೂ ಶಾಶ್ವ

ತಸ್ವರ್ಗಕ್ಕೆ ಹೋಗುವನು' ಎಂದನು ಹೀಗೆಂದು ಹೇಳಿ ಬಲರಾಮನು ತನ್ನ ರಥವನ್ನೇರಿ ಗಿರಿಶಿಖರದಮೇಲಿನ ಬಿಳಿಯಮೇಘದಂತೆ ಶೋಭಿಸುತ್ತ ದ್ವಾರಕೆಗೆ ಹೊರಟನು ಓ ರಾಜಾ! ಬಲರಾಮನು ದ್ವಾರಕೆಗೆ ಹೊರಟೊಡನೆಯೇ ಪಾಂಚಾಲರೂ, ವೃಷ್ಣಿಕುಲವೀರರೂ, ಪಾಂಡವರೂ ಮನಸ್ಸಿನಲ್ಲಿ ಚಿಂತಾಕುಲರಾದರು

ಆಗ ದೈನ್ಯದಿಂದಲೂ, ಚಿಂತೆಯಿಂದಲೂ ತಲೆಬಗ್ಗಿಸಿಕೊಂಡಿದ್ದ ಯುಧಿಷ್ಠಿರನನ್ನು ಕುರಿತು ಕೃಷ್ಣನು 'ಧರ್ಮರಾಜಾ! ಯಾವ ಕಾರಣದಿಂದ ನೀನು ಈ ಅಧರ್ಮಕಾರ್ಯಕ್ಕೆ ಅನುಮತಿಸಿ ಸುಮ್ಮನಿದ್ದೆ? ಬಂಧುಗಳನ್ನು ಬಲಿಕೊಟ್ಟು, ತಾನೂ ಕೆಳಗೆ ಬಿದ್ದು, ಪ್ರಜ್ಞಾಶೂನ್ಯನಾದ ಈ ದುರ್ಯೋಧನನ ತಲೆಯನ್ನು ಭೀಮನು ತನ್ನ ಕಾಲಿನಿಂದ ತುಳಿಯುವುದನ್ನು ನೋಡುತ್ತ ಎಲ್ಲಾ ಧರ್ಮಗಳನ್ನರಿತ ನೀನೂ ಯಾವ ಕಾರಣದಿಂದ ಉಪೇಕ್ಷೆಮಾಡುತ್ತಿದ್ದೆ?' ಎನಲು, ಯುಧಿಷ್ಠಿರನು 'ಓ ಮಾಧವಾ! ವೃಕೋದರನು ಕೋಪದಿಂದ ದುರ್ಯೋಧನರಾಜನ ತಲೆಯನ್ನೊದೆದುದೇನೋ ಸರ್ವಥಾ ನನಗೆ ಸಮ್ಮತವಲ್ಲ ಈ ಕುಲನಾಶಕ್ಕಾಗಿಯೂ ನಾನು ಸಂತೋಷಿಸುವವನಲ್ಲ ನಾವೇನೋ ಧೃತರಾಷ್ಟ್ರಪುತ್ರರ ಕಪಟದಿಂದ ನಿತ್ಯವೂ ವಂಚಿಸಲ್ಪಟ್ಟವರೇ! ಮತ್ತು ಅವರು ಅನೇಕ ಕ್ರೂರವಾಕ್ಯಗಳನ್ನಾಡಿ ನಮ್ಮನ್ನು ಕಾಡಿಗೆ ಕಳುಹಿಸಿದರು ಓ ವೃಷ್ಣಿಕುಲಶ್ರೇಷ್ಠಾ! ಭೀಮಸೇನನ ಮನಸ್ಸಿನಲ್ಲಿ ಆ ದುಃಖವು ಮಿತಿಮೀರಿಹೋಗಿರುವುದೆಂದು ನೆನೆಸಿ ನಾನೂ ಉಪೇಕ್ಷೆಯಿಂದಿದ್ದೆನು ಆದುದರಿಂದ ದುರ್ಬುದ್ಧಿ, ದುರಾಶೆ, ದುಷ್ಕಾಮಗಳಿಗೊಳಗಾಗಿ ದುರ್ಜನರನ್ನೇ ಹಿಂಬಾಲಿಸುತಿದ್ದ ದುರ್ಯೋಧನನನ್ನು ಕೊಂದುದು ಧರ್ಮವಾಗಿರಲಿ, ಅಧರ್ಮವಾಗಿರಲಿ, ಭೀಮನು ತನ್ನ ಪ್ರತಿಜ್ಞಾಪೂರ್ತಿಯನ್ನು ಮಾಡಿಕೊಳ್ಳಲಿ' ಎಂಬುದಕ್ಕಾಗಿ ನಾನು ಸುಮ್ಮನಿದ್ದೆನು' ಎಂದನು ಆ ಮಾತುಗಳನ್ನು ಕೇಳಿ, ಮಹಾಬಾಹುವೂ, ಯದುಕುಲದುರಂಧರನೂ ಆದ ಕೃಷ್ಣನು ಯುಧಿಷ್ಠಿರನನ್ನು ಕುರಿತು 'ಸರಿ! ಹಾಗಿದ್ದರೆ ಅವರ ಇಷ್ಟಾನುಸಾರವಾಗಿ ನಡೆಯಲಿ' ಎಂದು ಬಹಳ ಕಷ್ಟದಿಂದ ಹೇಳಿ, ಆಮೇಲೆ ಭೀಮನ ಮನಸ್ತೃಪ್ತಿಗಾಗಿ ಆತನು

ಯುದ್ಧದಲ್ಲಿ ಮಾಡಿದ ಸಾಹಸಕಾರ್ಯವೆಲ್ಲವನ್ನೂ ಸ್ತುತಿಸತೊಡಗಿದನು. ಅರ್ಜುನನು ಸಹೋದರನಾದ ಭೀಮನ ವಿಷಯವಾಗಿ ಒಳ್ಳೆಯ ಮಾತನ್ನಾಗಲಿ, ಕೆಟ್ಟಮಾತನ್ನಾಗಲಿ ಆಡಲಿಲ್ಲ ಕೋಪದಿಂದಲೂ, ಜಯೋತ್ಸಾಹದಿಂದಲೂ ಅರಳಿದ ಕಣ್ಣುಳ್ಳ ತೇಜಸ್ವಿಯಾದ ಭೀಮಸೇನನು, ಯುದ್ಧದಲ್ಲಿ ನಿನ್ನ ಮಗನನ್ನು ಕೊಂದಮೇಲೆ, ಚಿಂತಾಕುಲನಾಗಿ, ಧರ್ಮಾತ್ಮನಾದ ಯುಧಿಷ್ಠಿರನಿಗೆ ಅಭಿವಾದನಮಾಡಿ, ಇದಿರಲ್ಲ ನಿಂತು ಎರಡು ಕೈಗಳನ್ನೂ ಜೋಡಿಸಿಕೊಂಡು ' ರಾಜಾ ! ಶತ್ರುನಾಶವಾಯಿತು ನೀನೂ ಕ್ಷೇಮದಿಂದಿರುವೆ ! ಈ ಭೂಮಂಡಲವೆಲ್ಲವೂ ಈಗ ನಿನ್ನದಾಗಿರುವುದು ಇನ್ನು ಇದನ್ನು ಪರಿಪಾಲಿಸು ಸ್ವಧರ್ಮವನ್ನು ಕಾಪಾಡು. ಯಾವಾತನು ವಂಚನೆಯಿಂದ ಈ ವೈರವನ್ನುಂಟುಮಾಡಿದನೋ, ಆ ವಂಚನಾಭಿಲಾಷಿಯಾದ ದುರ್ಯೋಧನನು ಹತನಾಗಿ ಭೂಮಿಯಲ್ಲಿ ಮಲಗಿರುವನು ದುಶ್ಶಾಸನನೇ ಮೊದಲಾಗಿ ಕ್ರೂರಭಾಷಿಗಳಾದ ನಿನ್ನ ಎಲ್ಲಾ ಶತ್ರುಗಳೂ ರಾಧೇಯನೂ, ಶಕುನಿಯೂ ಕೊಲ್ಲಲ್ಪಟ್ಟರು ಸಮಸ್ತ ರತ್ನಗಳಿಂದಲೂ, ಪರ್ವತವನಗಳಿಂದಲೂ ತುಂಬಿದ ಈ ಭೂಮಿಯು ಈಗ ನಿಷ್ಕಂಟಕವಾಗಿ ನಿಮ್ಮ ವಶವಾಯಿತು ' ಎಂದನು ಆಗ ಯುಧಿಷ್ಠಿರನು ' ಭೀಮಾ ! ನೀನು ಶತ್ರುನಾಶವನ್ನು ಮುಗಿಸಿದೆ ದುರ್ಯೋಧನನನ್ನು ಕೊಂದೆ ವಾಸುದೇವನ ಅಭಿಮತದಂತೆ ಈ ಬೂಮಿಯೆಲ್ಲವೂ ಜಯಿಸಲ್ಪಟ್ಟಿತು ಭಾಗ್ಯವಿಶೇಷದಿಂದ ನೀನು ನಿನ್ನ ಮಾತೆಯ ಮತ್ತು ನಿನ್ನ ಕೋಪದ ವಿಷಯದಲ್ಲಿ ಋಣಮುಕ್ತನಾದೆ ಭಾಗ್ಯವಿಶೇಷದಿಂದ ಜಯಶಾಲಿಯಾದೆ ನಮ್ಮ ಶತ್ರುಗಳೆಲ್ಲ ಕೊಲ್ಲಲ್ಪಟ್ಟರು ' ಎಂದನು

ಇದು ಅರುವತ್ತೊಂದನೆಯ ಅಧ್ಯಾಯವು



ಪಾಂಚಾಲಾದಿಗಳು ಭೀಮನನ್ನು ಸ್ತುತಿಸಿದುದು, ಕೃಷ್ಣ ದುರ್ಯೋಧನರಿಬ್ಬರೂ ಅನ್ಯೋನ್ಯವಾಗಿ ನಿಂದಿಸಿದುದು ದುರ್ಯೋಧನನು ಆತ್ಮಸ್ತುತಿಮಾಡಿಕೊಂಡಾಗ, ಗಂಧರ್ವರು ಪುಷ್ಪವರ್ಷವನ್ನು ಸುರಿಸಿದುದು ಭೀಷ್ಮನೇ ಮೊದಲಾದವರ ಮರಣಕ್ಕಾಗಿ ದುಃಖಪಡುವ ಪಾಂಡವರನ್ನು ಕೃಷ್ಣನು ಸಮಾಧಾನಪಡಿಸಿದುದು

ಆಗ ಧೃತರಾಷ್ಟ್ರನು 'ಓ ಸಂಜಯಾ! ಯುದ್ಧದಲ್ಲಿ ಭೀಮಸೇನನಿಂದ ಕೊಲ್ಲಲ್ಪಟ್ಟ ದುರ್ಯೋಧನನನ್ನು ಕಂಡು ಪಾಂಡವರೂ, ಸೃಂಜಯರೂ ಏನು ಮಾಡಿದರು?' ಎಂದನು ಆಗ ಸಂಜಯನು 'ಮಹಾರಾಜಾ! ಸಿಂಹದಿಂದ ಕೊಲ್ಲಲ್ಪಟ್ಟ ಮದಿಸಿದ ಕಾಡಾನೆಯಂತೆ ಯುದ್ಧದಲ್ಲಿ ಭೀಮಸೇನನಿಂದ ಹತನಾದ ದುರ್ಯೋಧನನನ್ನು ಕಂಡು, ಕೃಷ್ಣನೂ, ಪಾಂಡವರೂ, ಪಾಂಚಾಲರೂ, ಸೃಂಜಯರೂ ಮನಸ್ಸಿನಲ್ಲಿ ಸಂತೋಷಗೊಂಡು ತಮ್ಮ ಉತ್ತರೀಯಗಳನ್ನು ಹಾರಿಸಿದರು ಸಿಂಹನಾದಗಳನ್ನು ಮಾಡಿದರು ಅವರ ಸಂತೋಷವನ್ನು ಈ ಭೂಮಿಯೇ ತಡೆಯಲಾರದಂತೆ ಅಪಾರವಾಗಿದ್ದಿತು ಕೆಲವರು ಬಿಲ್ಲುಗಳನ್ನು ಒದರಿದರು ಮತ್ತೆ ಕೆಲವರು ಶಂಖಗಳನ್ನೂದಿದರು ಕೆಲವರು ದುಂದುಭಿಗಳನ್ನು ಧ್ವನಿಮಾಡಿದರು. ಹಲವರು ಉತ್ಸಾಹದಿಂದ ಕುಣಿದಾಡಿದರು ಕೆಲವರು ನಗುತ್ತಿದ್ದರು. ಆಗ ಆ ವೀರರು ಅಡಿಗಡಿಗೆ ಭೀಮನನ್ನು ನೋಡಿ 'ಭೀಮಸೇನಾ ಶೂರನಾದ ದುರ್ಯೋಧನನನ್ನು ನೀನು ಗದೆಯಿಂದ ಯುದ್ಧದಲ್ಲಿ ಕೊಂದ ದುಸ್ಸಾಧ್ಯವಾದ ಮಹಾಸಾಹಸಕಾರ್ಯವನ್ನು ಮಾಡಿರುವೆ ಈಗ ನೀನು ಮಾಡಿರುವ ಶತ್ರುವಧೆಯನ್ನು ಜನರು ಮಹಾಯುದ್ಧದಲ್ಲಿ ಇಂದ್ರನಿಂ ನಡೆದ ವೃತ್ರಾಸುರಸಂಹಾರಕ್ಕೆ ಸಮಾನವಾಗಿ ಎಣಿಸಿರುವರು ಅನೇ ಮಾರ್ಗಗಳಿಂದಲೂ, ಮಂಡಲಗತಿಗಳಿಂದಲೂ ನಾಲ್ಕು ಕಡೆಗಳಲ್ಲಿಯು ಸಂಚರಿಸುವ ದುರ್ಯೋಧನನನ್ನು ಭೀಮನುಹೊರತು ಮತ್ತಾರ ಕೊಲ್ಲಲಾರರೆಂದೇ ತಿಳಿದಿರುವರು ನೀನು ಈಗ ದುರ್ಗಮವಾದ ದ್ವೇ ನದಿಯನ್ನು ದಾಟಿ ದಡವನ್ನು ಸೇರಿರುವೆ ಇದು ಇತರರಿಗೆ ಸಾ

ವೇ! ಸೇನಾಮುಖದಲ್ಲಿ ಮದದಾನೆಯಂತಿರುವ ನೀನು ಅದೃಷ್ಟವಶದಿಂದ ದುರ್ಯೋಧನನ ತಲೆಯನ್ನು ಕಾಲಿನಿಂದ ಮೆಟ್ಟಿದೆ ಸಿಂಹವು ಗೋವುಗಳ ರಕ್ತವನ್ನು ಪಾನಮಾಡುವಂತೆ ನೀನು ಅದೃಷ್ಟವಶದಿಂದ ದುಶ್ಶಾಸನನ ರಕ್ತವನ್ನು ಪಾನಮಾಡಿದೆ ಧರ್ಮಾತ್ಮನಾದ ಯುಧಿಷ್ಠಿರನ ವಿಷಯದಲ್ಲಿ ಯಾರುಯಾರು ಅಪಕಾರಮಾಡಿದರೋ ಅವರ ತಲೆಯ ಮೇಲೆ ದೈವಾಧೀನದಿಂದ ನಿನ್ನ ಕಾಲನ್ನು ಮೆಟ್ಟಿದೆ ಓ ಭೀಮಾ! ಶತ್ರುಗಳನ್ನು ಸೋಲಿಸಿದುದರಿಂದಲೂ, ದುರ್ಯೋಧನನ ವಧೆಯಿಂದಲೂ ನಿನ್ನ ಸಾಹಸವು ಜಗತ್ಪ್ರಸಿದ್ಧವಾಯಿತು ವೃತ್ರಾಸುರನು ಹತನಾದಾಗ ವಂದಿಗಳು ಇಂದ್ರನನ್ನು ಹೇಗೋ ಹಾಗೆ ಈಗ ನಾವು ನಿನ್ನನ್ನು ಸ್ತುತಿಸುವೆವು ದುರ್ಯೋಧನನು ಹತನಾದೊಡನೆಯೇ ನಮ್ಮ ಮೈಮೇಲೆ ಕಾಣಿಸಿದ ರೋಮಾಂಚವು ಇನ್ನೂ ಅಡಗದಂತಿದೆ ನೋಡು!' ಎಂದರು. ವಾಯು ಮೊದಲಾದ ದೇವತೆಗಳೂ ಭೀಮಸೇನನನ್ನು ಹೀಗೆಯೇ ಸ್ತುತಿಸಿದರು ಆಗ ಪಾಂಡವರನ್ನೂ ಪಾಂಚಾಲರನ್ನೂ ನೋಡಿ ಕೃಷ್ಣನು ಹೀಗೆ ಹೇಳುವನು 'ಓ ರಾಜಾ! ಮೃತನಾದ ಶತ್ರುವನ್ನು ಕ್ರೂರವಾಕ್ಯಗಳಿಂದ ಮೇಲೆಮೇಲೆ ಕೊಲ್ಲುವುದು ನ್ಯಾಯವಲ್ಲ ಮಂದಬುದ್ಧಿಯುಳ್ಳ ಈ ದುರ್ಯೋಧನನೇನೋ ಹತನಾಗಿ ಬಿದ್ದನು ಯಾವಾಗ ಈತನು ಮಾನವನ್ನು ಬಿಟ್ಟು ದುರಾಶೆಗೊಂಡು ಪಾಪಿಗಳ ಸಹಾಯವನ್ನೇ ನಂಬಿ, ಆಪ್ತರ ಮಾತುಗಳನ್ನು ಮೀರಿ ನಡೆದನೋ, ಆಗಲೇ ಈತನು ಮೃತನಾದಂತೆಯೇ ಹಿಂದೆ ವಿದುರನೂ, ದ್ರೋಣನೂ, ಕೃಪನೂ, ಭೀಷ್ಮ ಸೃಂಜಯರೂ, ಪಾಂಡವರ ವಿಷಯವಾಗಿ ಎಷ್ಟು ಬೇಡಿದರೂ ಇವನು ಅವರಿಗೆ ಪಿತೃಭಾಗವನ್ನು ಕೊಡಲಿಲ್ಲ ಪುರುಷಾಧಮನಾದ ಈತನು ಈಗ ಅವರಿಗೆ ಮಿತ್ರನೂ ಅಲ್ಲ! ಶತ್ರುವೂ ಅಲ್ಲ! ಮರದತುಂಡಿನಂತೆ ಇಲ್ಲಿ ನಿಶ್ಚೇತನನಾಗಿ ಬಿದ್ದಿರುವ ಈತನನ್ನು ಇನ್ನೂ ಕ್ರೂರವಾಕ್ಯಗಳಿಂದ ನಿಂದಿಸಿ ಪ್ರಯೋಜನವೇನು? ರಾಜರೇ! ಶೀಘ್ರವಾಗಿ ರಥಗಳನ್ನೇರಿರಿ! ನಾವು ಹೋಗುವೆವು! ಪಾಪಾತ್ಮನಾದ ಈ ದುರ್ಯೋಧನನು ಮಂತ್ರಿಗಳೊಡನೆಯೂ, ಜ್ಞಾತಿಗಳೊಡನೆಯೂ ಬಂಧುಗಳೊಡನೆಯೂ ನಮ್ಮ ಭಾಗ್ಯವಿಶೇಷದಿಂದ ಕೊಲ್ಲಲ್ಪಟ್ಟನು' ಎಂದನು ಆಗ ದುರ್ಯೋಧನನಿಗೆ ಕೃಷ್ಣನು ಹೇಳಿದ ನಿಂದಾವಾಕ್ಯಗಳನ್ನು

ಕೇಳಿ ಕೋಪವು ದುಸ್ಸಹವಾಯಿತು ಆತನು ಎರಡು ಮೊಳಕೈಗಳನ್ನೂ ಭೂಮಿಯಮೇಲೂರಿ ಹಿಂಭಾಗದಿಂದ ಒರಗಿಕುಳಿತಂತೆಯೇ ಮೇಲೆದ್ದು, ಹುಬ್ಬುಗಂಟಿನಿಂದ ವಾಸುದೇವನನ್ನು ದೃಷ್ಟಿಸಿ ನೋಡಿದನು ಸ್ವಲ್ಪ ಮೇಲಕ್ಕೆದ್ದ ಆ ರಾಜನ ಶರೀರವು ಬಾಲವು ಕುಯ್ಯಲ್ಪಟ್ಟ ಕೋಪಗೊಂಡ ವಿಷಸರ್ಪದಂತಿದ್ದಿತು. ಆಗ ಆತನು ತನ್ನ ಮರಣವೇದನೆಯನ್ನೂ ಲೆಕ್ಕಿಸದೆ, ಕ್ರೂರವಾಕ್ಯಗಳಿಂದ ವಾಸುದೇವನನ್ನು ನಿಂದಿಸತೊಡಗಿದನು

"ಎಲೈ ಕಂಸನಿಗೆ ಸೆರೆಯಾಳಾದ ವಸುದೇವನ ಮಗನೇ! 'ನನ್ನ ತೊಡೆಗಳನ್ನು ಸೀಳೆಂ'ದು ಭೀಮನಿಗೆ ಅನ್ಯಾಯವಾಗಿ ಜ್ಞಾಪಕಪಡಿಸಿದ ನಿನ್ನಿಂದಲ್ಲವೇ ನಾನು ಹೀಗೆ ಅಧರ್ಮದಿಂದ ಈ ಗದಾಯುದ್ಧದಲ್ಲಿ ಕೆಡಹಲ್ಪಟ್ಟೆನು ಇಂತಹ ಅಕಾರ್ಯಕ್ಕಾಗಿ ನಿನಗೆ ನಾಚಿಕೆಯಿಲ್ಲವೆ? ಅರ್ಜುನನನ್ನು ಕುರಿತು ನೀನು ಹೇಳಿದ ವಾಕ್ಯಗಳು ನನಗೆ ತಿಳಿಯಲಿಲ್ಲವೆಂದೆಣಿಸುವೆಯಾ? ನ್ಯಾಯರೀತಿಯಲ್ಲಿ ಯುದ್ಧಮಾಡುತ್ತಿದ್ದ ರಾಜರನ್ನೆಲ್ಲ, ಅನೇಕಕಪಟೋಪಾಯಗಳಿಂದ ಮರಣಕ್ಕೆ ಗುರಿಮಾಡಿದ ನಿನಗೆ ನಾಚಿಕೆ ಅಥವಾ ದಯೆಯೆಂಬುದೇ ಇಲ್ಲವಲ್ಲಾ? ಪ್ರತಿದಿನವೂ ಅನೇಕಾನೇಕ ಮಹಾರಥರನ್ನು ಕೊಲ್ಲುತಿದ್ದ ಪಿತಾಮಹನಾದ ಭೀಷ್ಮನಮುಂದೆ ಶಿಖಂಡಿಯನ್ನು ತಂದೂಡ್ಡಿ ಆತನು ಶರಪಂಜರದಲ್ಲಿ ಮಲಗುವಂತೆ ಮಾಡಿದೆ ಅಶ್ವತ್ಥಾಮನೆಂಬ ಹೆಸರುಳ್ಳ ಒಂದಾನೆಯನ್ನು ಕೊಂದು ಸುಳ್ಳಾಡಿಸಿ, ಆಚಾರ್ಯನಾದ ದ್ರೋಣನು ಪುತ್ರವ್ಯಸನದಿಂದ ಶಸ್ತ್ರವನ್ನು ಬಿಸುಡುವಂತೆ ಮಾಡಿದೆ ಇದೆಲ್ಲವೂ ನನಗೆ ತಿಳಿಯದೇನು? ವೀರನಾದ ಆ ದ್ರೋಣನನ್ನು ಕ್ರೂರನಾದ ಧೃಷ್ಟದ್ಯುಮ್ನನು ಕೆಳಗೆ ಬೀಳಿಸಿದ ಸಮಯದಲ್ಲಿಯೂ ನೀನು ಸುಮ್ಮನೆ ನೋಡಿಕೊಂಡಿದ್ದೆಯೇ ಹೊರತು ಆತನನ್ನು ತಡೆಯಲಿಲ್ಲ. ಅರ್ಜುನನ ವಧಕ್ಕಾಗಿ ಪಡೆದಿದ್ದ ಶಕ್ತ್ಯಾಯುಧವನ್ನು ತಟಸ್ಥನಾಗಿದ್ದ ಘಟೋತ್ಕಚನಮೇಲೆ ಬೀಳುವಂತೆ ಮಾಡಿದ ನಿನಗಿಂತಲೂ ಪಾಪಿಯಾವನುಂಟು? ತೋಳುಗಳು ಕಡಿದು, ಪ್ರಾಯೋಪವೇಶಮಾಡುತಿದ್ದ ಮಹಾಬಲಾಢ್ಯನಾದ ಭೂರಿಶ್ರವಸ್ಸು ನಿನ್ನಿಂದ ಪ್ರೇರಿತನಾದ ಆ ದುಷ್ಟಸಾತ್ಯಕಿಯಿಂದ ಕೊಲ್ಲಲ್ಪಟ್ಟನಲ್ಲವೆ? ಅರ್ಜುನನನ್ನು ಜಯಿಸ

ಬೇಕೆಂಬ ಹಟದಿಂದ ಮಹಾಕಾರ್ಯಗಳನ್ನು ಮಾಡಿದ ಕರ್ಣನೂಕೂಡ ನಾಗಶ್ರೇಷ್ಠನಾದ ಅಶ್ವಸೇನನನ್ನು ತಂದೊಡ್ಡಿದುದರಿಂದಲ್ಲವೇ ಕೊಲ್ಲಲ್ಪಟ್ಟನು. ತನ್ನ ರಥಚಕ್ರಗಳು ಭೂಮಿಯಲ್ಲಿ ಹೂಳಿದಾಗ ವ್ಯಸನದಿಂದ ಪೀಡಿತನಾಗಿ ಚಕ್ರಗಳನ್ನೆತ್ತುವ ಪ್ರಯತ್ನದಲ್ಲಿದ್ದ ಕರ್ಣನನ್ನು ಆ ಸಮಯದಲ್ಲಿ ನೀನು ಹೊಡೆದು ಕೊಲ್ಲಿಸಿದೆ. ನನ್ನನ್ನೂ, ಕರ್ಣನನ್ನೂ, ಭೀಷ್ಮದ್ರೋಣರನ್ನೂ ನೇರವಾಗಿ ಇದಿರಿಸಿ ಯುದ್ಧಮಾಡಿದ್ದರೆ, ನಿಶ್ಚಯವಾಗಿಯೂ ನಿನಗೆ ಜಯವಾಗುತ್ತಿರಲಿಲ್ಲ ಸ್ವಧರ್ಮನಿರತರಾಗಿದ್ದ ಅರಸರೂ, ನಾವೂ, ಇತರರೂ, ಅಯೋಗ್ಯನಾದ ನಿನ್ನಿಂದ ಹೀಗೆ ಕಪಟರೀತಿಯಿಂದಲೇ ಸಂಹರಿಸಲ್ಪಟ್ಟೆವು. ಕೃಷ್ಣಾ ! ಮಾಯಾವಿಯಾದ ನೀನು ಸೂರ್ಯನನ್ನು ಚಕ್ರದಿಂದ ಮರೆಸಿ ಸಿಂಧುರಾಜನಾದ ಜಯದ್ರಥನನ್ನು ಕೊಲ್ಲಿಸಿದೆ. ಇವೆಲ್ಲವೂ ನನಗೆ ತಿಳಿಯದೆಂದೆಣಿಸಿರುವೆಯಾ ? ' ಎಂದನು.

ಅದಕ್ಕೆ ಕೃಷ್ಣನು ' ಓ ಗಾಂಧಾರೀಪುತ್ರಾ ! ಹಾಗಲ್ಲ ! ಪಾಪಮಾರ್ಗವನ್ನವಲಂಬಿಸಿದುದರಿಂದಲೇ ನೀನು ಭ್ರಾತೃಗಳೊಡನೆಯೂ, ಮಕ್ಕಳೊಡನೆಯೂ, ಪರಿವಾರಗಳೊಡನೆಯೂ, ಸುಹೃತ್ತುಗಳೊಡನೆಯೂ ಹತನಾದೆ. ನಿನ್ನೀಪಾಪದಿಂದಲೇ ವೀರರಾದ ಭೀಷ್ಮದ್ರೋಣರೂ ಮೃತರಾದರು ನಿನ್ನ ಮಾರ್ಗವನ್ನನುಸರಿಸಿದುದರಿಂದಲೇ ಕರ್ಣನೂ ಸತ್ತನು ಓ ಮೂಢಾ ! ಹಿಂದೆ ನಾನಾಗಿ ನಿನ್ನಲ್ಲಿಗೆ ಬಂದು ಎಷ್ಟು ಬೇಡಿದರೂ ನಿನ್ನ ದುರಾಶೆಯಿಂದಲೂ, ಶಕುನಿಯಲ್ಲಿ ನಿನಗಿದ್ದ ನಂಬಿಕೆಯಿಂದಲೂ ಪಾಂಡವರಿಗೆ ಪಿತೃಭಾಗವಾದ ರಾಜ್ಯವನ್ನು ಕೊಡದೆಹೋದೆಯಲ್ಲವೆ? ಅಲ್ಲದೆ ನೀನು ಭೀಮನಿಗೆ ವಿಷವನ್ನು ಹಾಕಿಸಿದೆ ! ಪಾಂಡವರೆಲ್ಲರನ್ನೂ ಅವರ ತಾಯಿಯೊಡನೆ ಅರಗಿನ ಮನೆಯಲ್ಲಿ ಸುಡಿಸಲು ಯತ್ನಿಸಿದೆ ! ಗೃಹಲಕ್ಷ್ಮಿಯಾದ ದ್ರೌಪದಿಯನ್ನು ದ್ಯೂತಸಭಾಮಧ್ಯಕ್ಕೆ ಎಳೆಯಿಸಿಕೊಂಡು ಬಂದೆ ! ಓ ನಾಚಿಕೆಗೇಡೀ ! ಆಗ ನೀನು ಆ ಸಭೆಯಲ್ಲಿಯೇ ಕೊಲ್ಲಲ್ಪಡತಕ್ಕವನು. ದ್ಯೂತವನ್ನಾಡಲು ತಿಳಿಯದ ಧರ್ಮರಾಜನನ್ನು ದ್ಯೂತದಲ್ಲಿ ಚತುರನಾದ ಶಕುನಿಯಿಂದ ಕಪಟಮಾರ್ಗದಲ್ಲಿ ಸೋಲಿಸಿದೆ ಆ ಪಾಪಕೃತ್ಯಗಳಿಗಾಗಿಯೇ ನಿನಗೆ ಯುದ್ಧದಲ್ಲಿ ಇಂತಹ ಮರಣವೆಂದು ತಿಳಿ. ನೀಚಾ ! ಪಾಂಡ

ವರು ಬೇಟೆಗೆ ಹೋಗಿರುವಾಗ ಪಾಪಿಯಾದ ಜಯದ್ರಥನಿಂದ ತೃಣಬಿಂದುವಿನ ಆಶ್ರಮದಲ್ಲಿ ದ್ರೌಪದಿಯನ್ನು ಕ್ಲೇಶಕ್ಕೆ ಗುರಿಮಾಡಿದೆ ಬಾಲಕನಾದ ಅಭಿಮನ್ಯುವನ್ನು ಅವನಿಗೆ ಸಹಾಯಕರಾರೂ ಇಲ್ಲದಿದ್ದಾಗ ನೀನೇ ಕ್ರೌರ್ಯದಿಂದ ಕೊಲ್ಲಿಸಿದೆ ಈ ಪಾಪಗಳಿಗೆ ಫಲವಾಗಿ ನೀನೂ ಈಗ ಕೊಲ್ಲಲ್ಪಟ್ಟೆಯೆಂದು ತಿಳಿ. ಪಾಂಡವರಿಗೆ ಕೇಡನ್ನುಂಟುಮಾಡುವ ಉದ್ದೇಶದಿಂದ, ಯುದ್ಧದಲ್ಲಿ ಸಾಹಸವನ್ನು ತೋರಿಸುತ್ತಿದ್ದ ಭೀಷ್ಮನನ್ನು ಶಿಖಂಡಿಯು ತನ್ನ ಮಿತ್ರರಿಗಾಗಿ ಕೊಂದುದು ಅಕ್ರಮವಲ್ಲ ತನ್ನ ಬ್ರಾಹ್ಮಣಧರ್ಮವನ್ನು ಬಿಟ್ಟು, ನಿನಗೆ ಪ್ರಿಯವನ್ನುಂಟುಮಾಡಬೇಕೆಂಬ ಉದ್ದೇಶದಿಂದ, ಅಸತ್ತುಗಳ ಮಾರ್ಗವನ್ನವಲಂಬಿಸಿದ ದ್ರೋಣಾಚಾರ್ಯನು ಧೃಷ್ಟದ್ಯುಮ್ನನಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟನು ಸಾತ್ಯಕಿಯು ತನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸುವುದಕ್ಕಾಗಿ ಸೋಮದತ್ತಕುಮಾರನಾದ ಭೂರಿಶ್ರವಸ್ಸನ್ನು ಯುದ್ಧದಲ್ಲಿ ಕೊಂದನು ಪುರುಷಶ್ರೇಷ್ಠನಾದ ಅರ್ಜುನನು ಯುದ್ಧಭೂಮಿಯಲ್ಲಿ ಯಾವ ವಿಧದಿಂದಲೂ, ಯಾವಾಗಲೂ ಹೀನಕಾರ್ಯವನ್ನು ಮಾಡತಕ್ಕವನಲ್ಲವೆಂದು ತಿಳಿ ಓ ದುರ್ಮತೀ! ಅರ್ಜುನನಿಗೆ ಕರ್ಣನನ್ನು ಪ್ರಹರಿಸಲು ಬೇರ ಹಲವು ಸಂದರ್ಭಗಳೊದಗಿದ್ದರೂ, ವೀರತ್ವವನ್ನು ಸ್ಥಾಪಿಸಲು ಆತನನ್ನು ಯುದ್ಧದಲ್ಲಿಯೇ ಕೊಂದನು ಹೀಗಿರುವಾಗ ನೀನು ಸ್ವೇಚ್ಛೆಯಾಗಿ ಹರಟಬೇಡ. ದೇವತೆಗಳ ಅಭಿಮತವನ್ನು ತಿಳಿದು, ಅವರಿಗೆ ಪ್ರಿಯವನ್ನೂ, ಹಿತವನ್ನೂ ಮಾಡಬೇಕೆಂಬಭಿಲಾಷೆಯಿಂದಲೇ ಅರ್ಜುನನಮೇಲೆ ಬೀಳಲಿದ್ದ ದೊಡ್ಡ ನಾಗಾಸ್ತ್ರವನ್ನು ನಾನು ಅವನಮೇಲೆ ಬೀಳದಂತೆ ಮಾಡಿದೆನು ನೀನೂ, ಭೀಷ್ಮನೂ, ಕರ್ಣನೂ, ದ್ರೋಣನೂ, ದ್ರೋಣಪುತ್ರನೂ, ವಿರಾಟನಗರದಲ್ಲಿ ಆ ಅರ್ಜುನನ ದಯೆಯಿಂದಲೇ ಪ್ರಾಣವನ್ನುಳಿಸಿಕೊಂಡು ಬಂದಿರಿ ಗಂಧರ್ವರಲ್ಲಿ ಪಾರ್ಥನು ತೋರಿಸಿದ ಪರಾಕ್ರಮವನ್ನು ನೆನೆಸಿಕೋ! ಓ ಗಾಂಧಾರೀನಂದನಾ! ಪಾಂಡವರು ನಿನ್ನ ವಿಷಯದಲ್ಲಿ ಮಾಡಿರುವ ಈಗಿನ ಕಾರ್ಯವು ಎಂದಿಗೂ ಅಧರ್ಮವಲ್ಲ. ಶತ್ರುನಿಗ್ರಹವೇ ಕ್ಷತ್ರಿಯರ ಧರ್ಮವು. ಆ ಧರ್ಮಕ್ಕನುಗುಣವಾಗಿಯೇ ಪಾಂಡವರು ತಮ್ಮ ಭುಜಬಲದಿಂದ ಯುದ್ಧದಲ್ಲಿ ಜಯಿಸಿದರು. ನೀನು ಪಾಪಿಯಾದುದರಿಂದ ನಾಶ

ಹೊಂದಿದೆ ನಾವು ಯಾವಯಾವ ಅಕಾರ್ಯವನ್ನು ಮಾಡಿದೆವೆಂದು ನೀನು ತಿಳಿಸುವೆಯೋ, ಅವೆಲ್ಲವನ್ನೂ ನಾವು ನಿನ್ನ ದುರ್ಗುಣಕ್ಕಾಗಿಯೇ, ಮಾಡಬೇಕಾಯಿತು ಬೃಹಸ್ಪತಿ ಶುಕ್ರರ ಉಪದೇಶಗಳನ್ನು ನೀನು ಕೇಳಿಲ್ಲವೆ? ನೀನಾದರೋ ಹೆಮ್ಮೆಯಿಂದ ಹಿರಿಯರ ಮಾತನ್ನು ಗೌರವಿಸಲಿಲ್ಲ. ಲೋಭಕಾಮುಗಳಿಗೆ ವಶನಾಗಿ ಅಕಾರ್ಯಗಳನ್ನು ಮಾಡಿದೆ ಆ ದುಷ್ಕರ್ಮಗಳ ಫಲವನ್ನು ಈಗ ಅನುಭವಿಸುವೆ' ಎಂದನು

ಆಗ ದುರ್ಯೋಧನನು 'ಓ ಕೃಷ್ಣಾ! ನಾನು ವಿಧ್ಯುಕ್ತರೀತಿಯಲ್ಲಿ ಅಧ್ಯಯನಮಾಡಿದೆನು! ಅನೇಕ ದಾನಗಳನ್ನು ಮಾಡಿದೆನು ಸಮುದ್ರಪರಿವೃತವಾದೀ ಭೂಮಿಯೆಲ್ಲವನ್ನೂ ಅನುಭವಿಸಿದೆನು ಶತ್ರುಗಳೆಲ್ಲರನ್ನೂ ಜಯಿಸಿ ಚಕ್ರಾಧಿಪತಿಯಾಗಿದ್ದೆನು ನನ್ನಂತೆ ಭಾಗ್ಯಶಾಲಿಯು ಬೇರೆ ಯಾವನುಂಟು? ಈಗಲೂ ಸ್ವಧರ್ಮವನ್ನು ಸರಿಯಾಗಿ ಅನುಷ್ಠಿಸುವ ಕ್ಷತ್ರಿಯರಿಗೆ ಯೋಗ್ಯವಾದ ಈ ವೀರಮರಣವನ್ನೇ ಪಡೆದೆನು ನನಗಿಂತಲೂಉತ್ತಮವಾದ ಮರಣವನ್ನು ಪಡೆದವನಾವನಿರುವನು? ದೇವಮನುಷ್ಯರಿಗೆ ತಕ್ಕ ಉತ್ತಮವಾದ ಭೋಗಗಳೆಲ್ಲವನ್ನೂ, ಸಕಲೈಶ್ವರ್ಯವನ್ನೂ ಅನುಭವಿಸಿ, ಈಗ ನಾನು ಬಂಧುಗಳೊಡನೆಯೂ, ಆಪ್ತರೊಡನೆಯೂ ಸ್ವರ್ಗವನ್ನು ಸೇರುವೆನು ನೀವೋ ಈ ಲೋಕದಲ್ಲಿ ಜನನಿಂದೆಗಳಿಗೊಳಗಾಗಿ ವ್ಯಸನಪಡುವಿರಿ ಈಗ ಭೀಮನು ತನ್ನ ಕಾಲುಗಳಿಂದ ನನ್ನ ತಲೆಯನ್ನೊದೆದುದಕ್ಕಾಗಿ ನನಗೆ ವ್ಯಸನವಿಲ್ಲ ಹೇಗಿದ್ದರೂ ಇನ್ನೊಂದು ಕ್ಷಣದಲ್ಲಿ ಕಾಗೆಗಳೋ, ಹದ್ದುಗಳೋ ಈ ನನ್ನ ತಲೆಯಮೇಲೆ ಕಾಲಿಡುವುವು' ಎಂದನು ದುರ್ಯೋಧನನು ಇದನ್ನು ಹೇಳಿ ಮುಗಿಸುವುದರೊಳಗಾಗಿ ಆಕಾಶದಿಂದ ದಿವ್ಯ ವಾಸನೆಗಳುಳ್ಳ ಪುಷ್ಪವರ್ಷವು ಸುರಿಯಿತು ಗಂಧರ್ವರು ಇಂಪಾಗಿ ನಾಲ್ಕುವಿಧ ವಾದ್ಯಗಳನ್ನು ಮೊಳಗಿಸಿದರು. ರಾಜನ ಸಾಹಸಕೃತ್ಯಗಳನ್ನು ಅಪ್ಸರಸ್ಸುಗಳು ಗಾನ ಮಾಡಿದರು ಸಿದ್ಧರು 'ಭಲೆ! ಭಲೆ!' ಎಂದು ಶ್ಲಾಘಿಸುತಿದ್ದರು ತಂಗಾಳಿಯು ಸುಗಂಧವನ್ನು ಬೀರುತ್ತಾ ಮೆಲ್ಲನೆ ಬೀಸಿತು. ಎಲ್ಲಾ ದಿಕ್ಕುಗಳೂ ಪ್ರಕಾಶಿಸಿದುವು. ಆಕಾಶವು ವೈಡೂರ್ಯದಂತೆ ಥಳಥಳಿಸಿತು.

ಕೃಷ್ಣನೇ ಮೊದಲಾಗಿ ಎಲ್ಲಾ ಪಾಂಡವರೂ ಈ ಅತ್ಯಾಶ್ಚರ್ಯಗಳನ್ನೂ, ದುರ್ಯೋಧನನಿಗುಂಟಾದ ಆ ಗೌರವವನ್ನೂ ಕಂಡು ನಾಚಿಕೆಗೊಂಡರು ತಮ್ಮಿಂದ ಭೀಷ್ಮದ್ರೋಣರೂ, ಕರ್ಣನೂ, ಭೂರಿಶ್ರವಸ್ಸೂ, ಅಧರ್ಮದಿಂದ ಕೊಲ್ಲಲ್ಪಟ್ಟರೆಂಬುದಕ್ಕಾಗಿ ಚಿಂತಾಕ್ರಾಂತರಾದರು ಹೀಗೆ ದೀನ ಮನಸ್ಕರಾದ ಆ ಪಾಂಡವರನ್ನು ನೋಡಿ ಕೃಷ್ಣನು ಮೇಘದುಂದುಭಿ ಧ್ವನಿಯಂತಿರುವ ಗಂಭೀರಸ್ವರದಿಂದ ' ಈ ದುರ್ಯೋಧನನೂ, ಪರಾಕ್ರಮಶಾಲಿಗಳಾದ ಈ ಮಹಾರಥರೂ ನ್ಯಾಯಯುದ್ಧದಲ್ಲಿ ಬೇರೆ ನಿಮ್ಮಿಂದ ಹತರಾಗತಕ್ಕವರಲ್ಲ ಓ ರಾಜರೇ ! ಆದುದರಿಂದಲೇ ನಾನು ಇವರನ್ನು ಉಪಾಯದಿಂದ ಕೊಲ್ಲಿಸಿದೆನು ಹಾಗೆ ಮಾಡದಿದ್ದಲ್ಲಿ ಪಾಂಡವರಿಗೆ ಎಂದಿಗೂ ಜಯವಾಗುತ್ತಿರಲಿಲ್ಲ ಇವರೆಲ್ಲರೂ ಮಹಾಧನುರ್ಧಾರಿಗಳು! ಅತಿರಥರು ಆ ನಾಲ್ವರನ್ನೂ ನಾಲ್ಕು ದಿಕ್ಪಾಲಕರೂ ಕೂಡ ಧರ್ಮಯುದ್ಧದಲ್ಲಿ ಕೊಲ್ಲಲು ಸಾಧ್ಯವಲ್ಲ ಆದಕ್ಕಾಗಿಯೇ ಇವರು ಕಪಟಮಾರ್ಗದಿಂದಲೇ ಕೊಲ್ಲಲ್ಪಟ್ಟರು ನಮ್ಮ ಶತ್ರುಗಳಲ್ಲಿ ಅನೇಕರು ಹೀಗೆ ವಂಚನೋಪಾಯಗಳಿಂದ ಕೊಲ್ಲಲ್ಪಟ್ಟುದಕ್ಕಾಗಿ ನೀವು ವ್ಯಥೆಗೊಳ್ಳಬೇಡಿರಿ ಅಸುರರನ್ನು ಸಂಹರಿಸುವುದಕ್ಕಾಗಿ ಹಿಂದೆ ದೇವತೆಗಳೂ ಇದೇ ಮಾರ್ಗವನ್ನು ಅನುಸರಿಸಿರುವರು. ಧರ್ಮಾತ್ಮರಿಂದ ಅನುಸರಿಸಲ್ಪಟ್ಟ ಮಾರ್ಗವು ಎಲ್ಲರಿಂದಲೂ ಅನುಸರಣೀಯವಾದುದೇ ಆ ದೇವತೆಗಳಿಗೆ ಬ್ರಹ್ಮದೇವನೇ ಹಾಗೆ ವಿಧಿಸಿರುವನು ಕೇವಲ ಸಾಹಸದಿಂದ ವಿಧಿಯನ್ನು ಯಾರೂ ದಾಟಲಾರರು ಓ ಧನಂಜಯಾ! ಭೂತ ಭವಿಷ್ಯದ್ವರ್ತಮಾನ ಜೀವಿಗಳನ್ನೆಲ್ಲ ನಿಮಿಷಮಾತ್ರದಲ್ಲಿ ಸಂಹರಿಸತಕ್ಕವನೂ ದೈವಗತಿಯನ್ನು ತಪ್ಪಿಸಲಾರನು ಕೃತಕೃತ್ಯರಾದ ನಾವು ಈ ಸಾಯಂಕಾಲದೊಳಗಾಗಿ ನಮ್ಮ ನಮ್ಮ ಸ್ಥಳಗಳಿಗೆ ಹೋಗುವೆವು ,ರಾಜರೆಲ್ಲರೂ ತಮ್ಮತಮ್ಮ ಗಜರಥ ತುರಗಗಳೊಡನೆ ಹಿಂತಿರುಗಲಿ ' ಎಂದನು

ಕೃಷ್ಣನ ಮಾತುಗಳನ್ನು ಕೇಳಿ ಪಾಂಡವರೂ, ಪಾಂಚಾಲರೂ ಸಂತೋಷದಿಂದ ಸಿಂಹಸಮೂಹಗಳಂತೆ ಗರ್ಜಿಸಿದರು. ಜನಾರ್ದನನು ಪಾಂಚಜನ್ಯವೆಂಬ ತನ್ನ ಶಂಖವನ್ನೂದಿದನು ಅರ್ಜುನನೂ ಅನೇ

ದಿಂದ ದೇವದತ್ತವೆಂಬ ತನ್ನ ಶಂಖವನ್ನೂದಿದನು ಹಾಗೆಯೇ ಯುಧಿಷ್ಠಿರನು ವಿಜಯವೆಂಬ ಶಂಖವನ್ನೂ, ಭೀಮನು ಪೌಂಡ್ರವೆಂಬ ಶಂಖವನ್ನೂ, ನಕುಲಸಹದೇವರು ಸುಘೋಷ ಮಣಿಪುಷ್ಪಕಗಳೆಂಬ ಶಂಖಗಳನ್ನೂ, ಧೃಷ್ಟದ್ಯುಮ್ನನು ಚೈತ್ರವೆಂಬ ಶಂಖವನ್ನೂ, ಸಾತ್ಯಕಿಯು ನಂದಿವರ್ಧನವೆಂಬ ಶಂಖವನ್ನೂ ಊದಿದರು ಆ ಶಂಖಗಳ ದೊಡ್ಡ ಶಬ್ದವು ಆಕಾಶವನ್ನೆಲ್ಲ ತುಂಬಿತು ಭೂಮಿಯು ನಡುಗಿತು. ಹೀಗೆಯೇ ಶಂಖ, ಭೇರಿ, ಪಣವ, ಆನಕ, ಗೋಮುಖಾದಿ ವಾದ್ಯಗಳು ಪಾಂಡವಸೈನ್ಯದಲ್ಲಿ ಮೊಳಗಿ, ಅವುಗಳಿಂದ ಘೋರಶಬ್ದವು ಹೊರಟಿತು ಆಗ ಅನೇಕರು, ದುರ್ಯೋಧನನು ಕೊಲ್ಲಲ್ಪಟ್ಟುದನ್ನು ಕಂಡು ಸಂತೋಷದಿಂದ ನಿರ್ಭಯರಾಗಿ ಪಾಂಡವರನ್ನು ಮಂಗಳಕರವಾದ ಸ್ತೋತ್ರಗಳಿಂದ ಸ್ತುತಿಸಿದರು

ಇದು ಅರುವತ್ತೆರಡನೆಯ ಅಧ್ಯಾಯವು



ಪಾಂಡವರು ರಥಗಳನ್ನೇರಿ ದುರ್ಯೋಧನನ ಬಿಡಾರಕ್ಕೆ ಹೋದುದು ಕೃಷ್ಣನು ಅರ್ಜುನನನ್ನು ರಥದಿಂದಿಳಿಸಿ, ತಾನೂ ಇಳಿದೊಡನೆ ಆ ರಥವು ಉರಿದುಹೋಗಲು, ಕೃಷ್ಣನು ಅದರ ಕಾರಣವನ್ನು ಅರ್ಜುನನಿಗೆ ತಿಳಿಸಿದುದು ಕೃಷ್ಣನ ಪ್ರೇರಣೆಯಿಂದ ಪಾಂಡವರು ಆದಿನ ರಾತ್ರಿ ಓಘವತೀನದೀತೀರದಲ್ಲಿ ತಂಗಿದ್ದುದು ಯುಧಿಷ್ಠಿರನ ಹೇಳಿಕೆಯಂತೆ ಕೃಷ್ಣನು ಗಾಂಧಾರಿಯನ್ನು ಸಮಾಧಾನಗೊಳಿಸುವುದಕ್ಕಾಗಿ ಹಸ್ತಿನಾಪುರಕ್ಕೆ ಹೊರಟುದು

ಆಮೇಲೆ ರಾಜರೆಲ್ಲರೂ ಸಂತೋಷದಿಂದ ಶಂಖಗಳನ್ನೂದುತ್ತ, ತಮ್ಮತಮ್ಮ ನಿವಾಸಗಳಿಗೆ ಹೋದರು ಪಾಂಡವರೊಡನೆ ಯುಯುತ್ಸುವೂ, ಸಾತ್ಯಕಿಯೂ ನಿನ್ನ ಮಗನ ಬಿಡಾರಕ್ಕೆ ಹೊರಟರು. ಧೃಷ್ಟದ್ಯುಮ್ನನೂ, ಶಿಖಂಡಿಯೂ, ದ್ರೌಪದೀಪುತ್ರರೂ ಮತ್ತು ಇನ್ನೂ ಇತರ

ಶೂರರೂ ತಮ್ಮ ತಮ್ಮ ಬಿಡಾರಗಳಿಗೆ ಹೊರಟರು. ಆಮೇಲೆ ಆ ಪಾಂಡವರು ಜನಶೂನ್ಯವಾದ ರಂಗಸ್ಥಳಕ್ಕೂ, ಉತ್ಸವಶೂನ್ಯವಾದ ಪಟ್ಟಣಕ್ಕೂ, ಸರ್ಪಗಳಿಂದ ತುಂಬಿದ ಮಡುವಿಗೂ ಸಮಾನವಾಗಿ, ಕೇವಲ ಸ್ತ್ರೀಯರಿಂದಲೂ ಮತ್ತು ನಪುಂಸಕರಿಂದಲೂ, ಕೆಲವು ವೃದ್ಧಮಂತ್ರಿಗಳಿಂದಲೂ ಕೂಡಿದ್ದ ದುರ್ಯೋಧನನ ಬಿಡಾರವನ್ನು ಪ್ರವೇಶಿಸಿದರು ದುರ್ಯೋಧನನ ಮುಂಭಾಗದಲ್ಲಿ ಹೋಗತಕ್ಕ ಭಟರು, ಕಾವಿಯ ಬಣ್ಣದ ಮಾಸಿದ ಬಟ್ಟೆಗಳನ್ನು ಧರಿಸಿ ಬದ್ಧಾಂಜಲಿಗಳಾಗಿ ಪಾಂಡವರನ್ನು ಹಿಂಬಾಲಿಸಿದರು ರಥಿಕಶ್ರೇಷ್ಠರಾದ ಪಾಂಡವರು ಕೌರವರಾಜನ ಬಿಡಾರವನ್ನು ಸೇರಿ, ಅಲ್ಲಿ ತಮ್ಮ ರಥಗಳಿಂದಿಳಿದರು ಯಾವಾಗಲೂ ಪಾಂಡವರಿಗೆ ಪ್ರಿಯಕಾರ್ಯಗಳನ್ನು ಮಾಡುವುದರಲ್ಲಿ ಜಾಗರೂಕನಾದ ಕೃಷ್ಣನು, ಅಲ್ಲಿ ಅರ್ಜುನನನ್ನು ಕುರಿತು “ ಓ ಭರತಕುಲತಿಲಕಾ! ಇನ್ನು ನಿನ್ನ ಗಾಂಡೀವವನ್ನು ಇಳಿಸಿಬಿಡು! ಅಕ್ಷಯವಾದ ನಿನ್ನ ಬತ್ತಳಿಕೆಗಳೆರಡನ್ನೂ ಕಳಚಿಡು ನೀನೂ ಈಗಲೇ ಈ ರಥವನ್ನು ಬಿಟ್ಟು ಇಳಿದುಬಿಡು! ಆಮೇಲೆ ನಾನೂ ರಥದಿಂದ ಇಳಿಯುವೆನು ಇದರಿಂದ ನಿನಗೆ ಒಳ್ಳೆಯದಾಗುವುದು” ಎಂದನು. ಅರ್ಜುನನು ಅದರಂತೆ ನಡೆಸಿದನು. ಅರ್ಜುನನು ಕೆಳಕ್ಕಿಳಿದೊಡನೆ, ಕೃಷ್ಣನೂ ಕುದುರೆಗಳ ಕಡಿವಾಣಗಳನ್ನು ಸಡಿಲಿಸಿ, ತಾನೂ ಆ ರಥದಿಂದ ಕೆಳಕ್ಕಿಳಿದನು ಲೋಕೇಶನೂ, ಮಹಾತ್ಮನೂ ಆದ ಕೃಷ್ಣನು ಕೆಳಕ್ಕಿಳಿದೊಡನೆ, ಆ ರಥದ ಧ್ವಜದಲ್ಲಿ ವಾಸಮಾಡುತ್ತಿದ್ದ ವಾನರನೂ, ದೇವತೆಗಳೂ ಅದೃಶ್ಯರಾಗಿ ಹೊರಟುಹೋದರು ಮೊದಲೇ ದ್ರೋಣಕರ್ಣರ ದಿವ್ಯಾಸ್ತ್ರಗಳಿಂದ ಉರಿಸಲ್ಪಟ್ಟಿದ್ದ ಆ ಮಹಾರಥವು ಒಡನೆಯೇ ಬೆಂಕಿಹತ್ತಿ ಉರಿದು ದಗ್ಧವಾಯಿತು ಆಕಾಶವನ್ನು ಮುಟ್ಟುವಂತೆ ಮಹೋನ್ನತವಾದ ಅದರ ಧ್ವಜವೂ, ರಶ್ಮಿಸಹಿತಗಳಾದ ರಥಾಶ್ವಗಳೂ, ನೊಗ ಮೂಕಿ,ಹಗ್ಗ ಇವುಗಳೊಡನೆ ಮೊತ್ತಕ್ಕೆ ಆ ರಥವು ದಗ್ಧವಾಗಿ ಹೋಯಿತು ಅದನ್ನು ನೋಡಿ ಪಾಂಡವರಿಗೆ ಬಹಳ ವಿಸ್ಮಯವಾಯಿತು ಆಗ ಅರ್ಜುನನು ಕೃಷ್ಣನಮುಂದೆ ಕೈಗಳನ್ನು ಜೋಡಿಸಿ ಅಭಿವಾದನಮಾಡಿ “ ಗೋವಿಂದಾ! ಏನಾಶ್ಚರ್ಯವಿದು? ನನ್ನ ರಥವು ಹೀಗೆ ಇದ್ದಕ್ಕಿದ್ದಹಾಗೆ ದಗ್ಧವಾದುದೇಕೆ? ಓ ಮಹಾಬಾಹೂ! ನಾನು ತಿಳಿಯಬಹುದಾದರೆ ಅದನ್ನು

ನನಗೆ ತಿಳಿಸಬೇಕು" ಎಂದನು ಆಗ ಕೃಷ್ಣನು 'ಓ ಅರ್ಜುನಾ! ಆ ರಥವು ಹಿಂದೆಯೇ ದ್ರೋಣಕರ್ಣರ ದಿವ್ಯಾಸ್ತ್ರಗಳಿಂದ ದಗ್ಧವಾಗಿಹೋಗಿದ್ದಿತು ಆದರೆ, ನಾನು ಅದರಮೇಲೆ ಏರಿ ಕುಳಿತಿದ್ದುದರಿಂದಲೇ ಇದುವರಗೆ ಅದು ಭಸ್ಮವಾಗದಿದ್ದಿತು ಈಗ ನೀನು ಕೃತಕೃತ್ಯನಾದುದರಿಂದಲೂ, ನಾನೂ ಅದನ್ನು ಬಿಟ್ಟು ಇಳಿದುದರಿಂದಲೂ, ಆ ರಥವು ಅದೇ ಬ್ರಹ್ಮಾಸ್ತ್ರತೇಜಸ್ಸಿನಿಂದ ಭಸ್ಮವಾಯಿತು' ಎಂದನು. ಷಡ್ಗುಣಪರಿಪೂರ್ಣನೂ, ಶತ್ರುಸಂಹಾರಕನೂ ಆದ ಕೃಷ್ಣನು ಮುಗುಳ್ನಗೆಯಿಂದ ಯುಧಿಷ್ಠಿರನನ್ನಪ್ಪಿಕೊಂಡು 'ಓ ಕುಂತೀನಂದನಾ! ನಿನ್ನ ಭಾಗ್ಯವಿಶೇಷದಿಂದ ನೀನು ಜಯಶೀಲನಾಗಿ ಪ್ರಕಾಶಿಸುತ್ತಿರುವೆ ದೈವಾಧೀನದಿಂದ ನಿಮ್ಮ ಶತ್ರುಗಳು ಜಯಿಸಲ್ಪಟ್ಟರು ಅದೃಷ್ಟವಶದಿಂದ ಗಾಂಡೀವಧಾರಿಯಾದ ಅರ್ಜುನನೂ, ಭೀಮಸೇನನೂ, ನೀನೂ, ಮಾದ್ರೀಪುತ್ರರಾದ ನಕುಲಸಹದೇವರೂ ಈಗ ಸೌಖ್ಯದಿಂದ ಬದುಕಿರುವಿರಿ ಅನೇಕವೀರರು ಹತರಾದರು. ಶತ್ರುರಾಜರಲ್ಲ ಕೊಲ್ಲಲ್ಪಟ್ಟು, ನೀವೂ ಯುದ್ಧಭೂಮಿಯಿಂದ ಬಿಡುಗಡೆಹೊಂದಿದಿರಿ ಇನ್ನು ಮುಂದ ಮಾಡಬೇಕಾದ ಕಾರ್ಯಗಳನ್ನು ಮಾಡಿರಿ ಹಿಂದೆ ಅರ್ಜುನನೊಡನೆ ಉಪಪ್ಲಾವ್ಯನಗರಕ್ಕೆ ಬಂದ ನನಗೆ ನೀವು ಮಧುಪರ್ಕವನ್ನು ಕೊಟ್ಟು 'ಓ ಮಹಾಬಾಹೂ! ಪ್ರಭೂ! ಗೋವಿಂದಾ! ನನ್ನ ಸಹೋದರನೂ, ನಿನ್ನ ಬಂಧುವೂ ಆದ ಈ ಧನಂಜಯನನ್ನು ಎಲ್ಲಾ ಆಪತ್ತುಗಳಿಂದಲೂ ರಕ್ಷಿಸು' ಎಂದು ಹೇಳಿದೆಯಲ್ಲವೆ! ಆಗ ನಾನೂ 'ಹಾಗೆಯೇ ಆಗಲಿ' ಎಂದು ಹೇಳಿದ್ದೆನು ಅದರಂತೆ ಶೂರನೂ, ಸತ್ಯಪರಾಕ್ರಮನೂ ಆದ ಈ ಸವ್ಯಸಾಚಿಯನ್ನು ರಕ್ಷಿಸಿ, ಸಹೋದರರೊಡನೆ ಅವನು ಜಯಹೊಂದುವಂತೆ ಮಾಡಿದೆನು ವೀರನಾಶಕರವಾದ ಯುದ್ಧದಿಂದ ನಿಮ್ಮನ್ನು ಬಿಡುಗಡಹೊಂದಿಸಿದೆನು' ಎಂದನು.

ಕೃಷ್ಣನ ಈ ವಾಕ್ಯಗಳನ್ನು ಕೇಳಿ ಧರ್ಮರಾಜನು 'ಓ ಶತ್ರುನಾಶಕಾ! ದ್ರೋಣನೂ, ಕರ್ಣನೂ ಪ್ರಯೋಗಿಸಿದ ಬ್ರಹ್ಮಾಸ್ತ್ರವನ್ನು ವಜ್ರಾಯುಧಪಾಣಿಯಾದ ಇಂದ್ರನೂ ತಡೆಯಲಾರನು ಅವುಗಳನ್ನು ತಡೆಯಲು ನೀನೊಬ್ಬನಲ್ಲದೆ ಮತ್ತಾರುತಾನೇ ಶಕ್ತರು? ನಿನ್ನ ಅನುಗ್ರಹ

ದಿಂದಲೇ ಯುದ್ಧದಲ್ಲಿ ಈ ನಮ್ಮ ಪ್ರಬಲ ಶತ್ರುಗಳು ಹತರಾದರು. ಮಹಾಯುದ್ಧರಂಗಕ್ಕೆ ಪ್ರವೇಶಿಸಿದ ಅರ್ಜುನನೂ ನಿನ್ನ ಅನುಗ್ರಹದಿಂದಲೇ ಬೆನ್ನು ತೋರಿಸಿ ಓಡದಂತೆ ನಿಂತನು. ಓ ಮಹಾಬಾಹೂ! ನಿನ್ನ ಕೃಪೆಯಿಂದಲೇ ನಾನೂ, ನನ್ನ ಪರಂಪರೆಯವರೂ ಯುದ್ಧಕಾರ್ಯಗಳನ್ನು ನಡೆಸಿ, ಪರಾಕ್ರಮದ ಉತ್ತಮಫಲಗಳನ್ನು ಪಡೆದೆವು. ನೀನು ಲೋಕವಂದ್ಯನು. 'ಎಲ್ಲಿ ಧರ್ಮವಿರುವುದೋ ಅಲ್ಲಿ ಕೃಷ್ಣನಿರುವನು ಕೃಷ್ಣನಿರುವ ಕಡೆಯಲ್ಲಿ ಜಯವು ಸಿದ್ಧವು' ಎಂದು ಉಪಪ್ಲಾವ್ಯದಲ್ಲಿ ಶ್ರೀ ವ್ಯಾಸಮಹರ್ಷಿಯು ನನ್ನೊಡನೆ ಹೇಳಿದ್ದನು' ಎಂದನು ಆಗ ಕೃಷ್ಣನು 'ಓ ಭರತಕುಲಶ್ರೇಷ್ಠಾ! ನಿನ್ನ ಮತ್ತು ನಿನ್ನ ಶತ್ರುಗಳ ಹದಿನೆಂಟು ಅಕ್ಷೌಹಿಣೀ ಸೈನ್ಯಗಳೂ ಬಲದಲ್ಲಿ ಅರ್ಜುನನೊಬ್ಬನಿಗೆ ಸಾಟಿಯಾಗಲಾರವು ಈ ಅರ್ಜುನನು ಶಿವನಿಂದ ಅನೇಕ ದಿವ್ಯಾಸ್ತ್ರಗಳನ್ನು ಪಡೆದು 'ಯುದ್ಧದಲ್ಲಿ ನೀನು ನನಗೆ ಸಮಾನನು. ಅಥವಾ ನನಗಿಂತಲೂ ಉತ್ತಮನೇ' ಎಂದು ಅನುಗ್ರಹಿಸಲ್ಪಟ್ಟವನು ನರಶ್ರೇಷ್ಠನಾದ ಅರ್ಜುನನಿಗೆ ನೀನು ಆಜ್ಞೆ ಮಾಡಿದ್ದರೆ, ಆತನು ಭೂತ ಭವಿಷ್ಯದ್ವರ್ತಮಾನಕಾಲದ ಪ್ರಾಣಿಗಳನ್ನೆಲ್ಲ ಅರ್ಧನಿಮಿಷದೊಳಗಾಗಿ ತೀರಿಸಿಬಿಡುತಿದ್ದನೆಂಬುದು ನನ್ನ ಅಭಿಪ್ರಾಯವು. ಕೋಪಗೊಂಡ ಅರ್ಜುನನು ಅರ್ಧನಿಮಿಷದೊಳಗಾಗಿ ಭೀಷ್ಮ, ದ್ರೋಣ, ಕೃಪ, ಕರ್ಣ, ಅಶ್ವತ್ಥಾಮ, ಜಯದ್ರಥಾದಿಗಳೆಲ್ಲರನ್ನೂ ಕೊಲ್ಲಲು ಶಕ್ತಿಯುಳ್ಳವನು ಈ ಅರ್ಜುನನು ದೇವಾಸುರ ಯಕ್ಷರಾಕ್ಷಸೋರಗರೊಡನೆ ಕೂಡಿದ ಮೂರು ಲೋಕಗಳನ್ನೂ ಜಯಿಸಲು ಶಕ್ತನಾಗಿರುವಾಗ ಈ ಸಾಮಾನ್ಯ ಮನುಷ್ಯರ ಪಾಡೇನು? ನಾನು ಆಗಾಗ ಪ್ರೇರಿಸುತಿದ್ದಾಗಲೂ ಆತನು ಅವರನ್ನು ಕೊಲ್ಲಲು ಸಮ್ಮತಿಸಲಿಲ್ಲ ಹಾಗಾದುದು ವಿಧಿವಶದಿಂದಲೇ! ಆದುದರಿಂದಲೇ ಶತ್ರುಗಳು ಅಧಿಕ ಬಲಶಾಲಿಗಳಾದರು ಈ ವಿಷಯದಲ್ಲಿ ನಾನು ಎಷ್ಟೋ ವಿಧದಲ್ಲಿ ಹಿತವಾಕ್ಯಗಳನ್ನಾಡಿದೆನು ನನ್ನ ವಿಷಯದಲ್ಲಿ ನೀನೂ ಸರ್ವಾನುಗ್ರಹವನ್ನು ತೋರಿಸಿದೆ ಅದರಿಂದಲೇ ಈತನೂ ಶತ್ರುಗಳನ್ನು ಜಯಿಸುವಂತಾಯಿತು ಮಹಾಭುಜಬಲವುಳ್ಳ ಅರ್ಜುನನು ನನಗೆ ಸಮಾನನೇ! ಮಹೇಶ್ವರನಿಂದ ಅಸ್ತ್ರಗಳನ್ನು ಪಡೆದ ಈ ಅರ್ಜುನನು ಯಾವುದನ್ನು ತಾನೇ ಮಾಡಲಾರನು?' ಎಂದನು.

ಆಮೇಲೆ ಪಾಂಡವಸೇನಾವೀರರು ನಮ್ಮ ಬಿಡಾರವನ್ನು ಸೇರಿ, ಬೊಕ್ಕಸಗಳನ್ನೂ, ಅಪರಿಮಿತವಾದ ರತ್ನಸಮೂಹಗಳನ್ನೂ ಕೈಕೊಂಡರು. ಬೆಳ್ಳಿ, ಚಿನ್ನ, ರತ್ನ, ಮುತ್ತು, ಆಭರಣಗಳು, ರತ್ನಕಂಬಳಿಗಳು, (ಜಿಂಕೆ ಹುಲಿ ಮುಂತಾದುವುಗಳ) ಚರ್ಮಗಳು, ಆನೆಗಳು, ಕುದುರೆಗಳು, ರಥಗಳು, ಉತ್ತಮವಾದ ಹಾಸಿಗೆಗಳು, ಅಸಂಖ್ಯಾತರಾದ ಸೇವಕರು, ಸೇವಕಿಯರು, ರಾಜಸುಖಕ್ಕೆ ಬೇಕಾದ ಇತರ ಉಪಕರಣಗಳು, ಅಪರಿಮಿತವಾದ ಧನ ಸಂಪತ್ತು, ಇವೆಲ್ಲವನ್ನೂ ದೋಚಿಕೊಂಡು ಅಟ್ಟಹಾಸಮಾಡುತಿದ್ದು ಕೊನೆಗೆ ತಮ್ಮತಮ್ಮ ವಾಹನಗಳನ್ನು ಬಿಚ್ಚಿ ದಣಿವಾರಿಸಿ ನಿಶ್ಚಿಂತರಾಗಿದ್ದರು ಮಹಾರಾಜಾ ! ಆಮೇಲೆ ವಾಸುದೇವನು ಇನ್ನು ನಾವು ನಮ್ಮ ಬಿಡಾರದ ಹೊರಗೆ ವಸಿಸುವುದೇ ಕ್ಷೇಮಕರವು ! ' ಎಂದನು ' ಹಾಗೆಯೇ ಆಗಲಿ ' ಎಂದು ಹೇಳಿ ಆ ಪಾಂಡವರೂ, ಸಾತ್ಯಕಿಯೂ ಕೃಷ್ಣನೊಡನೆ ಬಿಡಾರದಿಂದ ಹೊರಗೆಹೋದರು ರಾಜಾ ! ಆಮೇಲೆ ಪಾಂಡವರು ಪುಣ್ಯಕರವಾದ ಓಘವತೀನದಿಯನ್ನು ಸೇರಿ, ಆರಾತ್ರಿ (ಅಲ್ಲಿಯೇ) ವಾಸಮಾಡುಡುತ್ತಿದ್ದರು ಆಮೇಲೆ ಯುಧಿಷ್ಠಿರನು ಕಾಲೋಚಿತವಾದ ಒಂದು ವಿಷಯವನ್ನು ಆಲೋಚಿಸಿ ' ಓ ಮಾಧವಾ ! ಶತ್ರುಶಿಕ್ಷಕಾ ! ನೀನು ಸಮ್ಮತಿಸುವುದಾದರೆ, ಈಗ ನಮ್ಮಮೇಲೆ ಕೋಪದಿಂದ ಜ್ವಲಿಸುವ ಗಾಂಧಾರಿಯನ್ನು ಸಂತೈಸಲು ಈಗ ನೀನು ಅಲ್ಲಿಗೆ ಹೋಗುವುದು ಯುಕ್ತವು ಭಗವಂತಾ ! ಸಕಾರಣಗಳಾದ ಸಮಯೋಚಿತವಾಕ್ಯಗಳಿಂದ ಈಗಲೇ ನೀನು ಗಾಂಧಾರಿಯನ್ನು ಸಮಾಧಾನಪಡಿಸಬೇಕು ಈಗ ಪಿತಾಮಹನಾದ ವ್ಯಾಸನೂ ಅಲ್ಲಿರುವನು ' ಎಂದು ಪ್ರಾರ್ಥಿಸಿ ಶ್ರೀಕೃಷ್ಣನನ್ನು ಹಸ್ತಿನಾಪುರಕ್ಕೆ ಕಳುಹಿಸಿದರು ಪ್ರತಾಪಶಾಲಿಯಾದ ಕೃಷ್ಣನುದಾರುಕನ ಸಾರಥ್ಯದಿಂದ ಧೃತರಾಷ್ಟ್ರನಿರುವ ಸ್ಥಳಕ್ಕೆ ವೇಗದಿಂದ ಹೋದನು ಶೈಬ್ಯ ಸುಗ್ರೀವಗಳೆಂಬ ಕುದುರೆಗಳನ್ನು ಕಟ್ಟಿದ್ದ ರಥದಮೇಲೇರಿ ಹೋಗುತ್ತಿರುವ ಕೃಷ್ಣನನ್ನು ನೋಡಿ, ಪಾಂಡವರು ಪುತ್ರವಿಹೀನಳೂ, ಕೀರ್ತಿಮತಿಯೂ ಆದ ಆ ಗಾಂಧಾರಿಯನ್ನು ನೀನೇ ಸಂತೈಸು ' ಎಂದು ಬಾರಿಬಾರಿಗೂ ಬೇಡಿದರು. ಅದರಂತೆ ಕೃಷ್ಣನು ಹಸ್ತಿನಾಪುರದಲ್ಲಿ ಗಾಂಧಾರಿಯ ಬಳಿಗೆ ಹೋದನು

ಇದು ಅರುವತ್ತುಮೂರನೆಯ ಅಧ್ಯಾಯವು.

ಗಾಂಧಾರಿಯನ್ನು ಸಮಾಧಾನಪಡಿಸಬೇಕಾದ ಕಾರಣಗಳು
ಕೃಷ್ಣನು ಗಾಂಧಾರಿಯನ್ನೂ, ಧೃತರಾಷ್ಟ್ರನನ್ನೂ ಸಂ
ತೈಸಿ, ಪಾಂಡವರ ಬಳಿಗೆ ಹಿಂತಿರುಗಿದುದು.

ಆಗ ಜನಮೇಜಯನು 'ಬ್ರಾಹ್ಮಣೋತ್ತಮಾ! ಧರ್ಮರಾಜನು ಅಷ್ಟು ಆತುರದಿಂದ ಕೃಷ್ಣನನ್ನು ಗಾಂಧಾರಿಯ ಬಳಿಗೆ ಕಳುಹಿಸಿದ ಕಾರಣವೇನು? ಹಿಂದೆಯೇ ಆತನು ಕೌರವರಬಳಿಗೆ ಸಮಾಧಾನಕ್ಕೆ ಹೋದಾಗ, ಅವರು ಅದಕ್ಕೊಪ್ಪಲಿಲ್ಲವಷ್ಟೆ? ಅದರಿಂದಲ್ಲವೇ ಈ ಯುದ್ಧವು ನಡೆಯಿತು? ಅನೇಕವೀರರೊಡನೆ, ದುರ್ಯೋಧನನೂ ಕೊಲ್ಲಲ್ಪಟ್ಟನು ಭೂಮಿಯಲ್ಲಿ ಪಾಂಡುನಂದನರ ಶತ್ರುಗಳೆಲ್ಲ ಹತರಾದರು ಶತ್ರುಸೈನ್ಯವು ಓಡಿಹೋಯಿತು ಶತ್ರುಗಳ ಬಿಡಾರವೆಲ್ಲ ಶೂನ್ಯವಾಯಿತು ಹೀಗೆ ಕೃತಕೃತ್ಯರಾಗಿರುವ ಪಾಂಡವರು, ತಿರುಗಿ ಗಾಂಧಾರಿಯ ಬಳಿಗೆ ವಾಸುದೇವನನ್ನು ಕಳುಹಿಸುವುದಕ್ಕೆ ಕಾರಣವೇನು? ಕೃಷ್ಣನ ಮನೋಗತವನ್ನು ಯಾರೂ ತಿಳಿಯಲಾರರು ಅಂತವನು ತಾನಾಗಿ ಅಲ್ಲಿಗೆ ಹೊರಟುದಕ್ಕೆ ಏನೋ ಪ್ರಬಲಕಾರಣವು ಇರಬೇಕು ಅದೆಲ್ಲವನ್ನೂ ಯಥಾವತ್ತಾಗಿ ನನಗೆ ತಿಳಿಸು' ಎಂದನು

ಆಗ ವೈಶಂಪಾಯನನು 'ಭರತಕುಲೋತ್ತಮಾ! ನೀನು ಕೇಳಿದುದು ಒಳ್ಳೇ ಪ್ರಶ್ನೆಯೇ! ಆ ವೃತ್ತಾಂತವನ್ನು ಯಥಾವತ್ತಾಗಿ ತಿಳಿಸುವೆನು. 'ಯುದ್ಧಧರ್ಮವನ್ನು ಮೀರಿ, ಯುದ್ಧರಂಗದಲ್ಲಿ ಭೀಮಸೇನನಿಂದ ಗದಾಯುದ್ಧದಲ್ಲಿ ಅನ್ಯಾಯವಾಗಿ ಕೊಲ್ಲಲ್ಪಟ್ಟ ಮಹಾಬಲಶಾಲಿಯಾದ ದುರ್ಯೋಧನನನ್ನು ಕಂಡಾಗ ಯುಧಿಷ್ಠಿರನಿಗೆ ಮಹಾಭಯವುಂಟಾಯಿತು. ಆತನು ಮಹಾಭಾಗ್ಯವತಿಯೂ, ತಪಸ್ವಿನಿಯೂ ಆದ ಗಾಂಧಾರಿಯನ್ನು ನೆನೆಸಿಕೊಂಡು ತನ್ನಲ್ಲಿತಾನು 'ಗಾಂಧಾರಿಯು ಘೋರತಪಸ್ಸಿನಿಂದ ಮೂರು ಲೋಕಗಳನ್ನೂ ದಹಿಸಬಲ್ಲವಳು! ಅವಳ ಕ್ರೋಧಶಮನವನ್ನು ಮೊದಲು ಮಾಡಬೇಕು. ಆಕೆಯು ನಮ್ಮಿಂದ ಸಂಭವಿಸಿದ ಪುತ್ರವಧೆಯನ್ನು ಕೇಳಿ ಕೋಪಗೊಂಡು ಆ ಕೋಪಾಗ್ನಿಯಿಂದ ನಮ್ಮನ್ನು ಸುಟ್ಟು ಬೂದಿಮಾಡುವಳು. ತನ್ನ ಪುತ್ರನು ನಿಷ್ಕಪಟವಾಗಿ ಯುದ್ಧಮಾಡಿದುದ

ನ್ನೂ, ಆತನು ಮೋಸದಿಂದ ಕೊಲ್ಲಲ್ಪಟ್ಟುದನ್ನೂ ಕೇಳಿ, ಆಕೆಯು ಆ ಮಹಾವ್ಯಸನವನ್ನು ಹೇಗೆ ಸಹಿಸುವಳು?' ಎಂಬ ಶಂಕೆಯು ತೋರಿತು. ಹೀಗೆ ಹಲವು ರೀತಿಗಳಲ್ಲಿ ಆಲೋಚಿಸುತ್ತ ಆತನು ಭಯಶೋಕಗಳಿಂದ ವಾಸುದೇವನನ್ನು ಕುರಿತು ಹೀಗೆ ಹೇಳುವನು

'ಓ ಗೋವಿಂದಾ! ಅಚ್ಯುತಾ! ಈ ರಾಜ್ಯವನ್ನು ಪಡೆಯುವೆವೆಂದು ನಾವು ಮನಸ್ಸಿನಲ್ಲಿಕೂಡ ಭಾವಿಸಿರಲಿಲ್ಲ. ಅದು ನಿನ್ನ ಅನುಗ್ರಹದಿಂದ ಶತ್ರುಶೂನ್ಯವಾಗಿ ನಮಗೆ ಲಭಿಸಿತು ಓ ಮಹಾಬಾಹೂ! ಯಾದವ ನಂದನಾ! ರೋಮಾಂಚವನ್ನಬ್ಬಿಸುವ ಈ ಯುದ್ಧದಲ್ಲಿ ನನ್ನ ಕಣ್ಣೆದಿರಾಗಿ ನೀನೂ ಅನೇಕಪ್ರಹಾರಗಳನ್ನು ತಿಂದೆ ಹಿಂದೆ ದೇವಾಸುರಯುದ್ಧದಲ್ಲಿ ದೇವಶತ್ರುಗಳ ವಧೆಗಾಗಿ ನೀನು ಯಾವ ವಿಧವಾದ ಸಹಾಯವನ್ನು ಮಾಡಿದೆಯೋ, ಮತ್ತು ಆ ಶತ್ರುಗಳನ್ನು ಹೇಗೆ ಕೊಂದೆಯೋ, ಹಾಗೆಯೇ ಈಗ ನಮಗೂ ನೀನು ಸಹಾಯಮಾಡಿದೆ (ನಮ್ಮ ಶತ್ರುಗಳೆಲ್ಲ ಕೊಲ್ಲಲ್ಪಟ್ಟರು) ಓ ವೃಷ್ಣಿಕುಲತಿಲಕಾ! ನಮಗೆ ನೀನು ಸಾರಥ್ಯವನ್ನೂ ಮಾಡಿ ಕಾಪಾಡಿದೆಯಲ್ಲವೇ? ಈ ಮಹಾಯುದ್ಧದಲ್ಲಿ ನೀನು ಫಲ್ಗುಣನಿಗೆ ರಕ್ಷಕನಾಗಿಲ್ಲದಿದ್ದರೆ ಆ ಸೇನಾಸಮುದ್ರವನ್ನು ಜಯಿಸಲು ಸಾಧ್ಯವಾಗುತ್ತಿದ್ದಿತೇ? ಮಾಧವಾ! ನೀನು ನಮಗಾಗಿ ದೊಡ್ಡ ಗದಾಪ್ರಹಾರಗಳನ್ನೂ, ಖಡ್ಗ, ಪರಿಘ, ಶಕ್ತಿ, ಭಿಂಡಿವಾಲ, ತೋಮರ, ಪರಶ್ವಧಾದಿಗಳ ತಾಡನಗಳನ್ನೂ ಸಹಿಸಿಕೊಂಡಿದ್ದೆಯಲ್ಲವೆ? ನಮಗಾಗಿ ನೀನು ಮಹಾಕ್ರೂರನಿಂದೆಗಳಿಗೂ ಒಳಗಾದೆ ನಮಗಾಗಿ ನೀನು ಯುದ್ಧಭೂಮಿಯಲ್ಲಿ ವಜ್ರಾಯುಧಕ್ಕೆ ಸಮಾನವಾದ ಬಾಣಹತಿಗಳನ್ನೂ ಸಹಿಸಿದೆ ಅಚ್ಯುತಾ! ದುರ್ಯೋಧನನು ಹತನಾದುದರಿಂದ ಆ ನಿನ್ನ ಶ್ರಮಗಳೆಲ್ಲ ಸಫಲವಾದುವು ಓ ಗೋವಿಂದಾ! ಅವೆಲ್ಲವೂ ತಿರುಗಿ ವ್ಯರ್ಥವಾಗದಂತೆ ಮಾಡು ಮಾಧವಾ! ಜಯವನ್ನು ಪಡೆದಿರುವ ಈ ತರುಣದಲ್ಲಿ ನಮ್ಮ ಮನಸ್ಸು ಸಂತೋಷವೆಂಬ ಉಯ್ಯಾಲೆಯಲ್ಲಿ ತೂಗಾಡುತ್ತಿರುವುದು ಮಹಾಬಾಹೂ! ಗಾಂಧಾರಿಯ ಕೋಪವನ್ನು ಶಮನಮಾಡು. ಮಹಾಪತಿವ್ರತೆಯಾದ ಆ ಗಾಂಧಾರಿಯು ಉಗ್ರತಪಸ್ಸಿನಿಂದ ಕೂಡಿದವಳು. ಪುತ್ರ

ಪೌತ್ರರ ವಧೆಗಳನ್ನು ಕೇಳಿ ನಿಜವಾಗಿಯೂ ನಮ್ಮನ್ನು ದಹಿಸಿಬಿಡುವಳು. ಓ ವೀರಾ! ಆಕೆಯ ಮನಸ್ಸು ತಿಳಿವಾಗುವಂತೆ ಮಾಡುವುದೇ ಈಗ ಕಾಲೋಚಿತವೆಂದೆಣಿಸುವೆನು ಪುರುಷೋತ್ತಮಾ! ಪುತ್ರವ್ಯಸನದಿಂದ ಕಂದಿ ಕ್ರೋಧದಿಂದ ಜ್ವಲಿಸುತ್ತಿರುವ ಆ ಗಾಂಧಾರಿಯ ಮುಂದೆ ಹೋಗಿ ನಿಲ್ಲಲು ಈಗ ನೀನು ಹೊರತು ಬೇರೆ ಶಕ್ತನಿಲ್ಲ! ಕ್ರೋಧದಿಂದ ಜ್ವಲಿಸುತ್ತಿರುವ ಆ ಗಾಂಧಾರಿಯ ಮನಸ್ಸನ್ನು ಸಮಾಧಾನಗೊಳಿಸಲು ಅಲ್ಲಿಗೆ ನೀನೇ ಹೋಗುವುದುಚಿತವೆಂದು ಭಾವಿಸುವೆನು ನೀನು ಸೃಷ್ಟಿಕರ್ತನು! ಬೇರೆ ಬೇರೆ ನಾಮರೂಪಗಳನ್ನು ಧರಿಸಿದವನು! ಪ್ರಪಂಚದ ಸೃಷ್ಟಿಲಯಗಳಿಗೆಲ್ಲ ನೀನೇ ಕಾರಣನು ಸಕಾರಣಗಳಾದ ಸಮಯೋಚಿತವಾಕ್ಯಗಳಿಂದ ಗಾಂಧಾರಿಯ ಕೋಪವನ್ನು ಶಮನಮಾಡು ಪಿತಾಮಹನಾದ ವ್ಯಾಸನೂ ಈಗ ಅಲ್ಲಿಯೇ ಇರುವನು ಓ ಸಾತ್ವತಶ್ರೇಷ್ಠಾ! ಯಾವಾಗಲೂ ಪಾಂಡವರಿಗೆ ಹಿತವನ್ನು ಕೋರುವ ನೀನೇ ಈಗ ಸಕಲವಿಧಗಳಿಂದಲೂ ಗಾಂಧಾರಿಯನ್ನು ಸಂತೈಸಬೇಕು' ಎಂದನು ಆಮೇಲೆ ಕೃಷ್ಣನು ದಾರುಕನನ್ನು ಕರೆದು 'ರಥವನ್ನು ಸಿದ್ಧಪಡಿಸು' ಎಂದನು ದಾರುಕನು ಕೃಷ್ಣನ ಮಾತಿನಂತೆ ರಥವನ್ನು ಸಿದ್ಧಪಡಿಸಿ ಕೃಷ್ಣನಿಗೆ ತಿಳಿಸಿದನು ಆಗ ಕೃಷ್ಣನು ಆ ರಥದಮೇಲೇರಿ ವೇಗದಿಂದ ಹೊರಟು ಹಸ್ತಿನಾಪುರವನ್ನು ಸೇರಿದನು ಹಸ್ತಿನಾಪುರವೆಲ್ಲವನ್ನೂ ತನ್ನ ರಥಶಬ್ದದಿಂದ ಮೊಳಗಿಸುತ್ತ ಹೋಗಿ, ಮೊದಲು ಧೃತರಾಷ್ಟ್ರನಿಗೆ ಹೇಳಿಕಳುಹಿಸಿ, ಅನಂತರದಲ್ಲಿ ರಥದಿಂದಿಳಿದು ಧೃತರಾಷ್ಟ್ರನ ಅರಮನೆಯನ್ನು ಪ್ರವೇಶಿಸಿದನು ಅಲ್ಲಿ ತನಗೆ ಮೊದಲೇ ಬಂದಿದ್ದ ಋಷಿಶ್ರೇಷ್ಠನಾದ ವ್ಯಾಸನನ್ನು ಕಂಡನು ಅಲ್ಲಿ ಕೃಷ್ಣನು, ವ್ಯಾಸ ಧೃತರಾಷ್ಟ್ರರಿಬ್ಬರ ಪಾದಗಳಿಗೂ ನಮಸ್ಕರಿಸಿ, ಧೈರ್ಯದಿಂದ ಹೋಗಿ ಗಾಂಧಾರಿಯನ್ನೂ ವಂದಿಸಿದನು ಆಮೇಲೆ ಕೃಷ್ಣನು ಧೃತರಾಷ್ಟ್ರನ ಕೈಯನ್ನು ಹಿಡಿದುಕೊಂಡು ಗಟ್ಟಿಯಾಗಿ ರೋದಿಸಿದನು ಹೀಗೆ ಕೃಷ್ಣನು ಒಂದು ಮುಹೂರ್ತಕಾಲದವರೆಗೆ ಕಣ್ಣೀರನ್ನು ಸುರಿಸಿದಮೇಲೆ, ಕಣ್ಣುಗಳನ್ನೊರಸಿಕೊಂಡು ವಿಧ್ಯುಕ್ತರೀತಿಯಲ್ಲಿ ಆಚಮನಮಾಡಿ ದೀನವಾಕ್ಯಗಳಿಂದ ಹೀಗೆಂದು ಹೇಳುವನು

"ಓ ಭರತಕುಲೋತ್ತಮಾ! ಹಿಂದೆ ನಡೆದುದು, ಮುಂದೆ ನಡೆಯುವುದು, ಇವೆಲ್ಲ ನಿನಗೆ ತಿಳಿಯದೇ ಇಲ್ಲ ನಿನ್ನ ಮನಸ್ಸನ್ನು ಅನುವರ್ತಿಸುತಿದ್ದ ಪಾಂಡವರೆಲ್ಲರೂ ಕುರುಕುಲ ನಾಶಕ್ಕೂ, ಕ್ಷತ್ರಿಯವಂಶನಾಶಕ್ಕೂ ಅವಕಾಶಕೊಡದಂತೆ ಕಾಲವನ್ನನುಸರಿಸಿ ನಡೆದುಕೊಂಡ ವಿಷಯವೂ ನಿನಗೆ ಚೆನ್ನಾಗಿ ತಿಳಿದಿರುವುದು. ಧರ್ಮಪುತ್ರನಾದ ಯುಧಿಷ್ಠಿರನು ತನ್ನ ಸಹೋದರರೊಡನೆ ಮಾಡಿಕೊಂಡ ಒಪ್ಪಂದಕ್ಕೆ ಬದ್ಧನಾಗಿ ಎಷ್ಟೋ ಕಷ್ಟಗಳೆಲ್ಲವನ್ನೂ ಸಹಿಸಿದನು ಶುದ್ಧಾತ್ಮರಾದ ಪಾಂಡವರು ಕಪಟದ್ಯೂತದಿಂದ ಜಯಿಸಲ್ಪಟ್ಟು ವನವಾಸದುಃಖವನ್ನೂ ಸಹಿಸಿದರು ಬೇರೆ ಬೇರ ವೇಷಗಳಿಂದ ತಮ್ಮ ಸ್ವರೂಪವನ್ನು ಮರೆಸಿಕೊಂಡು ಅಜ್ಞಾತವಾಸ ಕಾಲವನ್ನೂ ಕಳೆದರು ಹೀಗೆ ಪಾಂಡವರು ಕೇವಲ ಅಶಕ್ತರಂತೆ ಇನ್ನೂ ಅನೇಕ ಕ್ಲೇಶಗಳನ್ನು ಸಹಿಸುತ್ತಲೇ ಬಂದರು ಯುದ್ಧಸಮಯವು ಬಂದಾಗ, ನಾನೇ ಪ್ರತ್ಯಕ್ಷವಾಗಿ ನಿಮ್ಮಲ್ಲಿಗೆ ಬಂದು ಎಲ್ಲಾ ರಾಜಸಭೆಯ ಇದಿರಾಗಿ ನಿನ್ನಿಂದ ಅವರಿಗಾಗಿ ಐದು ಗ್ರಾಮಗಳನ್ನು ಬೇಡಿದೆನು ಕಾಲದೋಷದಿಂದ ನೀನೂ ದುರಾಶೆಗೊಳಗಾಗಿ ಅದಕ್ಕೂ ಒಪ್ಪಲಿಲ್ಲ ರಾಜಾ! ನಿನ್ನಿಂದಲೇ ಕ್ಷತ್ರಿಯರಲ್ಲರೂ ಹತವಾದರು ಭೀಷ್ಮನೂ, ಸೋಮದತ್ತನೂ, ಬಾಹ್ಲಿಕನೂ, ಕೃಪನೂ, ಅಶ್ವತ್ಥಾಮನೂ, ಮಹಾತ್ಮನಾದ ವಿದುರನೂ ಇವರೆಲ್ಲರೂ ನಿನ್ನನ್ನು ಎಷ್ಟೋ ವಿಧದಿಂದ ಬೇಡಿದರು ಅವರ ಪ್ರಾರ್ಥನೆಗಳನ್ನೂ ನೀನು ನೆರವೇರಿಸಲಿಲ್ಲ ಎಲ್ಲರೂ ಕಾಲವಶರಾಗಿ ಬುದ್ಧಿಭ್ರಮೆಗೊಂಡರು ಈ ವಿಷಯದಲ್ಲಿ ನೀನೇ ಮೊದಲು ವಿವೇಕಶೂನ್ಯನಾದೆ! ಇವೆಲ್ಲಕ್ಕೂ ಕಾಲಮಹಿಮೆಯೇ ಕಾರಣವು. ನಮಗೆ ದೈವವೇ ಮುಖ್ಯಗತಿ ಓ ಪ್ರಾಜ್ಞಾ! ನೀನು ಪಾಂಡವರಮೇಲೆ ಎಷ್ಟುಮಾತ್ರವೂ ದೋಷವನ್ನು ಹೊರಿಸಬಾರದು ರಿಪುಭಯಂಕರಾ! ಧರ್ಮದಿಂದಾಗಲಿ, ನ್ಯಾಯದಿಂದಾಗಲಿ, ಸ್ನೇಹದಿಂದಾಗಲಿ ಹೇಗೆ ಯೋಚಿಸಿದರೂ ಮಹಾತ್ಮರಾದ ಪಾಂಡವರಲ್ಲಿ ದೋಷವೆಂಬುದು ಲವಮಾತ್ರವೂ ಇಲ್ಲ ಈ ಅನರ್ಥಗಳೆಲ್ಲಕ್ಕೂ ನಿನ್ನ ಪ್ರವರ್ತನೆಗಳೇ ಕಾರಣವೆಂಬುದನ್ನು ತಿಳಿದು, ನೀನು ಪಾಂಡುಪುತ್ರರ ವಿಷಯದಲ್ಲಿ ಕೋಪವನ್ನು ಬಿಟ್ಟುಬಿಡಬೇಕು. ಅಲ್ಲದೆ ಈಗ ನಿನ್ನ ಮತ್ತು ಗಾಂಧಾರಿಯ ಸಂತತಿಯೂ, ವಂಶವೂ, ನಿಮಗೆ ಪಿಂಡ

ಗಳೂ, ಪುತ್ರರು ನಡೆಸುವ ಕರ್ಮಗಳೂ ಪಾಂಡವರಲ್ಲಿ ನೆಲೆಗೊಂಡಿರುವುವು. ನೀನು ವ್ಯಸನಪಡಬೇಕಾದುದಿಲ್ಲ. ಈ ಗಾಂಧಾರಿಯೂ ವ್ಯಸನಪಡಬೇಕಾದುದಿಲ್ಲ. ಪುರುಷೋತ್ತಮಾ! ಪಾಂಡವರ ವಿಷಯದಲ್ಲಿ ಪಾಪವನ್ನೆಣಿಸಬೇಡ. ಈ ದುಷ್ಫಲಗಳೆಲ್ಲವೂ ನಿನ್ನ ಅನ್ಯಾಯಕೃತ್ಯಗಳಿಂದಲೇ ನಡೆದುದೆಂದು ತಿಳಿದು ಪಾಂಡವರಮೇಲೆ ಕೃಪೆಯಿಡು ನಿನಗೆ ನನ್ನ ವಂದನೆಗಳಿರಲಿ! ಓ ಮಹಾಬಾಹೂ! ಧರ್ಮರಾಜನಿಗೆ ಸ್ವಾಭಾವಿಕವಾಗಿ ನಿನ್ನಲ್ಲಿರುವ ಭಕ್ತಿಯನ್ನೂ, ಸ್ನೇಹವನ್ನೂ ನೀನೇ ತಿಳಿದಿರುವೆ ಅಲ್ಲದೆ, ಈಗ ಪಾಂಡವರೂ ತಮಗೆ ಅಪಕಾರಿಗಳಾದವರನ್ನು ಕೊಂದುದಕ್ಕಾಗಿ ಪಶ್ಚಾತ್ತಾಪದಿಂದ ಹಗಲೂ, ರಾತ್ರಿಯೂ ತಪಿಸುತ್ತಿರುವರು ಅವರ ಮನಸ್ಸಿಗೂ ನೆಮ್ಮದಿಯಿಲ್ಲದಿದೆ ಆ ಯುಧಿಷ್ಠಿರನು ನಿನ್ನ ವಿಷಯವಾಗಿಯೂ, ಈ ಗಾಂಧಾರಿಯ ವಿಷಯವಾಗಿಯೂ ದುಃಖಿಸುತ್ತ ಮನಶ್ಶಾಂತಿಯಿಲ್ಲದಿರುವನು. ಆತನು ಈಗ ಅತ್ಯಂತಲಜ್ಜಿತನಾಗಿ, ಬುದ್ಧಿಭ್ರಮೆಗೊಂಡಿರುವ ನಿನ್ನನ್ನು ನೋಡಲು ಇಷ್ಟವಿಲ್ಲದೆ ತನ್ನಲ್ಲಿಯೇ ಕೊರಗುತ್ತಿರುವನು'' ಎಂದನು

ಮಹಾರಾಜಾ! ಕೃಷ್ಣನು ಧೃತರಾಷ್ಟ್ರನಿಗೆ ಹೀಗೆಂದು ತಿಳಿಸಿದ ಮೇಲೆ ದುಃಖಿತಳಾದ ಗಾಂಧಾರಿಯನ್ನು ಕುರಿತು 'ಓ ಸುಬಲಪುತ್ರೀ! ವ್ರತನಿಷ್ಠೆಳೇ! ನಾನು ಹೇಳುವುದನ್ನು ಲಾಲಿಸು. ನಿನಗೆ ಸಮಾನಳಾದ ಸ್ತ್ರೀಯು ಈ ಪ್ರಪಂಚದಲ್ಲಿಯೇ ಇಲ್ಲ ರಾಜ್ಞೀ! ಹಿಂದೆ ನೀನು ಉಭಯಪಕ್ಷಗಳಿಗೂ ಹಿತಕರವಾಗಿ, ಧರ್ಮಾರ್ಥಸಹಿತವಾಗಿ, ಸಭೆಯ ಮಧ್ಯದಲ್ಲಿ ನನ್ನಿದಿರಿಗೆ ಹೇಳಿದ ವಾಕ್ಯಗಳು ನಿನ್ನ ನೆನಪಿನಲ್ಲಿರುವುವೇ? ಓ ಕಲ್ಯಾಣೀ! ನೀನೇನೋ ಒಳ್ಳೇ ಹಿತವಾಕ್ಯಗಳನ್ನೇ ಆಡಿದೆ ಆದರ ನಿನ್ನ ಮಕ್ಕಳು ಅದರಂತೆ ನಡೆದುಕೊಳ್ಳಲಿಲ್ಲ ಜಯಾಭಿಲಾಷಿಯಾದ ದುರ್ಯೋಧನನಿಗೆ ನೀನು ಎಷ್ಟೋ ಕಠಿನಾಜ್ಞೆಯನ್ನು ಮಾಡಿದೆ ಆಗ ನೀನು ನಿನ್ನ ಮಗನೊಡನೆ 'ಪುತ್ರಾ! ನನ್ನ ಮಾತನ್ನು ಕೇಳು ಧರ್ಮವೆಲ್ಲಿರುವುದೋ ಅಲ್ಲಿ ಜಯವು' ಎಂದು ಹೇಳಿದೆ. ಆ ನಿನ್ನ ವಾಕ್ಯದಂತೆಯೇ ನಡೆಯಿತು. ಅವೆಲ್ಲವನ್ನೂ ತಿಳಿದ ನೀನು ಈಗ ಶೋಕದಲ್ಲಿ ಮನಸ್ಸಿಡ

ಬಾರದು. ಪಾಂಡವರಿಗೆ ನೀನು ಸರ್ವಥಾ ಕೇಡನ್ನು ಬಯಸಬೇಡ. ನಿನ್ನ ತಪೋಮಹಿಮೆಯಿಂದ ನೀನು ನಿನ್ನ ಕಣ್ಣುಗಳಿಂದಲೇ ಚರಾಚರಪ್ರಪಂಚವನ್ನೆಲ್ಲ ದಹಿಸಲು ಶಕ್ತಳಾಗಿರುವೆ' ಎಂದನು ಕೃಷ್ಣನ ಮಾತನ್ನು ಕೇಳಿ ಗಾಂಧಾರಿಯು 'ಓ ಮಹಾಬಾಹೂ! ಕೇಶವಾ! ನೀನು ಹೇಳುವುದೆಲ್ಲ ನಿಜವೇ! ಆದರೆ, ಮನೋವ್ಯಾಧಿಯಿಂದ ದಹಿಸಲ್ಪಡುವ ನನಗೆ ಬುದ್ಧಿಯೇ ಕೆಟ್ಟುಹೋಗಿದೆ ಆದರೆ ಈಗ ನಿನ್ನ ಮಾತನ್ನು ಕೇಳಿ ನನ್ನ ಬುದ್ಧಿಯು ತಿಳಿವು ಹೊಂದಿತು ಪುರುಷೋತ್ತಮಾ! ಕಣ್ಣಿಲ್ಲದ ಕುರುಡನಾಗಿ, ಕೇವಲ ವೃದ್ಧನಾಗಿ, ಪುತ್ರಮರಣದಿಂದ ದುಃಖಿತನೂ ಆದ ಈ ರಾಜನಿಗೆ ಈಗ ಆ ಪಾಂಡವರೂ, ನೀನೂ ದಿಕ್ಕಾಗಿರುವಿರಿ' ಎಂದಳು ಆಮೇಲೆ ಗಾಂಧಾರಿಯು ಪುತ್ರಶೋಕದಿಂದ ತಪಿಸುತ್ತ, ವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ಗಟ್ಟಿಯಾಗಿ ಅಳಲಾರಂಭಿಸಿದಳು ಆಗ ಕೃಷ್ಣನು ಆ ಗಾಂಧಾರಿಯನ್ನು ಸಹೇತುಕಗಳಾದ ವಾಕ್ಯಗಳಿಂದ ಬಾರಿಬಾರಿಗೂ ಸಮಾಧಾನಪಡಿಸಿದನು ಹೀಗೆ ಧೃತರಾಷ್ಟ್ರನನ್ನೂ, ಗಾಂಧಾರಿಯನ್ನೂ ಸಮಾಧಾನಪಡಿಸಿದಮೇಲೆ ಕೃಷ್ಣನು ತನ್ನಲ್ಲಿ ತಾನೇ ಧ್ಯಾನಬಲದಿಂದ ಮುಂದೆ ಅಶ್ವತ್ಥಾಮನು ನಡೆಸಬೇಕೆಂದಿರುವ ಕಾರ್ಯಭಾರವಿಷಯವನ್ನು ತಿಳಿದುಕೊಂಡನು ಆಗ ಕೃಷ್ಣನು ವ್ಯಾಸನ ಪಾದಗಳ ಮುಂದೆ ಸಾಷ್ಟಾಂಗಪ್ರಣಾಮಮಾಡಿ ಧೃತರಾಷ್ಟ್ರನನ್ನು ಕುರಿತು 'ಕುರುಪುಂಗವಾ! ನನಗೆ ಅನುಮತಿಯನ್ನು ಕೊಡು. ನಾನು ಹೊರಡುವೆನು ಮನಸ್ಸಿನಲ್ಲಿ ಕೊರಗಬೇಡ ದ್ರೋಣಪುತ್ರನ ಈಗಿನ ಆಲೋಚನೆಯು ಬಹಳ ಕ್ರೂರವಾಗಿದೆ ಆದುದರಿಂದ ನಾನು ತ್ವರೆಯಿಂದ ಹೋಗಬೇಕು ಆತನು ಈ ರಾತ್ರಿಯಲ್ಲಿ ಪಾಂಡವರನ್ನೆಲ್ಲ ಕೊಲ್ಲಬೇಕೆಂದು ಸಂಕಲ್ಪಮಾಡಿರುವನು' ಎಂದನು ಈ ವಚನವನ್ನು ಕೇಳಿ ಧೃತರಾಷ್ಟ್ರನೂ, ಗಾಂಧಾರಿಯೂ ಕೇಶವನನ್ನು ಕುರಿತು 'ಓ ಮಹಾಬಾಹೂ! ಬೇಗನೆ ಹೊರಡು! ಪಾಂಡವರನ್ನು ರಕ್ಷಿಸು! ಶೀಘ್ರದಲ್ಲಿಯೇ ನಾವು ಮತ್ತೊಮ್ಮೆ ನಿನ್ನನ್ನು ಸಂಧಿಸುವೆವು' ಎಂದರು ಒಡನೆಯೇ ಕೃಷ್ಣನು ದಾರುಕನೊಡನೆ ಹೊರಟನು. ವ್ಯಾಸನೂ ಧೃತರಾಷ್ಟ್ರನನ್ನು ಸಮಾಧಾನಪಡಿಸಿ, ಕೃತಕೃತ್ಯರಾದ ಪಾಂಡವರನ್ನು ನೋಡಲು ಹಸ್ತಿನಾಪುರದಿಂದ ಅವರ

ಬಿಡಾರಕ್ಕೆ ಹೊರಟು, ಆ ರಾತ್ರಿಯಲ್ಲಿಯೇ ಅಲ್ಲಿ ಪಾಂಡವರನ್ನು ಕಂಡು ಅವರಿಗೆ ನಡೆದ ವೃತ್ತಾಂತಗಳೆಲ್ಲವನ್ನೂ ತಿಳಿಸಿ ಅವರೊಡನೆ ಎಚ್ಚರಿಕೆಯಿಂದಿದ್ದನು.

ಇದು ಅರುವತ್ತುನಾಲ್ಕನೆಯ ಅಧ್ಯಾಯವು

———

{ ದುರ್ಯೋಧನನು ಪ್ರಲಾಪಿಸಿದುದು ಗೂಢಚಾರರು ದುರ್ಯೋಧನನ ವಿಷಯಗಳನ್ನು ಅಶ್ವತ್ಥಾಮನಿಗೆ ತಿಳಿಸಿದುದು. }

ಆಗ ಧೃತರಾಷ್ಟ್ರನು 'ಓ ಸಂಜಯಾ! ತಾನೇ ಶೂರನೆಂಬ ಗರ್ವವುಳ್ಳ ದುರ್ಯೋಧನನು ತೊಡೆಮುರಿದು ಬಿದ್ದಮೇಲೆ, ಆ ನನ್ನ ಪುತ್ರನ ತಲೆಯನ್ನು ಭೀಮನು ತುಳಿದನಷ್ಟೆ! ಆಗ ಆತನು ಏನು ಹೇಳಿದನು? ಸಹಜಕೋಪಿಷ್ಠನೂ, ಪಾಂಡವರ ವಿಷಯದಲ್ಲಿ ಅಧಿಕ ಕೋಪಗೊಂಡವನೂ ಆದ ಆ ದುರ್ಯೋಧನನು ಅಂತಹ ಕಷ್ಟವ್ಯಸನಕ್ಕೊಳಗಾಗಿ ಏನು ಹೇಳಿದನು?' ಎಂದು ಕೇಳಲು, ಸಂಜಯನು ಹೇಳುವನು

"ನರಾಧಿಪಾ! ನಿನ್ನ ಮಗನು ತೊಡೆಮುರಿದು ನೆಲದ ಮಣ್ಣಿನಲ್ಲಿ ಬಿದ್ದಾಗ, ಆತನ ಸ್ಥಿತಿಯನ್ನು ಕೇಳಬೇಕೆ? ತಲೆಗೂದಲುಗಳು ಕೆದರಿರುವುವು! ಹತ್ತು ದಿಕ್ಕುಗಳನ್ನೂ ತಿರುಗಿ ನೋಡುವನು! ಪ್ರಯತ್ನಪೂರ್ವಕವಾಗಿ ಕೂದಲನ್ನು ಸವರಿಸಿಕೊಳ್ಳುವನು! ಸರ್ಪದಂತೆ ಬುಸುಗುಟ್ಟುವನು! ನೀರು ತುಂಬಿದ ಕಣ್ಣುಗಳಿಂದ ಸುತ್ತಲೂ ಇರುವವರನ್ನೆಲ್ಲ ನೋಡುವನು! ಮದಿಸಿದ ಆನೆಯಂತೆ ತನ್ನ ಎರಡು ಕೈಗಳನ್ನೂ ಭೂಮಿಯಲ್ಲಿ ತಿಕ್ಕುತ್ತಿರುವನು! ಕದಲಿದ ತಲೆಕೂದಲುಗಳನ್ನು ಆಗಾಗ ಒದರುವನು! ಹಲ್ಲುಗಳನ್ನು ಕಟಕಟನೆ ಕಡಿಯುವನು! ಹೀಗೆ ಕೋಪದುಃಖಗಳಿಂದ ವಿವಿಧ ಚೇಷ್ಟೆಗಳನ್ನು ಮಾಡುತ್ತ, ನಿಟ್ಟುಸಿರು ಬಿಟ್ಟು, ಯುಧಿಷ್ಠಿರನನ್ನು ನಿಂದಿಸತೊಡಗಿ ಹೀಗೆಂದು ಹೇಳಿದನು 'ಶಂತನುಕುಮಾರನಾದ ಭೀಷ್ಮನಲ್ಲಿಯೂ, ಶಸ್ತ್ರಪ್ರವೀಣರಾದ ಕರ್ಣ, ಕೃಪ, ಶಕುನಿ, ದ್ರೋಣ, ಅಶ್ವತ್ಥಾಮ, ಶಲ್ಯ, ಕೃತವರ್ಮಾದಿಗಳಲ್ಲಿಯೂ ಯುದ್ಧಭಾರವನ್ನಿಟ್ಟವನಗೇ ಈ ಗತಿಯು ಬಂದಮೇಲೆ ಯಾರಿಂದಲೂ ಹೇಗೂ ಕಾಲವನ್ನು

ವಿಸಾರಲಾಗುವುದಿಲ್ಲ. ಹನ್ನೊಂದಕ್ಷೌಹಿಣೀಸೈನ್ಯಕ್ಕೆ ನಾಥನಾದ ನಾನೇ ಈ ಸ್ಥಿತಿಯನ್ನು ಪಡೆದೆನಲ್ಲವೆ? ಕಾಲವು ಎಂತವರನ್ನಾದರೂ ಮೆಟ್ಟಿ ಬಿಡುವುದು ಓ ಸಂಜಯಾ! ಮಹಾಬಾಹೂ! ಈಗಿನ ಯುದ್ಧದಲ್ಲಿ ನಾನು ಹೇಗೆ ಅಧರ್ಮದಿಂದ ಕೊಲ್ಲಲ್ಪಟ್ಟೆನೋ ಅದನ್ನು ಹತಶೇಷರಾಗಿ ರುವ ನನ್ನ ಕಡೆಯವರಿಗೆ ನೀನು ತಿಳಿಸಬೇಕು ಪಾಂಡವರಿಂದ ಭೂರಿ ಶ್ರವಸ್ಸು, ಕರ್ಣ, ಭೀಷ್ಮ, ದ್ರೋಣ, ಇವರ ವಿಷಯದಲ್ಲಿಯೂ ಮಹಾ ಕ್ರೂರಕೃತ್ಯಗಳು ಮಾಡಲ್ಪಟ್ಟಿರುವುವು ನಿಂದಾರ್ಹವಾದ ಇಂತಹ ಕಾರ್ಯಗಳನ್ನು ಮಾಡಿದ ಪಾಂಡವರು ಸಾಧುಗಳ ನಿಂದೆಗೆ ಗುರಿಯಾಗು ವರೆಂದೇ ಎಣಿಸುವೆನು. ಕಪಟರೀತಿಯಲ್ಲಿ ಜಯವನ್ನು ಪಡೆಯಲು ಪ್ರಯತ್ನಿಸಿದ ಅವರ ವಿಷಯದಲ್ಲಿ ಪರಾಕ್ರಮಶಾಲಿಗಳಿಗೆ ಹೇಗೆ ಪ್ರೀತಿ ಯುಂಟಾಗುವುದು? ಯುದ್ಧನಿಯಮಗಳನ್ನು ತಿಳಿದವರಲ್ಲಿ ಯಾವನು ತಾನೇ ಅನ್ಯಾಯಪ್ರವರ್ತಕನಾದ ಆತನನ್ನು ಗೌರವಿಸುವನು? ನಿಯ ಮಜ್ಞನಾದ ಯಾವನುತಾನೇ ಪಾಪಿಯಾದ ಆ ವೃಕೋದರನಂತೆ ಅಧ ರ್ಮದಿಂದ ಜಯವನ್ನು ಪಡೆದು, ಅದಕ್ಕಾಗಿ ಸಂತೋಷಿಸುವನು? ತೊಡೆಮುರಿದ ನನ್ನ ತಲೆಯನ್ನು ಭೀಮಸೇನನು ತನ್ನ ಕಾಲಿನಿಂದ ತುಳಿದನೆಂಬುದಕ್ಕಿಂತಲೂ ಅನ್ಯಾಯವಾದ ಕಾರ್ಯವೇನಿರುವುದು? ಸಂಜ ಯಾ! ರಾಜ್ಯಸಂಪತ್ತಿನಲ್ಲಿದ್ದು, ತೇಜಸ್ವಿಯಾಗಿ, ಅನೇಕ ಬಂಧುವರ್ಗ ದಿಂದ ಕೂಡಿದ್ದಾಗ ನನ್ನ ವಿಷಯದಲ್ಲಿ ಹೀಗೆ ಮಾಡಿದ್ದರ ಅವನು ನಿಜ ವಾದ ಗಂಡಸು! ಹಾಗಿಲ್ಲದೆ ಮೃತಪ್ರಾಯನಾದ ನನ್ನಮೇಲೆ ಈ ಪರಾಕ್ರ ಮವನ್ನು ತೋರಿಸುವುದೊಂದು ಹೆಮ್ಮೆಯೇ! ಸಂಜಯಾ! ನನ್ನ ಮಾತಾ ಪಿತೃಗಳಲ್ಲಿ ನಾನು ಹೀಗೆ ಹೇಳಿದಂತೆ ತಿಳಿಸು 'ಯಾಗಗಳನ್ನು ಮಾಡಿ ದುದಾಯಿತು! ಆಶ್ರಿತರನ್ನು ಪೋಷಿಸಿದುದಾಯಿತು! ಸಮುದ್ರವೇ ಮೇರೆ ಯಾಗಿ ಉಳ್ಳ ಭೂಮಿಯೆಲ್ಲವನ್ನೂ ಆಳಿದುದಾಯಿತು! ನನಗಿಂತಲೂ ಉತ್ತಮವಾದ ಅಂತ್ಯಕಾಲವು ಮತ್ತಾರಿಗೆ ಲಭಿಸುವುದು? ಬಂಧುಗಳೆಲ್ಲ ರನ್ನೂ ಸಮ್ಮಾನಿಸಿದೆನು! ಪೂಜಾರ್ಹರಲ್ಲರನ್ನೂ ಪೂಜಿಸಿದೆನು! ಮೂರು ಪುರುಷಾರ್ಥಗಳನ್ನೂ ಸಾಧಿಸಿದೆನು ಪ್ರಧಾನರಾಜರಲ್ಲಿಯೂ ನನ್ನ ಆಜ್ಞೆಯು ನಡೆಯಿತು ದುಸ್ಸಾಧ್ಯವಾದ ಗೌರವವನ್ನೂ ಪಡೆದುದಾ

ಯಿತು ಉತ್ತಮವಾಶ್ವಗಳನ್ನೇರಿದುದಾಯಿತು ನನ್ನಂತೆ ಉತ್ತಮಪದ ವಿಯಲ್ಲಿದ್ದವನು ಮತ್ತಾವನಿರುವನು? ನಾನು ಶತ್ರುರಾಜರ ದೇಶಗಳನ್ನು ಸಾಧಿಸಿ, ಅವರನ್ನು ಸೇವಕರಂತೆ ನಿಯಮಿಸಿದೆನು ನಂಟರಿಗೆ ಹಿತ ವನ್ನು ಮಾಡಿದೆನು. ಇವುಗಳೆಲ್ಲವನ್ನೂ ನೋಡಿದರೆ, ನನಗೆ ಸಮಾನವಾಗಿ ಅಂತ್ಯಕಾಲವನ್ನು ಪಡೆದವನು ಬೇರ ಯಾರೂ ಇಲ್ಲ ವಿಧ್ಯುಕ್ತರೀತಿಯಲ್ಲಿ ನಾನು ಅಧ್ಯಯನ ಮಾಡಿದೆನು! ದಾನಮಾಡಿದೆನು! ನಿರ್ಬಾಧಿತನಾಗಿ ಜೀವಿಸಿದೆನು ನನ್ನ ಸಾಹಸಗಳಿಂದ ಲೋಕಗಳೆಲ್ಲವನ್ನೂ ಜಯಿಸಿದೆನು ನನ್ನಂತೆ ಹೀಗೆ ಕಡೆಗೆ ವೀರಸ್ವರ್ಗವನ್ನು ಸಾಧಿಸಿದವನಾವನುಂಟು? ನಾನೇನೋ ದೈವಾಧೀನದಿಂದ ಈಗಲೂ ಯುದ್ಧದಲ್ಲಿ ನ್ಯಾಯದಿಂದ ಜಯಿಸಲ್ಪಡಲಿಲ್ಲ ನಾನು ಸೇವಕನಂತೆ ಶತ್ರುಗಳ ವಶವಾಗಲೂ ಇಲ್ಲ ವಿಶಾಲವಾದ ನನ್ನ ರಾಜ್ಯಸಂಪತ್ತು ದೈವವಶದಿಂದ ನಾನು ಸತ್ತಮೇಲೆಯೇ ಇತರರ ವಶವಾಗುವುದು ಧರ್ಮನಿಷ್ಠನಾದ ಕ್ಷತ್ರಿಯನು ಕೋರ ತಕ್ಕ ಸಾವನ್ನೇ ನಾನು ಪಡೆದೆನು! ನನ್ನ ಭಾಗ್ಯವಿಶೇಷದಿಂದ ನಾನು ಅಲ್ಪ ಮನುಷ್ಯನಂತೆ ಜಯಿಸಲ್ಪಟ್ಟು ದ್ವೇಷದಿಂದ ಹಿಂತಿರುಗಲಿಲ್ಲ. ಮತ್ತು ನಾನು ಯಾವ ರೀತಿಯಿಂದಲೂ ಸೋತು ಅವಮಾನಿತನಾಗಲಿಲ್ಲ. ಮಲಗಿರುವವನನ್ನೋ, ಮತ್ತುಹಿಡಿದವನನ್ನೋ ವಿಷಹಾಕಿ ಕೊಲ್ಲುವಂತೆ, ಯುದ್ಧಧರ್ಮವನ್ನು ಮೀರಿ ಭೀಮಸೇನನಿಂದ ಈರೀತಿಯಲ್ಲಿ ಅನ್ಯಾಯ ವಾಗಿ ಕೊಲ್ಲಲ್ಪಟ್ಟೆನು ಮಹಾಭಾಗ್ಯಶಾಲಿಯಾದ ಅಶ್ವತ್ಥಾಮನಿಗೂ, ಕೃತವರ್ಮನಿಗೂ, ಕೃಪನಿಗೂ ‘ಅಧರ್ಮಪ್ರವರ್ತಕರೂ, ಯುದ್ಧಧರ್ಮ ವನ್ನು ಸಂಪೂರ್ಣವಾಗಿ ತ್ಯಜಿಸಿದವರೂ ಆದ ಪಾಂಡವರ ವಿಷಯದಲ್ಲಿ ನೀವು ನಂಬಿಕೆಯನ್ನಿಡಬೇಡಿರಿ’ ಎಂದು ನಾನು ಎಚ್ಚರಿಸಿದೆನೆಂದು ಹೇಳು’ ಎಂದನು ಆಮೇಲೆ ನಿನ್ನ ಮಗನು ಚಾರರನ್ನು ಕರೆದು ‘ನನ್ನ ನ್ನು ಭೀಮಸೇನನು ಯುದ್ಧದಲ್ಲಿ ಅಧರ್ಮದಿಂದ ಕೊಂದನು. ಅಂತಹ ನಾನು ಸ್ವರ್ಗಸ್ಥರಾದ ದ್ರೋಣ, ಕರ್ಣ, ಶಲ್ಯ, ವೃಷಸೇನ, ಶಕುನಿ, ಜಲ ಸಂಧ, ಭಗದತ್ತ, ಸೋಮದತ್ತ, ಜಯದ್ರಥಾದಿಗಳೆಲ್ಲರನ್ನೂ, ನನಗೆ ಸಮಾನನಾದ ದುಶ್ಶಾಸನನೇ ಮೊದಲಾದ ನನ್ನ ತಮ್ಮಂದಿರನ್ನೂ, ಲಕ್ಷ್ಮಣ ನನ್ನೂ, ಇಬ್ಬರು ಪುತ್ರರನ್ನೂ ಇನ್ನೂ ನನ್ನ ಕಡೆಯ ಸಾವಿರಾರು ಮಂದಿ

ವೀರರನ್ನೂ ಗುಂಪಿನಿಂದ ತಪ್ಪಿಸಿಕೊಂಡು ಹೋದ ಪ್ರಯಾಣಿಕನಂತೆ ನಾನು ಹಿಂಬಾಲಿಸಿ ಹೋಗುವೆನು. ಸಹೋದರರೂ, ಪತಿಯೂ ಮೃತರಾದರೆಂಬುದನ್ನು ಕೇಳಿ ಕಂಪಿಸುತ್ತ, ದುಃಖಪರಿಪೂರ್ಣಳಾದ ನನ್ನ ತಂಗಿ ದುಶ್ಯಲೆಯು ಹೇಗೆ ಇರುವಳೋ ? ವೃದ್ಧನಾದ ನನ್ನ ತಂದೆ ಧೃತರಾಷ್ಟ್ರನು, ಪತಿವಿಹೀನರಾದ ತನ್ನ ಸೊಸೆಯರನ್ನೂ ಮುಮ್ಮಕ್ಕಳ ಹೆಂಡತಿಯರನ್ನೂ ನೋಡಿ, ಗಾಂಧಾರಿಯೊಡನೆ ಯಾವ ದುಸ್ಥಿತಿಯನ್ನು ಹೊಂದುವನೋ ? ಮಂಗಳಾಂಗಿಯೂ, ವಿಶಾಲನೇತ್ರೆಯೂ, ಲಕ್ಷ್ಮಣನ ತಾಯಿಯೂ ಆದ ನನ್ನ ಪತ್ನಿಯು ತನ್ನ ಪತಿಪುತ್ರ ವಧದಿಂದ ಕೂಡಲೇ ಪ್ರಾಣಬಿಡುವುದು ನಿಶ್ಚಯವು ಸನ್ಯಾಸಿಯೂ, ಮಾತಿನಲ್ಲಿ ಚತುರನೂ ಆದ ಚಾರ್ವಾಕನು (ಬ್ರಾಹ್ಮಣವೇಷವನ್ನು ಧರಿಸಿದ ಒಬ್ಬ ರಾಕ್ಷಸನು) ಇವೆಲ್ಲವನ್ನೂ ತಿಳಿದರ, ಆತನು ನನ್ನನ್ನು ಖಂಡಿತವಾಗಿಯೂ ಪರಿಹಾಸ ಮಾಡುವನು ಲೋಕಪ್ರಸಿದ್ಧವಾದೀ ಸಮಂತಪಂಚಕವೆಂಬ ಪುಣ್ಯಕ್ಷೇತ್ರದಲ್ಲಿ ನಾನು ಮೃತನಾಗುವುದರಿಂದ ಶಾಶ್ವತಲೋಕಗಳನ್ನು ಪಡೆಯುವೆನು ' ಎಂದನು ಆಮೇಲೆ ಸಾವಿರಾರು ಜನರು ಕಣ್ಣುಗಳಲ್ಲಿ ನೀರು ತುಂಬಿಕೊಂಡು, ಆ ರಾಜನ ಪ್ರಲಾಪವನ್ನು ಕೇಳಿ ದಿಕ್ಕುಪಾಲಾಗಿ ಓಡಿ ಹೋದರು. ಸಮುದ್ರವನಗಳಿಂದಲೂ, ಚರಾಚರಗಳಿಂದಲೂ ಕೂಡಿದ ಈ ಭೂಮಿಯು ದೊಡ್ಡ ಶಬ್ದದೊಡನೆ ನಡುಗಿತು ದಿಕ್ಕುಗಳು ಕಲಗಿದುವು. ಆಗ ಜನರು ದ್ರೋಣಪುತ್ರನ ಬಳಿಗೆ ಹೋಗಿ ಗದಾಯುದ್ಧದಲ್ಲಿ ನಡೆದ ವಿಷಯಗಳನ್ನೂ, ಅರಸನು ಕೆಳಗೆ ಬೀಳಿಸಲ್ಪಟ್ಟುದನ್ನೂ ಯಥಾವತ್ತಾಗಿ ತಿಳಿಸಿದರು ಆಮೇಲೆ ಅವರು ವ್ಯಾಕುಲದಿಂದ ಸ್ವಲ್ಪಹೊತ್ತು ಚಿಂತಿಸಿ ತಾವು ಬಂದ ದಾರಿಯನ್ನು ಹಿಡಿದು ತಮ್ಮತಮ್ಮ ಸ್ಥಳಗಳಿಗೆ ಹೋದರು

ಇದು ಅರುವತ್ತೈದನೆಯ ಅಧ್ಯಾಯವು.



ಅಶ್ವತ್ಥಾಮ, ಕೃಪ, ಕೃತವರ್ಮರು ದುರ್ಯೋಧನನನ್ನು ಕು
ರಿತು ದುಃಖಿಸಿದುದು ಅಶ್ವತ್ಥಾಮ ದುರ್ಯೋಧನರ
ಸಂಭಾಷಣಗಳು ಅಶ್ವತ್ಥಾಮನು ರಾತ್ರಿಯಲ್ಲಿ ಪಾಂ
ಡವರನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದುದು
ದುರ್ಯೋಧನನ ಮಾತಿನಂತೆ ಕೃಪನು ಅಶ್ವತ್ಥಾ
ಮನನ್ನು ಸೇನಾಧಿಪತಿಯನ್ನಾಗಿ ಅಭಿಷೇಕ
ಮಾಡಿದುದು

ಓ ರಾಜಾ! ಚಾರರಿಂದ ದುರ್ಯೋಧನನು ಸತ್ತ ವೃತ್ತಾಂತವನ್ನೂ, ಕೌರವಸೈನ್ಯದಲ್ಲಿ ಉಳಿದ ಕೆಲವು ಮಹಾರಥರು ತೀಕ್ಷ್ಣಬಾಣಗಳಿಂದಲೂ, ಗದೆ, ತೋಮರ, ಶಕ್ತಿ ಮುಂತಾದ ಆಯುಧಗಳಿಂದಲೂ ಗಾಯಪಟ್ಟು ಚದರಿದುದನ್ನೂ ಕೇಳಿ, ಅಶ್ವತ್ಥಾಮ ಕೃಪ ಕೃತವರ್ಮರು ಮೂವರೂ, ವೇಗವುಳ್ಳ ಕುದುರೆಗಳನ್ನೇರಿ ಯುದ್ಧಭೂಮಿಗೆ ಬಂದರು. ಕಾಡಿನಲ್ಲಿ ಬಿರುಗಾಳಿಯ ವೇಗದಿಂದ ಮುರಿದು ತಳ್ಳಲ್ಪಟ್ಟ ಮಹಾವೃಕ್ಷದಂತೆ, ಅಲ್ಲಿ ತೊಡೆಮುರಿದು ಬಿದ್ದಿದ್ದ ದುರ್ಯೋಧನನನ್ನು ಕಂಡರು ಆತನೋ ರಕ್ತದಲ್ಲಿ ತೊಯ್ದು, ಬೇಡರಿಂದ ಪೆಟ್ಟುತಿಂದ ಆನೆಯಂತೆ ಭೂಮಿಯಲ್ಲಿ ಬಿದ್ದು ಒದೆದಾಡುತ್ತಿರುವನು ಆಕಾಶದಲ್ಲಿ ಸೂರ್ಯಸಮೀಪದಿಂದ ಕೆಳಗೆ ಬಿದ್ದ ಚಂದ್ರನಂತೆಯೂ, ಪ್ರಳಯಕಾಲದ ಗಾಳಿಯಿಂದ ಬತ್ತಿಹೋದ ಸಮುದ್ರದಂತೆಯೂ ಕಾಣುವನು ಆಕಾಶದಲ್ಲಿ ಹಿಮಮಂಡಲದಿಂದ ಪರಿವೃತನಾದ ಪೂರ್ಣಚಂದ್ರನಂತೆ ತೋರುವನು ಮೈಯನ್ನೆಲ್ಲ ನೆಲದ ಧೂಳು ಕವಿದಿರುವುದು ದೀರ್ಘಬಾಹುವಾದ ಆತನು ಪರಾಕ್ರಮದಲ್ಲಿ ಆನೆಗೆ ಸಮಾನನು! ಧನಾಶೆಯುಳ್ಳ ಸೇವಕರು ರಾಜನ ಸುತ್ತಲೂ ಗುಂಪುಕೂಡುವಂತೆ, ಘೋರವಾದ ಭೂತಗಣಗಳೂ, ಮಾಂಸಾಹಾರಿ ಪ್ರಾಣಿಗಳೂ ಅವನ ನಾಲ್ಕುಕಡೆಗಳಲ್ಲಿಯೂ ನೆರೆದು ನಿಂತಿರುವುವು. ಆಗ ಅವನು ಕೋಪದಿಂದ ಕೆರಳಿದ ಕಣ್ಣುಗಳಿಂದಲೂ, ಹಣೆಯಲ್ಲಿ ಮೇಲೆದ್ದು ಕಾಣುವ ಭ್ರುಕುಟಿಗಳಿಂದಲೂ, ಮಹಾಕೋಪದಿಂದ ಬುಸುಗುಟ್ಟುವನು ಹೀಗೆ ಭೂಮಿಯಲ್ಲಿ ಬಿದ್ದಿರುವ ರಾಜನನ್ನು ಕೃಪನೇ ಮೊದಲಾದ ರಥಿಕರೆಲ್ಲರೂ ಕಂಡು ಹಾಗೆಯೇ ಭ್ರಾಂತರಾದರು ಆಮೇಲೆ ಅವ

ರೆಲ್ಲರೂ ತಮ್ಮ ರಥಗಳಿಂದ ಕೆಳಗಿಳಿದು ರಾಜನ ಸಮೀಪಕ್ಕೆ ಆತುರದಿಂದ ಬಂದು, ಅವನ ಹತ್ತಿರದಲ್ಲಿ ನೆಲದಮೇಲೆ ಕುಳಿತರು ಆಗ ಅಶ್ವತ್ಥಾಮನು ಕಣ್ಣುಗಳಲ್ಲಿ ಧಾರೆಧಾರೆಯಾಗಿ ನೀರುತುಂಬಿಕೊಂಡು ನಿಟ್ಟುಸಿರು ಬಿಡುತ್ತ, ದುರ್ಯೋಧನನನ್ನು ಕುರಿತು 'ರಾಜಾಧಿರಾಜಾ! ಅಯ್ಯೋ! ನೀನೂ ಹೀಗೆ ಈ ನೆಲದ ಮಣ್ಣಿನಲ್ಲಿ ಬಿದ್ದು ಹೊರಳುತ್ತ ಮಲಗಿದುದನ್ನು ನೋಡಿದರೆ, ವಾಸ್ತವದಲ್ಲಿ ಈ ಪ್ರಪಂಚದಲ್ಲಿ ಪುಣ್ಯವೆಂಬುದು ಸ್ವಲ್ಪವೂ ಇಲ್ಲವೆಂದೇ ತೋರುವುದು ಹಿಂದೆ ಚಕ್ರವರ್ತಿಯೆನಿಸಿ ರಾಜ್ಯಭಾರಮಾಡಿದ ನೀನು, ಈಗ ನಿರ್ಜನಪ್ರದೇಶವಾದೀ ಕಾಡಿನಲ್ಲಿ ಒಬ್ಬಂಟಿಗನಾಗಿ ಬಿದ್ದಿರುವೆಯಲ್ಲ! ಅಯ್ಯೋ! ಇನ್ನು ನಾವು ಆ ದುಶ್ಶಾಸನನನ್ನೂ, ಮಹಾರಥನಾದ ಕರ್ಣನನ್ನೂ, ಇತರ ಬಂಧುಗಳನ್ನೂ ನಿನ್ನೊಡನೆ ಕಾಣುವುದೆಲ್ಲಿ? ಇದೇನು? ಲೋಕನಾಥನಾದ ನೀನೇ ಧೂಳು ಕವಿದ ಮೈಯಿಂದ ಹೀಗೆ ಮಲಗಿರುವೆಯೆಂದರ ದೈವಗತಿಯು ಯಾವ ವಿಧದಿಂದಲೂ ತಿಳಿಯಲಸಾಧ್ಯವೆಂಬುದು ನಿಜವು ಅಯ್ಯೋ! ವಿಧಿಯೇ! ರಿಪುಸಂಹಾರಕನಾದೀ ರಾಜನು ಅನೇಕಪಟ್ಟಾಭಿಷಿಕ್ತ ರಾಜರಿಗೆಲ್ಲ ಮುಂದಾಗಿ ಹೋಗುತ್ತಿದ್ದವನು ಅಂತವನು ಈಗ ನೆಲದಲ್ಲಿ ಬಿದ್ದು ಮಣ್ಣುಹಿಡಿದ ಹುಲ್ಲನ್ನು ಬಾಯಲ್ಲಿ ಕಚ್ಚುವಂತಾಯಿತೇ? ಆಹಾ! ಕಾಲವ್ಯತ್ಯಾಸವನ್ನು ನೋಡಿದೆಯಾ! ರಾಜಾ! ಆ ನಿನ್ನ ಶ್ವೇತಚ್ಛತ್ರವೆಲ್ಲಿ? ಆ ನಿನ್ನ ಚಾಮರಗಳೆಲ್ಲಿ? ಆ ನಿನ್ನ ದೊಡ್ಡ ಸೈನ್ಯವೆಲ್ಲಿಗೆ ಹೋಯಿತು? ಲೋಕನಾಥನಾದ ನೀನೇ ಏನೋ ಕಾರಣದಿಂದ ಈ ಸ್ಥಿತಿಯನ್ನು ಪಡೆದೆಯಾದುದರಿಂದ, ವಾಸ್ತವದಲ್ಲಿ ಕಾರ್ಯಗತಿಯನ್ನು ತಿಳಿಯುವುದು ಅಸಾಧ್ಯವೇ! (ಐಶ್ವರ್ಯದಲ್ಲಿ) ಇಂದ್ರನನ್ನು ಮೀರಿಸುತ್ತಿದ್ದ ನಿನಗೆ ಈಗ ಪ್ರಾಪ್ತವಾದ ಈ ವ್ಯಸನವನ್ನು ಕಂಡಾಗ, ನನಗೆ ಐಶ್ವರ್ಯವು ಶಾಶ್ವತವೆನಿಸಿದ್ದರೂ ಅದು ಯಾವ ಮನುಷ್ಯರಿಗೂ ಶಾಶ್ವತವಲ್ಲವೆಂದೇ ತೋರುವುದು' ಎಂದನು

ರಾಜಾ! ಆ ಅಶ್ವತ್ಥಾಮನ ದುಃಖವಾಕ್ಯಗಳನ್ನು ಕೇಳಿ ನಿನ್ನ ಮಗನು ಸಮಯೋಚಿತವಾದ ಮಾತುಗಳನ್ನಾಡಿದನು ಆಗಾಗ ಆತನು ತನ್ನ ಎರಡು ಕೈಗಳಿಂದಲೂ ಕಣ್ಣುಗಳನ್ನೊರಸಿಕೊಂಡರೂ, ದುಃಖದಿಂದ

ಕಣ್ಣೀರುಸುರಿಸುತ್ತ ಕೃಪನೇ ಮೊದಲಾದ ಎಲ್ಲಾ ವೀರರನ್ನೂ ಕುರಿತು. 'ಇಂತಹ ಲೋಕಧರ್ಮವು ಬ್ರಹ್ಮದೇವನಿಂದಲೇ ನಿರ್ಣಯಿಸಲ್ಪಟ್ಟುದು. ಎಂತಹ ಪ್ರಾಣಿಗಳಿಗೂ ಕಾಲಕ್ರಮದಲ್ಲಿ ನಾಶವು ಸಿದ್ಧವೇ! ಅಂತಹ ನಾಶವೇ ಈಗ ನನಗೂ ಸಂಭವಿಸಿತು. ಇದು ನಿಮಗೆ ಪ್ರತ್ಯಕ್ಷವಾಯಿತ ಲ್ಲವೆ? ಮೊದಲು ನಾನು ಭೂಮಿಯನ್ನಾಳಿ ಕಡೆಗೆ ಈ ಸ್ಥಿತಿಗೆ ಬಂದೆನು ನಾನು ದೈವಾಧೀನದಿಂದ ಇದುವರಗೆ ಯುದ್ಧದಲ್ಲಿ ಎಂತಹ ಆಪತ್ತಿನಲ್ಲಿ ಯೂ ಹಿಂತಿರುಗಿ ಓಡಿದವನಲ್ಲ ಈಗಲೂ ನಾನು ದೈವಾಧೀನದಿಂದ ಪಾಪಿ ಗಳ ವಂಚನೆಗಳಿಂದಲೇ ಕೊಲ್ಲಲ್ಪಟ್ಟೆನು ಯುದ್ಧಾಪೇಕ್ಷೆಯುಳ್ಳ ನಾನು ಭಾಗ್ಯವಶದಿಂದ ನಿತ್ಯವೂ ತಕ್ಕ ಪ್ರಯತ್ನಗಳನ್ನು ಮಾಡಿದೆನು ಜ್ಞಾತಿ ಗಳನ್ನೂ, ಬಂಧುಗಳನ್ನೂ ಕಳೆದುಕೊಂಡ ನಾನು ಪುಣ್ಯವಶದಿಂದಲೇ ಈಗ ಯುದ್ಧದಲ್ಲಿ ಕೊಲ್ಲಲ್ಪಟ್ಟೆನು ಪ್ರಜಾನಾಶಕರವಾದ ಆಪತ್ತಿನಿಂದ ಬಿಡುಗಡೆ ಹೊಂದಿ, ಕ್ಷೇಮದಿಂದ ಬದುಕಿದ ನಿಮ್ಮನ್ನು ನಾನು ಈಗ ನೋಡಿದುದೂ ನನ್ನ ಭಾಗ್ಯವಿಶೇಷವೇ! ಇದು ನನಗೆ ಬಹಳ ಪ್ರಿಯವಾದುದು. ನನ್ನ ಮರಣಕ್ಕಾಗಿ ಈಗ ನೀವು ಸ್ವಲ್ಪವೂ ಮನಸ್ಸಿನಲ್ಲಿ ವ್ಯಥೆಗೊಳ್ಳಬೇಡಿರಿ! ನಿಮಗೆ ವೇದಗಳು ಪ್ರಮಾಣವಾಗಿರುವುದಾದರೆ, ಈಗ ನಾನು ಪ್ರಸಿದ್ಧಗ ಳಾದ ಅಕ್ಷಯಲೋಕಗಳನ್ನೆಲ್ಲ ಜಯಿಸಿದವನೆಂದು ನಂಬಿರಿ! ಅಪರಿಮಿತ ವಾದ ತೇಜಸ್ಸುಳ್ಳ ಕೃಷ್ಣನ ಪ್ರಭಾವವನ್ನೂ ಈಗ ನಾನು ತಿಳಿದೆನು. ಆತ ನಿಂದಲೇ ನಾನು ಕ್ಷತ್ರಿಯಧರ್ಮದಿಂದ ಈ ರಣರಂಗದಲ್ಲಿ ಹತನಾಗಿ ಬಿದ್ದೆನು ಅದರಲ್ಲಿ ನಾನು ಕೃತಕೃತ್ಯನಾದುದರಿಂದ, ಹೇಗೂ ನಾನು ದುಃಖ ಪಡಬೇಕಾದುದಿಲ್ಲ ನೀವೂ ನಿಮ್ಮ ಸಾಹಸಕ್ಕೆ ತಕ್ಕ ಕಾರ್ಯಗಳನ್ನು ಮಾಡಿರುವಿರಿ ನಿಮ್ಮ ಸಾಹಸದಿಂದ ಶತ್ರುಜಯಕ್ಕಾಗಿ ಆದಷ್ಟು ಪ್ರಯ ತ್ನವನ್ನೂ ಮಾಡಿದಿರಿ ಆದರೆ ವಿಧಿಯನ್ನು ಮೀರಬಲ್ಲವರು ಯಾರು?' ಎಂದನು

ದುರ್ಯೋಧನನು ದುಃಖಾತಿಶಯದಿಂದ ಈ ವಾಕ್ಯಗಳನ್ನಾಡಿ ಕಣ್ಣು ಗಳಲ್ಲಿ ನೀರು ತುಂಬಿಕೊಂಡು ಮೌನದಿಂದಿದ್ದನು ಆ ಸ್ಥಿತಿಯಲ್ಲಿದ್ದ ರಾಜನನ್ನು ಕಂಡು ಅಶ್ವತ್ಥಾಮನು ಪ್ರಳಯಕಾಲದ ಅಗ್ನಿಯಂತೆ ಕೋಪ

ದಿಂದ ಜ್ವಲಿಸಿದನು ಆಗ ಆತನು ಕೋಪದಿಂದ ಕೈಗಳನ್ನು ಹಿಸುಕುತ್ತ, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು, ಗದ್ಗದಸ್ವರದಿಂದ 'ರಾಜಾ! ಆ ನೀಚರು ಕ್ರೂರಕೃತ್ಯಗಳಿಂದ ನನ್ನ ತಂದೆಯನ್ನು ಕೊಂದರು. ಈಗ ನಾನು ನಿನಗಾಗಿ ವ್ಯಸನಪಡುವಷ್ಟು ನನ್ನ ತಂದೆಯ ಮರಣಕ್ಕೂ ದುಃಖಿಸಲಿಲ್ಲ ಸತ್ಯವಾಗಿ ಹೇಳುವೆನು ಕೇಳು ನನ್ನ ಇಷ್ಟಾಪೂರ್ತದಿಂದಲೂ, (ಯಾಗಮಾಡುವುದು, ಕೊಳವನ್ನು ತೋಡುವುದು ಈ ಮೊದಲಾದುದು) ದಾನಧರ್ಮಗಳಿಂದಲೂ, ಸುಕೃತದಿಂದಲೂ ಶಪಥಮಾಡಿ ಹೇಳುವೆನು ಈ ರಾತ್ರಿ ಆ ವಾಸುದೇವನು ನೋಡುತ್ತಿರುವಂತೆಯೇ, ಎಲ್ಲಾ ಪಾಂಚಾಲರನ್ನೂ, ಪಾಂಡವರನ್ನೂ ನಾನು ಕೊಲ್ಲುವೆನು ಮಹಾರಾಜಾ! ನನಗೆ ಅನುಮತಿಯನ್ನು ಕೊಡು' ಎಂದನು ದ್ರೋಣಪುತ್ರನ ಮಾತನ್ನು ಕೇಳಿ ನಿನ್ನ ಮಗನು ಕೃಪನನ್ನು ಕುರಿತು 'ಆಚಾರ್ಯ! ಜಲಪೂರ್ಣವಾದ ಕಲಶವನ್ನು ತ್ವರೆಯಿಂದ ತರಿಸು' ಎನಲು, ಒಡನೆಯೇ ಕೃಪಾಚಾರ್ಯನು ನೀರು ತುಂಬಿದ ಕಲಶವನ್ನು ತಂದನು ಆಗ ನಿನ್ನ ಮಗನು ಆ ಕೃಪಾಚಾರ್ಯನನ್ನು ಕುರಿತು 'ಬ್ರಾಹ್ಮಣೋತ್ತಮಾ! ಈಗಲೂ ನಿಮಗೆ, ನನಗೆ ಪ್ರಿಯವನ್ನುಂಟುಮಾಡುವ ಅಪೇಕ್ಷೆಯಿದ್ದಲ್ಲಿ, ಅಶ್ವತ್ಥಾಮನನ್ನು ಸೈನ್ಯಾಧಿಪತಿಯನ್ನಾಗಿ ಅಭಿಷೇಕಮಾಡಿಸು ನಿನಗೆ ಮಂಗಳವಾಗಲಿ ಕ್ಷತ್ರಿಯವೃತ್ತಿಯನ್ನವಲಂಬಿಸಿದ ಬ್ರಾಹ್ಮಣನು, ಮುಖ್ಯವಾಗಿ ರಾಜನ ಆಜ್ಞೆಯಂತೆ ಮಾಡಬೇಕೆಂದು ಧರ್ಮಜ್ಞರು ತಿಳಿಸುವರು' ಎಂದನು ಆಮೇಲೆ ಕೃಪನು ರಾಜಾಜ್ಞೆಯಮೇರಗೆ ಅಶ್ವತ್ಥಾಮನನ್ನು ಸೈನ್ಯಾಧಿಪತ್ಯದಲ್ಲಿ ಅಭಿಷೇಕ ಮಾಡಿದನು ಒಡನೆಯೇ ಅಶ್ವತ್ಥಾಮನು ರಾಜನನ್ನು ಆಲಿಂಗನಮಾಡಿಕೊಂಡು, ಸಿಂಹನಾದಮಾಡುತ್ತ ಕೃಪ ಕೃತವರ್ಮರೊಡನೆ ಹೊರಟನು ಇತ್ತಲಾಗಿ ದುರ್ಯೋಧನನು ರಕ್ತದಿಂದ ತೊಯ್ದ ದೇಹದೊಡನೆ ಮಲಗಿದ್ದನು ಇಷ್ಟರಲ್ಲಿ ಭಯೋತ್ಪಾದಕವಾದ ರಾತ್ರಿಯು ಪ್ರಾಪ್ತವಾಯಿತು. ಆ ಮೂವರೂ ಶೋಕಾಕುಲರಾಗಿ ಹೋಗುತಿದ್ದರು.

ಇದು ಅರುವತ್ತಾರನೆಯ ಅಧ್ಯಾಯವು.

**ಗದಾಯುದ್ಧಪರ್ವವು ಮುಗಿದುದು.**

## ಇಲ್ಲಿಗೆ ಶಲ್ಯಪರ್ವವು ಮುಗಿದುದು.

ಶ್ರೀ

ವ್ಯಾಸಮಹರ್ಷಿಪ್ರಣೀತ

# ಶ್ರೀಮಹಾಭಾರತವು

SHREE MAHABHARTA

ಕರ್ಣಾಟಕವಚನ

## ಸೌಪ್ತಿಕಪರ್ವವು.

SAUPTIKA PARVA

ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯ ವಿರಚಿತವು.



ಪ್ರಕಾಶಕರು:

ಕರ್ಣಾಟಕ ಡಿಪೋ,

೧/೫೯, ಸನ್ನಿಧಿ ಬೀದಿ, ತಿರುವಲ್ಲಿಕ್ಕೇಣಿ, ಮದರಾಸು.

1934

# ವಿಷಯಾನುಕ್ರಮಣಿಕೆ.

ಅಧ್ಯಾಯ | ಪುಟ

## ಸೌಪ್ತಿಕಪರ್ವವು.

## ಐಷೀಕಪರ್ವವು







# ಶ್ರೀಮಹಾಭಾರತವು

## ಸೌಪ್ತಿಕಪರ್ವವು.

---

**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ |**
**ದೇವೀಂ ಸರಸ್ವತೀಂಚೈವ ತತೋ ಜಯಮುದೀರಯೇತ್ ||**

ಆ ರಾತ್ರಿ ಅಶ್ವತ್ಥಾಮಾದಿಗಳು ಒಂದು ವನಮಧ್ಯದಲ್ಲಿ ಆಲದಮರದ ಕೆಳಗೆ ಕುಳಿತಾಗ, ಅಲ್ಲಿ ಒಂದು ಗೂಬೆಯು ಹಲವು ಕಾಗೆಗಳನ್ನು ಕೊಲುವುದನ್ನು ಕಂಡು, ಅಶ್ವತ್ಥಾಮನು ತಾನೂ ಪಾಂಡವರನ್ನು ಹಾಗೆಯೇ ಕೊಲ್ಲುವೆನೆಂದು ಹೇಳಿದುದು.

ಆಮೇಲೆ ಅಶ್ವತ್ಥಾಮನೂ, ಕೃಪನೂ, ಕೃತವರ್ಮನೂ ಒಟ್ಟಿಗೆ ಸೇರಿ ದಕ್ಷಿಣಾಭಿಮುಖವಾಗಿ ಪ್ರಯಾಣಮಾಡಿದರು ಸೂರ್ಯಾಸ್ತಮಯಕಾಲಕ್ಕೆ ಸ್ವಲ್ಪಮುಂಚೆ ಅವರು ಪಾಂಡವರ ಶಿಬಿರದ ಸಮೀಪಕ್ಕೆ ಬಂದರು ಅಲ್ಲಿ ಕುದುರೆಗಳನ್ನು ಬಿಚ್ಚುತ್ತಿರುವಾಗ, ಪಾಂಡವರು ತಮ್ಮನ್ನು ಎಲ್ಲಿ ಕಂಡುಹಿಡಿಯುವರೋ ಎಂಬ ಭಯದಿಂದ ಒಂದು ದೊಡ್ಡ ವನಪ್ರದೇಶಕ್ಕೆ ಬಂದು ಸೇರಿದರು ಶಸ್ತ್ರಹತಿಯಿಂದ ಮೈಯೆಲ್ಲ ಗಾಯಪಟ್ಟ ಅವರು ನಿಟ್ಟುಸಿರುಬಿಡುತ್ತ, ಪಾಂಡವರ ವಿಷಯವನ್ನೇ ಚಿಂತಿಸುತ್ತ, ಆ ಪಾಂಡವರ ಶಿಬಿರಕ್ಕೆ ಸ್ವಲ್ಪ ದೂರವಾಗಿ ನಿಂತಿರುವಾಗ, ಅತ್ತಲಿಂದ ಪಾಂಡವರು ಜಯೋತ್ಸಾಹದಿಂದ ಕೂಗಾಡುತ್ತಿದ್ದ ಶಬ್ದವು ಇವರ ಕಿವಿಗೆ ಭಯಂಕರವಾಗಿ ಕೇಳಿಸಿತು ಆಗ ಅವರು ಅಲ್ಲಿಯೂ ತಮ್ಮನ್ನು ಪಾಂಡವರು ಬೆನ್ನ

ಟ್ಟುವರೆಂಬ ಭಯದಿಂದ, ಅಲ್ಲಿಂದ ಪೂರ್ವಾಭಿಮುಖವಾಗಿ ತಿರುಗಿ, ಪಾಂಡವರಲ್ಲಿರುವ ಕೋಪಮಾತ್ಸರ್ಯಗಳಿಂದ ಕುದಿಯುತ್ತ, ಒಂದು ಮುಹೂರ್ತ ಕಾಲ ನಡೆದುಹೋದರು ಇಷ್ಟರಲ್ಲಿ ಅವರ ಕುದುರೆಗಳು ಬಹಳವಾಗಿ ಬಳಲಿದ್ದುವು. ಅವರಿಗೂ ಬಾಯಾರಿಕೆ ಹೆಚ್ಚಿತು ತಮ್ಮ ರಾಜನಾದ ದುರ್ಯೋಧನನ ವಿಪತ್ತಿಗಾಗಿ ಕೊರಗುತ್ತ, ಒಂದು ಮುಹೂರ್ತದವರೆಗೆ ಮಾತಾಡದೆ ಸುಮ್ಮನಿದ್ದರು' ಎಂದನು.

ಆಗ ಧೃತರಾಷ್ಟ್ರನು 'ಸಂಜಯಾ! ಹತ್ತುಸಾವಿರ ಆನೆಗಳ ಬಲವುಳ್ಳ ನನ್ನ ಮಗನು ಆ ಭೀಮನಿಂದ ಹತನಾದನೆಂದರೆ, ಆ ವೃತ್ತಾಂತವು ನಂಬತಕ್ಕುದಲ್ಲ ಎಂತವರಿಗೂ ಅವಧ್ಯನೂ, ವಜ್ರದಂತೆ ದೃಢದೇಹವುಳ್ಳವನೂ, ಯೌವನವಯಸ್ಕನೂ ಆದ ನನ್ನ ಪುತ್ರನು ಪಾಂಡವರಿಂದ ಹತನಾದನೆಂದೆಯಾ? ಗಾವಲ್ಗಣನೇ! ಇದರಿಂದ ಮನುಷ್ಯರಿಗೆ ವಿಧಿಯನ್ನು ಮೀರುವುದು ಹೇಗೂ ಅಸಾಧ್ಯವೆಂದು ವ್ಯಕ್ತವಾಗುವುದು. ನನ್ನ ನೂರುಮಂದಿ ಮಕ್ಕಳು ಹತರಾದರೆಂಬುದನ್ನು ಕೇಳಿಯೂ ಭೇದಿಸದ ಈ ನನ್ನ ಹೃದಯವು ಕೇವಲ ಶಿಲಾಮಯವಾಗಿಯೇ ಇರಬೇಕು. ಇದರಲ್ಲಿ ಸಂದೇಹವಿಲ್ಲ ಪುತ್ರರೆಲ್ಲರೂ ಹತರಾದಮೇಲೆ, ನಮ್ಮಂತೆ ವೃದ್ಧರಾದ ತಾಯಿತಂದೆಗಳು ಹೇಗಿರಬೇಕೋ ಯೋಚಿಸು! ಆ ಪಾಂಡುಪುತ್ರನ ದೇಶದಲ್ಲಿ ತಲೆಯೆತ್ತಿ ತಿರುಗುವುದಕ್ಕೇ ನನಗೆ ಇಷ್ಟವಿಲ್ಲ! ರಾಜನಾಗಿ, ಮತ್ತು ರಾಜನಿಗೆ ತಂದೆಯಾಗಿಯೂ ಇದ್ದ ನಾನು, ಇನ್ನುಮೇಲೆ ಪಾಂಡುಪುತ್ರನ ಆಜ್ಞೆಯಂತೆ ಕಿಂಕರನಾಗಿ ನಡೆದುಕೊಳ್ಳುವುದು ಹೇಗೆ? ಭೂಲೋಕವನ್ನೆಲ್ಲ ಅನುಭವಿಸಿ ರಾಜಪದವಿಯಲ್ಲಿ ನೆಲೆಸಿ ನಿಂತಿದ್ದ ನಾನು, ಈಗ ಈ ಕೊನೆಗಾಲಕ್ಕೆ ಹೇಗೆತಾನೇ ಪರಾಧೀನನಾಗಿರಬಲ್ಲೆನು ? ಯಾವನೊಬ್ಬನಿಂದ ನನ್ನ ನೂರ್ವರು ಪುತ್ರರೂ ನಿಶ್ಶೇಷವಾಗಿ ಕೊಲ್ಲಲ್ಪಟ್ಟರೋ, ಆ ಭೀಮನ ಮಾತುಗಳನ್ನು ನಾನು ಹೇಗೆ ಕೇಳಿ ಸಹಿಸಬಲ್ಲೆನು? ನನ್ನ ಮಗನು ಮಹಾತ್ಮನಾದ ಆ ವಿದುರನ ಮಾತನ್ನು ಲಕ್ಷ್ಯಮಾಡದೆ ಹೋದನು! ಅವನ ಮಾತು ಸತ್ಯವಾಯಿತು ಅಪ್ಪಾ! ಸಂಜಯಾ! ನನ್ನ ಪುತ್ರನು ಅಧರ್ಮದಿಂದ ಹತನಾದಮೇಲೆ ಕೃತವರ್ಮನೂ, ಕೃಪನೂ,

ಅಶ್ವತ್ಥಾಮನೂ ಏನು ಮಾಡಿದರು ?' ಎಂದು ಕೇಳಲು ಸಂಜಯನು ಹೇಳುವನು

'ಮಹಾರಾಜಾ ! ಆಮೇಲೆ ನಿನ್ನ ಕಡೆಯ ಆ ಮೂವರು ವೀರರೂ ಸ್ವಲ್ಪ ದೂರ ಹೋಗಿ ಕೆಲವು ವೃಕ್ಷಗಳಿಂದಲೂ, ಲತೆಗಳಿಂದಲೂ ಕೂಡಿದ ಘೋರವಾದ ಒಂದು ಕಾಡಿಗೆ ಬಂದು ಸೇರಿದರು ಅಲ್ಲಿ ಅವರು ಕುದುರೆಗಳಿಗೆ ನೀರನ್ನು ಕುಡಿಸಿ, ತಾವೂ ಒಂದು ಮುಹೂರ್ತಕಾಲ ವಿಶ್ರಾಂತಿಯನ್ನು ಹೊಂದಿದರು ಆಮೇಲೆ ಅವರು ಸೂರ್ಯಾಸ್ತಮಯಕಾಲದಲ್ಲಿ ದುರ್ಯೋಧನನ ಆಜ್ಞೆಯನ್ನು ನೆನೆಸಿಕೊಂಡು ಮುಂದೆ ಹೋಗುತ್ತ, ಹಲವು ಬಗೆಯ ಮೃಗಪಕ್ಷಿಗಳಿಂದಲೂ, ನಾನಾವಿಧ ತರುಲತೆಗಳಿಂದಲೂ, ನೀರು ತುಂಬಿದ ತಟಾಕಗಳಿಂದಲೂ ಶೋಭಿತವಾಗಿ, ಹಲವು ತಾವರೆ ನೈದಿಲೆ ಕೊಳಗಳಿಂದ ರಮ್ಯವಾಗಿಯೂ, ಘೋರವಾಗಿಯೂ ಇರುವ ಒಂದು ವನಪ್ರದೇಶಕ್ಕೆ ಹೋದರು ಅಲ್ಲಿ ನಾಲ್ಕು ಕಡೆಗಳನ್ನೂ ನೋಡಿದಾಗ, ಅನೇಕ ಶಾಖೆಗಳಿಂದ ಕೂಡಿದ ಒಂದು ಆಲದ ಮರವನ್ನು ಕಂಡರು ಆ ಮರದ ಸಮೀಪಕ್ಕೆ ಹೋಗಿ ರಥದಿಂದಿಳಿದು ಕುದುರೆಗಳನ್ನು ರಥದಿಂದ ಬಿಚ್ಚಿ, ಆಚಮನಮಾಡಿ ಸಂಧ್ಯಾಕಾರ್ಯವನ್ನು ಮುಗಿಸಿದರು ಇಷ್ಟರಲ್ಲಿ ಸೂರ್ಯನು ಅಸ್ತಗಿರಿಯನ್ನು ಸೇರಲು, ಲೋಕವನ್ನೆಲ್ಲ ತುಂಬುವಂತಹ ರಾತ್ರಿಯು ತಲೆದೋರಿತು ಗ್ರಹಗಳಿಂದಲೂ, ಅಶ್ವಿನಿ ಮುಂತಾದ ನಕ್ಷತ್ರಗಳಿಂದಲೂ ನಾನಾಕಡೆಗಳಲ್ಲಿಯೂ ಅಲಂಕೃತವಾದ ಆಕಾಶವು ನಿಶಾದೇವಿಗೆ ಹೊದಿಸಿದ ಚಿತ್ರವಸ್ತ್ರದಂತೆ ಪ್ರಕಾಶಿಸಿತು ರಾತ್ರಿಯಲ್ಲಿ ಸಂಚರಿಸುವ ಪ್ರಾಣಿಗಳೆಲ್ಲವೂ ಯಥೇಚ್ಛವಾಗಿ ಕುಣಿದಾಡಿದುವು ಹಗಲಿನಲ್ಲಿ ಸಂಚರಿಸುವ ಪ್ರಾಣಿಗಳೆಲ್ಲ ನಿದ್ರೆಮಾಡಿದವು ನಿಶಾಚರಪ್ರಾಣಿಗಳ ಕೂಗಾಟವು ಹೆಚ್ಚಿತು ಮಾಂಸಪ್ರಿಯರಾದ ರಾಕ್ಷಸರು ಎಷ್ಟೋ ಸಂತೋಷದಿಂದ ನಲಿಯುತ್ತಿದ್ದರು ಘೋರವಾದ ಕತ್ತಲೆ ಕವಿಯಿತು ಭಯಂಕರವಾದ ಆ ರಾತ್ರಿಯ ಆರಂಭದಲ್ಲಿ ಕೃತವರ್ಮನೂ, ಕೃಪನೂ, ಅಶ್ವತ್ಥಾಮನೂ ದುಃಖಪೀಡಿತರಾಗಿ ಒಬ್ಬರಿಗೊಬ್ಬರು ಸಮೀಪದಲ್ಲಿ ಕುಳಿತುಕೊಂಡರು ವಿವಿಧಬಾಣಗಳಿಂದ ಗಾಯಪಟ್ಟ ಮೈಯುಳ್ಳ ಆ ಮೂವರೂ

ಆಲದಮರದ ಕೆಳಗೆ ಕುಳಿತು, ಹಿಂದೆ ಯುದ್ಧದಲ್ಲಿ ನಡೆದ ಕುರುಕುಲನಾಶವನ್ನೇ ನೆನೆಸಿ ದುಃಖಿಸುತ್ತಿದ್ದರು ಮಾರ್ಗಶ್ರಮದಿಂದ ಬಹಳ ಬಳಲಿದ್ದ ಅವರು ಅಲ್ಲಿ ನೆಲದಮೇಲೆಯೇ ಮಲಗಿದರು ಹಿಂದೆ ಇಂತಹ ಕಷ್ಟವನ್ನೇ ಕಾಣದೆ ಯಾವಾಗಲೂ ಸುಖಾರ್ಹರಾಗಿದ್ದ ಅವರಿಗೆ ಹಾಗೆಯೇ ನಿದ್ರೆ ಬಂದಿತು ಉತ್ತಮವಾದ ಶಯನದಲ್ಲಿ ಮಲಗುತಿದ್ದ ಕೃಪ ಕೃತವರ್ಮರಿಬ್ಬರಿಗೂ ಆ ನೆಲದಮೇಲೆಯೇ ಗಾಢನಿದ್ರೆ ಬಂದಿತು ಅನಾಥರಂತೆ ಅಲ್ಲಿ ಮೈಮರೆತು ನಿದ್ರಿಸುತಿದ್ದರು ದ್ರೋಣಪುತ್ರನಾದರೋ ಕ್ರೋಧ ಮತ್ಸರಗಳನ್ನು ತಡೆಯಲಾರದೆ ಸರ್ಪದಂತೆ ಬುಸುಗುಟ್ಟುತಿದ್ದನು ಆದರಿಂದ ಅವನಿಗೆ ನಿದ್ರೆಯೇ ಬರಲಿಲ್ಲ. ಆಗ ಅವನು ಘೋರವಾದ ಆ ವನವನ್ನೆಲ್ಲ ದೃಷ್ಟಿಸಿ ನೋಡುತಿದ್ದನು ಅನೇಕ ಕ್ರೂರಮೃಗಗಳಿಂದ ಕೂಡಿದ ಆ ವನವನ್ನೂ, ವಾಯಸಗಳಿಂದ ತುಂಬಿದ ಆಲದಮರವನ್ನೂ ನೋಡಿದಾಗ, ಆ ಮರದಲ್ಲಿ ಸಾವಿರಾರು ಕಾಗೆಗಳು ಗೂಡುಗಳನ್ನು ಕಟ್ಟಿಕೊಂಡು ಸುಖವಾಗಿ ನಿದ್ರಿಸುತ್ತ ರಾತ್ರಿಯನ್ನು ಕಳೆಯುತಿದ್ದುವು ಆ ಕಾಗೆಗಳೆಲ್ಲವೂ ಹೀಗೆ ಸುಖವಾಗಿ ನಿದ್ರಿಸುತ್ತಿರುವಾಗ, ಭಯಂಕರಸ್ವರೂಪವೂ, ದೊಡ್ಡ ದೇಹವೂ, ದೊಡ್ಡ ಧ್ವನಿಯೂ, ಮರಕತದಂತೆ ಹಸುರಾದ ಕಣ್ಣುಗಳೂ, ಮುಂಗಿಸಿಯಂತೆ ಪಿಂಗಳವರ್ಣವೂ, ಹರಿತವಾದ ಕೊಕ್ಕೂ, ಕೂರುಗುರುಗಳೂ ಗರುಡನಂತೆ ವೇಗವುಳ್ಳ ಒಂದು ಗೂಬೆಯು, ಅಕಸ್ಮಾತ್ತಾಗಿ ಅಲ್ಲಿಗೆ ಹಾರಿಬಂದುದನ್ನು ಅಶ್ವತ್ಥಾಮನು ಕಂಡನು. ಆಮೇಲೆ ಆ ಪಕ್ಷಿಯು ಮೆಲ್ಲಗೆ ಹೊಂಚುಹಾಕುತ್ತ ಆಲದಮರದೊಳಗೆ ಪ್ರವೇಶಿಸಿತು ಕಾಗೆಗಳಿಗೆ ಸಹಜವೈರಿಯಾದ ಆ ಪಕ್ಷಿಯು ಆಲದಮರದ ಶಾಖೆಯಲ್ಲಿ ನಿರ್ಭಯವಾಗಿ ನಿದ್ರಿಸುತ್ತಿದ್ದ ಕಾಗೆಗಳನ್ನೆಲ್ಲ ಕೊಲ್ಲಲಾರಂಭಿಸಿತು ಕಾಲನ್ನೇ ಆಯುಧವಾಗಿ ಉಳ್ಳ ಆ ಗೂಬೆಯು, ಕೆಲವು ಕಾಗೆಗಳ ರೆಕ್ಕೆಯನ್ನು ಮು[illegible]ದುಬಿಟ್ಟಿತು ಕೆಲವು ಕಾಗೆಗಳ ತಲೆಗಳನ್ನು ಕತ್ತರಿಸಿತು. ಕಾಲುಗಳನ[illegible] ಮುರಿಯಿತು ಕಣ್ಣಿಗೆ ಸಿಕ್ಕಿದ ಪಕ್ಷಿಗಳನ್ನೆಲ್ಲ ಕ್ಷಣಮಾತ್ರದಲ್ಲಿ ಕೊಂದ[illegible] ಹಾಕಿತು. ಬೆಟ್ಟದಂತಿದ್ದ ಆ ಆಲದಮರವೆಲ್ಲ ಛಿನ್ನಭಿನ್ನಗಳಾದ ಆ ಪ[illegible]ಗಳ ದೇಹಾವಯವಗಳಿಂದ ತುಂಬಿಹೋಯಿತು ಹೀಗೆ ಆ ಗೂಬೆಯ ಕಾಗೆಗಳನ್ನೆಲ್ಲ ಕೊಂದು, ತನ್ನ ವೈರವನ್ನು ತೀರಿಸಿಕೊಂಡು, ಸಂತೋ



ಪುಟ ೫ ರಾತ್ರಿ ಒಂದು ಗೂಬೆಯು ಆಲದಮರದಮೇಲೆ ಮಲಗಿದ್ದ ಕಾಗೆಗಳನ್ನು ಕೊಲ್ಲುತ್ತಿರುವಾಗ ಕೆಳಗಿದ್ದ ಅಶ್ವತ್ಥಾಮನು ತಾನೂ ಹಾಗೆಯೇ ಶತ್ರುಗಳನ್ನು ಕೊಲೆಮಾಡುವೆನೆಂದು ಕೃಪಾದಿಗಳಿಗೆ ತಿಳಿಸಿದುದು

ಹಿಸುತಿದ್ದಿತು. ರಾತ್ರಿಯಲ್ಲಿ ಗೂಬೆಯು ಮಾಡಿದ ಆ ಕೆಲಸವನ್ನು ನೋಡಿ ದ್ರೋಣಪುತ್ರನಿಗೆ ತಾನೂ ಅಂತಹ ಕೆಲಸವನ್ನೇ ಮಾಡಬೇಕೆಂಬ ಆಲೋಚನೆ ಹುಟ್ಟಿತು ಆಗ ಅವನು ತನ್ನಲ್ಲಿತಾನು 'ಈ ಪಕ್ಷಿಗಳೇ ಈಗ ನನಗೆ ಯುದ್ಧಕ್ರಮವನ್ನುಪದೇಶಿಸಿದಂತಾಯಿತು ಹೀಗೆ ಶತ್ರುಗಳನ್ನು ನಾಶಮಾಡುವುದೇ ಯುಕ್ತವು! ಅದಕ್ಕೆ ಕಾಲವೂ ಸಮೀಪಿಸಿತೆಂದೂ ತೋರಿದೆ. ಜಯಶಾಲಿಗಳೂ, ಅಸ್ತ್ರಶಸ್ತ್ರಗಳಲ್ಲಿ ಸುಶಿಕ್ಷಿತರೂ ಆದ ಪಾಂಡವರನ್ನು ಈಗ ನಾನು ಯುದ್ಧದಲ್ಲಿ ಇದಿರಿಸಿ ಕೊಲ್ಲಬೇಕೆಂದರೆ ಅಸಾಧ್ಯವು. ನಾನೇನೋ ಆ ಪಾಂಡವರನ್ನು ಕೊಲ್ಲುವುದಾಗಿ ರಾಜನಿಗೆ ಮಾತುಕೊಟ್ಟು ಬಂದೆನು ಆದರೆ, ಉರಿಯುವ ಜ್ವಾಲೆಯಲ್ಲಿ ಬಿದ್ದು ಪ್ರಾಣವನ್ನು ಬಿಡುವ ಪತಂಗದಹಾಗೆ, ಆತ್ಮನಾಶಕರವಾದ ವ್ಯಾಪಾರವನ್ನು ಹಿಡಿದು ನ್ಯಾಯ ತಪ್ಪದೆ ಯುದ್ಧಮಾಡಿದರೆ ನನಗೆ ಮರಣವೇ ನಿಶ್ಚಯವು (ಈ ಸಮಯದಲ್ಲಿ) ಕಪಟದಿಂದಲೇ ಕಾರ್ಯಸಿದ್ಧಿಯಾಗಬೇಕು. ಅದರಿಂದಲೇ ಈಗ ಶತ್ರುಕ್ಷಯವುಂಟಾಗಬೇಕು. ಸಂದೇಹಾಸ್ಪದವಾದ ಫಲಕ್ಕಿಂತಲೂ, ನಿಸ್ಸಂದೇಹವಾದ ಫಲವನ್ನೇ ಅವಲಂಬಿಸಬೇಕೆಂದು ಅರ್ಥಶಾಸ್ತ್ರವಿಶಾರದರಾದ ಜನರು ಅದನ್ನೇ ಆದರಿಸುವರು ಈ ಫಲಸಿದ್ಧಿಯ ವಿಷಯದಲ್ಲಿ ಯಾವ ಕಾರ್ಯವು ಹೀನವೆಂದು ಜನರಿಂದ ನಿಂದಿಸಲ್ಪಟ್ಟಿರುವುದೋ, ಆ ಕಾರ್ಯವೂ ಕ್ಷತ್ರಿಯಧರ್ಮವನ್ನನುಸರಿಸುವ ಮನುಷ್ಯನಿಗೆ ನ್ಯಾಯಸಮ್ಮತವೇ ಆಗುವುದು ಆ ಪಾಂಡವರೂ ಆಗಾಗ ನಿಂದಾರ್ಹವಾದ ಮತ್ತು ಕಪಟದಿಂದ ಕೂಡಿದ ಕುತ್ಸಿತಕಾರ್ಯಗಳನ್ನೇ ಮಾಡಿರುವರು ಈ ವಿಷಯವಾಗಿ ಪೂರ್ವದಲ್ಲಿ ಧರ್ಮಜ್ಞರೂ, ನ್ಯಾಯವನ್ನನುಸರಿಸುವವರೂ, ತತ್ವದರ್ಶಿಗಳೂ ಆದ ಮಹಾತ್ಮರಿಂದ ತತ್ವಾರ್ಥದಿಂದ ಕೂಡಿದ ಶ್ಲೋಕಗಳು ಹೇಳಲ್ಪಟ್ಟುವೆಂದು ಕೇಳಿರುವೆವು ಆ ಶ್ಲೋಕಾರ್ಥವೇನೆಂದರೆ, ಶತ್ರುಸೈನ್ಯವು ಬಹಳ ಆಯಾಸದಿಂದ ಬಳಲಿದಾಗಲೂ, ಅದು ಚದರಿರುವಾಗಲೂ, ಅಥವಾ ಊಟಮಾಡುವಾಗಲೂ, ಪ್ರಯಾಣಮಾಡುವಾಗಲೂ, ಪ್ರವೇಶಿಸುವಾಗಲೂ, ಹೇಗೋ ಒಂದು ಸಂಚಿನಲ್ಲಿ ಅದನ್ನು ಹೊಡೆಯಬಹುದು ಶತ್ರುಸೈನ್ಯವು ಅರ್ಧರಾತ್ರಿಯಲ್ಲಿ ನಿದ್ರಾವಶವಾಗಿರುವಾಗಲೂ, ರಕ್ಷಕರಿಲ್ಲದಿರುವಾಗಲೂ, ಯುದ್ಧವೀರರ ಬೆಂಬಲವಿಲ್ಲದಿರುವಾ

ಗಲೂ, ಸೈನ್ಯವು ಎರಡು ಭಾಗಗಳಾಗಿ ವಿಭಾಗಿಸಿಕೊಂಡು ಜಗಳವಾಡುವಾಗಲೂ ಅದನ್ನು ಹೊಡೆಯಬಹುದು' ಎಂಬುದಾಗಿ ನೀತಿಯುಂಟು' ಎಂದು ಮೊದಲಾಗಿ ಅಶ್ವತ್ಥಾಮನು ಆಲೋಚಿಸಿಕೊಂಡು ರಾತ್ರಿಯಲ್ಲಿ ಮಲಗಿದ್ದಾಗಲೇ ಪಾಂಚಾಲಸಹಿತರಾದ ಪಾಂಡವರನ್ನೆಲ್ಲ ಕೊಲ್ಲಬೇಕೆಂದು ನಿಶ್ಚಯಿಸಿದನು. ಇಂತಹ ಕ್ರೂರನಿಶ್ಚಯವನ್ನು ಮನಸ್ಸಿನಲ್ಲಿಟ್ಟುಕೊಂಡು, ಅದನ್ನೇ ಚೆನ್ನಾಗಿ ನಿಶ್ಚಯಿಸಿ, ಆಮೇಲೆ ಅಲ್ಲಿ ನಿದ್ರಿಸುತ್ತಿದ್ದ ಮಾವನಾದ ಕೃಪನನ್ನೂ, ಕೃತವರ್ಮನನ್ನೂ ಎಬ್ಬಿಸಿದನು. ಕೃಪ ಕೃತವರ್ಮರಿಬ್ಬರೂ ಎಚ್ಚರಗೊಂಡು, ಲಜ್ಜೆಯಿಂದ ಯಾವ ಉತ್ತರವನ್ನೂ ಕೊಡದೆ ಸುಮ್ಮನಿದ್ದರು ಅವನು ತಿರುಗಿ ಒಂದು ಮುಹೂರ್ತಕಾಲ ಆಲೋಚಿಸಿ ಅವರಿಬ್ಬರನ್ನೂ ನೋಡಿ 'ಯಾವನಿಗಾಗಿ ನಮಗೆ ಪಾಂಡವರೊಡನೆ ದೀರ್ಘವಾದ ವೈರವುಂಟಾಯಿತೋ, ಶೂರನೂ, ರಾಜನೂ ಆದ ಆ ದುರ್ಯೋಧನನು ಹತನಾದನು ಯುದ್ಧವೀರನೂ, ಹನ್ನೊಂದಕ್ಷೌಹಿಣೀಸೈನ್ಯಕ್ಕೆ ಅಧಿಪತಿಯೂ, ಏಕಾಕಿಯೂ ಆದ ದುರ್ಯೋಧನನು, ಹಲವು ಮಂದಿ ಅಲ್ಪರಿಂದ ಆವೃತನಾಗಿ ಭೀಮನಿಂದ ವಧಿಸಲ್ಪಟ್ಟನು ಸಾಮ್ರಾಜ್ಯಾಭಿಷೇಕದ ಕಿರೀಟವನ್ನು ಧರಿಸಿದ ದುರ್ಯೋಧನನ ತಲೆಯನ್ನು ನೀಚನಾದ ಭೀಮನು ಕಾಲಿಂದಲೂ ಒದೆದನು. ಆ ನೀಚಭೀಮಸೇನನಿಂದ ಇಂತಹ ಕ್ರೂರಕೃತ್ಯವು ಮಾಡಲ್ಪಟ್ಟಿತು ಈಗ ಪಾಂಚಾಲರೋ ಬಹಳವಾಗಿ ಗರ್ಜಿಸುವರು ಆಗಾಗ ಸಿಂಹನಾದವನ್ನು ಮಾಡುವರು ನಗುವರು! ಶಂಖಗಳನ್ನೂದುವರು! ನೂರುನೂರುಮಂದಿ ಸೇರಿ ಸಂತೋಷದಿಂದ ದುಂದುಭಿಗಳನ್ನು ಹೊಡೆಯುವರು ಶಂಖಧ್ವನಿಗಳಿಂದ ಕೂಡಿದ ಘೋರವಾದ ಅವರ ವಾದ್ಯಘೋಷವು ಗಾಳಿಯಿಂದ ಹರಡಿ ದಿಕ್ಕುಗಳನ್ನೆಲ್ಲ ತುಂಬಿಸುವಂತಿರುವುದು ಅದೋ! ಅಲ್ಲಿ ಕೆನೆಯುವ ಕುದುರೆಗಳ ಶಬ್ದವೂ, ಗರ್ಜಿಸುವ ಆನೆಗಳ ಘೀಂಕಾರವೂ, ಶೂರರ ಸಿಂಹನಾದವೂ ಬಹು ಪ್ರಬಲವಾಗಿ ಕೇಳಿಸುವುವು. ಅದೋ! ಅತ್ತಲಾಗಿ ಪೂರ್ವಾಭಿಮುಖವಾಗಿ ಬಹು ಸಂತೋಷದಿಂದ ಹೋಗುತ್ತಿರುವ ಪಾಂಡವಸೇನಾವೀರರ ರಥನೇಮಿಶಬ್ದವು ಕೇಳಿಸುವುದು. ನಮ್ಮ ಕೌರವರೆಲ್ಲರೂ ಪಾಂಡವರಿಂದ ವಧಿಸಲ್ಪಟ್ಟರು. ಈ ಮಹತ್ತಾದ ಆಪತ್ತಿನಲ್ಲಿ ನಾವು ಮೂವರೇ ಉಳಿದಿರುವೆವು ಈಗಿನ

ಕೊಲೆಯಲ್ಲಿ ನೂರಾನೆಯ ಬಲವುಳ್ಳವರು ಕೆಲವರು! ಸರ್ವಾಸ್ತ್ರವಿಶಾರದರು ಕೆಲವರು! ಅಂತವರೆಲ್ಲರೂ ಪಾಂಡವರಿಂದ ಹತರಾದರು. ಈ ವಿಪರೀತವೆಲ್ಲವೂ ಕಾಲವ್ಯತ್ಯಾಸದಿಂದುಂಟಾದುದೇ! ನಾವು ಅಸಾಧ್ಯಪ್ರಯತ್ನವನ್ನು ಮಾಡಿದಾಗಲೂ ಈ ಕಾರ್ಯಕ್ಕೆ ಇಂತಹ ಅಂತ್ಯವುಂಟಾಗಿರುವ ಕಾರಣದಿಂದ, ನಿಶ್ಚಯವಾಗಿಯೂ ಈ ಕಾರ್ಯವು ಈ ವಿಧವಾಗಿಯೇ ಆಗಬೇಕಾಗಿದೆ ಈಗಲೂ ನಿಮ್ಮಿಬ್ಬರಿಗೂ ಮೋಹದಿಂದ ಬುದ್ಧಿಕೆಡದಿದ್ದ ಪಕ್ಷದಲ್ಲಿ, ಈ ಮಹಾವ್ಯಸನದಲ್ಲಿ ಯಾವುದು ನಮಗೆ ಕ್ಷೇಮಕರವೋ ಅಂತಹ ಕಾರ್ಯವನ್ನು ಯೋಚಿಸಿ ಹೇಳಿರಿ!' ಎಂದನು

ಇದು ಮೊದಲನೆಯ ಅಧ್ಯಾಯವು.

---

## { ಕೃಪನು ಕರ್ತವ್ಯವಿಷಯವನ್ನು ಕುರಿತು ಅಶ್ವತ್ಥಾಮನಿಗೆ ಉಪದೇಶಿಸಿದುದು }

ಆಗ ಕೃಪನು “ವತ್ಸಾ! ಸಕಾರಣವಾದ ನಿನ್ನ ವಚನವನ್ನು ನಾನು ಸಂಪೂರ್ಣವಾಗಿ ಕೇಳಿದುದಾಯಿತು. ಇನ್ನು ನನ್ನ ವಚನವನ್ನು ಕೇಳು. ಮನುಷ್ಯರೆಲ್ಲರೂ ನಾನಾಕಡೆಗಳಿಂದ ದೈವದಿಂದ ಬಂಧಿಸಲ್ಪಟ್ಟರುವರು ಆದರ ಮನುಷ್ಯಪ್ರಯತ್ನದಲ್ಲಿಯೂ ಬದ್ಧರಾಗಿರುವರು. ಹೀಗೆ ದೈವ ಪೌರುಷವೆಂಬೀ ಎರಡರಲ್ಲಿ ಲೋಕವೆಲ್ಲವೂ ಬದ್ಧವಾಗಿರುವುವು. ಆ ಎರಡಕ್ಕಿಂತ ಉತ್ತಮವಾದುದು ಬೇರೆ ಯಾವುದೂ ಇಲ್ಲ ದೈವವೊಂದರಿಂದಲೇ ಕಾರ್ಯಸಿದ್ಧಿಯಾಗುವುದಿಲ್ಲ ಕೇವಲ ಪುರುಷಕಾರದಿಂದಲೂ ಕಾರ್ಯಸಿದ್ಧಿಯಾಗುವುದಿಲ್ಲ ಎರಡೂ ಸೇರಿದಾಗಲೇ ಕಾರ್ಯಸಿದ್ಧಿಯುಂಟಾಗುವುದು. ನೀಚೋಚ್ಚಪದಾರ್ಥಗಳೆಲ್ಲವೂ ಆ ಎರಡರಿಂದಲೂ ಬದ್ಧವಾಗಿ, ನಾನಾಕಾರ್ಯದಲ್ಲ ಪ್ರವರ್ತಿಸುವಂತೆಯೂ, ನಿವರ್ತಿಸುವಂತೆಯೂ ಕಾಣಿಸುವುವು. ಮೇಘವು ಪರ್ವತದಮೇಲೆ ವರ್ಷಿಸುವುದರಿಂದುಂಟಾಗುವ ಪ್ರಯೋಜನವೇನು? ಉತ್ತ ನೆಲದಮೇಲೆ ವರ್ಷಿಸಿದರೆ, ಎಷ್ಟೋ ಪ್ರಯೋಜನವುಂಟಲ್ಲವೆ? ಕೇವಲ ಮನುಷ್ಯಪ್ರಯತ್ನವಾಗಲಿ, ಮನುಷ್ಯಪ್ರಯತ್ನವಿಲ್ಲದ ದೈವಶಕ್ತಿಯಾಗಲಿ ಎಲ್ಲಿಯೂ ಪ್ರಯೋಜನಕಾರಿಯಲ್ಲ.

ಆ ಎರಡರಲ್ಲಿ ಮೊದಲನೆಯದು ಪ್ರಬಲವೆಂಬುದರಲ್ಲಿ ಸಂದೇಹವಿಲ್ಲ ಮಳೆಯೂ ಚೆನ್ನಾಗಿ ಸುರಿದು, ನೆಲವೂ ಚೆನ್ನಾಗಿ ಕೃಷಿಮಾಡಲ್ಪಟ್ಟಿದ್ದಾಗಿದ್ದರೆ ಬೀಜವು ಎಂತಹ ಫಲವನ್ನು ತರುವುದೋ, ಹಾಗೆಯೇ ಅವೆರಡರಿಂದಲೂ ಮನುಷ್ಯರಿಗೆ ಕಾರ್ಯಸಿದ್ಧಿಯುಂಟಾಗುವುದು ಅವೆರಡರಲ್ಲಿಯೂ ದೈವವು ದುಶ್ಚಿಂತ್ಯವಾದುದು ಸ್ವತಂತ್ರವಾದುದು ಪ್ರಾಜ್ಞರು ದೈವವನ್ನು ದೃಢವಾಗಿ ಆಶ್ರಯಿಸಿಯೇ ತಮ್ಮ ಪ್ರಯತ್ನವನ್ನು ಮಾಡುವರು. ಮನುಷ್ಯರಿಗೆ ಆ ಎರಡರಿಂದಲೂ ಎಲ್ಲಾ ಕಾರ್ಯಗಳೂ ಸಿದ್ಧಿಸುವುವು ಮನುಷ್ಯರಿಗೆ ಅವೆರಡೂ ಕಾರ್ಯಪ್ರವರ್ತಕಗಳು ದೈವಸಹಾಯದಿಂದಲೇ ಪುರುಷಕಾರವು ಸಿದ್ಧಿಸಬೇಕು ಹಾಗಿದ್ದರೆ ಮಾತ್ರವೇ ಕೆಲಸವನ್ನು ಮಾಡುವವನಿಗೆ ಅದು ಬಲವನ್ನುಂಟುಮಾಡುವುದು ಮನುಷ್ಯರು ಸಮರ್ಥರಾಗಿದ್ದರೂ, ದೈವಬಲವಿಲ್ಲದೆ ಆರಂಭಿಸಲ್ಪಟ್ಟಿರುವ ಅವರ ಕಾರ್ಯವು ಎಷ್ಟೇ ಚೆನ್ನಾಗಿ ಮಾಡಲ್ಪಟ್ಟಿದ್ದರೂ ಲೋಕದಲ್ಲಿ ಪ್ರಯೋಜನವಿಲ್ಲದಂತಾಗುವುದು. ಮನುಷ್ಯರಲ್ಲಿ ಸೋಮಾರಿಗಳಾಗಿಯೂ, ಮನೋಧೈರ್ಯವಿಲ್ಲದೆಯೂ ಇರುವವರು ಪೌರುಷವನ್ನು ನಿಂದಿಸುವರು ಅದು ಪ್ರಾಜ್ಞರ ಮನಸ್ಸಿಗೆ ರುಚಿಸುವುದಿಲ್ಲ ಭೂಮಿಯಲ್ಲಿ ಪ್ರಾಯುಕವಾಗಿ ಆರಂಭಿಸಿದ ಕಾರ್ಯಗಳು ವಿಫಲವಾಗಿ ಹೋಗುವುದಿಲ್ಲ ಪ್ರಯೋಜನವುಳ್ಳ ಕಾರ್ಯವನ್ನು ಆರಂಭಿಸದೆಯೇ ಇರುವವನಾದರೋ ಕೊನೆಗೆ ದುಃಖಿಸುವನು. ಪ್ರಯತ್ನವನ್ನೇ ಮಾಡದೆ ಯಾದೃಚ್ಛಿಕವಾಗಿ ಸಿದ್ಧಿಯನ್ನು ಹೊಂದುವವನಾಗಲಿ, ಪ್ರಯತ್ನಪಟ್ಟು ಕಾರ್ಯಸಿದ್ಧಿಯನ್ನು ಪಡೆಯದವನಾಗಲಿ ಇವರಿಬ್ಬರೂ ವಿರಳರೇ! ಕಾರ್ಯಸಮರ್ಥನು ಹೇಗಾದರೂ ಜೀವಿಸಬಲ್ಲನು ಸೋಮಾರಿಯೋ ಎಂದಿಗೂ ಸುಖವಾಗಿ ಮುಂದೆಬರಲಾರನು ಈ ಜೀವಲೋಕದಲ್ಲಿ ಅನೇಕವಾಗಿ ಸಮರ್ಥರೇ ಶ್ರೇಯಸ್ಸನ್ನು ಪಡೆಯಬೇಕೆಂಬ ಆಸೆಯುಳ್ಳವರಾಗಿ ಯತ್ನಿಸುವರು ಸಮರ್ಥನು ಆರಂಭಿಸಿದ ಕಾರ್ಯದಿಂದ ಪ್ರಯೋಜನವನ್ನು ಹೊಂದದಿದ್ದರೂ, ಅದರಿಂದ ಅವನು ಯಾವ ವಿಧವಾದ ನಿಂದೆಗೂ ಪಾತ್ರನಾಗುವುದಿಲ್ಲ ಅವನು ಪಡೆಯಬೇಕಾದುದನ್ನು ಸ್ವಲ್ಪಮಾತ್ರವಾದರೂ ಪಡೆಯದಿರನು. ಪ್ರಪಂಚದಲ್ಲಿ ಯಾವ ಕೆಲಸವನ್ನೂ ಮಾಡದ ಮನುಷ್ಯನು ಯಾವಾಗಲೂ ಫಲವನ್ನು ಹೊಂದು

ವುದಿಲ್ಲ. ಅವನು ನಿಂದೆಗೆ ಪಾತ್ರನಾಗುವನು. ಅನೇಕವಾಗಿ ಎಲ್ಲರೂ ಅವನನ್ನು ದ್ವೇಷಿಸುವರು. ಅವನು ತನಗೇ ಅನರ್ಥವನ್ನು ತಂದುಕೊಳ್ಳು ವನು ಇದೇ ಬುದ್ಧಿವಂತರ ನೀತಿ. ಅನ್ಯೋನ್ಯಸಂಬಂಧವಿಲ್ಲದೆ, ದೈವವು ಪುರುಷಕಾರದಿಂದಲೂ, ಪುರುಷಕಾರವು ದೈವದಿಂದಲೂ ಬೇರೆಬೇರೆಯಾಗಿ ರುವಪಕ್ಷದಲ್ಲಿ, ಈ ಎರಡು ಕಾರಣಗಳಿಂದಮಾಡಿದ ಪ್ರಯತ್ನಗಳೂ ವಿಫ ಲವಾಗುವುವು ಲೋಕದಲ್ಲಿ ಪುರುಷಕಾರದಿಂದಲೇ ಕಾರ್ಯಸಿದ್ಧಿಯಾ ಗುವುದಿಲ್ಲ ದೇವತೆಗಳನ್ನು ಮರೆಹೊಕ್ಕು ಕಾರ್ಯಸಿದ್ಧಿಯನ್ನು ಕೋರುವ ಸಮರ್ಥನನ್ನು ಸೋಮಾರಿಗಳಾರೂ ಕೆಡಿಸಲಾರರು ಹಿರಿಯರನ್ನನುಸ ರಿಸಿ, ಅವರ ಹಿತವಾಕ್ಯವನ್ನು ಕೇಳಿ ತಿಳಿದುಕೊಂಡು, ಅದರಂತೆ ಮಾಡು ವವರ ಬುದ್ಧಿಯೇ ಉತ್ತಮವಾದುದು ಮನುಷ್ಯನು ಆಗಾಗ ಹಿರಿಯು ರನ್ನು ಕೇಳುತ್ತಿರಬೇಕು ಅವರೇ ಕಾರ್ಯಸಿದ್ಧಿಗೆ ಮೂಲವೆನಿಸುವರು ಅವರಿಂದಲೇ ಫಲಸಿದ್ಧಿಯಾಗಬೇಕೆಂದು ಹೇಳುವರು ಹಿರಿಯರ ವಚನ ವನ್ನು ಕೇಳಿ ಪ್ರಯತ್ನಮಾಡುವವನು ಆ ಪ್ರಯತ್ನದ ಉತ್ತಮಫಲವನ್ನು ಶೀಘ್ರದಲ್ಲಿಯೇ ಪಡೆಯುವನು ಯಾವನು ಕಾಮ, ಕ್ರೋಧ, ಭಯ, ಲೋಭಗಳಿಂದ ಕಾರ್ಯಸಿದ್ಧಿಯನ್ನು ಇಚ್ಛಿಸುವನೋ, ಅವನು ಅಸಹಾಯ ನಾಗಿ, ಅವಮಾನಪಟ್ಟು, ಶೀಘ್ರದಲ್ಲಿಯೇ ಐಶ್ವರ್ಯದಿಂದ ಜಾರಿಬೀಳು ವನು ಕೇವಲ ಲುಬ್ಧನಾಗಿ, ದೀರ್ಘದೃಷ್ಟಿಯಿಲ್ಲದ ದುರ್ಯೋಧನನ ಮೌಢ್ಯ ದಿಂದ, ದೂರಾಲೋಚನೆಯಿಲ್ಲದೆ ಆರಂಭಿಸಲ್ಪಟ್ಟ ಈಗಿನ ಅಸಂಬದ್ಧವಾದ ಕಾರ್ಯವಲ್ಲವೇ ಈ ಅನರ್ಥಕ್ಕೆಲ್ಲ ಮೂಲಲಾಯಿತು ? ಆ ದುರ್ಯೋ ಧನನು ಹಿತಬುದ್ಧಿಯುಳ್ಳವರನ್ನು ಅನಾದರಿಸಿ, ಅಯೋಗ್ಯರೊಡನೆ ಆಲೋಚಿಸಿ, ಅನೇಕರು ಬೇಡವೆಂದು ತಡೆದರೂ ಕೇಳದೆ, ಉತ್ತಮಗುಣ ವುಳ್ಳ ಪಾಂಡವರೊಡನೆ ವೈರವನ್ನೇ ಕಲ್ಪಿಸಿಕೊಂಡನು ಅವನು ಮೊದ ಲಿಂದಲೇ ಕೆಟ್ಟಸ್ವಭಾವವುಳ್ಳವನು ಅವನ ಆ ಧೈರ್ಯವು ಕೊಂಡಾಡುವು ದಕ್ಕೆ ಅರ್ಹವಲ್ಲ ಈಗ ಕಾರ್ಯವೆಲ್ಲವೂ ಕೆಟ್ಟಮೇಲೆ ತಪಿಸುತ್ತಿರುವನು. ಮಿತ್ರರ ವಾಕ್ಯವನ್ನು ಇವನು ಸ್ವಲ್ಪವೂ ಲಕ್ಷ್ಯಮಾಡಲಿಲ್ಲ ಅಂತಹ ಪಾಪಿಯನ್ನು ಅನುಸರಿಸಿದುದರಿಂದಲೇ, ಉಗ್ರವಾಗಿಯೂ, ಮಹತ್ತಾ ಗಿಯೂ ಇರುವ ಅನೀತಿಗೆ ಸಾವೂ ಗುರಿಯಾದೆವು ಸಂತಾಪಕರವಾದ

ಈ ವ್ಯಸನದಿಂದ, ಕೆಟ್ಟುಹೋದ ನನ್ನ ಬುದ್ಧಿಯು ಹೇಗೆ ಯೋಚಿಸಿದರೂ, ಉಚಿತವಾದ ಶ್ರೇಯಸ್ಸಿಗೆ ದಾರಿಯನ್ನು ತಿಳಿಯಲಾರದಂತಿದೆ. ಹೀಗೆ ಬುದ್ಧಿ ವಿಕಲ್ಪವನ್ನು ಹೊಂದಿದ ಮನುಷ್ಯನು ಮಿತ್ರರಲ್ಲಿ ಆಲೋಚಿಸಬೇಕು ಆಗಲೇ ಇವನಿಗೆ ಬುದ್ಧಿಯೂ, ವಿನಯವೂ ಉಂಟಾಗುವುದು ಆಗಲೇ ಅವನು ತನಗೆ ಹಿತವೇನೆಂಬುದನ್ನು ತಿಳಿದುಕೊಳ್ಳುವನು ಪ್ರಾಜ್ಞರಾದವರೇ ಇಂತಹ ಕಾರ್ಯಗಳ ಮೂಲವನ್ನು ಸ್ವಬುದ್ಧಿಯಿಂದ ನಿಶ್ಚಯಿಸಿ ಹೇಳುವರು. ಅಂತಹ ಪ್ರಾಜ್ಞರನ್ನು ಕೇಳಬೇಕು ಅವರು ಈ ವಿಷಯವಾಗಿ ಏನು ಹೇಳುವರೋ ಅದರಂತೆಯೇ ಮಾಡಬೇಕು. ಆದುದರಿಂದ ಈಗಲೇ ನಾವು ಹೋಗಿ ಧೃತರಾಷ್ಟ್ರನನ್ನೂ, ಯಶಸ್ವಿನಿಯಾದ ಗಾಂಧಾರಿಯನ್ನೂ, ಮಹಾಬುದ್ಧಿವಂತನಾದ ವಿದುರನನ್ನೂ ಕೇಳುವೆವು ಅವರು ನಮಗೆ ದೃಢವಾಗಿ ಯಾವ ವಿಷಯವನ್ನು ಹೇಳುವರೋ, ಅದರಂತೆ ನಾವು ವಿಳಂಬವಿಲ್ಲದೆ ಮಾಡಬೇಕೆಂಬುದೇ ನನ್ನ ನಿಶ್ಚಯವಾದ ಅಭಿಪ್ರಾಯವು. ಕಾರ್ಯಗಳನ್ನಾರಂಭಿಸದೆಯೇ ಇರುವುದರಿಂದ ಯಾವಾಗಲೂ ಅರ್ಥಸಿದ್ಧಿಯಾಗುವುದಿಲ್ಲ ಪುರುಷಕಾರವನ್ನು ಮಾಡಿದಮೇಲೆಯೂ ಕಾರ್ಯಸಿದ್ಧಿಯುಂಟಾಗದಿದ್ದರೆ ಅವರು ದೈವಹತರೆಂದು ತಿಳಿಯಬೇಕು ಇದರ ವಿಷಯವಾಗಿ ಆಲೋಚಿಸಬೇಕಾದುದಿಲ್ಲ” ಎಂದನು

ಇದು ಎರಡನೆಯ ಅಧ್ಯಾಯವು.

ಅಶ್ವತ್ಥಾಮನು ಕೃಪನ ಬುದ್ಧಿವಾದಗಳನ್ನು ಲಕ್ಷ್ಯಮಾಡದೆ, ಕೃಪ ಕೃತವರ್ಮರಿಬ್ಬರ ಮುಂದೆ ಪಾಂಡವರನ್ನೂ, ಮತ್ತು ಪಾಂಚಾಲರನ್ನೂ ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದುದು.

ರಾಜಾ! ಧರ್ಮಾರ್ಥಗಳಿಂದ ಕೂಡಿದ ಮತ್ತು ಶುಭಕರವಾದ ಕೃಪನ ವಚನವನ್ನು ಕೇಳಿಯೂ ದುಃಖಕೋಪಗಳನ್ನು ತಡೆಯಲಾರದೆ, ತಪಿಸುತಿದ್ದ ಅಶ್ವತ್ಥಾಮನು, ಅವರಿಬ್ಬರನ್ನೂ ನೋಡಿ ಕ್ರೂರಮನಸ್ಸಿನಿಂದ ಹೇಳುವನು ‘ಅಯಾ ಮನುಷ್ಯರಿಗೆ ಯಾವಯಾವ ಆಲೋ

ಚನೆಯು ಉತ್ತಮವೆಂದು ತೋರುವುದೋ, ಅವರವರು ಆ ಆಲೋಚನೆಯೇ ಮೇಲೆಂದು ತಮ್ಮಷ್ಟಕ್ಕೆ ತಾವು ಸಂತೋಷಪಡುವರು. ಲೋಕದಲ್ಲಿ ಪ್ರತಿಯೊಬ್ಬನೂ ತಾನೇ ಬಹುಬುದ್ಧಿಶಾಲಿಯೆಂದು ತಿಳಿದುಕೊಳ್ಳುವನು ತನ್ನನ್ನು ತಾನೇ ಗೌರವಿಸಿಕೊಳ್ಳುವನು ತನ್ನನ್ನು ತಾನೇ ಹೊಗಳಿಕೊಳ್ಳುವನು. ಎಲ್ಲರೂ ತಮ್ಮ ಪ್ರಜ್ಞೆಯೇ ಉತ್ತಮವಾದುದೆಂಬ ವಾದದಲ್ಲಿ ನಿಶ್ಚಿತರಾಗಿರುವರು ಬೇರೆಯವರ ಆಲೋಚನೆಯನ್ನು ನಿಂದಿಸಿ ತಮ್ಮ ಬುದ್ಧಿಯನ್ನೇ ಬಾರಿಬಾರಿಗೂ ಪ್ರಶಂಸೆಮಾಡಿಕೊಳ್ಳುವರು ಬೇರೆ ಬೇರೆಯವರ ಆಲೋಚನೆಗಳು ಏನಾದರೂ ಕಾರಣಾಂತರಗಳಿಂದ ಒಂದಕ್ಕೊಂದು ಹೊಂದಿಕೊಂಡಾಗಮಾತ್ರ ಅವರು ಒಬ್ಬರನ್ನೊಬ್ಬರು ನೋಡಿ ಸಂತೋಷಿಸುವರು ಒಬ್ಬರನ್ನೊಬ್ಬರು ಹೊಗಳುವರು. ಒಬ್ಬ ಮನುಷ್ಯನ ಬುದ್ಧಿಯೇ ಆಗಾಗ ಕಾಲಯೋಗದಿಂದ ಮಾರ್ಪಾಡನ್ನು ಹೊಂದಿ ಒಂದನ್ನೊಂದು ಕೆಡಿಸುವುದುಂಟು ಪ್ರಾಯಕವಾಗಿ ಮನುಷ್ಯರ ಚಿತ್ತವು ಅನಿತ್ಯವಾದುದರಿಂದ, ಮನಸ್ಸು ಕೆಟ್ಟುಹೋಗಿ, ಅದಕ್ಕೆ ತಕ್ಕಂತೆ ಬುದ್ಧಿಯು ಪ್ರವರ್ತಿಸುವುದು ಸಮರ್ಥನಾದ ವೈದ್ಯನೊಬ್ಬನು ರೋಗವನ್ನು ಚೆನ್ನಾಗಿ ತಿಳಿದುಕೊಂಡು ಉಪಾಯದಿಂದ ಅದಕ್ಕೆ ತಕ್ಕ ಔಷಧವನ್ನು ಮಾಡುವನೋ, ಅದರಂತೆಯೇ ಮನುಷ್ಯರೂ ಕಾರ್ಯಸಿದ್ಧಿಗೆ ತಕ್ಕಂತೆ ಬುದ್ಧಿಯನ್ನುಪಯೋಗಿಸುವರು ವಿದ್ವಾಂಸರು ತಮ್ಮ ಜ್ಞಾನದಿಂದಲೂ, ಮತ್ತು ಯುಕ್ತಿಯಿಂದಲೂ ಅದನ್ನು ಗ್ರಹಿಸುವರು ಮನುಷ್ಯನಿಗೆ ಬಾಲ್ಯದಲ್ಲಿರುವ ಬುದ್ಧಿಯೇ ಬೇರೆ! ಯೌವನದಲ್ಲಿರುವ ಬುದ್ಧಿಯೇ ಬೇರೆ! ಮಧ್ಯಕಾಲದ ಬುದ್ಧಿಯೇ ಬೇರೆ! ಮುಪ್ಪಿನಲ್ಲಿ ಅವನ ಬುದ್ಧಿಯೇ ಬೇರೆಯಾಗುವುದು ಹೀಗೆ ಬುದ್ಧಿವಿಕಲ್ಪಗಳಿಂದ ಮೋಹಿತನಾಗುವನು. ಮನುಷ್ಯನಿಗೆ ಮಹಾಘೋರವಾದ ವ್ಯಸನವಾಗಲಿ, ಬಹಳ ಐಶ್ವರ್ಯವಾಗಲಿ ಉಂಟಾದಾಗಲೂ, ಅವನ ಬುದ್ಧಿಯಲ್ಲಿ ಅದಕ್ಕೆ ತಕ್ಕಂತೆ ವಿಕಾರಗಳುಂಟಾಗುವುವು. ಹೀಗೆ ಒಬ್ಬನಲ್ಲಿಯೇ ಆಗಾಗ ಬುದ್ಧಿಭೇದಗಳುಂಟಾಗುವುದು ಪ್ರಜ್ಞೆಯೆಂಬುದು ಅನಿತ್ಯವಾದುದು ಅದು ಅವನಿಗೂ ಒಮ್ಮೊಮ್ಮೆ ರುಚಿಸುವುದಿಲ್ಲ ಮನುಷ್ಯನು ಆಗಾಗ ಯಾವ ಆಲೋಚನೆಯು ಸಾಧುವೋ, ಅದನ್ನು ತನ್ನ ಬುದ್ಧಿಯು ಹೋಗುವವರಗೆ ದೂರದೃಷ್ಟಿಯಿಂದ ಆಲೋ

ಚಿಸಿಕೊಂಡರೆ, ಅಂತಹ ಕಾರ್ಯವನ್ನೇ ಅವನು ಸರಿಯಾಗಿ ನಡೆಸುವನು. ಅದು ಅವನಿಗೆ ಕಾರ್ಯೋತ್ಸಾಹವನ್ನು ಹೆಚ್ಚಿಸುವುದು ಓ ಭೋಜ ರಾಜಾ! ಕೃತವರ್ಮಾ! ಆದುದರಿಂದ ಯಾರಾದರೂ ಯಾವುದು ಒಳ್ಳೆ ಯದೆಂಬುದನ್ನು ಮೊದಲೇ ನಿರ್ಧರಿಸಿ, ಮಾರಣಾದಿಕಾರ್ಯಗಳಲ್ಲಿ ಆದರ ವನ್ನು ತೋರಿಸುವರು ಮನುಷ್ಯರೆಲ್ಲರೂ ತಮ್ಮ ಜ್ಞಾನವೇ ಉತ್ತಮ ವಾದುದೆಂದು ತಿಳಿದೇ ಕೆಲಸಗಳನ್ನು ಮಾಡುವರು. ಆ ಕೆಲಸಗಳೇ ಹಿತ ಕರವೆಂದೂ ನೆನೆಸುವರು ಹಾಗೆಯೇ ಈಗ ನಾನೂ, ನನಗೂ ನಮ್ಮ ಕಡೆಯುವರೆಲ್ಲರಿಗೂ ಉಂಟಾಗಿರುವ ದುಃಖಗಳನ್ನು ತೀರಿಸಿಕೊಳ್ಳಲು ನನಗೆ ತೋರಿದ ಆಲೋಚನೆಯನ್ನು ಹೇಳುವೆನು. ಬ್ರಹ್ಮದೇವನು ಪ್ರಜೆ ಗಳನ್ನು ಸೃಷ್ಟಿಸಿ, ಅವರವರಿಗೆ ತಕ್ಕ ಕೆಲಸಗಳನ್ನು ಏರ್ಪಡಿಸಿ, ಒಂದೊಂ ದು ವರ್ಣಕ್ಕೂ ಉತ್ತಮವಾದ ಒಂದೊಂದು ಕೆಲಸವನ್ನು ನಿಯಮಿಸಿ ದನು ಬ್ರಾಹ್ಮಣನಿಗೆ ವೇದಗಳನ್ನೂ, ಕ್ಷತ್ರಿಯನಿಗೆ ಉತ್ತಮವಾದ ಬಲ ವನ್ನೂ, ವೈಶ್ಯನಿಗೆ ಚಾತುರ್ಯವನ್ನೂ, ಶೂದ್ರನಿಗೆ ಎಲ್ಲಾ ಜಾತಿಗಳಿಗೂ ಅನುಕೂಲವಾದ ಗುಣವನ್ನೂ ಕೊಟ್ಟನು ಹೀಗಿರುವಾಗ ಮನಸ್ಸನ್ನಡ ಗಿಸಲಾರದ ಬ್ರಾಹ್ಮಣನು ಉತ್ತಮನಲ್ಲ ಬಲಹೀನನಾದ ಕ್ಷತ್ರಿಯನು ಮೃತಪ್ರಾಯನೇ! ಚಾತುರ್ಯವಿಲ್ಲದ ವೈಶ್ಯನನ್ನು ಎಲ್ಲರೂ ನಿಂದಿಸು ವರು ಪ್ರತಿಕೂಲನಾದ ಶೂದ್ರನೂ ನಿಂದಿತನಾಗುವನು ಬ್ರಾಹ್ಮಣರಿಂದ ಶ್ಲಾಘಿಸಲ್ಪಟ್ಟ ಉತ್ತಮವಾದ ಬ್ರಾಹ್ಮಣಕುಲದಲ್ಲಿ ನಾನು ಹುಟ್ಟಿದವನು. ಮಂದಭಾಗ್ಯನಾದುದರಿಂದ ನಾನು ಈ ಕ್ಷತ್ರಿಯಧರ್ಮವನ್ನನುಸರಿಸಬೇ ಕಾಯಿತು ಹೀಗೆ ನಾನು ಕ್ಷತ್ರಿಯಧರ್ಮವನ್ನು ಕೈಕೊಂಡಮೇಲೆ, ತಿರುಗಿ ಬ್ರಾಹ್ಮಣಧರ್ಮವನ್ನಾಶ್ರಯಿಸಿ ಕಾರ್ಯಗಳನ್ನು ಮಾಡಲಾರಂಭಿಸಿ ದರೆ ಅಂತಹ ಕಾರ್ಯಗಳು ಸಾಧುಸಮ್ಮತವಾಗುವುದಿಲ್ಲ ಈಗಲೋ ನನ್ನಲ್ಲಿ ದಿವ್ಯವಾದ ಧನುಸ್ಸುಂಟು! ದಿವ್ಯಾಸ್ತ್ರಗಳುಂಟು ಇವನ್ನೆಲ್ಲ ಇಟ್ಟುಕೊಂಡಿದ್ದ ನಾನು, ನನ್ನ ತಂದೆಯು ಶತ್ರುಗಳಿಂದ ವಧಿಸಲ್ಪಟ್ಟು ದನ್ನೂ ಕಂಡು, ನಿಮ್ಮ ಮುಂದೆ ಏನನ್ನು ತಾನೇ ಹೇಳಬಲ್ಲೆನು? ಈಗ ನಾನು ನನ್ನ ಇಷ್ಟದಂತೆ ಕ್ಷತ್ರಿಯಧರ್ಮವನ್ನನುಸರಿಸಿ ರಾಜನ ವಿಷಯ ದಲ್ಲಿಯೂ, ಮತ್ತು ನನ್ನ ತಂದೆಯ ವಿಷಯದಲ್ಲಿಯೂ ನನ್ನ ಸಾಲವನ್ನು

ತೀರಿಸಿಕೊಳ್ಳದೆ ತೀರದು! ಈಗಲಾದರೋ ಪಾಂಡವರೂ, ಪಾಂಚಾಲರೂ ತಾವು ಜಯಿಸಿದೆವೆಂಬ ಸಂತೋಷದಿಂದ ಕುದುರೆಗಳನ್ನೂ, ಕವಚವನ್ನೂ ಕಳಚಿ ನಿರ್ಭಯವಾಗಿ ನಿದ್ರೆಮಾಡುವರು. ಯುದ್ಧದಲ್ಲಿ ಆಯಾಸಹೊಂದಿದ ನಾವೂ ಜಿತರಾದೆವೆಂದೇ ಅವರು ಎಣಿಸಿರುವರು ರಾತ್ರಿಯಲ್ಲಿ ಈಗ ಅವರು ತಮ್ಮ ಶಿಬಿರಗಳಲ್ಲಿ ನೆಮ್ಮದಿಯಿಂದ ಮಲಗಿಕೊಂಡಿರುವರು ಆದುದರಿಂದ ಈಗಲೇ ನಾನು ಶಿಬಿರದಲ್ಲಿ ವ್ಯೈಮರೆತು ಮೃತಪ್ರಾಯರಾಗಿ ಮಲಗಿರುವ ಅವರನ್ನು ಇಂದ್ರ‍ ಅಸುರರನ್ನು ಸಂಹರಿಸಿದಂತೆ ನಾಶಮಾಡುವೆನು ಧೃಷ್ಟದ್ಯುಮ್ನನನ್ನು ಅಧಿಪತಿಯಾಗಿಟ್ಟುಕೊಂಡು ಒಂದಾಗಿ ಮಲಗಿರುವ ಆ ಪಾಂಚಾಲರನ್ನೆಲ್ಲ ಈಗ ನಾನು ನನ್ನ ಪರಾಕ್ರಮದಿಂದ ಅಗ್ನಿಯು ಒಣಗಿದ ಕಾಡನ್ನು ದಹಿಸಿ ನಾಶಮಾಡುವಂತೆ ನಾಶಮಾಡುವೆನು ಆ ಪಾಂಚಾಲರನ್ನು ಕೊಂದಲ್ಲದೆ ನನ್ನ ಮನಸ್ಸಿಗೆ ಶಾಂತಿಯಿಲ್ಲ ಪಿನಾಕವೆಂಬ ಧನುಸ್ಸನ್ನು ಹಿಡಿದು ಕೋಪದಿಂದ ಪ್ರಾಣಿಗಳ ನಡುವೆ ಸಂಚರಿಸುವ ಕಾಲರುದ್ರನಂತೆ ನಾನು ಪಾಂಚಾಲರನ್ನು ಸಂಹರಿಸುತ್ತ ಸಂಚರಿಸುವೆನು ಈಗ ನಾನು ಪಾಂಚಾಲರನ್ನೆಲ್ಲ ವಂಚನೆಯಿಂದಲೇ ವಧಿಸುವೆನು ಪಿನಾಕಪಾಣಿಯಾದ ರುದ್ರನು ಪ್ರಾಣಿಗಳನ್ನು ಸಂಹರಿಸುವಂತೆ ನಾನೂ ಈಗ ಪಾಂಡವರನ್ನು ಸಂಹರಿಸುವೆನು ಈಗಲೇ ನಾನು ಆ ಪಾಂಚಾಲರನ್ನು ನಾಶಮಾಡಿ, ಭೂಮಿಯನ್ನೆಲ್ಲ ಅವರ ಶರೀರಾವಯವಗಳಿಂದ ತುಂಬಿಸಿ, ನನ್ನ ತಂದೆಯ ವಿಷಯದಲ್ಲ ನನ್ನ ಋಣವನ್ನು ತೀರಿಸಿಕೊಳ್ಳುವೆನು ಈ ರಾತ್ರಿ ನಾನು ಹೇಗಾದರೂ ದುರ್ಯೋಧನ, ಕರ್ಣ, ಭೀಷ್ಮ, ಜಯದ್ರಥರ ವಿಷಯದಲ್ಲಿ ನನ್ನ ಋಣವನ್ನು ತೀರಿಸಿಕೊಳ್ಳುವೆನು ಈ ರಾತ್ರಿಯೇ ನಾನು ಆಡಿನ ತಲೆಯನ್ನು ಕಡಿಯುವಂತೆ, ಧೃಷ್ಟದ್ಯುಮ್ನನ ತಲೆಯನ್ನು ಕಡಿದುಹಾಕುವೆನು ಪಾಂಡವರ ಮತ್ತು ಪಾಂಚಾಲರೆಲ್ಲರ ತಲೆಗಳನ್ನೂ ನಾನು ಈ ದಿನ ರಾತ್ರಿಯೇ ನನ್ನ ಖಡ್ಗದಿಂದ ಛೇದಿಸಿಬಿಡುವೆನು ನಿದ್ರೆಮಾಡುತ್ತಿರುವ ಸಮಯದಲ್ಲಿ ಪಾಂಚಾಲರ ಸೇನೆಯನ್ನು ಕೊಂದು ಕೃತಕೃತ್ಯನಾಗಿ ಈ ರಾತ್ರಿ ಸುಖದಿಂದ ಮಲಗುವೆನು'' ಎಂದನು

ಇದು ಮೂರನೆಯ ಅಧ್ಯಾಯವು

## ಅಶ್ವತ್ಥಾಮ ಕೃಪರ ಸಂವಾದಗಳು

ಆಗ ಕೃಪನು “ ವತ್ಸಾ ! ದೃಢಮನಸ್ಕನಾದ ನಿನಗೆ ಶತ್ರುಗಳ ವಿಷಯದಲ್ಲಿ ಈ ವಿಧವಾದ ಪ್ರತೀಕಾರಬುದ್ಧಿಯು ದೈವವಶದಿಂದ ಅಂಕುರಿಸಿಬಿಟ್ಟಿದೆ. ಸಾಕ್ಷಾತ್ತಾಗಿ ವಜ್ರಪಾಣಿಯಾದ ದೇವೇಂದ್ರನಾದರೂ ನಿನ್ನನ್ನು ತಡೆಯಲಾರನು ಆದುದರಿಂದ ನಿನ್ನ ಪ್ರಯತ್ನವನ್ನು ನೀನು ಸಾಧಿಸು ! ಆದರೆ, ಈ ರಾತ್ರಿಮಾತ್ರ ಆ ಕಾರ್ಯವನ್ನು ಮಾಡಬೇಡ ! ಈ ರಾತ್ರಿ ನೀನು ಸುಖವಾಗಿ ಮಲಗಿರು ಬೆಳಗಾದೊಡನೆಯೇ ನಾವಿಬ್ಬರೂ ನಿನಗೆ ಸಹಾಯಕರಾಗಿ ಬರುವೆವು ಈಗ ನೀನು ನಿನ್ನ ಯುದ್ಧಕವಚವನ್ನೂ, ಧ್ವಜವನ್ನೂ ಬಿಚ್ಚಿಡು ವಿಶ್ರಾಂತಿಯನ್ನು ಹೊಂದು ನಾನೂ ಕೃತವರ್ಮನೂ ನಾಳೆ ಕವಚವನ್ನು ಧರಿಸಿ ರಥವನ್ನೇರಿ ನಿನ್ನ ಸಹಾಯಕ್ಕೆ ಬರುವೆವು ನೀನು ಆಗ ಶತ್ರುಗಳನ್ನು ನಿರಾಯಾಸವಾಗಿ ಜಯಿಸಬಹುದು ರಥಿಕಶ್ರೇಷ್ಠನಾದ ನೀನು ಪಾಂಚಾಲರನ್ನೂ, ಅವರ ಕಡೆಯವರನ್ನೂ ಕೊಲ್ಲುವುದಕ್ಕೆ ಸಮರ್ಥನಾಗಿರುವೆ. ಆ ಕಾರ್ಯಕ್ಕಾಗಿ ಈಗ ಆತುರವೇಕೆ ? ಈ ರಾತ್ರಿಯುಮುಟ್ಟಿಗೆ ಶಾಂತನಾಗಿ ಮಲಗಿರು ಕುಮಾರಾ ! ನೀನು ಬಹಳಹೊತ್ತಿನಿಂದ ಎಚ್ಚರಗೊಂಡಿರುವೆ ಈ ರಾತ್ರಿಯು ಕಳೆಯುವವರೆಗೆ ನಿಶ್ಚಿಂತನಾಗಿ ಮಲಗಿರು ನೀನು ಈಗ ವಿಶ್ರಾಂತಿಯನ್ನು ತೆಗೆದುಕೊಂಡರೆ, ನಿನ್ನ ಬುದ್ಧಿಗೆ ತಿಳಿವುಂಟಾಗುವುದು. ಆಗ ನೀನು ಯುದ್ಧದಲ್ಲಿ ನಿರಾಯಾಸವಾಗಿ ಶತ್ರುಗಳನ್ನು ಕೊಲ್ಲಬಹುದು ರಥಿಕಶ್ರೇಷ್ಠನಾದ ನೀನು ಆಯುಧಪಾಣಿಯಾಗಿ ನಿಂತರೆ, ದೇವತೆಗಳಲ್ಲಿಯಾದರೂ ಯಾವನೂ ನಿನ್ನನ್ನು ಜಯಿಸಲಾರನು ಕೊನೆಗೆ ದೇವಸೇನಾಪತಿಯಾದ ಷಣ್ಮುಖನಾದರೂ ನಿನ್ನ ಮುಂದೆ ನಿಲ್ಲಲಾರನು ಕೃಪ, ಕೃತವರ್ಮರ ಬೆಂಬಲವುಳ್ಳ ದ್ರೋಣಪುತ್ರನನ್ನು ದೇವೇಂದ್ರನಾದರೂ ಇದಿರಿಸಲಾರನೆಂಬುದ ಎಲ್ಲರಿಗೂ ತಿಳಿದ ವಿಷಯವೇ ! ಆದುದರಿಂದ ನಾವು ಮೂವರೂ ನಿಶ್ಚಿಂತೆಯಾಗಿ ರಾತ್ರಿಯಲ್ಲಿ ಮಲಗಿದ್ದು ಬೆಳಗಾದೊಡನೆ ಶತ್ರುಗಳನ್ನು ಕೊಲ್ಲುವೆವು. ನಿನ್ನಲ್ಲಿಯೂ ಅನೇಕ ದಿವ್ಯಾಸ್ತ್ರಗಳುಂಟು. ನನ್ನಲ್ಲಿಯೂ ದಿವ್ಯಾಸ್ತ್ರಗಳುಂಟು. ಈ ಕೃತವರ್ಮನೂಕೂಡ

ಮಹಾಧನುರ್ಧಾರಿಯೆನಿಸಿಕೊಂಡು ಯುದ್ಧಕಾರ್ಯಗಳಲ್ಲಿ ನಿಪುಣನಾಗಿರುವನು. ನಾವು ಮೂವರೂ ಒಟ್ಟಾಗಿ ಸೇರಿ ಹೋದರೆ, ಎಂತಹ ಶತ್ರುಗಳನ್ನಾದರೂ ಕೊಂದು ಕೃತಕೃತ್ಯರಾಗಿ ಬರಬಹುದು ಆದುದರಿಂದ ಈ ರಾತ್ರಿಯುಮಟ್ಟಿಗೆ ನೀನು ನಿಶ್ಚಿಂತನಾಗಿ ಮಲಗಿರು. ಬೆಳಗಾದೊಡನೆ ನಾವಿಬ್ಬರೂ ನಿನ್ನ ಹಿಂದೆ ಬರುವೆವು ಒಡನೆಯೇ ನೀನು ಹೋಗಿ ಧೈರ್ಯವಾಗಿ ಆ ಶತ್ರುಶಿಬಿರದಲ್ಲಿ ಹೊಕ್ಕು, ನಿನ್ನ ಹೆಸರನ್ನು ಹೇಳಿ ಅವರೊಡನೆ ನೇರವಾಗಿ ಯುದ್ಧಕ್ಕೆ ನಿಂತು ಇಂದ್ರನು ದೈತ್ಯರನ್ನು ಹೇಗೋ ಹಾಗೆ ಶತ್ರುಗಳನ್ನು ಕೊಂದು ಸಂತುಷ್ಟನಾಗಿರಬಹುದು ನೀನೇ ಪಾಂಚಾಲ ಸೈನ್ಯವನ್ನು ಕೊಲ್ಲಬಲ್ಲೆಯೆಂಬುದರಲ್ಲಿ ಸಂದೇಹವೇ ಇಲ್ಲ ಇದರಮೇಲೆ ನಮ್ಮಿಬ್ಬರ ಬೆಂಬಲವುಳ್ಳ ನಿನ್ನನ್ನು ವಜ್ರಪಾಣಿಯಾದ ದೇವೇಂದ್ರನಾದರೂ ಇದಿರಿಸಲಾರನು. ನಾನಾಗಲಿ, ಈ ಕೃತವರ್ಮನಾಗಲಿ ನಾಳೆ ಆ ಪಾಂಡವರನ್ನು ಜಯಿಸಿದಹೊರತು ನಿನ್ನನ್ನು ಬಿಟ್ಟು ಬೇರೆಕಡೆಗೆ ಕದಲುವುದಿಲ್ಲವೆಂದು ತಿಳಿ ಪಾಂಚಾಲರನ್ನೂ, ಪಾಂಡವರನ್ನೂ ಕೊಂದಾದರೂ ನಾವೆಲ್ಲರೂ ಹಿಂತಿರುಗಬೇಕು ಇಲ್ಲವೇ ಆ ಯುದ್ಧದಲ್ಲಿಯೇ ಅವರಿಂದ ವಧಿಸಲ್ಪಟ್ಟು ವೀರಸ್ವರ್ಗವನ್ನಾದರೂ ಹೊಂದಬೇಕು ಬೆಳಗಾದೊಡನೆ ನಾವು ಸರ್ವವಿಧದಿಂದಲೂ ನಿನಗೆ ಸಹಾಯಕರಾಗಿರುವೆವು. ಓ ಮಹಾಬಾಹೂ! ಸತ್ಯವಾಗಿ ನಾನು ಹೇಳುವೆನು" ಎಂದನು ಈ ಮಾತನ್ನು ಕೇಳಿ ಅಶ್ವತ್ಥಾಮನು ಕೋಪಾವೇಶದಿಂದ ಕಣ್ಣುಗಳನ್ನು ತೊಳಲಿಸುತ್ತ 'ಮಾತುಲಾ! ಇನ್ನು ಈ ರಾತ್ರಿ ನನಗೆ ನಿದ್ರೆಯೆಂದರೇನು? ರೋಗವಿದ್ದವನಿಗೂ, ಮನಸ್ಸಿನಲ್ಲಿ ಕೋಪವಿದ್ದವನಿಗೂ ಯಾವುದಾದರೂ ಕಾರ್ಯಾಲೋಚನೆಯನ್ನು ಮಾಡುವವನಿಗೂ, ಕಾಮಾತುರನಿಗೂ ಕಣ್ಣಿಗೆ ನಿದ್ರೆ ಹತ್ತುವುದುಂಟೆ? ಈ ಮೇಲೆ ಹೇಳಿದ ನಾಲ್ಕರಲ್ಲಿ ಒಂದಾದ ಕೋಪವೆಂಬುದು ನನಗೆ ನಿದ್ರೆಬರಗೊಡಿಸುವುದೇ ಇಲ್ಲ ಆದುದರಿಂದ ನಾನು ಮಲಗುವುದೆಂದರೇನು? ಈ ಲೋಕದಲ್ಲಿ ಪಾಂಡವರಿಂದ ನನಗೆ ಸಂಭವಿಸಿದ ದುಃಖಕ್ಕಿಂತಲೂ ಅತಿ ಪ್ರಬಲವಾದ ಬೇರೆ ದುಃಖವೇನಿದೆ? ನನ್ನ ತಂದೆಯ ಕೊಲೆಯನ್ನು ನೆನೆಸಿಕೊಂಡಹಾಗೆಲ್ಲ ಹಗಲೂ, ರಾತ್ರಿಯೂ ಶಾಂತಿಯಿಲ್ಲದೆ ನನ್ನ ಎದೆಯು ದಹಿಸುತ್ತಿರುವುದು ಆ ಪಾಪಿಗಳು ನನ್ನ

ತಂದೆಯನ್ನು ನಿನ್ನ ಕಣ್ಣೆದಿರಾಗಿಯೇ ಹೇಗೆ ಕೊಲೆಮಾಡಿದರೆಂಬುನನ್ನು ಕಾಣೆಯಾ! ಅದು ನನ್ನ ಮರ್ಮಗಳನ್ನು ಕೀಳುತ್ತಿರುವುದು ಆ ಪಾಂಚಾಲರು ನನ್ನನ್ನು ಕುರಿತು 'ಇವನೇ ದ್ರೋಣನನ್ನು ಕೊಂದವನು' ಎಂದು ಹೇಳಿ ಹಾಸ್ಯಮಾಡಿದರ, ನಾನು ಅದನ್ನು ಹೇಗೆತಾನೇ ಕೇಳಿಕೊಂಡು ಕ್ಷಣಮಾತ್ರವಾದರೂ ಜೀವಿಸಬಲ್ಲೆನು? ಪಿತೃಘಾತಿಯಾದ ಆ ಪಾಂಚಾಲನನ್ನೂ, ಅವನ ಕಡೆಯುವರನ್ನೂ ಕೊಂದಲ್ಲದೆ ನಾನು ಬದುಕಿರಲಾರೆನು. ಭೀಮನ ಗದೆಯಿಂದ ತೊಡೆಮುರಿದು ಬಿದ್ದ ಆ ನಮ್ಮ ರಾಜನ ಗೋಳಾಟವನ್ನು ಕೇಳಿದಮೇಲೆ ಎಂತಹ ಕ್ರೂರನ ಹೃದಯವಾದರೂ ಕರಗುವುದಿಲ್ಲವೇ? ಆ ದುರ್ಯೋಧನನ ಪ್ರಲಾಪವನ್ನು ಕೇಳಿ ಎಂತಹ ನಿಷ್ಕರುಣಿಗೆ ತಾನೇ ಕಣ್ಣೀರು ಬಾರದಿರುವುದು? ನಾನು ಬದುಕಿರುವಾಗಲೇ ನನ್ನ ಮಿತ್ರನಾದ ಇವನು ಶತ್ರುಗಳಿಂದ ಪರಾಜಿತನಾಗಿ ಬಿದ್ದುದು ನನ್ನ ದುಃಖವನ್ನು ಇನ್ನೂ ಹೆಚ್ಚಿಸುತ್ತಿದೆ ಶತ್ರುವಧವೊಂದರಲ್ಲಿಯೇ ನಟ್ಟಮನಸ್ಸುಳ್ಳ ನನಗೆ, ಆ ಕಾರ್ಯವು ಪೂರೈಸುವವರಗೆ ನಿದ್ರೆಯೆಲ್ಲಿಯದು? ಸುಖವೆಲ್ಲಿಯದು? ಕೃಷ್ಣಾರ್ಜುನರಿಂದ ರಕ್ಷಿತರಾಗಿದ್ದರೂ, ಆ ಪಾಂಚಾಲರನ್ನು ನೋಡಿ ನಾನು ಸಹಿಸಲಾರನು ಮಹೇಂದ್ರನಿಂದ ರಕ್ಷಿಸಲ್ಪಟ್ಟರೂ ನಾನು ಅವರನ್ನು ಬಿಡಲಾರನು ಯಾರೂ ಈಗ ನನ್ನ ಪ್ರಯತ್ನವನ್ನು ತಡೆಯಲು ಶಕ್ತರಲ್ಲ ಈಗಿನ ನನ್ನ ಕೋಪವನ್ನು ತಗ್ಗಿಸಬಲ್ಲ ಸಮರ್ಥನು ಈ ಲೋಕದಲ್ಲಿ ಒಬ್ಬನೂ ಇಲ್ಲವೆಂದು ತಿಳಿ ನನಗೇನೋ ಈ ನಿಶ್ಚಯಬುದ್ಧಿಯು ಹುಟ್ಟಿರುವುದು ಇದೇ ನನಗೆ ಸಾಧುಸಮ್ಮತವೆಂದೂ ತೋರಿರುವುದು ಅಲ್ಲಲ್ಲಿ ಜನರು ಪಾಂಡವರ ಜಯವನ್ನು ಕುರಿತು ಆಡುವ ಮಾತುಗಳು ನನ್ನ ಹೃದಯವನ್ನು ದಹಿಸುತ್ತಿವೆ. ಆದುದರಿಂದ ಈ ರಾತ್ರಿಯೇ ನಾನು ಶತ್ರುವಧವನ್ನು ಮಾಡಿ, ಆಮೇಲೆಯೇ ವಿಶ್ರಾಂತಿಯನ್ನು ಹೊಂದುವೆನು ಆಮೇಲೆಯೇ ನಾನು ನೆಮ್ಮದಿಯಿಂದ ಸುಖವಾಗಿ ಮಲಗುವೆನಲ್ಲದೆ, ಈಗ ನನಗೆ ನಿದ್ರೆಯು ಬಾರದು" ಎಂದನು

ಇದು ನಾಲ್ಕನೆಯ ಅಧ್ಯಾಯವು



ಮಲಗಿದ್ದವರನ್ನು ಕೊಲ್ಲುವುದು ಅಧರ್ಮವೆಂದು ಕೃಪನು ಹೇಳಿದರೂ ಕೇಳದೆ, ಅಶ್ವತ್ಥಾಮನು ಕೋಪಾವೇಶದಿಂದ ಶತ್ರುಶಿಬಿರವನ್ನು ಪ್ರವೇಶಿಸಿದುದು ಕೃಪ ಕೃತವರ್ಮ ರಿಬ್ಬರೂ ಅಶ್ವತ್ಥಾಮನಲ್ಲಿ ತಮಗಿದ್ದ ಪ್ರೇಮಕ್ಕಾಗಿ ಅವನನ್ನು ಹಿಂಬಾಲಿಸಿದುದು

ಆಗ ಕೃಪನು ಅಶ್ವತ್ಥಾಮನನ್ನು ಕುರಿತು “ಕುಮಾರಾ! ಇಂದ್ರಿಯಗಳನ್ನು ತಡೆಯಲಾರದ ದುರ್ಬುದ್ಧಿಯುಳ್ಳ ಮನುಷ್ಯನಿಗೆ, ಧರ್ಮಾರ್ಥಗಳನ್ನು ಕೇಳುವ ಅಪೇಕ್ಷೆಯಿದ್ದರೂ, ಅವನ ಮನಸ್ಸನ್ನು ತಿದ್ದುವುದಕ್ಕೆ ಸಾಧ್ಯವಲ್ಲವೆಂದೇ ನನಗೆ ತೋರಿದೆ ಮನುಷ್ಯನು ಒಳ್ಳೇ ಮೇಧಾವಿಯಾಗಿದ್ದರೂ, ವಿನಯಗುಣವಿಲ್ಲದವನಾದರೆ, ಅವನು ಧರ್ಮಾರ್ಥನಿಶ್ಚಯಗಳನ್ನು ಕುರಿತು ಏನೇನನ್ನೂ ತಿಳಿಯಲಾರನು. ಜಡಬುದ್ಧಿಯುಳ್ಳವನು ಶೂರನಾಗಿ ಅನೇಕಕಾಲದವರೆಗೆ ವಿದ್ವಾಂಸರನ್ನುಪಾಸಿಸಿದರೂ, ಯಾವಾಗಲೂ ಸಾರಿನಲ್ಲಿಯೇ ಮುಳುಗಿದ್ದರೂ ಸೌಟು ಅದರ ರುಚಿಯನ್ನು ತಿಳಿಯಲಾರದಿರುವಂತೆ, ಧರ್ಮಗಳನ್ನು ತಿಳಿಯಲಾರರು. ವಿವೇಕಿಯಾದವನು ಮುಹೂರ್ತಕಾಲದವರೆಗೆ ಮಾತ್ರ ಪಂಡಿತರನ್ನು ಉಪಾಸಿಸಿದರೂ, ನಾಲಗೆಯು ನಿಮಿಷಮಾತ್ರದಲ್ಲಿ ಸಾರಿನ ರುಚಿಯನ್ನು ತಿಳಿಯುವಂತೆ ಧರ್ಮಗಳನ್ನು ತಿಳಿಯುವನು ಇಂದ್ರಿಯಗಳನ್ನಡಗಿಸಬಲ್ಲವನೂ, ಮೇಧಾವಿಯೂ ಆದವನು, ಇತರರಿಂದ ಕೇಳುತ್ತಿರುವಾಗಲೇ ಸಮಸ್ತಾಗಮಗಳನ್ನೂ ಗ್ರಹಿಸುವನು ಅವುಗಳಲ್ಲಿ ಗ್ರಾಹ್ಯವಾದುದನ್ನು ಬಿಡದೆ ಆದರಿಸುವನು ನ್ಯಾಯವನ್ನೂ, ಮಾನ ಮರ್ಯಾದೆಗಳನ್ನೂ ಅರಿಯದ ದುರ್ಬುದ್ಧಿಯುಳ್ಳವನೂ, ಪಾಪರಹಿತನೂ ತನ್ನ ಶ್ರೇಯಸ್ಸನ್ನು ಗಣಿಸದೆ ಮಹಾಪಾಪಕಾರ್ಯದಲ್ಲಿಯೇ ಪ್ರವರ್ತಿಸುವನು. ಒಬ್ಬನಿಗೆ ನಾಲ್ಕಾರುಮಂದಿ ದಿಕ್ಕಾಗಿದ್ದಾಗ, ಪಾಪಕಾರ್ಯದಲ್ಲಿ ಪ್ರವರ್ತಿಸದಂತೆ ಅವನನ್ನು ತಡೆಯುವುದು ಸಹಜವೇ ಆದರೆ ಭಾಗ್ಯಶಾಲಿಯಾದವನು ಅದನ್ನು ಆದರಿಸುವನು. ದೌರ್ಭಾಗ್ಯಕ್ಕೀಡಾದವನು ಅದನ್ನು ನಿರಾಕರಿಸುವನು ಮನೋನಿಗ್ರಹವಿಲ್ಲದವನನ್ನು ನಾನಾತರದ ವಿಷಯಸುಖಗಳು ತಮ್ಮಕಡೆಗೆ ಎಳೆಯುವಂತೆಯೇ, ಸುಹೃತ್ತಾದವನು ಅವನನ್ನು ನಾನಾವಿ

ಥದ ಹಿತಮಾರ್ಗಗಳಿಗೆ ಎಳೆದು ಕಟ್ಟಿಡಬಹುದು. ಯಾವನಲ್ಲಿ ಇದು ಸಾಧ್ಯವಾಗುವುದಿಲ್ಲವೋ, ಅಂತವನು ಕೊನೆಗೆ ಕಷ್ಟಕ್ಕೆ ಸಿಕ್ಕಿ ಬೀಳುವನು. ಆದುದರಿಂದ ಬುದ್ಧಿಹೀನರೂ, ಪಾಪಪ್ರವರ್ತಕರೂ ಆದವರನ್ನು ಅವರ ಶ್ರೇಯಃಕಾಂಕ್ಷಿಗಳಾದ ಸುಹೃತ್ತುಗಳು, ಆಗಾಗ ತಮ್ಮಿಂದಾದವರೆಗೆ ಪಾಪ ಕಾರ್ಯದಿಂದ ನಿವಾರಿಸಬೇಕಾದುದು ಅವರಿಗೆ ಅವಶ್ಯಕರ್ತವ್ಯವು ಆದು ದರಿಂದ ನೀನು ನನ್ನ ಮಾತನ್ನು ಲಾಲಿಸಿ, ನಿನ್ನ ಸ್ವಬುದ್ಧಿಯಿಂದಲೂ ನಿನ್ನ ಮನಸ್ಸನ್ನು ಅಡಗಿಸಿಟ್ಟುಕೊಂಡು, ಶುಭಕರವಾದ ಕಾರ್ಯವಾ ವುದೋ ಅದನ್ನು ಯೋಚಿಸು ನನ್ನ ಮಾತನ್ನು ಕೇಳುವೆಯಾದರೆ ಮುಂದೆ ಸಂಕಟಕ್ಕೊಳಗಾಗಲಾರೆ. ಧರ್ಮವನ್ನು ಯೋಚಿಸಿದರೆ, ಮಲ ಗಿದ್ದವರನ್ನು ಕೊಲ್ಲುವುದು ಎಂದಿಗೂ ಉಚಿತವಲ್ಲ! ಹಾಗೆಯೇ ಶಸ್ತ್ರ ಹೀನರು, ರಥಹೀನರು, ಅಶ್ವಹೀನರು, ಮುಂತಾಗಿ ಯುದ್ಧಸಾಧನವಿಲ್ಲದ ವರನ್ನೂ, 'ನಾನು ನಿನ್ನವನು' ಎಂದು ಹೇಳಿಕೊಂಡವರನ್ನೂ, ಶರ ಣಾಗತರನ್ನೂ, ತಲೆ ಕೆದರಿಕೊಂಡವರನ್ನೂ, ಸತ್ತ ವಾಹನವುಳ್ಳವ ರನ್ನೂ ಕೊಲೆಮಾಡಬಾರದು. ಈಗಲಾದರೋ ಪಾಂಚಾಲರೆಲ್ಲರೂ ಯು ದ್ಧಕವಚಗಳನ್ನೆಲ್ಲ ಕಳಚಿಟ್ಟು ಮೈಮರೆತು ಮಲಗಿರುವರು ಈ ರಾತ್ರಿ ತಮ್ಮ ಶಿಬಿರದಲ್ಲಿ ತಮಗೇನೂ ಅಪಾಯವಿಲ್ಲವೆಂಬ ದೃಢವಾದ ನಂಬಿಕೆ ಯಿಂದ, ಮೈಮೇಲೆ ಪ್ರಜ್ಞೆಯಿಲ್ಲದೆ ಹೆಣದಂತೆ ಬಿದ್ದಿರುವರು ಇಂತಹ ಸ್ಥಿತಿಯಲ್ಲಿರುವವರಮೇಲೆ ಯಾವನು ಕೈಯೆತ್ತುವನೋ, ಅವನು ಮಹಾ ಕ್ರೂರನೆನಿಸುವನು. ಅವನು ಎಂದೆಂದಿಗೂ ಉತ್ತಾರಣವಿಲ್ಲದ ಅಗಾಧ ನರ ಕದಲ್ಲಿ ಬಿಳುವನು ವತ್ಸಾ! ನೀನಾದರೋ ಎಲ್ಲಾ ಅಸ್ತ್ರಜ್ಞರಲ್ಲಿ ಮೇಲೆ ನಿಸಿರುವೆ. ನಿನ್ನಲ್ಲಿ ಇದುವರೆಗೆ ಅತ್ಯಲ್ಪವಾದ ದೋಷವನ್ನಾದರೂ ಕಂಡ ವರಿಲ್ಲ. ನೀನು ಸೂರ್ಯಸಮಾನವಾದ ತೇಜಸ್ಸುಳ್ಳವನು. ಆದುದರಿಂದ ಈ ರಾತ್ರಿಯು ಕಳೆದು ಬೆಳಗಾಗಲಿ! ಸೂರ್ಯೋದಯವಾದೊಡನೆ ನೀನು ಯುದ್ಧಕ್ಕೆ ಹೋದರೆ, ಸಮಸ್ತಭೂತಗಳ ಮುಂದಾಗಿಯೇ ನೀನು ಶತ್ರು ಗಳನ್ನೆಲ್ಲ ಜಯಿಸುವೆಯೆಂಬ ನಂಬಿಕೆಯುಂಟು. ಈಗ ನೀನು ಯೋಚಿ ಸಿರುವ ಕಾರ್ಯವಾದರೋ ಕೇವಲ ನಿಂದಾರ್ಹವಾದುದು. ಅಸಂಭಾವಿತ ವಾದ ಇಂತಹ ಕ್ರೂರಕಾರ್ಯವನ್ನು ಈಗ ನೀನು ಮಾಡಿದರೆ, ಬಿಳೀಬಟ್ಟೆ

ಯಮೇಲೆ ಕೆಂಪುಬೊಟ್ಟನ್ನಿಟ್ಟಂತೆ, 'ಅದು ನಿನಗೆ ಎಂದೆಂಗಿಗೂ ಅಳಿಸದ ಕಳಂಕವನ್ನುಂಟುಮಾಡುವುದೆಂದು ನನಗೆ ತೋರುತ್ತಿದೆ ” ಎಂದನು.

ಆದಕ್ಕಾ ಅಶ್ವತ್ಥಾಮನು “ಮಾವಾ! ನೀನು ಹೇಳಿದುದೆಲ್ಲವೂ ವಾಸ್ತವವೇ! ಆದರೇನು? ಈ ಧರ್ಮದ ಕಟ್ಟನ್ನು ಮೊದಲೇ ನಮ್ಮ ಶತ್ರುಗಳು ನಾನಾವಿಧದಿಂದ ಕದಲಿಸಿ ಒಡೆದುಹಾಕಿದರಲ್ಲವೆ? ಅವೆಲ್ಲ ನಿನಗೂ ತಿಳಿದ ಅಂಶವೇ ಅಲ್ಲವೆ? ನಿಮ್ಮೆಲ್ಲರ, ಮತ್ತು ಎಲ್ಲಾ ರಾಜರ ಕಣ್ಣೆದಿರಾಗಿಯೇ ಧೃಷ್ಟದ್ಯುಮ್ನನು ಶಸ್ತ್ರತ್ಯಾಗಮಾಡಿದ್ದ ನನ್ನ ತಂದೆಯನ್ನು ಹೊಡೆದು ಕೆಳಕ್ಕೆ ಕೆಡಹಿದನಲ್ಲವೆ? ಹಾಗೆಯೇ ಕರ್ಣನೂ ಅನ್ಯಾಯದಿಂದ ಕೊಲ್ಲಲ್ಪಟ್ಟನು ತನ್ನ ರಥದ ಚಕ್ರವು ಭೂಮಿಯಲ್ಲಿ ಹೂತುಹೋಗಿದ್ದಾಗ, ಅದನ್ನೆತ್ತುವುದಕ್ಕಾಗಿ ಕೆಳಕ್ಕಿಳಿದುಬಂದು ಮಹಾಕಷ್ಟದಶೆಯಲ್ಲಿದ್ದಾಗ, ಅರ್ಜುನನು ಅವನನ್ನು ಹೊಡೆದು ಕೊಲ್ಲಲಿಲ್ಲವೆ? ಹಾಗೆಯೇ ಭೀಷ್ಮನೂ ಕೂಡ, ಶಿಖಂಡಿಯು ತನ್ನ ಮುಂದೆ ನಿಂತುದನ್ನು ನೋಡಿ ಆಯುಧವನ್ನು ಕೆಳಗಿಟ್ಟಾಗ, ಅರ್ಜುನನು ಅವನನ್ನು ಕೊಂದನು. ಹಾಗೆಯೇ ಯುದ್ಧದಲ್ಲಿ ಪ್ರಾಯೋಪವೇಶಮಾಡಿದ್ದ ಭೂರಿಶ್ರವಸ್ಸನ್ನು ಯುಯುಧಾನನು ಎಲ್ಲಾ ರಾಜರೂ ಅನ್ಯಾಯವೆಂದು ಕೂಗುತ್ತಿರುವಾಗಲೇ ಕೊಂದನು ನಮ್ಮ ರಾಜನಾದ ದುರ್ಯೋಧನನನ್ನೂ ಭೀಮನು ಗದಾಯುದ್ಧದಲ್ಲಿ ಎಲ್ಲಾ ರಾಜರ ಕಣ್ಣೆದಿರಾಗಿ ಅಧರ್ಮದಿಂದಲೇ ಹೊಡೆಯಲಿಲ್ಲವೆ? ಪುರುಷಶ್ರೇಷ್ಠನಾದ ಆ ದುರ್ಯೋಧನನು ಏಕಾಕಿಯಾಗಿದ್ದಾಗ, ಅನೇಕಮಹಾರಥರು ಸುತ್ತಲೂ ಸುತ್ತಿಕೊಂಡು ಅವನನ್ನು ಹಾಗೆ ಕೊಲ್ಲಿಸಿದರು. ತೊಡೆಮುರಿದು ರಣರಂಗದಲ್ಲಿ ಬಿದ್ದ ಆ ರಾಜನ ಗೋಳಾಟವನ್ನು ಕುರಿತು ಜನರು ಆಡಿಕೊಳ್ಳುತ್ತಿದ್ದುದನ್ನು ಕೇಳಿದಾಗ ನನಗೆ ಅವು ಮರ್ಮಭೇದಕವಾಗಿರುವುವು ಪಾಪಾತ್ಮರಾದ ಪಾಂಚಾಲರು ಅಧರ್ಮಪ್ರವರ್ತಕರಾಗಿ ಧರ್ಮದ ಕಟ್ಟನ್ನು ಒಡೆದಿರುವರು ಹೀಗೆ ಮರ್ಯಾದೆಯನ್ನು ಮೀರಿಹೋದ ಆ ಪಾಂಚಾಲರ ದೋಷವನ್ನುಮಾತ್ರ ನೀನು ಎತ್ತಿ ಹೇಳದಿರಲು ಕಾರಣವೇನು? ಪಿತೃಘಾತುಕರಾದ ಆ ಪಾಂಚಾಲರನ್ನು ಈ ರಾತ್ರಿ ಅವರು ಮಲಗಿದ ವೇಳೆಯಲ್ಲಿಯೇ ಕೊಂದುತೀರಿಸಿಬಿಡು

ವೆನು. ಅದರಿಂದ ಬಂದುದು ಬರಲಿ! ಈ ಪಾಪದಿಂದ ಮುಂದೆ ನಾನು ಕೀಟವಾಗಿಯೋ, ಪತಂಗವಾಗಿಯೋ ಜನ್ಮವನ್ನೆತ್ತಿದರೂ ಚಿಂತೆಯಿಲ್ಲ! ನಾನು ಈಗ ಉದ್ದೇಶಿಸಿದ ಕಾರ್ಯವನ್ನು ಪೂರೈಸುವುದಕ್ಕೆ ಈಗಲೇ ಹೊರಡುವೆನು ಈಗಿನ ಆತುರದಲ್ಲಿ ನನಗೆ ನಿದ್ರೆಯೆಲ್ಲಿಯದು? ಅಥವಾ ಸುಖವೆಲ್ಲಿಯದು? ಮಾವಾ! ಈಗ ಈ ವಧಕಾರ್ಯದಲ್ಲಿ ನನಗೆ ಹುಟ್ಟಿರುವ ದೃಢನಿಶ್ಚಯವನ್ನು ತಪ್ಪಿಸಬಲ್ಲವನೊಬ್ಬನಾದರೂ ಲೋಕದಲ್ಲಿಲ್ಲ! ಮುಂದೆ ಹುಟ್ಟಲೂ ಆರನು'' ಎಂದನು

ಧೃತರಾಷ್ಟ್ರಮಹಾರಾಜಾ! ಹೀಗೆಂದು ಹೇಳಿ ಅಶ್ವತ್ಥಾಮನು, ರಹಸ್ಯವಾಗಿ ತನ್ನ ರಥಕ್ಕೆ ಕುದುರೆಗಳನ್ನು ಕಟ್ಟಿಕೊಂಡು ಶತ್ರುಶಿಬಿರಕ್ಕೆ ಹೊರಟನು ಆಗ ಕೃಪ ಕೃತವರ್ಮರಿಬ್ಬರೂ ಭಯದಿಂದ ಅವನನ್ನು ನೋಡಿ 'ಕುಮಾರಾ! ಏನಿದು? ರಥವನ್ನೇಕೆ ಸಿದ್ಧಗೊಳಿಸಿದೆ? ನಿನ್ನ ಕಾರ್ಯೋದ್ದೇಶವೇನು? ನಾವಿಬ್ಬರೂ ಇದುವರೆಗೆ ನಿನ್ನೊಡನೆಯೇ ಕಲೆತಿದ್ದವರು ನಾವೆಲ್ಲರೂ ಒಂದಾಗಿ ಬಂದವರು. ನಾವಿಬ್ಬರೂ ನಿನ್ನ ಸುಖದಲ್ಲಿಯೂ, ದುಃಖದಲ್ಲಿಯೂ ಸಮಭಾಗಿಗಳು ಆದುದರಿಂದ ನಿನ್ನ ಉದ್ದೇಶವೇನೆಂಬುದನ್ನು ಸ್ಪಷ್ಟವಾಗಿ ನಮಗೆ ತಿಳಿಸು' ಎಂದರು ಆಗ ಅಶ್ವತ್ಥಾಮನು ತನ್ನ ತಂದೆಯ ವಧವನ್ನು ನೆನೆಸಿಕೊಂಡು, ಅತಿಕೋಪಾವೇಶದಿಂದ ತಾನು ಮಾಡಬೇಕೆಂದಿದ್ದ ಕಾರ್ಯವನ್ನು ಯಥಾವತ್ತಾಗಿ ಅವರಿಗೆ ತಿಳಿಸುತ್ತ, 'ಎಲೈ ಪೂಜ್ಯರೆ! ನನ್ನ ತಂದೆಯು ಹಿಂದಿನ ಯುದ್ಧದಲ್ಲಿ ಹತ್ತುಸಾವಿರ ಯೋಧರನ್ನು ತನ್ನ ತೀಕ್ಷ್ಣಬಾಣಗಳಿಂದ ಕೊಲ್ಲುತ್ತ ಬಂದು, ಕೊನೆಗೆ ಶಸ್ತ್ರವನ್ನು ಕೆಳಗಿಟ್ಟಾಗ, ಆ ಪಾಪಿ ಧೃಷ್ಟದ್ಯುಮ್ನನಿಂದ ಕೊಲ್ಲಲ್ಪಟ್ಟನಲ್ಲವೆ? ಅದರಂತೆಯೇ ನಾನೂ ಈಗ ಶಸ್ತ್ರ, ಕವಚಹೀನನಾಗಿ ಮಲಗಿರುವ ಆ ಪಾಂಚಾಲನನ್ನು ಅದೇವಿಧವಾದ ಕ್ರೂರಕಾರ್ಯದಿಂದ ಕೊಲ್ಲುವೆನು ಪಶುವಿನಂತೆ ನನ್ನಿಂದ ವಧಿಸಲ್ಪಡುವ ಆ ಪಾಪಿ ಧೃಷ್ಟದ್ಯುಮ್ನನಿಗೆ, ಶಸ್ತ್ರಗಳಿಂದ ಜಯಿಸಲ್ಪಡತಕ್ಕ ಲೋಕಗಳಾವುವೂ ದೊರಕದಿರಬೇಕೆಂಬುದೇ ನನ್ನ ಉದ್ದೇಶವು ಆದುದರಿಂದ ಈಗ ನೀವು ನನ್ನ ಸುಖದುಃಖಗಳಲ್ಲಿ ಸಮಭಾಗಿಗಳಾಗಿರುವಪಕ್ಷ

ದಲ್ಲಿ, ನಿಮ್ಮ ಕವಚ ಖಡ್ಗಗಳನ್ನು ಸಿದ್ಧಪಡಿಸಿಕೊಂಡು ಧನುರ್ಧಾರಿಗ ಳಾಗಿ ರಥವನ್ನೇರಿ ನನ್ನನ್ನು ಹಿಂಬಾಲಿಸಿ ಬನ್ನಿರಿ!' ಎಂದು ಹೇಳಿ ರಥ ವನ್ನು ಬಿಟ್ಟುಕೊಂಡು ಶತ್ರುಗಳಿಗಿದಿರಾಗಿ ಹೊರಟನು ಕೃಪ, ಕೃತವರ್ಮ ರಿಬ್ಬರೂ ಅವನನ್ನೇ ಹಿಂಬಾಲಿಸಿದರು ಹುತಮಾಡಲ್ಪಟ್ಟ ಮೂರು ಯಾಗಾಗ್ನಿಗಳಂತೆ ಆ ಮೂವರೂ ಒಂದಾಗಿ ಹೊರಟು ಪಾಂಡವಯೋಧ ರೆಲ್ಲರೂ ಮೈಮರೆತು ಮಲಗಿದ್ದ ಶಿಬಿರದ ದ್ವಾರಕ್ಕೆ ಬಂದುಸೇರಿದರು ಆ ಶಿಬಿರದ್ವಾರದಲ್ಲಿ ಅಶ್ವತ್ಥಾಮನು ಅವರೆಲ್ಲರಿಗೆ ಮುಂದಾಳಾಗಿ ನಿಂತಿದ್ದನು.

ಇದು ಐದನೆಯ ಅಧ್ಯಾಯವು.

---

(ಅಶ್ವತ್ಥಾಮನು ಬಿಡಾರದ ಬಾಗಿಲಲ್ಲಿದ್ದ ಮಹಾಭೂತವೊಂದ ನ್ನು ಕಂಡು, ಆಯುಧಗಳನ್ನು ಪ್ರಯೋಗಿಸಿದುದು. ಅವೆ ಲ್ಲವೂ ವ್ಯರ್ಥವಾಗಲು, ಆತನು ಮನೋವ್ಯಾಕುಲ ದಿಂದ ಮಹಾದೇವನನ್ನು ಉಪಾಸಿಸತೊಡಗಿದುದು.)

ಧೃತರಾಷ್ಟ್ರನು 'ಓ ಸಂಜಯಾ! ಬಾಗಿಲಲ್ಲಿ ನಿಂತಿರುವ ಅಶ್ವತ್ಥಾ ಮನನ್ನು ನೋಡಿ, ಕೃತವರ್ಮನೂ, ಕೃಪನೂ ಏನು ಮಾಡಿದರು? ಅದನ್ನು ನನಗೆ ತಿಳಿಸು' ಎಂದು ಕೇಳಿದನು

ಆಗ ಸಂಜಯನು 'ರಾಜಾ! ದ್ರೋಣಪುತ್ರನು ಕೃಪ ಕೃತವರ್ಮರ ಅನುಮತಿಯನ್ನು ಪಡೆದು, ಕೋಪಾಕ್ರಾಂತನಾಗಿ ಬಿಡಾರದಬಾಗಿಲಿಗೆ ಹೋದನು. ಆತನು ಅಲ್ಲಿ ಮರೆಸಿಕೊಂಡಿದ್ದ ಒಂದು ದೊಡ್ಡ ಭೂತ ವನ್ನು ಕಂಡನು ಅದರ ಭಯಂಕರ ರೂಪವನ್ನು ಕೇಳಬೇಕೆ? ಅದಕ್ಕೆ ಚಂದ್ರ ಸೂರ್ಯರಿಗೆ ಸಮಾನವಾದ ದೇಹಕಾಂತಿ. ರೋಮಾಂಚವ ನ್ನುಂಟುಮಾಡುವಂತೆ ದೊಡ್ಡ ಆಕೃತಿ! ರಕ್ತದಿಂದಲೂ, ಕೆನ್ನೀರಿನಿಂದ ಲೂ ಕರೆಗಟ್ಟಿದ ಹುಲಿದೊಗಲಿನ ಉಡುಪು! ಜಿಂಕೆಯ ಚರ್ಮದ ಮೇಲು ಹೊದಿಕೆ! ಸರ್ಪರೂಪವಾದ ಜನಿವಾರವು! ಕೈಯಲ್ಲಿ ಹಿಡಿದ ಭಯಂಕರವಾದ ಆಯುಧಗಳು! ಹಾವಿನ ತೋಳ್ಬಳೆ! ಅಗ್ನಿಜ್ವಾಲೆಗೆ ಸಮಾನವಾಗಿ ಭಯಂಕರವಾದ ಕೋರೆಹಲ್ಲುಗಳುಳ್ಳ ತೆರೆದ ಬಾಯಿ!

ವಿಚಿತ್ರವಾದ ನೂರಾರು ಕಣ್ಣುಗಳು! ಇಂತಹ ಮಹಾಭೂತವೊಂದು ಬಾಗಿಲಿಗಡ್ಡಲಾಗಿ ನಿಂತಿರುವುದು. ಅದರ ದೊಡ್ಡ ಶರೀರವನ್ನೂ, ವೇಷವನ್ನೂ ಕಂಡು ಬೆಟ್ಟಗಳೂ ಕೂಡ ಭೇದಿಸುವುವು. ಅದರ ಬಾಯಿಂದಲೂ ಮೂಗಿನಿಂದಲೂ, ಕಿವಿಗಳಿಂದಲೂ, ಸಾವಿರ ಕಣ್ಣುಗಳಿಂದಲೂ ದೊಡ್ಡ ಅಗ್ನಿಜ್ವಾಲೆಯು ಹೊರಡುತ್ತಿರುವುದು. ಆ ಕಿರಣಗಳಿಂದ ಶಂಖಚಕ್ರಾದಿಗಳನ್ನು ಧರಿಸಿದ ಹೃಷೀಕೇಶನು ನೂರು ಸಾವಿರ ಆಕೃತಿಗಳಿಂದ ತೋರುತ್ತಿರುವನು ಅತ್ಯಾಶ್ಚರ್ಯಕರವಾದ ಆ ಭೂತವನ್ನು ಕಂಡಾಗಲೂ ಭಯಪಡದೆ ಅಶ್ವತ್ಥಾಮನು ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದನು. ಬಡಬಾಗ್ನಿಯು ಸಮುದ್ರಜಲವನ್ನು ನುಂಗುವಂತೆ ಆ ಮಹಾಭೂತವು ಆ ಅಸ್ತ್ರಗಳೆಲ್ಲವನ್ನೂ ನುಂಗಿತು ತನ್ನ ಬಾಣಗಳು ನಿಷ್ಪ್ರಯೋಜಕವಾದುದನ್ನು ಕಂಡು ಅಶ್ವತ್ಥಾಮನು ಅಗ್ನಿಜ್ವಾಲೆಗೆ ಸಮಾನವಾದ ರಥಶಕ್ತಿಯನ್ನು ಆ ಭೂತದಮೇಲೆ ಪ್ರಯೋಗಿಸಿದನು. ಉಗ್ರವಾಗಿ ಜಲಿಸುತ್ತಿರುವ ಆ ಶಕ್ತಿಯು ಆ ಭೂತಕ್ಕೆ ತಾಗಿದೊಡನೆ, ಪ್ರಳಯಕಾಲದಲ್ಲಿ ಆಕಾಶದಿಂದ ಬೀಳುವ ಉಲ್ಕವು ಸೂರ್ಯನನ್ನು ಭೇದಿಸಿಕೊಂಡು ಚದರುವಂತೆ ಛಿನ್ನಭಿನ್ನವಾಯಿತು. ಆಮೇಲೆ ಸುವರ್ಣದ ಹಿಡಿಯುಳ್ಳುದೂ, ಆಕಾಶಕ್ಕೆ ಸಮಾನವಾದ ಕಾಂತಿಯುಳ್ಳುದೂ ಆದ ಒಂದು ಕತ್ತಿಯನ್ನು, ಸರ್ಪವನ್ನು ಹುತ್ತಿನಿಂದೆಳೆಯುವಂತೆ ಒರೆಯಿಂದ ವೇಗವಾಗಿ ಎಳೆದು ಆ ಭೂತದಮೇಲೆ ಪ್ರಯೋಗಿಸಿದನು. ಅದೂ ಆ ಭೂತಕ್ಕೆ ತಾಗಿದೊಡನೆ ಮೃದುವಾಗಿ ಹತ್ತಿಯಂತೆ ಹಾರಿಹೋಯಿತು. ಆಮೇಲೆ ಅಶ್ವತ್ಥಾಮನು ಕೋಪಗೊಂಡು ಇಂದ್ರಧ್ವಜಕ್ಕೆ ಸಮಾನವಾಗಿ ಜ್ವಲಿಸುವ ಒಂದು ಗದಾಯುಧವನ್ನು ಆ ಭೂತದಮೇಲೆ ಪ್ರಯೋಗಿಸಿದನು. ಭೂತವು ಅದನ್ನೂ ನುಂಗಿ ವಿಫಲಮಾಡಿತು ತನ್ನ ಆಯುಧಗಳೆಲ್ಲವೂ ನಿಷ್ಪ್ರಯೋಜಕವಾಗಿಹೋದುದನ್ನು ಕಂಡು ಅಲ್ಲಿಯೂ, ಇಲ್ಲಿಯೂ ತಿರುಗಿ ನೋಡುತ್ತ, ಶ್ರೀವಿಷ್ಣುವಿನ ಮಾಯಾರೂಪಗಳಿಂದ ಆಕಾಶದಲ್ಲಿ ದಾರಿಯೇ ತೋರದಂತಾಯಿತು.

ಈ ಅತ್ಯಾಶ್ಚರ್ಯಗಳನ್ನು ಕಂಡಮೇಲೆ ಅವನು ಭಯದಿಂದ ಕೃಪ, ಕೃತವರ್ಮರ ಮಾತುಗಳನ್ನು ನೆನೆಸಿಕೊಂಡು, ತನ್ನಲ್ಲಿತಾನು 'ಅಹಾ!

ತನಗೆ ವಾಗಿದ್ದರೂ, ಆಪ್ತರ ಹಿತವಾದ ವಚನಗಳನ್ನು ಕೇಳದೆಹೋದವನು ಅವಮಾನಕ್ಕೂ, ಆಪತ್ತಿಗೂ ಗುರಿಯಾಗಿ ದುಃಖವನ್ನನುಭವಿಸುವನು. ವಿಧಿನಿಯಮಗಳನ್ನು ತಿಳಿಯದೆ ಯಾವನು ಶಾಸ್ತ್ರಗಳನ್ನು ಮೀರಿ ಇತರರನ್ನು ಪೀಡಿಸಲಪೇಕ್ಷಿಸುವನೋ, ಆತನು ಧರ್ಮಮಾರ್ಗದಿಂದ ಅಧರ್ಮಮಾರ್ಗಕ್ಕೆ ಜಾರಿ, ಹಿಂಸೆಗೆ ಗುರಿಯಾಗುವನು. ಹಸುಗಳು, ಬ್ರಾಹ್ಮಣರು, ರಾಜಸ್ತ್ರೀಯರು, ಸ್ನೇಹಿತನು, ತಾಯಿ, ಗುರು, ವೃದ್ಧನು, ಬಾಲನು, ಜಡನು, ಕುರುಡನು, ಮಲಗಿರುವವನು, ಭಯಪಟ್ಟವನು, ನಿದ್ರೆಯಿಂದೆದ್ದವನು, ಮದಿಸಿದವನು, ಪಿತನು, ಎಚ್ಚರಿಕೆ ತಪ್ಪಿರುವವನು, ಇವರಮೇಲೆ ಶಸ್ತ್ರಗಳನ್ನು ಪ್ರಯೋಗಿಸಕೂಡದೆಂದು ಹಿಂದಿನಿಂದ ಹಿರಿಯರು ಯಾವಾಗಲೂ ಉಪದೇಶಿಸುತ್ತಿರುವರು. ನಾನು ಶಾಸ್ತ್ರವಿಹಿತವಾದ ಆ ಶಾಶ್ವತಧರ್ಮವನ್ನು ಮೀರಿಹೋಗಿ, ದುರ್ಮಾರ್ಗದಿಂದ ಇಂತಹ ಕಾರ್ಯವನ್ನು ಮಾಡಲಾರಂಭಿಸಿ, ದೊಡ್ಡ ಆಪತ್ತಿಗೆ ಗುರಿಯಾದೆನು. ದೊಡ್ಡ ಕಾರ್ಯವನ್ನಾರಂಭಿಸಿದಮೇಲೆ ಭಯದಿಂದ ಅದನ್ನು ಬಿಡುವುದೂ ಮಹಾಘೋರವಾದ ಆಪತ್ತಿಗೆ ಕಾರಣವೆಂದು ವಿದ್ವಾಂಸರು ತಿಳಿಸುವರು. ಅಸಾಧ್ಯಕಾರ್ಯವನ್ನು ಯಾವ ಮನುಷ್ಯನು ತಾನೇ ತನ್ನ ಶಕ್ತಿಬಲದಿಂದ ಮಾಡಲು ಸಾಧ್ಯವು? ದೈವಬಲಕ್ಕಿಂತಲೂ ಮನುಷ್ಯಬಲವು ಅಧಿಕವೆಂದು ಪ್ರಾಜ್ಞರು ಯಾರೂ ಹೇಳದುದಿಲ್ಲ. ಮನುಷ್ಯನು ಎಲ್ಲಾ ಪ್ರಯತ್ನಗಳನ್ನೂ ಮಾಡಿಯೂ ದೈವವಶದಿಂದ ಅದು ಸಿದ್ಧಿಸದೆ ಹೋದರ, ಆತನು ಧರ್ಮಮಾರ್ಗವನ್ನು ಬಿಟ್ಟು ವಿಪರೀತಮಾರ್ಗಕ್ಕೆ ಹೋಗುವನು ಒಬ್ಬನು ಒಂದು ಕಾರ್ಯವನ್ನಾರಂಭಿಸಿ ಭಯದಿಂದ ನಿವೃತ್ತನಾದರೆ, ಆತನ ಕಾರ್ಯಪ್ರತಿಜ್ಞೆಯನ್ನು ಬುದ್ಧಿಗೆಟ್ಟ ಕಾರ್ಯವೆಂದು ಹೇಳುವರು. ನನ್ನೀಕಾರ್ಯವು ಅಕಾರ್ಯವಾದುದರಿಂದಲೇ ಅಂತಹ ಭಯವು ನನಗೆ ಪ್ರಾಪ್ತವಾಗಿರುವುದು. ನಾನು ದ್ರೋಣಪುತ್ರನಾಗಿ, ಯಾವ ವಿಧದಿಂದಲೂ ಯುದ್ಧದಲ್ಲಿ ನಿವೃತ್ತಿಹೊಂದತಕ್ಕವನಲ್ಲ. ಈ ಮಹಾಭೂತವೋ ದೈವದಂಡದಂತೆ (ಸಂಹಾರ) ಪ್ರಯತ್ನದಲ್ಲಿರುವುದು. ಹೇಗೆ ಆಲೋಚಿಸಿದರೂ ಇದರ ಕಾರಣವು ಯಾವ ವಿಧದಿಂದಲೂ ತಿಳಿದುಬರಲಿಲ್ಲ. ಅಧರ್ಮದಿಂದ ಪ್ರೇರಿತವಾದ ಈ ನನ್ನ ಚಪಲಬುದ್ಧಿಯು ನನಗೆ ಅನರ್ಥಕಾರಿ

ಯಾಗಿಯೇ ತೋರುತ್ತಿದೆ. ನನಗೆ ಪ್ರಾಪ್ತವಾಗಿರುವ ಈ ಯುದ್ಧಾತುರವೂ ವಿಧಿವಶದಿಂದಲೇ ಉಂಟಾಗಿರುವುದು. ಈಗ ದೈವಬಲವನ್ನು ಮೀರಿ ಬೇರೆ ಮಾರ್ಗದಲ್ಲಿ ಪ್ರಯತ್ನಿಸುವುದು ಯಾವ ರೀತಿಯಿಂದಲೂ ಸಾಧ್ಯವಿಲ್ಲ. ಈಗ ನಾನು ಪ್ರಭುವಾದ ಮಹಾದೇವನನ್ನು ಶರಣುಹೊಗುವೆನು ನನಗೆ ಪ್ರಾಪ್ತವಾಗಿರುವ ಈ ಘೋರವಾದ ದೈವದಂಡವನ್ನು ಆತನೇ ನಾಶಮಾಡಬಲ್ಲವನು. ನಾನು ಜಟಾಧಾರಿಯೂ, ದೇವದೇವನೂ, ಪಾರ್ವತೀಪತಿಯೂ, ಕಪಾಲಮಾಲಿಕೆಯನ್ನು ಧರಿಸಿದವನೂ, ಭಗನ ನೇತ್ರವನ್ನಪಹರಿಸಿದವನೂ ಆದ ಈಶ್ವರನಲ್ಲಿ ಶರಣಾಗತನಾಗುವೆನು ಆತನು ತನ್ನ ತಪಸ್ಸಿನಿಂದಲೂ, ಪರಾಕ್ರಮದಿಂದಲೂ ದೇವತೆಗಳೆಲ್ಲರನ್ನೂ ಮೀರಿಸಿರುವನು ಆದುದರಿಂದ ಶೂಲಪಾಣಿಯಾದ ಈಶ್ವರನನ್ನು ನಾನು ಮರೆಹುಗುವೆನು ' ಎಂದನು

ಇದು ಆರನೆಯ ಅಧ್ಯಾಯವು

ಅಶ್ವತ್ಥಾಮನು ಈಶ್ವರನನ್ನು ಸ್ತುತಿಸಿದುದು ಆತನು ನೋಡುತ್ತಿರುವಂತೆಯೇ ಸುವರ್ಣವೇದಿಯಲ್ಲಿ ಅಗ್ನಿಯು ಉತ್ಪನ್ನವಾದುದು ಆತನ ಸಮೀಪದಲ್ಲಿ ಅನೇಕ ಭೂತಗಳು ಕಾಣಿಸಿದುದು ಆತನು ತನ್ನನ್ನೇ ಅಗ್ನಿಯಲ್ಲಿ ಹೋಮಮಾಡಲು ಯತ್ನಿಸಿದಾಗ, ಈಶ್ವರನು ಪ್ರತ್ಯಕ್ಷನಾಗಿ, ಒಂದು ಕತ್ತಿಯನ್ನು ಕೊಟ್ಟು ತನ್ನ ಅಂಶವನ್ನು ಅವನಲ್ಲಿಟ್ಟುದು

ಓ ರಾಜಾ! ಹೀಗೆ ಪಂಚಭೂತಗಳಿಂದಾದ ತನ್ನ ಶರೀರವನ್ನೇ ರುದ್ರನಿಗೆ ಬಲಿಯಾಗಿ ಕೊಡುವುದಾಗಿ ನಿಶ್ಚಯಿಸಿ ದ್ರೋಣಪುತ್ರನು, ರಥದಿಂದಿಳಿದು ಪರಿಶುದ್ಧನಾಗಿ, ಧ್ಯಾನಕ್ಕೆ ತೊಡಗಿ ‘ ಈಗ ನಾನು ಉಗ್ರಸ್ವರೂಪಿಯೂ, ಶಾಶ್ವತನೂ, ಮಂಗಳರೂಪನೂ, ಲಯಕರ್ತನೂ, ಸರ್ವೇಶ್ವರನೂ, ಕೈಲಾಸವಾಸಿಯೂ, ವರದಾಯಕನೂ, ಸೃಷ್ಟಿ ಸ್ಥಿತಿ ಕಾರಣನೂ, ಲೋಕಸಂಹಾರಕನೂ, ನಾಶವಿಲ್ಲದವನೂ, ನೀಲಕಂಠನೂ, ಜನ್ಮರಹಿತನೂ

ವಿರೂಪಾಕ್ಷನೂ, ದಕ್ಷಯಾಗಧ್ವಂಸಕನೂ, ಪಾಪನಾಶಕನೂ, ವಿರೂಪಾಕ್ಷನೂ, ನಾನಾರೂಪಗಳುಳ್ಳವನೂ, ಉಮಾಪತಿಯೂ, ಶ್ಮಶಾನವಾಸಿಯೂ, ಗಣನಾಥನೂ, ಪ್ರಭುವೂ, ಖಟ್ವಾಂಗಧಾರಿಯೂ, ತ್ರಿಪುರಹರನೂ, ಜಟಾಧಾರಿಯೂ, ಬ್ರಹ್ಮಚಾರಿಯೂ ಆದ ಶಿವನನ್ನು ಅಲ್ಪಬುದ್ಧಿಯುಳ್ಳವರಿಗೆ ಅಸಾಧ್ಯವಾದ ಮನೋದಾರ್ಢ್ಯದಿಂದ ಧ್ಯಾನಿಸಿ, ಭೂತೋಪಹಾರದಿಂದ ಅವನನ್ನಾರಾಧಿಸುವೆನು ಸ್ತುತನೂ, ಸ್ತೋತ್ರಾರ್ಹನೂ, ಲೋಕಪೂಜ್ಯನೂ, ದರ್ಶನಮಾತ್ರದಿಂದಲೇ ಸತ್ಫಲವನ್ನುಂಟುಮಾಡತಕ್ಕವನೂ, ಜಿಂಕೆಯ ಚರ್ಮವನ್ನು ಧರಿಸಿದವನೂ, ರಕ್ತವರ್ಣನೂ, ನೀಲಕಂಠನೂ; ಅಜೇಯನೂ, ಶುಕ್ರರೂಪಿಯೂ, ಲೋಕಕರ್ತನೂ, ಬ್ರಹ್ಮಸ್ವರೂಪಿಯೂ, ವ್ರತನಿಷ್ಠನೂ, ತಪಸ್ವಿಯೂ, ಅನಂತನೂ, ತಪಸ್ವಿಗಳಿಗೆ ಗತಿಯೂ, ಬಹುರೂಪಿಯೂ, ಗಣನಾಧನೂ, ತ್ರಿನೇತ್ರನೂ, ಪಾರ್ಷದಪ್ರಿಯನೂ, ಕುಬೇರಸಖನೂ, ಪಾರ್ವತೀಕಾಂತನೂ, ಷಣ್ಮುಖಜನಕನೂ, ಪಿಂಗಳವರ್ಣನೂ, ವೃಷಭವಾಹನನೂ, ಉತ್ತಮೋತ್ತಮನೂ, ಶ್ರೇಷ್ಠವಾದ ಬಾಣಗಳನ್ನೂ, ಅಸ್ತ್ರಗಳನ್ನೂ ಧರಿಸಿದವನೂ, ದಿಕ್ಕುಗಳ ಕೊನೆಯಲ್ಲಿರುವವನೂ, ದೇಶರಕ್ಷಕನೂ, ಕವಚಧಾರಿಯೂ, ನಟರಾಜನೂ, ಚಂದ್ರಶೇಖರನೂ, ಲೋಕಶರಣ್ಯನೂ, ದೇವೋತ್ತಮನೂ ಆದ ರುದ್ರನನ್ನು ಉತ್ತಮಸಮಾಧಿಯಿಂದ ಶರಣುಹೊಗುವೆನು ಈಗ ನಾನು ದುರ್ಗಮವಾದ ಈ ಆಪತ್ತನ್ನು ದಾಟುವಪಕ್ಷದಲ್ಲಿ ಸರ್ವಭೂತೋಪಹಾರಗಳಿಂದ ಆ ಸರ್ವೇಶ್ವರನನ್ನು ಪೂಜಿಸುವೆನು' ಎಂದು ಧ್ಯಾನದಿಂದ ಸಂಕಲ್ಪಿಸಿದನು. ಅಶ್ವತ್ಥಾಮನ ಪ್ರಯತ್ನವನ್ನು ಯೋಗಮಹಿಮೆಯಿಂದ ತಿಳಿದು, ಆತನ ಮುಂದೆ ಸುವರ್ಣಮಯವಾದ ಒಂದು ಅಗ್ನಿವೇದಿಯು ಗೋಚರಿಸಿತು ಅದರಲ್ಲಿ ಆಗ ದಿಕ್ಕುಗಳನ್ನೂ, ವಿದಿಕ್ಕುಗಳನ್ನೂ, ಆಕಾಶವನ್ನೂ ಉರಿಸುವ ಜ್ವಾಲೆಗಳೊಡನೆ ದೊಡ್ಡ ಬೆಂಕಿಯೆದ್ದಿತು. ಆಮೇಲೆ ಅದರ ಸುತ್ತಲೂ ವಿವಿಧಾಕಾರವುಳ್ಳ ಭಯಂಕರಗಳಾದ ಮಹಾಭೂತಗಳು ತಲೆದೋರಿದುವು ಅವುಗಳಲ್ಲಿ ಕೆಲವಕ್ಕೆ ಉರಿಯುವ ಕಣ್ಣುಗಳು! ಜ್ವಲಿಸುವ ಮುಖಗಳು! ಹಲವು ಬಾಯಿಗಳು! ಹಲವು ಕುತ್ತಿಗೆಗಳು! ಮೈಯಲ್ಲಿ ರತ್ನಖಚಿತಗಳಾದ ತೋಳ್ಬಳೆ ಮುಂತಾದ ಆಭರಣಗಳು! ಮೇಲೆತ್ತಿದ

ತೋಳುಗಳು ! ಆನೆಗಳಂತೆಯೂ, ಬೆಟ್ಟಗಳಂತೆಯೂ ದೊಡ್ಡ ಆಕೃತಿಗಳು ! ನಾಯಿ, ಹಂದಿ, ಒಂಟೆ, ಕುದುರೆ, ನರಿ ಮುಂತಾದುವುಗಳಂತೆ ಶರೀರಗಳು; ಹಸುಗಳಂತೆಯೂ, ಕರಡಿ, ಬೆಕ್ಕು, ಹುಲಿ, ಚಿರತೆ, ಕಾಗೆ, ಕಪ್ಪೆ, ಗಿಳಿ, ಬೆಟ್ಟದಹಾವು, ಹಂಸಪಕ್ಷಿ, ಇವುಗಳಂತೆಯೂ ಮುಖವುಳ್ಳವು ಕೆಲವು; ಬಿಳುಪಾದ ಕಾಂತಿಯುಳ್ಳವು ಕೆಲವು ! ದಾರ್ವಾಘಾಟ, ಚಾಷಪಕ್ಷಿಗಳಂತೆ ಮುಖವುಳ್ಳವು ಕೆಲವು ! ಆಮೆ, ಮೊಸಳೆ, ಶಿಂಶುಮಾರ, ಮಕರ, ತಿಮಿ, ಮೊದಲಾದ ಜಲಚರಗಳಂತೆ ಮುಖವುಳ್ಳವು ಕೆಲವು ! ಸಿಂಹದಂತೆ ಮುಖವುಳ್ಳವು ಕೆಲವು ! ಕ್ರೌಂಚ, ಕಪೋತ, ಪಾರಾವತ ಮೊದಲಾದ ಪಕ್ಷಿಗಳಂತೆ ಮುಖವುಳ್ಳವು ಕೆಲವು ! ಕೆಲವಕ್ಕೆ ಕೈಯಲ್ಲಿ ಕಿವಿ! ಕೆಲವಕ್ಕೆ ಸಾವಿರ ಕಣ್ಣುಗಳು ! ದೊಡ್ಡ ಹೊಟ್ಟೆ ! ಮಾಂಸವಿಲ್ಲದ ಮೈ! ಕಾಗೆಯಂತೆಯೂ, ಗಿಡುಗನಂತೆಯೂ ಮುಖಗಳು, ತಲೆಯಿಲ್ಲದ ಬರೀಮುಂಡಗಳೇ ಕೆಲವು! ಭಯಂಕರವಾದ ಕರಡಿಯ ಮುಖವುಳ್ಳವು ಕೆಲವು, ಉರಿಯುವ ಕಣ್ಣು, ಉರಿಯುವ ನಾಲಗೆ, ಉರಿಯ ಬಣ್ಣವುಳ್ಳ ಮೈ, ಉರಿಯುವ ಕೂದಲು, ಉರಿಯುತ್ತಿರುವ ನಾಲ್ಕು ಭುಜಗಳು, ಆಡುಕುರಿಗಳಂತೆ ಮುಖಗಳು, ಕಾಂತಿಯಲ್ಲಿಯೂ, ಮುಖದಲ್ಲಿಯೂ, ಬಣ್ಣದಲ್ಲಿಯೂ, ಶಂಖದಂತೆ ಬಿಳುಪಾಗಿ, ಶಂಖಗಳನ್ನೇ ಹಾರವಾಗಿ ಧರಿಸಿ, ಶಂಖದಂತೆ ಧ್ವನಿಯುಳ್ಳವು ಕೆಲವು, ಜಟಾಧಾರಿಗಳು ಕೆಲವು, ಐದು ಶಿಖೆಯುಳ್ಳವು ಕೆಲವು, ಬೋಳು ತಲೆಯುಳ್ಳವು ಕೆಲವು, ಕೃಶವಾದ ಹೊಟ್ಟೆಯುಳ್ಳವು ಕೆಲವು, ಕೆಲವಕ್ಕೆ ನಾಲ್ಕು ಕೋರೆಹಲ್ಲುಗಳು, ನಾಲ್ಕು ನಾಲಗೆಗಳು, ಶಂಕುವಿನಂತೆ ಕೂಚಾದ ಕಿವಿಯುಳ್ಳವು ಕೆಲವು, ಕಿರೀಟಧಾರಿಗಳು ಕೆಲವು, ಕೆಲವು ನೊದೆಹುಲ್ಲನ್ನು ಸುತ್ತಿರುವುವು, ವಕ್ರವಾಗಿ ಸುರುಳಿಗಟ್ಟಿದ ಕೂದಲುಳ್ಳವು ಕೆಲವು, ತಲೆಪಾಗನ್ನು ಧರಿಸಿ, ಕುಂಡಲಾದ್ಯಲಂಕಾರಗಳಿಂದಲೂ, ತಾವರೆ, ನೈದಿಲೆಗಳ ಹಾರಗಳಿಂದಲೂ, ಕಿರೀಟದಿಂದಲೂ ಶೋಭಿಸುವ ಅಂದವಾದ ಮುಖವುಳ್ಳವು ಕೆಲವು, ಮಹಾಪ್ರಭಾವದಿಂದ ಕೂಡಿದ ಇಂತಹ ಭೂತಗಣಗಳು ನೂರುಸಾವಿರ ಸಂಖ್ಯೆಯಿಂದ ತಲೆದೋರಿದುವು. ಕೆಲವು ಭೂತಗಳ ಕೈಯಲ್ಲಿ ಶತಘ್ನಿ, ಚಕ್ರ, ಮುಸಲ, ಭುಸುಂಡಿ, ಪಾಶ, ದಂಡ ಮೊದಲಾದ ಮಹಾಯುಧಗಳಿರುವುವು. ಕೆಲವು ಹಿಂದೆ ಬೆನ್ನಿಗೆ ಬತ್ತಳಿಕೆ

ಯನ್ನು ಕಟ್ಟಿ, ವಿಚಿತ್ರಬಾಣಗಳನ್ನು ಹಿಡಿದು ಧ್ವಜಪತಾಕೆಗಳಿಂದ ಶೋಭಿಸುವುವು. ಕೆಲವಕ್ಕೆ ಮೈಯಲ್ಲಿ ಘಂಟೆಗಳು! ಕೈಯಲ್ಲಿ ದೊಡ್ಡ ಗಂಡುಗೊಡಲಿಗಳು! ಕೆಲವು ದೊಡ್ಡ ಪಾಶಗಳನ್ನೂ, ಕೆಲವು ದೊಣ್ಣೆಗಳನ್ನೂ ಹಿಡಿದಿರುವುವು ಕೆಲವಕ್ಕೆ ಕೈಯಲ್ಲಿ ದೊಡ್ಡ ಕಂಭಗಳು, ಕೆಲವಕ್ಕೆ ಕತ್ತಿಗಳು, ಕೆಲವಕ್ಕೆ ಹೆಡೆಯೆತ್ತಿದ ಸರ್ಪಗಳಂತೆ ಕಿರೀಟಗಳು, ಸರ್ಪಮಯವಾದ ತೋಳ್ಬಳೆಗಳು, ನೆಲದ ಧೂಳಿಯೇ ಕೆಲವಕ್ಕೆ ಧ್ವಜಗಳು, ಕೆಸರಿನಿಂದ ತುಂಬಿದ ಮೈಯುಳ್ಳವು ಕೆಲವು, ವಿಚಿತ್ರವಸ್ತ್ರಮಾಲ್ಯಗಳಿಂದ ಕೆಲವು ಶೋಭಿಸುವುವು, ಕೆಲವಕ್ಕೆ ಕಪ್ಪು ಮೈ, ಕೆಲವಕ್ಕೆ ಹಳದಿಬಣ್ಣದ ಮೈ, ಮಿಸೆಯಿಲ್ಲದ ಮುಖವುಳ್ಳವು ಕೆಲವು, ಇಂತಹ ಭೂತಗಳಲ್ಲಿ ಕೆಲವು ಭೇರಿ, ಶಂಖ, ಮೃದಂಗ, ಜರ್ಝರಿ, ಆನಕ, ಗೋಮುಖ ಮೊದಲಾದ ವಾದ್ಯಗಳನ್ನು ನುಡಿಸುವುವು ಕೆಲವು ಸಂತೋಷದಿಂದ ಗಾನಮಾಡುವುವು! ಕೆಲವು ಹಾರುವುವು! ಕೆಲವು ನೆಗೆಯುವುವು! ಕೆಲವು ಓಡುವುವು, ಕೆಲವಕ್ಕೆ ತಲೆಯಕೂದಲೆಲ್ಲ ಅಗ್ನಿಜ್ವಾಲೆಯಿಂದ ಉರಿಯುವಂತೆ ಕಾಣುವುವು, ಮದಿಸಿದ ಮಹಾಗಜಗಳಂತೆ ಆಗಾಗ ಗರ್ಜಿಸುವುವು ಶೂಲ, ಪಟ್ಟಸಗಳನ್ನು ಕೈಯಲ್ಲಿ ಹಿಡಿದು, ವಿಚಿತ್ರ ಗಂಧಪುಷ್ಪ ವಸ್ತ್ರಗಳನ್ನು ಧರಿಸಿ, ವಿಚಿತ್ರಾಭರಣಗಳಿಂದ ಶೋಭಿಸುವುವು! ಕೆಲವು ಶತ್ರುಸಂಹಾರಕಗಳಾಗಿಯೂ, ದುಸ್ಸಹಪರಾಕ್ರಮವುಳ್ಳವುಗಳಾಗಿಯೂ ಇರುವುವು ಕೆಲವು ರಕ್ತವನ್ನು ಕುಡಿಯುತ್ತಿರುವುವು ಕೆಲವು ಕೆನ್ನೀರನ್ನೂ, ಕೊಬ್ಬಿನ ತುಪ್ಪವನ್ನೂ ಪಾನಮಾಡುತ್ತಿರುವುವು! ಕೆಲವು ಮಾಂಸವನ್ನೂ, ನರಗಳನ್ನೂ ಕಿತ್ತು ತಿನ್ನುತ್ತಿರುವುವು ಕೆಲವಕ್ಕೆ ತಲೆಯೆಲ್ಲ ಕೂದಲು! ಕೆಲವಕ್ಕೆ ದೊಡ್ಡ ಕುಕ್ಕೆಯಂತೆ ಹೊಟ್ಟೆ, ಕೆಲವು ಗುಜ್ಜಾರಿಗಳು, ಕೆಲವಕ್ಕೆ ಅತಿದೀರ್ಘವಾದ ಆಕೃತಿ, ಕೆಲವಕ್ಕೆ ಮೈಯೆಲ್ಲವೂ ಬೊಜ್ಜಿನಿಂದ ತೊಂಗುತ್ತಿರುವುವು! ಕೆಲವಕ್ಕೆ ಭಯಂಕರವಾದ ಆಕೃತಿ, ಕಪ್ಪಾಗಿ ತೊಂಗುತ್ತಿರುವ ತುಟಿಗಳು, ಕೆಲವಕ್ಕೆ ಬಹಳ ದೊಡ್ಡದಾಗಿ ತೊಂಗುತ್ತಿರುವ ಶಿಶ್ನಗಳು ಮತ್ತು ಅಂಡಗಳು, ಕೆಲವಕ್ಕೆ ಮೊಳಕಾಲಿನಿಂದ ಕೆಳಕ್ಕೆ ಹಿಮ್ಮೊಗವಾದ ಪಾದಗಳು, ಕೆಲವಕ್ಕೆ ತಲೆತುಂಬ ಕೂದಲು, ಕೆಲವಕ್ಕೆ ಬೋಳುತಲೆ, ಅವರಲ್ಲಿ ಅನೇಕರಿಗೆ ಸೂರ್ಯಚಂದ್ರರೊಡನೆಯೂ, ಗ್ರಹನಕ್ಷತ್ರಗ

ಳೊಡನೆಯೂ ಕೂಡಿದ ಆಕಾಶವನ್ನು ಭೂಮಿಯಲ್ಲಿಯೇ ಉಂಟುಮಾಡುವ ಶಕ್ತಿಯುಂಟು. ಅವರು ಜರಾಯುಜಾದಿ ನಾಲ್ಕು ಬಗೆಯ ಭೂತಸಮೂಹಗಳನ್ನು ನಾಶಮಾಡುವ ಸಾಮರ್ಥ್ಯವುಳ್ಳವರು, ಯಾವಾಗಲೂ ನಿರ್ಭಯರು, ರುದ್ರನ ಕೋಪಭ್ರುಕುಟಿಗೂ ಮನಸ್ಸು ಕಲಗದವರು, ಸ್ವೇಚ್ಛೆಯಂತೆ ಕಾರ್ಯಸಾಧಕರು, ತ್ರಿಲೋಕೇಶ್ವರರಿಗೂ ಈಶ್ವರರು, ನಿತ್ಯಾನಂದನಿರತರು, ವಾಗ್ದೇವತೆಗಳು, ಮಾತ್ಸರ್ಯವಿಲ್ಲದವರು, ಅಷ್ಟೈಶ್ವರ್ಯಗಳನ್ನು ಪಡೆದಿದ್ದರೂ ಗರ್ವವಿಲ್ಲದವರು, ಭಗವಂತನಾದ ಈಶ್ವರನೇ ಅವರ ಕರ್ಮಗಳಿಗಾಗಿ ನಿತ್ಯವೂ ವಿಸ್ಮಯಗೊಳ್ಳುವನು, ಆ ಪಾರಿಷದರಿಂದ ಮನೋವಾಕ್ಕರ್ಮಗಳಿಂದ ನಿತ್ಯವೂ ಆರಾಧಿಸಲ್ಪಟ್ಟ ಆ ಈಶ್ವರನು ಅವರನ್ನು ಪುತ್ರರಂತೆ ರಕ್ಷಿಸುವನು. ಆವರಲ್ಲಿ ಕೆಲವರು ಬ್ರಹ್ಮದ್ವೇಷಿಗಳನ್ನು ಕಂಡಾಗ ಕ್ರೋಧದಿಂದ ಅವರ ಮೇದೋರಕ್ತಗಳನ್ನು ಹೀರತಕ್ಕವರು ! (ಅಧ್ಯಾತ್ಮ, ಅಧಿಯಜ್ಞ, ಅಧಿದೈವ, ಅಧಿಲೋಕಗಳಲ್ಲಿ ದೇವತಾರೂಪಿಗಳಾಗಿ ಅವರು, ಅನ್ನ, ಓಷಧಿರಸ, ಅಮೃತ, ಚಂದ್ರಮಂಡಲವೆಂಬ) ನಾಲ್ಕು ವಿಧ ಸ್ವರೂಪದಿಂದ ಕೂಡಿದ ಸೋಮರಸವನ್ನು ಯಾವಾಗಲೂ ಪಾನಮಾಡುವರು ಶಾಸ್ತ್ರಜ್ಞಾನದಿಂದಲೂ, ಬ್ರಹ್ಮಚರ್ಯದಿಂದಲೂ, ತಪಸ್ಸಿನಿಂದಲೂ, ಮನೋನಿಗ್ರಹದಿಂದಲೂ ಈಶ್ವರನನ್ನು ಸದಾ ಆರಾಧಿಸಿ, ರುದ್ರಸಾಯುಜ್ಯವನ್ನು ಪಡೆದವರು, ಭೂತ ಭವಿಷ್ಯದ್ವರ್ತಮಾನಕಾಲಗಳಿಗೆ ಪ್ರಭುವೂ, ಷಾಡ್ಗುಣ್ಯಪರಿಪೂರ್ಣನೂ ಆದ ಮಹೇಶ್ವರನು, ತನ್ನ ಸಾಯುಜ್ಯವನ್ನು ಪಡೆದ ಆ ಮಹಾಭೂತಗಣಗಳೊಡನೆ ಯಾವಾಗಲೂ ಸುಖವಾಗಿರುವನು. ಆ ಪಾರಿಷದರು ನಾನಾಬಗೆಯ ವಾದ್ಯಧ್ವನಿಗಳಿಂದಲೂ, ಸಿಂಹನಾದಗಳಿಂದಲೂ ಪ್ರಪಂಚವನ್ನೇ ನಡುಗಿಸುವಂತೆ ಬಂದು, ಅಶ್ವತ್ಥಾಮನಿಗಿದಿರಾಗಿ ಕಾಣಿಸಿದರು ಭೂತಗಣಗಳು "ಹರಹರ ಮಹಾದೇವ" ಎಂದು ರುದ್ರನನ್ನು ಸ್ತುತಿಸುತ್ತ; ತಮ್ಮ ತೇಜಸ್ಸನ್ನು ಹರಡುತ್ತ, ದ್ರೋಣಪುತ್ರನ ಪ್ರಭಾವವನ್ನೂ, ಸೌಪ್ತಿಕವಧವನ್ನೂ ನೋಡಲಪೇಕ್ಷಿಸಿ, ಭಯಂಕರವೂ, ಉಗ್ರವೂ ಆದ ಪರಿಘ, ಕೊಳ್ಳಿ, ಶೂಲ, ಪಟ್ಟಿಸ, ಮುಂತಾದುವುಗಳನ್ನು ಕೈಯಲ್ಲಿ ಹಿಡಿದು, ಸಾವಿರಲೆಕ್ಕದಲ್ಲಿ ಬಂದುವು. ನೋಡಿದಮಾತ್ರದಲ್ಲಿಯೇ ಮೂರು ಲೋಕಗಳಿಗೂ ಭಯವನ್ನುಂಟುಮಾಡುವ

ಅಂತಹ ಭೂತಗಳನ್ನು ಕಂಡರೂ ದ್ರೋಣಪುತ್ರನು ಸ್ವಲ್ಪವೂ ಎದೆಗುಂದ ದಿದ್ದನು. ಬಿಲ್ಲನ್ನು ಹಿಡಿದು, ಉಡುವಿನ ಚರ್ಮದ ಕೈಚೀಲಗಳನ್ನು ಧರಿಸಿದ ಆತನು ಆಗ ತನ್ನ ದೇಹವನ್ನೇ ಬಲಿಯಾಗಿ ಕೊಡಬೇಕೆಂದುದ್ದೇಶಿಸಿದನು ಮನೋಧೈರ್ಯವುಳ್ಳ ಅಶ್ವತ್ಥಾಮನ ಈ ಬಲಿಕರ್ಮದಲ್ಲಿ ಬಿಲ್ಲುಗಳೇ ಸಮಿತ್ತುಗಳಾಗಿಯೂ, ತೀಕ್ಷ್ಣಬಾಣಗಳೇ ಪವಿತ್ರಗಳಾಗಿಯೂ, ಆತ್ಮವೇ ಹವಿಸ್ಸಾಗಿಯೂ ಇರಲು, ಆತನು ಸೋಮೋಪಾಸನದ ಮಂತ್ರದಿಂದ ತನ್ನನ್ನೇ ಬಲಿಯಾಗಿ ಏರ್ಪಡಿಸಿಕೊಂಡನು ರುದ್ರಪ್ರೀತಿಕರವಾದ ರೌದ್ರವ್ರತದಿಂದ ಅವನು ರುದ್ರನನ್ನು ನಮಸ್ಕರಿಸಿ, ಹೀಗೆ ಸ್ತುತಿಸುವನು.

"ಓ ಭಗವಂತಾ! ಆಂಗಿರಸಕುಲದಲ್ಲಿ ಹುಟ್ಟಿದ ಈ ಆತ್ಮವನ್ನು ಈಗಲೇ ನಾನು ಈ ಉತ್ತಮಾಗ್ನಿಯಲ್ಲಿ ಹೋಮಮಾಡುವೆನು ನನ್ನನ್ನು ಬಲಿಯಾಗಿ ಸ್ವೀಕರಿಸು ಓ ಮಹಾದೇವಾ! ಪ್ರಪಂಚರೂಪೀ! ನಿನ್ನಲ್ಲಿರುವ ಭಕ್ತಿಯಿಂದ ನಾನು ಈ ಉತ್ತಮಸಮಾಧಿಯನ್ನು ನಿನ್ನ ಸಾನ್ನಿಧ್ಯದಲ್ಲಿ ಮಾಡಲಾರಂಭಿಸಿರುವೆನು ಎಲ್ಲಾ ಪ್ರಾಣಿಗಳಿಗೂ ನೀನೇ ಆಧಾರನು ಎಲ್ಲಾ ಭೂತಗಳೂ ನಿನ್ನನ್ನಾಶ್ರಯಿಸಿರುವುವು ಎಲ್ಲಾ ಪ್ರಧಾನಗುಣಗಳೂ ನಿನ್ನಲ್ಲಿಯೇ ಇರುವುವು ಓ ಜೀವಾಧಾರಾ! ವಿಭೂ! ದೇವಾ! ಶತ್ರುಗಳು ನನಗೆ ದುರ್ಜಯರಾಗುವುದಾದರೆ, ನನ್ನನ್ನೇ ಹವಿಸ್ಸನ್ನಾಗಿ ಸ್ವೀಕರಿಸು" ಎಂದನು ಆಮೇಲೆ ಅಶ್ವತ್ಥಾಮನು ಜ್ವಲಿಸುವ ಅಗ್ನಿಯಿಂದ ಕೂಡಿದ ಆ ವೇದಿಕೆಯಮೇಲೇರಿ, ತನ್ನ ಪ್ರಾಣವನ್ನು ಬಿಡಲು ಸಿದ್ಧನಾಗಿ ಅಗ್ನಿಮಧ್ಯದಲ್ಲಿ ಕುಳಿತನು ಕೈಗಳನ್ನು ಮೇಲಕ್ಕೆತ್ತಿ, ನಿಶ್ಚೇಷ್ಟನಾಗಿ ದೃಢಮನಸ್ಸಿನಿಂದ ತನ್ನ ಆತ್ಮವನ್ನೇ ಹವಿಸ್ಸಾಗಿ ಒಪ್ಪಿಸುತ್ತಿದ್ದ ಆತನಿಗೆ, ಷಡ್ಗುಣಪರಿಪೂರ್ಣನಾದ ಮಹಾದೇವನು ಪ್ರಸನ್ನನಾಗಿ ಕಾಣಿಸಿ ಮುಗುಳ್ನಗೆಯಿಂದ ಕುಮಾರಾ! 'ಸತ್ಕರ್ಮಿಯಾದ ಅರ್ಜುನನು ತಪಸ್ಸು, ನಿಯಮ, ತಾಳ್ಮೆ, ಭಕ್ತಿ, ಧೈರ್ಯ, ಇವುಗಳಿಂದ ಮನೋವಾಕ್ಕರ್ಮನಿಯಮಗಳಿಂದ ನನ್ನನ್ನು ಆರಾಧಿಸಿರುವನು ಆದುದರಿಂದ ಆ ಅರ್ಜುನನಿಗಿಂತಲೂ ನನಗೆ ಪ್ರಿಯನಾದವನು ಬೇರೊಬ್ಬನಿಲ್ಲ ನಿನ್ನನ್ನು ಪರೀಕ್ಷಿಸುವುದಕ್ಕಾಗಿ ಈಗ ನಾನು ಪಾಂಚಾಲರನ್ನು ರಕ್ಷಿಸಿದೆನು ಅನೇಕ ಮಾಯೆಗ

ಳನ್ನು ಉಂಟುಮಾಡಿದೆನು. ಆ ಪಾಂಚಾಲರನ್ನು ರಕ್ಷಿಸಿ ನಾನು ಆ ಅರ್ಜುನನಿಗೆ ಹಿತಕಾರ್ಯವನ್ನು ಮಾಡಿದೆನು. ಆದರೆ ಈಗ ಅವರೂ ಕಾಲವಶರಾಗಿರುವುದರಿಂದ, ಇನ್ನು ಅವರು ಉಳಿಯುವುದಿಲ್ಲ' ಎಂದು ಹೇಳಿ ತನ್ನ ನಿಜಾಂಶದಿಂದ ಅಶ್ವತ್ಥಾಮನ ದೇಹದಲ್ಲಿ ಪ್ರವೇಶಿಸಿದನು. ಆತನಿಗೆ ಹರಿತವಾದ ದಿವ್ಯ ಖಡ್ಗವೊಂದನ್ನು ಕೊಟ್ಟನು. ಒಡನೆಯೇ ಅಶ್ವತ್ಥಾಮನು ಮಹೋಗ್ರತೇಜಸ್ಸಿನಿಂದ ಜ್ವಲಿಸುತ್ತ, ಯುದ್ಧದಲ್ಲಿ ತೀವ್ರಾವೇಶವುಳ್ಳವನಾಗಿ, ಆ ಶಿಬಿರದ ನಾಲ್ಕು ಕಡೆಗಳಲ್ಲಿಯೂ ಸುತ್ತುತ್ತ ದೇವದೇವನಾದ ಸಾಕ್ಷಾನ್ಮಹೇಶ್ವರನಂತೆ ಕಾಣಿಸಿದನು. ಒಡನೆ ಆ ಭೂತಗಳೂ, ರಾಕ್ಷಸರೂ ಭಯದಿಂದೋಡಿದರು'

ಇದು ಏಳನೆಯ ಅಧ್ಯಾಯವು

ಅಶ್ವತ್ಥಾಮನು ಶಿಬಿರದ ಬಾಗಿಲಲ್ಲಿ ಕೃಪ ಕೃತವರ್ಮರನ್ನು ನಿಲ್ಲಿಸಿ, ಒಳಗೆ ಹೋಗಿ, ಧೃಷ್ಟದ್ಯುಮ್ನನನ್ನೂ, ದ್ರೌಪದೀಪುತ್ರರನ್ನೂ ಕೊಂದುದು. ಭಯದಿಂದ ಹೊರಗೆ ಓಡಿಬಂದವರನ್ನು ಕೃಪ ಕೃತವರ್ಮರು ಕೊಂದುದು.

ಆಗ ಧೃತರಾಷ್ಟ್ರನು 'ಸಂಜಯಾ! ದ್ರೋಣಪುತ್ರನು ಶಿಬಿರಕ್ಕೆ ಹೋದಾಗ ಕೃಪಕೃತವರ್ಮರು ಭಯದಿಂದ ಹಿಂತಿರುಗಲಿಲ್ಲವೆ? ಅವರನ್ನು ಕಾವಲುಗಾರರು ಕಂಡುಹಿಡಿಯಲಿಲ್ಲವೆ? ಅವರನ್ನು ಯಾರೂ ತಡೆಯದಿದ್ದರೂ, ಇದು ದುಸ್ಸಹಕಾರ್ಯವೆಂದೆಣಿಸಿ ಅವರು ಹಿಂತಿರುಗದಿದ್ದರೇ? ರಾತ್ರಿಯಲ್ಲಿ ಅವರು ಶಿಬಿರವನ್ನು ನಾಶಮಾಡಿ, ಸೋಮಕರನ್ನೂ, ಪಾಂಡವರನ್ನೂ ಕೊಂದು ತಮ್ಮ ಪ್ರತಿಜ್ಞೆಗಳನ್ನು ನೆರವೇರಿಸಿಕೊಂಡರಷ್ಟೆ? ಆ ದ್ರೋಣಪುತ್ರನು ದುರ್ಯೋಧನನ ಹಿತಕ್ಕಾಗಿ ಮಲಗಿದ್ದ ಧೃಷ್ಟದ್ಯುಮ್ನನನ್ನೂ, ಶಿಖಂಡಿಯನ್ನೂ, ದ್ರೌಪದೀಪುತ್ರರನ್ನೂ (ಇನ್ನೂ) ಇತರ ಪಾಂಡವಸೈನಿಕರನ್ನೂ ಕೊಂದನಷ್ಟೆ? ಅವರೆಲ್ಲರೂ ಸತ್ತರಷ್ಟೆ? ಪಾಂಚಾಲರ ರಕ್ತದಿಂದ ಆ ಭೂಪ್ರದೇಶವೆಲ್ಲ ಕವಿಯಲ್ಪಟ್ಟಿತೇನು? ಆ ವೃತ್ತಾಂತವನ್ನೆಲ್ಲ ನನಗೆ ತಿಳಿಸು' ಎಂದನು.

ಆಗ ಸಂಜಯನು 'ಮಹಾತ್ಮನಾದ ಆ ದ್ರೋಣಪುತ್ರನನ್ನು ಕೃಪ ಕೃತವರ್ಮರಿಬ್ಬರೂ ಹಿಂಬಾಲಿಸಿದರು. ಆಗ ಅಶ್ವತ್ಥಾಮನು ಸಂತೋಷ ದಿಂದ ಮೆಲ್ಲಗೆ ಅವರನ್ನು ನೋಡಿ, "ಪಾಂಡವರ ಕಡೆಯ ಕ್ಷತ್ರಿಯರೆಲ್ಲ ರನ್ನೂ ನಾಶಮಾಡಲು ನೀವಿಬ್ಬರೇ ಸಾಕು! ಹೀಗಿರುವಾಗ ಈಗ ಯುದ್ಧ ದಲ್ಲಿ ಸತ್ತುಳಿದ ಅಲ್ಪಸ್ವಲ್ಪ ಯೋಧರನ್ನು, ಅದರಲ್ಲಿಯೂ ಮಲಗಿದ್ದವ ರನ್ನು, ಕೊಲ್ಲುವುದೇನು ದೊಡ್ಡದು? ನಾನು ಬಿಡಾರದೊಳಗೆ ಪ್ರವೇಶಿಸಿ ಕಾಲನಂತೆ ಕೆಲಸಮಾಡುವೆನು ಆದರ, ಅಲ್ಲಿಂದ ಯಾವನೂ ಪ್ರಾಣಸಹಿ ತವಾಗಿ ತಪ್ಪಿಸಿಕೊಳ್ಳದಂತೆ ನೀವು ಬಾಗಿಲಲ್ಲಿ ನೋಡುತ್ತಿರಬೇಕು' ಎಂದ ನು ಆಮೇಲೆ ಆತನು ನಿರ್ಭಯವಾಗಿದ್ದ ಪಾರ್ಥನ ಬಿಡಾರವನ್ನು ಬೇರೆ ದಾರಿಯಿಂದ ಒಳಗೆ ಪ್ರವೇಶಿಸಿ, ಅಧಿಕ ಕೋಪಗೊಂಡು ತೇಜಸ್ಸಿನಿಂದ ಜ್ವಲಿಸುತ್ತ, ಅಲ್ಲಿ ಗಾಢನಿದ್ರೆಯಲ್ಲಿರುವ ಜನರೆಲ್ಲರನ್ನೂ ಸುತ್ತಿನೋಡಿದನು. ಮೆಲ್ಲಗೆ ಧೃಷ್ಟದ್ಯುಮ್ನನಿರುವ ಸ್ಥಳವನ್ನು ಗುರ್ತಿಸಿದನು. ಅವರೆಲ್ಲರೂ ಯುದ್ಧದಲ್ಲಿ ಮಹಾಸಾಹಸಕಾರ್ಯಗಳನ್ನು ಮಾಡಿ ದಣಿದು, ತಮ್ಮ ಸೇನಾ ವೀರರಿಂದ ಪರಿವೃತರಾಗಿ ಸುಖವಾಗಿ ಮಲಗಿದ್ದರು ಅಶ್ವತ್ಥಾಮನು ಧೃಷ್ಟದ್ಯುಮ್ನನ ಬಿಡಾರಕ್ಕೆ ನುಗ್ಗಿ ಸಮೀಪದಲ್ಲಿ ಮಲಗಿರುವ ಆತನನ್ನು ಕಂಡನು. ಆತನೋ ಬಿಳಿಯ ರೇಷ್ಮೆಯ ವಸ್ತ್ರಗಳನ್ನು ಹಾಸಿ, ಬಿಳು ಪಾದ, ದಿವ್ಯಶಯನದಮೇಲೆ ಮಲಗಿರುವನು ಆ ಹಾಸಿಗೆಯ ಸುತ್ತಲೂ ಗಂಧ, ಪುಷ್ಪ, ವಾಸನಾದ್ರವ್ಯಗಳನ್ನು ಸಿದ್ಧಪಡಿಸಿದ್ದರು ಅಂತಹ ಹಾಸಿಗೆಯಲ್ಲಿ ನೆಮ್ಮದಿಯಿಂದ ನಿರ್ಭಯವಾಗಿ ಮಲಗಿರುವ ಧೃಷ್ಟ ದ್ಯುಮ್ನನನ್ನು ಅಶ್ವತ್ಥಾಮನು ಮೊದಲು ಕಾಲಿಂದೊದೆದನು. ಅದರಿಂದ ಧೃಷ್ಟದ್ಯುಮ್ನನಿಗೆ ಎಚ್ಚರವಾಯಿತು ಆತನು ಕಣ್ಣು ತೆರೆದು ನೋಡಿ, ತನ್ನನ್ನೊದೆದವನು ದ್ರೋಣಪುತ್ರನೆಂದು ತಿಳಿದನು ಹಾಸಿಗೆಯಿಂದೇಳು ತ್ತಿರುವಾಗಲೇ ಅಶ್ವತ್ಥಾಮನು ಧೃಷ್ಟದ್ಯುಮ್ನನ ತಲೆಕೂದಲನ್ನು ಹಿಡಿದು ಆತನನ್ನು ಭೂಮಿಗೆ ಕೆಡಹಿದನು ಶತ್ರುವಶನಾಗಿ ನಿದ್ರೆಯ ಬಿಗುಡಿನ ಲ್ಲಿದ್ದ ಆ ಧೃಷ್ಟದ್ಯುಮ್ನನಿಗೆ ಕೈಯೇನೂ ಸಾಗಲಿಲ್ಲ ಕ್ರೂರಬುದ್ಧಿ ಯುಳ್ಳ ಅಶ್ವತ್ಥಾಮನು ಆ ಪಾಂಚಾಲರಾಜಕುಮಾರನನ್ನು ನೆಲದಮೇಲೆ ತಿಕ್ಕಿ, ವೇಗದಿಂದ ಬಿಲ್ಲಿನ ಹಗ್ಗವನ್ನು ಬಿಚ್ಚಿ, ಅದನ್ನು ಆತನ ಕತ್ತಿಗೆ

ಕಟ್ಟಿ ಬಿಗಿದು, ಕ್ರೋಧಾವೇಶದಿಂದ ಆತನನ್ನು ಹೊಡೆದನು. ಆಮೇಲೆ ಕಾಲಿನಿಂದ ಆತನ ಕೊರಲನ್ನೂ, ಎದೆಯನ್ನೂ, ಕಾಲುಗಳನ್ನೂ ತಿಕ್ಕಿ ತುಳಿಯುತ್ತ ಸಂಕಟದಿಂದ ಒದೆದಾಡುತ್ತಿರುವ ಆ ಧೃಷ್ಟದ್ಯುಮ್ನನನ್ನು ಆಡನ್ನು ಕೊಲ್ಲುವಂತೆ ಕೊಂದನು ಅಶ್ವತ್ಥಾಮನ ಬಲೋದ್ರೇಕದಿಂದ ಹತಪ್ರಾಯನಾದ ಆ ಧೃಷ್ಟದ್ಯುಮ್ನನು, ಆಗಲೂ ತನ್ನ ನಖಗಳಿಂದ ಅಶ್ವತ್ಥಾಮನನ್ನು ಪರಚುತ್ತ, ಅಪೂರ್ವವಾದೀ ವಾಕ್ಯಗಳನ್ನು ಹೇಳುವನು. 'ಓ ಆಚಾರ್ಯಪುತ್ರಾ! ಬೇಗನೆ ಶಸ್ತ್ರದಿಂದ ನನ್ನನ್ನು ಕೊಂದುಬಿಡು! ತಾಮಸಮಾಡಬೇಡ! ನಿನ್ನಿಂದ ನನಗೆ ಪುಣ್ಯಲೋಕವಾದರೂ ಪ್ರಾಪ್ತವಾಗಲಿ' ಎಂದು ಹೇಳಿ ಆಗಲೇ ಪ್ರಾಣಬಿಟ್ಟನು. ಸ್ವಭಾವಕ್ಕೆ ವಿರುದ್ಧವಾದ ಆತನ ಮಾತನ್ನು ಕೇಳಿ 'ಓ ಕುಲಗೇಡೀ! ಆಚಾರ್ಯರನ್ನು ಕೊಲ್ಲುವವರಿಗೆ ಪುಣ್ಯಲೋಕಗಳೂ ಉಂಟೇ? ದುಷ್ಟಾ! ಪಾಪಿಯಾದ ನೀನು ಶಸ್ತ್ರಗಳಿಂದ ಕೊಲ್ಲಲ್ಪಡತಕ್ಕವನಲ್ಲ. ಕ್ರೂರನೂ, ಮರ್ಯಾದೆಯನ್ನು ಮೀರಿದವನೂ ಆದ ನೀನು ನನ್ನ ತಂದೆಯನ್ನು ಕೊಂದೆಯಲ್ಲವೆ? ಅಂತಹ ಕ್ರೂರಕೃತ್ಯಗಳನ್ನು ಮಾಡಿದ ನೀನೂ ಕ್ರೂರಕೃತ್ಯದಿಂದಲೇ ಕೊಲ್ಲಲ್ಪಡಬೇಕು' ಎಂದನು ಹೀಗೆ ಹೇಳುತ್ತ ಕೋಪಗೊಂಡ ಸಿಂಹವು ಮದದಾನೆಯನ್ನು ಹೇಗೋ ಹಾಗೆ ಆತನ ಮರ್ಮಸ್ಥಾನಗಳನ್ನೊದೆದನು. ಶಯನಗೃಹದಲ್ಲಿ ಈ ಕೊಲೆಯಿಂದಾದ ಧ್ವನಿಯನ್ನು ಕೇಳಿ ಸ್ತ್ರೀಯರೂ, ಕಾವಲುಗಾರರೂ ಎಚ್ಚರಗೊಂಡರು. ಆ ನಡುರಾತ್ರಿ ಹೀಗೆ ಅಮಾನುಷಬಲದಿಂದ ಧೃಷ್ಟದ್ಯುಮ್ನನನ್ನು ಕೊಲ್ಲುತ್ತಿರುವ ಆ ಅಶ್ವತ್ಥಾಮನನ್ನು ಯಾವುದೋ ಮಹಾಭೂತವೆಂದೆಣಿಸಿ, ಅವರೆಲ್ಲರೂ ಭಯಪಟ್ಟು ಮೌನದಿಂದಿದ್ದರು ಹೀಗೆ ದ್ರೌಣಿಯು ಪಾಂಚಾಲರಾಜನನ್ನು ಯಮಲೋಕಕ್ಕೆ ಕಳುಹಿಸಿ, ಆ ಸ್ಥಳವನ್ನು ಬಿಟ್ಟು, ದಿಕ್ಕುಗಳನ್ನು ಮೊಳಗಿಸುವಂತೆ, ರಥವನ್ನು ವೇಗದಿಂದ ಬಿಟ್ಟುಕೊಂಡು ಇನ್ನೂ ಇತರರ ಬಿಡಾರಗಳನ್ನು ಹುಡುಕಿಕೊಂಡು ಬಂದನು. ಆಗ ಅವನನ್ನು ಕಂಡು, ಅಲ್ಲಿದ್ದ ಕಾವಲುಗಾರರೂ, ಸ್ತ್ರೀಯರೂ ಗಟ್ಟಿಯಾಗಿ ಕೂಗಿಕೊಂಡರು. ಧೃಷ್ಟದ್ಯುಮ್ನನು ಮೃತನಾದುದನ್ನು ಕಂಡು, ಆತನಕಡೆಯ ರಾಜರೆಲ್ಲರೂ ವ್ಯಸನದಿಂದ ಗೋಳಿಟ್ಟರು. ಸ್ತ್ರೀಯರ ರೋದನಧ್ವನಿಯನ್ನು

ಕೇಳಿ ಸವಿಾಪದಲ್ಲಿದ್ದ ಕ್ಷತ್ರಿಯಶ್ರೇಷ್ಠರೆಲ್ಲರೂ ಒಡನೆಯೇ ಯುದ್ಧಸನ್ನ ರಾಗಿ 'ಇದೇನು? ಇದೇನು?'' ಎಂದು ಕೇಳಿದರು. ಆ ಸ್ತ್ರೀಯರು ಅಶ್ವತ್ಥಾಮನನ್ನು ನೋಡಿ, ಅಧಿಕಭಯದಿಂದ 'ಓಡಿರಿ! ಬೇಗನೆ ಓಡಿರಿ! ಈತನು ರಾಕ್ಷಸನೋ ಮನುಷ್ಯನೋ ತಿಳಿಯೆವು. ಪಾಂಚಾಲರಾಜ ನನ್ನು ಕೊಂದು ರಕ್ತದಮೇಲೆ ನಿಂತಿರುವನು' ಎಂದು ಆರ್ತಧ್ವನಿಯಿಂದ ಹೇಳಿದರು ಆಮೇಲೆ ಆ ವೀರಶ್ರೇಷ್ಠರೆಲ್ಲರೂ ಆ ಅಶ್ವತ್ಥಾಮನ ಸುತ್ತ ಲೂ ಸುತ್ತಿಕೊಂಡರು. ಅಶ್ವತ್ಥಾಮನು ಅವರೆಲ್ಲರನ್ನೂ ರುದ್ರಾಸ್ತ್ರದಿಂದ ಸಂಹರಿಸಿದನು. ಹೀಗೆ ಧೃಷ್ಟದ್ಯುಮ್ನನನ್ನೂ, ಆತನಕಡೆಯ ವೀರ ರನ್ನೂ ಕೊಂದು, ಆಮೇಲೆ ಅವನ ಪಕ್ಕದ ಹಾಸಿಗೆಯಲ್ಲಿ ಉತ್ತಮೌಜಸ್ಸು ಮಲಗಿರುವುದನ್ನು ಕಂಡನು ದ್ರೋಣಪುತ್ರನು ತನ್ನ ಕಾಲಿನಿಂದ ಆತನ ಕಂಠವನ್ನೂ, ಎದೆಯನ್ನೂ ತುಳಿದು ಒದೆದಾಡುವ ಆ ಶೂರನ ನ್ನೂ ಕೊಂದುಬಿಟ್ಟನು ಆಗ ಯುಧಾಮನ್ಯುವು ಅಶ್ವತ್ಥಾಮನನ್ನು ರಾಕ್ಷ ಸನೆಂದೆಣಿಸಿ, ತನ್ನ ಗದೆಯನ್ನು ಆತನ ಎದೆಗೆ ಪ್ರಯೋಗಿಸಿದನು ಅಶ್ವ ತ್ಥಾಮನು ಅದನ್ನು ಸ್ವಲ್ಪವೂ ಲೆಕ್ಕಿಸದೆ ಆ ಯುಧಾಮನ್ಯುವನ್ನು ವೇಗ ದಿಂದಿದಿರಿಸಿ ನೆಲಕ್ಕೆ ತಳ್ಳಿ, ಆಡನ್ನು ಕೊಲ್ಲುವಂತೆ ಸುಲಭವಾಗಿ ಕೊಂದನು. ಆಮೇಲೆ ಅಲ್ಲಲ್ಲಿ ಮಲಗಿದ್ದ ಪಾಂಚಾಲವೀರರನ್ನೆಲ್ಲ ಹುಡುಕಿಹುಡುಕಿ, ಯಜ್ಞಪಶುಗಳನ್ನು ಹೇಗೋ ಹಾಗೆ ಆ ವೀರರೆಲ್ಲರನ್ನೂ ಕೊಂದನು. ಆಮೇಲೆ ಖಡ್ಗಯುದ್ಧದಲ್ಲಿ ಪ್ರವೀಣನಾದ ಆ ಅಶ್ವತ್ಥಾಮನು ಕತ್ತಿಯನ್ನು ಹಿಡಿದು, ಬೇರೆಬೇರೆ ವರಿಸೆಗಳಿಂದ ಗುಲ್ಮದಲ್ಲಿ ಮಲಗಿರುವ, ಮತ್ತು ಗುಲ್ಮಮಧ್ಯದಲ್ಲಿರುವ ನಿರಾಯುಧರನ್ನೂ, ಆಯುಧಪಾಣಿಗಳನ್ನೂ ಆ ಕತ್ತಿಯಿಂದಲೇ ಕಡಿದು ನಾಶಮಾಡಿದನು. ಯಮನಿಂದ ಪ್ರೇರಿಸಲ್ಪಟ್ಟ ಅಂತಕನಂತೆ ಆ ವೀರನು ತನ್ನ ಕತ್ತಿಯಿಂದ ಅನೇಕ ಯುದ್ಧಭಟರ ನ್ನೂ, ಕುದುರೆಗಳನ್ನೂ, ಆನೆಗಳನ್ನೂ ಕೊಂದನು ವೀರಭಟರಮೇಲೆ ಕತ್ತಿಯನ್ನೆತ್ತುವಾಗ, ಬೀಸುವಾಗ ಮತ್ತು ಹೊಡೆಯುವಾಗ ಮೂರು ವಿಧವಾಗಿ ಚೆಲ್ಲಿದ ಅವರ ರಕ್ತದಿಂದ ಆ ದ್ರೌಣಿಯ ದೇಹವೆಲ್ಲ ತೊ ಯ್ದುಹೋಯಿತು. ರಕ್ತದಿಂದ ತೊಯ್ದು ಕತ್ತಿಯನ್ನು ಹಿಡಿದು ಯುದ್ಧ ಮಾಡುವ ಆತನ ರೂಪವು ಅಮಾನುಷರೂಪದಂತೆ ಅತಿ ಭಯಂಕರ

ವಾಯಿತು. ಎಚ್ಚರವಾದಮೇಲೆ ಕೂಡ ಕೆಲವರಿಗೆ ಆಗಿನ ಶಬ್ದದಿಂದ ಬುದ್ಧಿಯು ತಬ್ಬಿಬ್ಬಾಯಿತು. ಅವರು ಕಣ್ಣು ತೆರೆದು ನೋಡುತ್ತ, ದ್ರೋಣಪುತ್ರನನ್ನು ಕಂಡು ತತ್ತಳಿಸಿದರು ಅಲ್ಲಿದ್ದ ಕ್ಷತ್ರಿಯರು ಅಶ್ವತ್ಥಾಮನ ರೂಪವನ್ನು ಕಂಡು ಅವನನ್ನು ಮಹಾರಾಕ್ಷಸನೆಂದೆಣಿಸಿ ಕಣ್ಣುಗಳನ್ನು ಮುಚ್ಚಿಕೊಂಡರು ಘೋರರೂಪಿಯಾದ ಅಶ್ವತ್ಥಾಮನು ಆ ಶಿಬಿರದಲ್ಲಿ ಯಮನಂತೆ ಸಂಚರಿಸುತ್ತ, ಅಲ್ಲಿ ಮಲಗಿದ್ದ ದ್ರೌಪದೀಪುತ್ರರನ್ನೂ, ಉಳಿದ ಸೋಮಕರನ್ನೂ ಕಂಡನು. ಅವನ ಆರ್ಭಟದಿಂದ ಭಯಪಟ್ಟು ಮೇಲೆದ್ದ ದ್ರೌಪದೀಪುತ್ರರು ಧೃಷ್ಟದ್ಯುಮ್ನನ ಮರಣವೃತ್ತಾಂತವನ್ನು ಕೇಳಿದೊಡನೆ, ಕೈಯಲ್ಲಿ ಬಿಲ್ಲನ್ನು ಹಿಡಿದು, ಅಶ್ವತ್ಥಾಮನ ಮೇಲೆ ಬಾಣಗಳನ್ನು ಪ್ರಯೋಗಿಸಿದರು ಈ ಗದ್ದಲದಿಂದ ಎಚ್ಚರಗೊಂಡ ಪ್ರಭದ್ರಕರೂ, ಶಿಖಂಡಿಯೂ ದ್ರೋಣಪುತ್ರನಮೇಲೆ ಬಾಣಗಳನ್ನು ಪ್ರಯೋಗಿಸುತ್ತ ಬಂದರು ಅಶ್ವತ್ಥಾಮನು ತನ್ನಮೇಲೆ ಶರವರ್ಷಗಳನ್ನು ಸುರಿಸುವ ಆ ಮಹಾರಥರನ್ನೆಲ್ಲ ಕೊಲ್ಲುವ ಆವೇಶದಿಂದ, ಗಟ್ಟಿಯಾಗಿ ಸಿಂಹನಾದಮಾಡಿ ತನ್ನ ತಂದೆಯ ವಧವನ್ನು ನೆನೆಸಿಕೊಂಡು ರಥದಿಂದಿಳಿದು ಅವರಿಗಿದಿರಾದನು ಅವನು ಕತ್ತಿ ಗುರಾಣಿಗಳನ್ನು ಹಿಡಿದು, ದ್ರೌಪದೀಪುತ್ರರನ್ನೆಲ್ಲ ಕಡಿಯುವುದಕ್ಕೆ ಆರಂಭಿಸಿ, ಮೊದಲು ಪ್ರತಿವಿಂಧ್ಯನ ಹೊಟ್ಟೆಯನ್ನು ಸೀಳಿದನು ಆತನು ಸತ್ತುಬಿದ್ದೊಡನೆ ಸುತಸೋಮನು ಖಡ್ಗಧಾರಿಯಾಗಿ ಆತನ ಸಮೀಪಕ್ಕೆ ಬಂದನು ಆಗ ಅಶ್ವತ್ಥಾಮನು, ಕತ್ತಿಯನ್ನು ಹಿಡಿದಿದ್ದಂತೆಯೇ ಸುತಸೋಮನ ಕೈಯನ್ನು ಕತ್ತರಿಸಿ, ಆತನ ಎದೆಯಮೇಲೆ ಪ್ರಹರಿಸಿದನು ಆತನೂ ಎದೆಯೊಡೆದು ಕೆಳಗೆ ಬಿದ್ದನು ಆಮೇಲೆ ನಕುಲಪುತ್ರನಾದ ಶತಾನೀಕನು ಎರಡು ಕೈಗಳಿಂದಲೂ ರಥಚಕ್ರವನ್ನೆತ್ತಿ ವೇಗದಿಂದ ಅಶ್ವತ್ಥಾಮನ ಎದೆಯಮೇಲೆ ಪ್ರಯೋಗಿಸಿದನು.' ಆಗ ದ್ರೌಣಿಯು ಶತಾನೀಕನನ್ನು ಹೊಡೆದನು. ಅವನೂ ಪ್ರಜ್ಞೆತಪ್ಪಿ ನೆಲದಮೇಲೆ ಬಿದ್ದಿದ್ದಾಗ, ಅಶ್ವತ್ಥಾಮನು ಆತನ ತಲೆಯನ್ನು ಕತ್ತರಿಸಿದನು ಶ್ರುತಕರ್ಮನು ಅಜೇಯವೂ, ಘೋರವೂ ಆದ ಪರಿಘವನ್ನು ದ್ರೋಣಪುತ್ರನಮೇಲೆ ಬೀಸಿದನು. ಆಗ ಅಶ್ವತ್ಥಾಮನು ಶ್ರುತಕರ್ಮನನ್ನು ತನ್ನ ಖಡ್ಗದಿಂದ ಮುಖಭಾಗ

ದಲ್ಲಿ ಕಡಿದನು. ಆ ಶ್ರುತಕರ್ಮನು ತಲೆಮುರಿದು, ವಿಕೃತಾಕಾರದಿಂದ ಬಿದ್ದುಬಿಟ್ಟನು. ಆಮೇಲೆ ಶ್ರುತಕೀರ್ತಿಗೆ ಎಚ್ಚರವಾಗಲು, ಅವನು ಅಶ್ವತ್ಥಾಮನಮೇಲೆ ಬಾಣವರ್ಷಗಳನ್ನು ಸುರಿಸಿದನು. ಆ ಬಾಣಗಳಿಂದ ನಾಟದ ಮೈಯುಳ್ಳ ದ್ರೋಣಪುತ್ರನು ಮುಳ್ಳುಹಂದಿಯಂತೆ ಕಾಣುತ್ತ, ತನ್ನ ಗುರಾಣಿಯಿಂದ ಆ ಅಸ್ತ್ರಗಳನ್ನು ತಡೆದುದಲ್ಲದೆ, ಕುಂಡಲಾಲಂಕೃತವಾದ ಆ ಶ್ರುತಕೀರ್ತಿಯ ತಲೆಯನ್ನು ಶರೀರದಿಂದ ಪ್ರತ್ಯೇಕಿಸಿದನು. ಆಮೇಲೆ ಆತನು, ಶಿಖಂಡಿಯನ್ನೂ, ಎಲ್ಲಾ ಪ್ರಭದ್ರಕರನ್ನೂ ವಿವಿಧಾಯುಧಗಳಿಂದ ಹೊಡೆದನು ಆಗ ಶಿಖಂಡಿಯೂ ಕೂಡ ಅಶ್ವತ್ಥಾಮನ ಭ್ರೂಮಧ್ಯಕ್ಕೆ ಬಾಣವನ್ನು ಪ್ರಯೋಗಿಸಲು, ಅಶ್ವತ್ಥಾಮನು ಮಹಾವೇಗದಿಂದ ಶಿಖಂಡಿಯ ಸಮೀಪಕ್ಕೆ ಬಂದು, ಕತ್ತಿಯಿಂದ ಅವನನ್ನು ಎರಡು ತುಂಡಾಗಿ ಕತ್ತರಿಸಿಬಿಟ್ಟನು ಆಮೇಲೆ ಪ್ರಭದ್ರಕ ಗಣಗಳನ್ನೆಲ್ಲ ಹೊಡೆದನು ಸತ್ತುಳಿದಿದ್ದ ವಿರಾಟಸೈನ್ಯಗಳನ್ನೂ, ದ್ರುಪದನ ಪುತ್ರಪೌತ್ರರು, ನಂಟರು, ಸೈನಿಕರು ಮುಂತಾದವರನ್ನೂ, ತನ್ನ ಭಯದಿಂದೋಡುತ್ತಿದ್ದವರನ್ನೂ, ಇದಿರಾಗಿ ಬಂದವರನ್ನೂ ಕಂಡಕಂಡಲ್ಲಿ ಕತ್ತಿಯಿಂದ ಕಡಿಯುತ್ತಬಂದನು ಆ ಶಿಬಿರದಲ್ಲಿದ್ದವರಿಗೆಲ್ಲ ಆಗ ತಮ್ಮ ಕಣ್ಣಮುಂದೆ, ಕಪ್ಪಾದ ಮೈ! ಕೆಂಪಾದ ಕಣ್ಣು ಬಾಯಿಗಳು! ಕೆಂಪಾದ ಹೂಮಾಲೆ! ಕೆಂಪು ಗಂಧ, ಇವುಗಳಿಂದ ಭಯಂಕರಸ್ವರೂಪಗಳಾಗಿ, ಪಾಶವನ್ನು ಕೈಯಲ್ಲಿ ಹಿಡಿದು ಅನೇಕ ಪರಿವಾರಗಳೊಡಗೂಡಿ ಹಸನ್ಮುಖದಿಂದ ನಿಂತಿರುವ ಕಾಳರಾತ್ರಿಯೇ ಕಣ್ಣಿಗೆ ಗೋಚರಿಸಿದಂತಾಯಿತು. ಮೊದಲಿಂದಲೇ ಅವರು ಮನುಷ್ಯರನ್ನೂ, ಆನೆಗಳನ್ನೂ, ಕುದುರೆಗಳನ್ನೂ ಪಾಶಗಳಿಂದ ಬಿಗಿಯುವ ಮತ್ತು ಆಯುಧಗಳನ್ನು ಕೆಳಗಿಟ್ಟವರು, ಮಲಗಿರುವವರು, ಮುಂತಾದವರನ್ನು ಕೊಲ್ಲುತ್ತಿರುವ ಕಾಳರಾತ್ರಿಯನ್ನೂ ತಮ್ಮನ್ನು ಕೊಲೆಮಾಡುವ ದ್ರೋಣಪುತ್ರನನ್ನೂ ನಿತ್ಯವೂ ಕನಸಿನಲ್ಲಿ ಕಾಣುತ್ತಿದ್ದರು ಕೌರವ ಪಾಂಡವರಿಬ್ಬರಿಗೂ ಯುದ್ಧಾರಂಭವಾದ ದಿನದಿಂದಲೇ (ಸ್ವಪ್ನದಲ್ಲಿ) ಆ ಕಾಳರಾತ್ರಿಯ ಮತ್ತು ಅಶ್ವತ್ಥಾಮನ ಘೋರರೂಪಗಳು ಕಾಣುತಿದ್ದುವು. ಅಶ್ವತ್ಥಾಮನು, ಸರ್ವಭೂತಭಯಂಕರವಾದ ಶಬ್ದಗಳನ್ನು ತೋರ್ಪಡಿಸುತ್ತ ಮೊದಲೇ ವಿಧಿವಶದಿಂದ ಬಾಧಿತರಾದ ಆ

ಯುದ್ಧವೀರರನ್ನೆಲ್ಲ ಕೊಂದು ಕೆಡಹಿದನು. ಆ ಯುದ್ಧವೀರರೂ ಆಗ ತಾವು ಹಿಂದೆ ಕಂಡ ಸ್ವಪ್ನಗಳನ್ನು ನೆನೆಸಿಕೊಂಡು, 'ಅಹಾ! ಇದೇ ಅದು!' ಎಂದೆಣಿಸಿದರು. ಆಮೇಲೆ ಈ ಗದ್ದಲದಿಂದ ಪಾಂಡವರ ಬಿಡಾರದಲ್ಲಿದ್ದ ಧನುರ್ಧಾರಿಗಳು ನೂರುಸಾವಿರ ಲೆಕ್ಕದಿಂದ ಮುಂದೆ ಬಿದ್ದು ಅಶ್ವತ್ಥಾಮನ ಕೈಗೆ ಸಿಕ್ಕಿ ಸಾಯುತ್ತಿದ್ದರು. ಅಶ್ವತ್ಥಾಮನು ಅವರ ಕಣ್ಣಿಗೆ ಯಮನಂತೆ ಕಾಣಿಸುತ್ತ ಕೆಲವರ ಕಾಲನ್ನು ಕತ್ತರಿಸಿದನು! ಕೆಲವರ ಸೊಂಟವನ್ನು ಮುರಿದನು! ಕೆಲವರಿಗೆ ಅಳ್ಳೆಗಳನ್ನು ನೆಗ್ಗಿದನು. ಅತಿ ಘೋರವಾಗಿ ಕಡಿಯಲ್ಪಟ್ಟು ಭಯದಿಂದೋಡುವ ಆನೆ ಕುದುರೆಗಳಿಂದ ನೆಗ್ಗಲ್ಪಟ್ಟ ಹಲವರ ದೇಹಗಳಿಂದ ಆ ಪ್ರದೇಶವೆಲ್ಲ ತುಂಬಿತು. ಆಗ ಅಲ್ಲಲ್ಲಿ "ಅಹಾ! ಏನಿದು? ಇವನು ಯಾವನು? ಈ ಗದ್ದಲವೇನು? ಇದೆಂತದು? ಅವನು ಮಾಡಿದುದೇನು?" ಎಂದು ತಬ್ಬಿಬ್ಬಾಗಿ ತತ್ತಳಿಸುತಿದ್ದ ಪಾಂಚಾಲರಿಗೆ ಅಶ್ವತ್ಥಾಮನು ಪ್ರತ್ಯಕ್ಷ ಯಮನಂತೆಯೇ ತೋರಿದನು. ಅಶ್ವತ್ಥಾಮನು ಯುದ್ಧಧರ್ಮವನ್ನರಿತವನಾಗಿದ್ದರೂ, ನಿರಾಯುಧರೆಂದೂ, ಆಯುಧಪಾಣಿಗಳೆಂದೂ, ಎಚ್ಚರತಪ್ಪಿದವರೆಂದೂ, ಯುದ್ಧಸನ್ನದ್ಧರೆಂದೂ ನೋಡದೆ, ಪಾಂಡವ ಸೃಂಜಯವೀರರನ್ನೆಲ್ಲ ಮೃತ್ಯುಲೋಕಕ್ಕೆ ಕಳುಹಿಸಿದನು. ಈ ಕೊಲೆಯನ್ನು ನೋಡಿ ಭಯಪಟ್ಟು, ಅನೇಕರು ನಿದ್ರೆಯಿಂದೆಚ್ಚರಗೊಂಡರೂ, ಹಿಂದು ಮುಂದು ತೋರದೆ, ನಿದ್ರೆಗಣ್ಣಿನಿಂದ ಅವನಿಗಿದಿರಾಗಿಯೇ ಬಂದು ಅಲ್ಲಲ್ಲಿ ಮೂರ್ಛೆಬೀಳುತಿದ್ದರು. ಅನೇಕರಿಗೆ ಓಡಿಹೋಗುವುದಕ್ಕೂ ಕಾಲುಬಾರದಂತೆ ತೊಡೆ ನಡುಗುತ್ತ, ಮೂರ್ಛಿತರಾಗಿ 'ಹೋ' ಎಂದು ಅರಚಿಕೊಂಡು ಭಯದಿಂದ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಭಯಂಕರಾಕಾರವುಳ್ಳ ದ್ರೌಣಿಯು ತಿರುಗಿ ಬಿಲ್ಲನ್ನು ಹಿಡಿದು, ರಥವನ್ನೇರಿ, ಬಾಣಗಳಿಂದ ಕಂಡಕಂಡವರನ್ನೆಲ್ಲ ಯಮಲೋಕಕ್ಕೆ ಕಳುಹಿಸಿದನು. ದೂರದಲ್ಲಿ ತನಗಿದಿರಾಗಿ ಬರುತ್ತಿರುವ ವೀರರನ್ನೂ, ತನ್ನನ್ನಿದಿರಿಸಿ ನಿಂತ ಶೂರರನ್ನೂ ಆ ಕಾಳರಾತ್ರಿಗೆ ಬಲಿಕೊಟ್ಟನು. ತನ್ನ ರಥವೇಗದಿಂದಲೇ ಅನೇಕರನ್ನು ನಾಶಮಾಡಿದನು. ಎಡೆಬಿಡದೆ ಬಾಣವರ್ಷಗಳನ್ನು ಸುರಿಸಿದನು. ತಿರುಗಿ ಕತ್ತಿಗುರಾಣಿಗಳನ್ನು ಕೈಗೆತ್ತಿಕೊಂಡು, ಆನೆಯು ದೊಡ್ಡ ಮಡುವನ್ನು ಕಲಕುವಂತೆ ಪಾಂಡವಶಿಬಿರವನ್ನೆಲ್ಲ ಕಲಗಿಸಿಬಿಟ್ಟನು. ನಿದ್ರೆ

ಯಿಂದ ಮೈಮರೆತಿದ್ದ ಯುದ್ಧವೀರರೆಲ್ಲ ಭಯದಿಂದ ಎಚ್ಚರಗೊಂಡು ಸಿಕ್ಕಿದಕಡೆಗೆ ಓಡುತ್ತಿದ್ದರು. ಕೆಲವರು ವಿಕಾರಧ್ವನಿಯಿಂದ ಕೂಗಿಟ್ಟರು. ಅಸಂಬದ್ಧವಾದ ಮಾತುಗಳನ್ನಾಡಿದರು ವಸ್ತ್ರಹೀನರಾಗಿ ಮುಂದೆ ಬಂದು ನಿಂತರು. ಹಲವರು ಬಿಚ್ಚಿದ ತಲೆಕೂದಲುಗಳುಳ್ಳವರಾಗಿ, ಒಬ್ಬರನ್ನೊಬ್ಬರು ಗುರ್ತಿಸಲಾರದೆ ಹೋದರು ಕೆಲವರು ಮೇಲೆಹಾರಿ ಕೆಳಗೆ ಬಿದ್ದರು. ಕೆಲವರು ದಿಗ್ಭ್ರಾಂತರಾಗಿ ನಿಂತಿದ್ದರು. ಕೆಲವರು ಭಯದಿಂದ ಮಲಮೂತ್ರಗಳನ್ನು ಸುರಿಸಿದರು. ಆನೆ ಕುದುರೆಗಳು ಕಟ್ಟುಗಳನ್ನು ಕಿತ್ತುಕೊಂಡು, ಗುಂಪುಗುಂಪಾಗಿ ಓಡುತ್ತ, ಆ ಶಿಬಿರವನ್ನು ಮತ್ತಷ್ಟು ಕಲಗಿಸಿದುವು. ಕೆಲವರು ಭಯದಿಂದ ನೆಲದಲ್ಲಿ ಹುದುಗಿದರು. ಕೆಳಗೆ ಬಿದ್ದವರು ಆನೆಕುದುರೆಗಳ ಕಾಲಿಗೆ ಸಿಕ್ಕಿ ನಜ್ಜುಗುಜ್ಜಾದರು. ಈ ಸ್ಥಿತಿಯನ್ನು ನೋಡಿ ಭೂತ ರಾಕ್ಷಸ ಪಿಶಾಚಾದಿಗಳೆಲ್ಲ ಸಂತೋಷದಿಂದ ಗರ್ಜಿಸಿದುವು ಆ ಗರ್ಜನೆಯ ಧ್ವನಿಯು ಎಲ್ಲಾ ದಿಕ್ಕುಗಳನ್ನೂ, ಆಕಾಶವನ್ನೂ ತುಂಬಿತು ಜನರ ದೀನಸ್ವರವನ್ನು ಕೇಳಿ ಆನೆಗಳೂ, ಕುದುರೆಗಳೂ ಬೆದರಿ, ಕಡಿವಾಣಗಳನ್ನು ಕಿತ್ತುಕೊಂಡು ದಿಕ್ಕುಪಾಲಾಗಿ ಓಡಿದುವು. ಆ ಆನೆ ಕುದುರೆಗಳ ಕಾಲಿಂದೆದ್ದ ಧೂಳಿಯು ಮೊದಲೇ ಕತ್ತಲೆ ಕವಿದಿದ್ದ ಆ ಶಿಬಿರದಲ್ಲಿ ದ್ವಿಗುಣವಾದ ಕತ್ತಲೆಯನ್ನುಂಟುಮಾಡಿತು. ಆ ಕತ್ತಲೆಯಲ್ಲಿ ಜನರೆಲ್ಲ ಬುದ್ಧಿಭ್ರಮೆಗೊಂಡರು. ತಂದೆಯು ಮಕ್ಕಳನ್ನೂ, ಸಹೋದರರು ಸಹೋದರರನ್ನೂ ತಿಳಿಯಲಾರದೆಹೋದರು. ಓ ರಾಜಾ! ಆನೆಗಳು ಆನೆಗಳನ್ನು ಮೆಟ್ಟಿದುವು ಕುದುರೆಗಳು ಕುದುರೆಗಳಮೇಲೆ ಹಾರಿದುವು. ಅನೇಕ ಜನರನ್ನು ತುಳಿದು ಪುಡಿಮಾಡಿದುವು. ಒಂದಕ್ಕೊಂದು ಹೋರಾಡುತ್ತಲೂ, ಜನರನ್ನು ತುಳಿಯುತ್ತಲೂ, ಕೊನೆಗೆ ತಾವೂ ಸತ್ತು ಬೀಳುತ್ತಿದ್ದುವು ಆನೆಗಳು ಆನೆಗಳನ್ನೂ, ಕುದುರೆಗಳು ಕುದುರೆಗಳನ್ನೂ, ಕೆಳಕ್ಕೆ ತಳ್ಳಿ, ಕಾಲಿಂದ ತಿಕ್ಕಿ ಕೊಂದುವು. ಆಗಿನ ಕತ್ತಲೆಯಲ್ಲಿ ಅನೇಕರು ಕಾಲವಶರಾಗಿ, ತಮ್ಮ ಕಡೆಯವರನ್ನು ತಾವೇ ಕೊಲ್ಲುತ್ತಿದ್ದರು. ಬಾಗಿಲನ್ನು ಕಾಯುವವರೂ, ಗುಲ್ಮರಕ್ಷಕರೂ ತಮ್ಮ ರಕ್ಷಾಸ್ಥಾನವನ್ನು ಬಿಟ್ಟು ವಿವೇಕಶೂನ್ಯರಾಗಿ ಭಯದಿಂದ ಓಡುತಿದ್ದರು. ಹೀಗೆ ಓಡುವಾಗ ಪ್ರಜ್ಞಾಶೂನ್ಯರಾಗಿ, ಒಬ್ಬರನ್ನೊಬ್ಬರು ಗುರ್ತಿಸಲಾರದೆ ಸಿಕ್ಕಿದವರನ್ನೆಲ್ಲ

ಅಪ್ಪಾ! ಮಗೂ!' ಎಂದು ಕರೆಯುತಿದ್ದರು. ತಮ್ಮ ಸ್ವಬಂಧುಗಳನ್ನೂ ಬಿಟ್ಟು ಓಡುತ್ತಿರುವ ಆ ವೀರರು, ಒಬ್ಬರಿಗೊಬ್ಬರು ಹೆಸರು ಗೋತ್ರಗಳನ್ನು ಹಿಡಿದು ಕೂಗಿಡುತ್ತಿದ್ದರು. ಕೆಲವರು 'ಹಾ! ಹಾ!' ಎಂದು ಕೂಗುತ್ತ ಭೂಮಿಯಲ್ಲಿ ಮಲಗಿದರು. ಆಗಲೂ ಬಿಡದೆ ದ್ರೋಣಪುತ್ರನು ಅವರನ್ನು ಗುರ್ತಿಸಿ ಹೊಡೆದು ಕೊಂದನು. ಆ ಕೊಲೆಯನ್ನು ಸಹಿಸಲಾರದೆ ಕ್ಷತ್ರಿಯರು ಭಯಪೀಡಿತರಾಗಿ, ಶಿಬಿರದಿಂದ ಹೊರಕ್ಕೋಡಿಬಂದಾಗ, ಬಾಗಿಲಲ್ಲಿ ಕಾದಿದ್ದ ಕೃಪಕೃತವರ್ಮರಿಬ್ಬರೂ ಅವರನ್ನು ಬಾಗಿಲಲ್ಲಿಯೇ ಕೊಲ್ಲುತಿದ್ದರು ಕವಚಗಳ ಕೊಕ್ಕೆಗಳು ಸಡಿಲಿ, ತಲೆಕೂದಲು ಬಿಚ್ಚಿಹೋಗಿ, ಭಯದಿಂದ ಬದ್ಧಾಂಜಲಿಗಳಾಗಿ ಭೂಮಿಯಲ್ಲಿ ಬಿದ್ದು ನಮಸ್ಕರಿಸಿದಾಗಲೂ, ಕೃಪ ಕೃತವರ್ಮರು ಶಿಬಿರದಿಂದ ಹೊರಟವನೊಬ್ಬನನ್ನಾದರೂ ಬಿಡಲಿಲ್ಲ. ಅವರಿಬ್ಬರೂ ಅಶ್ವತ್ಥಾಮನಿಗೆ ಹಿತವನ್ನು ಮಾಡುವ ಉದ್ದೇಶದಿಂದ ಬಿಡಾರಕ್ಕೆ ಮೂರು ಸ್ಥಳಗಳಲ್ಲಿ ಬೆಂಕಿಯಿಟ್ಟರು ಆ ಅಶ್ವತ್ಥಾಮನೂ ಉರಿಯುತ್ತಿರುವ ಆ ಬಿಡಾರದಲ್ಲಿ ಕತ್ತಿಯನ್ನು ಲಾಘವದಿಂದ ತಿರುಗಿಸುತ್ತ ತನ್ನ ತಂದೆಯ ತೃಪ್ತಿಗಾಗಿ ಅಲ್ಲಲ್ಲಿ ತನ್ನಿದಿರಾಗಿ ಬರುವ ವೀರರನ್ನೂ, ಭಯದಿಂದೋಡುವವರನ್ನೂ ಕತ್ತಿಯಿಂದ ಕೊಲ್ಲುತ್ತಿದ್ದನು ಕೆಲವರನ್ನು ಎಳ್ಳುಕಡ್ಡಿಯನ್ನು ಕಡಿಯುವಂತೆ ಕಡಿದು ಚೂರ್ಣಮಾಡಿದನು ಅಲ್ಲಲ್ಲಿ ಕೂಗಿಡುವವರು ಕೆಡವರು! ಪ್ರಯತ್ನದಿಂದ ಹೆಣಗಾಡುವರು ಕೆಲವರು! ಕೆಳಗೆ ಬಿದ್ದವರು ಕೆಲವರು! ಸಾವಿರಾರು ಲೆಕ್ಕದಿಂದ ತಲೆಯಿಲ್ಲದ ಮುಂಡಗಳು ಎದ್ದೆದ್ದು ಕುಣಿದಾಡಿ ಕೆಳಗೆ ಬಿಳುವುವು ಆಗಲೂ ಬಿಡದೆ ಅಶ್ವತ್ಥಾಮನು, ಆಯುಧಗಳನ್ನು ಹಿಡಿದು, ತೋಳ್ಬಳಿಗಳನ್ನು ತೊಟ್ಟ ಆ ಕೈಗಳನ್ನೂ, ತೊಡೆಗಳನ್ನೂ, ಕಾಲುಗಳನ್ನೂ ಕತ್ತರಿಸುತ್ತ ಬಂದನು ಕೆಲವರಿಗೆ ಬೆನ್ನು ಮುರಿಯಿತು. ಕೆಲವರಿಗೆ ಪಕ್ಕೆಗಳು ನೆಗ್ಗಿದುವು. ಕೆಲವರ ತಲೆ ಬಿದ್ದುಹೋಯಿತು ಹಲವರು ಬೆನ್ನು ತೋರಿಸುತ್ತ ಓಡಿದರು. ಕೆಲವರ ಸೊಂಟವು ಮುರಿಯಿತು ಕೆಲವರಿಗೆ ಕಿವಿಯು ಹರಿಯಿತು. ಅಶ್ವತ್ಥಾಮನು ಕೆಲವರ ತೋಳುಗಳನ್ನು ಮುರಿದನು ಕೆಲವರ ತಲೆಗಳನ್ನು ದೇಹದೊಳಗೆ ಅದುಮಿಬಿಟ್ಟನು. ಹೀಗೆ ಅವನು, ನಾನಾಬಗೆಯ ಶಸ್ತ್ರಗಳಿಂದ ಕೊಲೆಮಾಡುತ್ತಿ

ದ್ದಾಗ ಮೊದಲೇ ಕಗ್ಗತ್ತಲೆಕವಿದ ಆ ರಾತ್ರಿಯು ಇನ್ನೂ ಭಯಂಕರ ವಾಗಿ ತೋರಿತು. ಭೂಮಿಯು ಅರ್ಧಪ್ರಾಣದಿಂದ ಒದರಾಡುತ್ತಿರುವ ಮನುಷ್ಯರಿಂದಲೂ, ನೂರುಸಾವಿರ ಲೆಕ್ಕದಲ್ಲಿ ಕೊಲ್ಲಲ್ಪಟ್ಟ ಆನೆ ಕುದು ರೆಗಳಿಂದಲೂ ಭಯಂಕರವಾಗಿ ತೋರಿತು ಯಕ್ಷ ರಾಕ್ಷಸರಿಂದಲೂ, ಮುರಿದ ರಥ ಗಜ ತುರಗಗಳಿಂದಲೂ, ಭಯಂಕರವಾದ ಆ ಯುದ್ಧಭೂಮಿ ಯಲ್ಲಿ, ದ್ರೋಣಪುತ್ರನಿಂದ ಸಂಹೃತವಾದ ಅನೇಕ ಪ್ರಾಣಿಗಳು ಉರುಳಿ ಬೀಳುತ್ತಲೇ ಇದ್ದುವು. ಅನೇಕರು ಅಲ್ಲಲ್ಲಿ ಭಯಾರ್ತರಾಗಿ ತಮ್ಮ ಸಹೋ ದರರನ್ನೂ, ಪಿತರನ್ನೂ, ಪುತ್ರರನ್ನೂ ಕೂಗಿಕೊಂಡರು ಇನ್ನು ಕೆಲವರು ಅಲ್ಲಲ್ಲಿ ತಮ್ಮೊಳಗೆ 'ಅಯ್ಯೋ! ಮಲಗಿದ್ದ ನಮ್ಮ ವಿಷಯದಲ್ಲಿ ಈ ಕ್ರೂರ ರಾಕ್ಷಸಕೃತ್ಯಗಳನ್ನು ಕೌರವರು ಕೂಡ ಮಾಡಲಿಲ್ಲವಲ್ಲಾ! ಪಾಂಡವರು ಸಮೀಪದಲ್ಲಿಲ್ಲದುದರಿಂದಲ್ಲವೇ ಈಗ ನಮಗೆ ಇಂತಹ ವಿಪತ್ತು ಸಂಭವಿ ಸಿತು?' ಕೃಷ್ಣನನ್ನು ಸಾರಥಿಯಾಗಿ ಉಳ್ಳ ಆ ಅರ್ಜುನನನ್ನು ಅಸುರರಾ ಗಲಿ, ಗಂಧರ್ವರಾಗಲಿ, ಯಕ್ಷರಾಕ್ಷಸರಾಗಲಿ ಕೊಲ್ಲಬಲ್ಲರೆ? ಆ ಅರ್ಜು ನನು ಬ್ರಾಹ್ಮಣಪ್ರಿಯನು ಸತ್ಯಸಂಧನು! ಶಾಂತನು! ದಯಾಳು! ಹೀಗೆ ಮಲಗಿದ್ದವರನ್ನೂ, ಎಚ್ಚರತಪ್ಪಿದವರನ್ನೂ, ಭಯದಿಂದೋಡು ವವನನ್ನೂ, ತಲೆಕೂದಲು ಬಿಚ್ಚಿಕೊಂಡಿರುವವನನ್ನೂ ಎಂದಿಗೂ ಅವನು ಕೊಲ್ಲುವುದಿಲ್ಲ ಕ್ರೂರಕರ್ಮಿಗಳಾದ ಯಾರೋ ರಾಕ್ಷಸರು ನಮ್ಮ ವಿಷಯ ದಲ್ಲಿ ಈ ಘೋರಕಾರ್ಯವನ್ನು ಮಾಡಿದರಲ್ಲಾ?' ಎಂದು ಅಡಿಗಡಿಗೆ ಪ್ರಲಪಿ ಸುತ್ತ ಭಯದಿಂದ ಹಾಗೆಯೇ ಮಲಗಿದ್ದರು. ಈ ವಿಲಾಪಗಳು ಪ್ರಬಲವಾಗಿ ಒಂದು ಮುಹೂರ್ತಕಾಲವಿದ್ದು ಅಡಗಿದುವು ನೆಲದಿಂದೆದ್ದ ಧೂಳಿಯು ರಕ್ತ ಪ್ರವಾಹದಿಂದ ಶಾಂತವಾದಮೇಲೆಯೂ ಅಶ್ವತ್ಥಾಮನು ಶಾಂತನಾಗದೆ, ಭಯದಿಂದ ನಡುಗುತ್ತಿರುವ ಅನೇಕರನ್ನು ಹಿಡಿದು ಪಶುಗಳನ್ನು ಕಡಿಯು ವಂತೆ ಕೊಲ್ಲುತಿದ್ದನು ಹಿಂದುಮುಂದು ನೋಡದೆ, ಅಲ್ಲಿ ಅವನು ಅನ್ಯೋ ನ್ಯಾಲಿಂಗನದಿಂದ ಮಲಗಿದ್ದವರನ್ನೂ, ಅವಿತುಕೊಂಡವರನ್ನೂ, ಯುದ್ಧ ಮಾಡುವವರನ್ನೂ ಹಿಡಿದು ಕೊಂದನು. ಬೆಂಕಿಯುರಿಯಿಂದಲೂ, ಅಶ್ವ ತ್ಥಾಮನ ಶಸ್ತ್ರಗಳಿಂದಲೂ ಅನೇಕವೀರರು ಸತ್ತರು ಮಹಾಭಯಂಕರ ವಾದ ಆ ರಾತ್ರಿಯು ರಾತ್ರಿಚರ ಪ್ರಾಣಿಗಳೆಲ್ಲಕ್ಕೂ ಉತ್ಸಾಹವರ್ಧಕವಾ

ಯಿತು ಒಡನೆಯೇ ಅಲ್ಲಿ ರಾಕ್ಷಸರೂ, ನರಮಾಂಸಗಳನ್ನು ತಿಂದು ರಕ್ತ ಪಾನಮಾಡುವ ಪಿಶಾಚಿಗಳೂ ಕಾಣಿಸಿದುವು. ಭಯಂಕರವಾದ ಕೋರೆ ಹಲ್ಲುಗಳು! ಪೀತವರ್ಣದ ಮೈ! ರೌದ್ರಾಕೃತಿ! ಬೆಟ್ಟದಂತೆ ಹಲ್ಲುಗಳು! ಮೈಯಲ್ಲಿ ಬೂದಿ! ಭಯಂಕರವಾದ ಮುಖ! ಐದು ಕಾಲುಗಳು! ದೊಡ್ಡ ಹೊಟ್ಟೆ! ಹಿಮ್ಮೊಗವಾದ ಬೆರಳುಗಳು! ಕ್ರೂರಪ್ರಕೃತಿ! ವಿಕಾರ ರೂಪ! ಆರ್ತಧ್ವನಿ! ಕೆದರಿದ ತಲೆ! ಆನೆಯಂತೆ ಮುಖ! ಕಪ್ಪು ಮೈ! ಪತ್ನೀ ಪುತ್ರರೊಡನೆ ಸೇರಿದ ದೊಡ್ಡ ಗುಂಪು! ಇಂತಹ ರಾಕ್ಷಸರೂ, ಪಿಶಾಚ ಗಳೂ ಕಾಣಿಸಿದುವು ಅವುಗಳಲ್ಲಿ ಕೆಲವು ರಕ್ತವನ್ನು ಕುಡಿಯುತ್ತ 'ಭಲೆ! ಬಹುರುಚಿ! ಇದು ಬಹಳ ಶುದ್ಧವಾದುದು! ಇದು ಬಹಳ ಮೇಲು!' ಎಂದು ಸಂತೋಷದಿಂದ ಗುಂಪುಗೂಡಿ ಕುಣಿದಾಡಿದುವು ಅವೆಲ್ಲವೂ ಯಥೇಚ್ಛವಾಗಿ ರಕ್ತಮಾಂಸಗಳನ್ನೂ, ಮೇದಸ್ಸನ್ನೂ ಕುಡಿಯುತ್ತ, ಅಸ್ಥಿ ಗಳನ್ನು ಕಡಿಯುತ್ತ ಸಂತೋಷದಿಂದ ನಲಿಯುತಿದ್ದುವು ಕೆಲವುರಾಕ್ಷಸರು ಮಾಂಸಗಳನ್ನು ಕಡಿದು ತಿನ್ನುತಿದ್ದರು ಕೆಲವರು ಮಿತಿಮಿರಿ ವಸೆಯ ನ್ನು ಕುಡಿದು ಗುಡಾಣದಂತೆ ದೊಡ್ಡ ಹೊಟ್ಟೆಯುಳ್ಳವರಾಗಿ ಓಡಲಾರದೆ ಓಡುತಿದ್ದರು ನಾನಾತರದ ಮುಖವುಳ್ಳ ರಕ್ಷಃ ಪಿಶಾಚಾದಿಗಳು ಅಯು ತ ನಿಯುತ ಪ್ರಯುತ ಸಂಖ್ಯೆಯಿಂದ ಕಾಣಿಸಿದುವು ಆ ಭಯಂಕರವಾದ ಕೊಲೆಯಿಂದ ತೃಪ್ತಿಗೊಂಡ ಅನೇಕಭೂತಗಳು ಒಟ್ಟುಗೂಡಿದುವು. ಎಚ್ಚರತಪ್ಪಿ ಗಾಢನಿದ್ರೆಯಲ್ಲಿರುವ ಸೋಮಕರಿಗೆಲ್ಲ ಪ್ರಳಯರೂಪವಾದ ಆ ರಾತ್ರಿಯು ಮಹಾಭಯಂಕರವಾಗಿದ್ದಿತು. ನಮ್ಮವರನ್ನೆಲ್ಲ ಕೊಂದು ಕೆಡಹಿದ ಅಂತಹ ಮಹಾಶೂರರ ಅವಸ್ಥೆಯೇ ಹೀಗಾದಮೇಲೆ, ಕಾಲಮಹಿ ಮೆಯು ದಾಟಲಸಾಧ್ಯವಾದುದು. ಅದರಲ್ಲಿ ಸಂಶಯವಿಲ್ಲ' ಎಂದನು.

ಆಗ ಧೃತರಾಷ್ಟ್ರನು 'ಸಂಜಯಾ! ನನ್ನ ಪುತ್ರನಿಗೆ ಜಯವನ್ನು ಕೋರತಕ್ಕ ಆ ಅಶ್ವತ್ಥಾಮನು, ಇಂತಹ ಮಹಾಕಾರ್ಯವನ್ನು ಏತ ಕ್ಕಾಗಿ ಮೊದಲೇ ಮಾಡಲಿಲ್ಲ? ಈಗ ಕ್ಷತ್ರಿಯರೆಲ್ಲರೂ ಕೊಲ್ಲಲ್ಪಟ್ಟಮೇಲೆ ಅವನು ಈ ಸಾಹಸಕಾರ್ಯವನ್ನು ಮಾಡಿದುದೇಕೆ?' ಎನಲು, ಸಂಜ ಯನು 'ಓ ಕುರುನಂದನಾ! ಆ ದ್ರೋಣಪುತ್ರನು ಪಾಂಡವರಿಗೆ ಭಯ

ಪಟ್ಟು ಮೊದಲೇ ಇದನ್ನು ಮಾಡಲಿಲ್ಲ. ಈಗ ಪಾಂಡವರೂ, ಕೃಷ್ಣನೂ, ಸಾತ್ಯಕಿಯೂ ಈ ಮೂವರೂ ಸಮೀಪದಲ್ಲಿಲ್ಲದ ಸಮಯವನ್ನು ನೋಡಿ ಈ ಕಾರ್ಯವನ್ನು ಮಾಡಿದನು ಹೆಚ್ಚೇಕೆ? ದೇವರಾಜನಾದ ಇಂದ್ರನಾದರೂ ಆ ಮೂವರ ಮುಂದೆ ಅಷ್ಟು ಮಂದಿಯನ್ನು ಕೊಲ್ಲಲು ಸಾಧ್ಯವಾಗುತ್ತಿರಲಿಲ್ಲ. ರಾತ್ರಿ ನಿದ್ರೆಯಿಂದ ಮೈಮರೆತಿದ್ದ ಜನಗಳ ವಿಷಯದಲ್ಲಿ ಈ ಕಾರ್ಯವನ್ನು ಮಾಡಿದ ಅಶ್ವತ್ಥಾಮನು, ಬೆಳಗಿನಜಾವದಲ್ಲಿ ಅಲ್ಲಿಂದ ಹಿಂತಿರುಗಲುದ್ದೇಶಿಸಿದನು ಮನುಷ್ಯರಕ್ತದಿಂದ ನೆನೆದ ಅಶ್ವತ್ಥಾಮನ ಕೈಯಲ್ಲಿ ಹಿಡಿದಿದ್ದ ಕತ್ತಿಯು, ಅವನ ಕೈಗೆ ಬಲವಾಗಿ ಅಂಟಿಕೊಂಡಿದ್ದಿತು. ಪ್ರಳಯಾಗ್ನಿಯು ಸಮಸ್ತ ಪ್ರಾಣಿಗಳನ್ನೂ ದಹಿಸುವಂತೆ ಅಶ್ವತ್ಥಾಮನು ಶತ್ರುಗಳನ್ನು ನಿಶ್ಶೇಷರನ್ನಾಗಿ ಮಾಡಿ, ತನ್ನ ತಂದೆಯ ಋಣವನ್ನು ತೀರಿಸಿಕೊಳ್ಳಬೇಕೆಂಬ ಪ್ರತಿಜ್ಞೆಯನ್ನು ನೆರವೇರಿಸಿಕೊಂಡು, ಬೆಳಗಿನಜಾವದಲ್ಲಿ ರಹಸ್ಯಮಾರ್ಗವಾಗಿ ಹೊರಟುಬಿಟ್ಟನು ಬಿಡಾರದಲ್ಲಿ ರಾತ್ರಿ ನಿದ್ರೆಮಾಡುತ್ತಿದ್ದ ಜನಗಳ ಮಧ್ಯಕ್ಕೆ ಹೇಗೆ ಪ್ರವೇಶಿಸಿದನೋ, ಅದೇ ರೀತಿಯಲ್ಲಿ ಬರುವಾಗಲೂ ನಿಶ್ಶಬ್ದವಾಗಿ ಜನರನ್ನು ಕೊಲ್ಲುತ್ತ ಹೊರಕ್ಕೆ ಬಂದನು ಆತನು ಹೊರಕ್ಕೆ ಬಂದು ಕೃಪ ಕೃತವರ್ಮರೊಡನೆ ಸೇರಿ ಸಂತೋಷದಿಂದ ತನ್ನ ಸಾಹಸಕೃತ್ಯಗಳೆಲ್ಲವನ್ನೂ ವಿವರಿಸಿದನು ಅವನ ಪ್ರಿಯವಾಕ್ಯವನ್ನು ಕೇಳಿ ಆ ಮೂವರೂ ಸಂತೋಷದಿಂದ ಕೋಲಾಹಲ ಮಾಡಿ ಕೈಗಳನ್ನು ತಟ್ಟಿದರು ಒಬ್ಬರೂಡನೊಬ್ಬರು ಕಲೆತು 'ಅದೃಷ್ಟವು! ಅದೃಷ್ಟವು!' ಎಂದು ಹೇಳಿಕೊಂಡರು ಅವರಿಬ್ಬರಿಂದಲೂ ಸ್ತುತಿಸಲ್ಪಡುತ್ತ ಅಶ್ವತ್ಥಾಮನು ಅವರಿಬ್ಬರನ್ನೂ ಆಲಿಂಗಿಸಿ, 'ಎಲ್ಲಾ ಪಾಂಚಾಲರೂ, ದ್ರೌಪದೀಪುತ್ರರೂ, ಸೋಮಕರೂ, ಮಾತ್ಸ್ಯರೂ ಹತರಾದರು. ಈಗ ನಾವು ಕೃತಕೃತ್ಯರಾದೆವು. ಕಾಲತಾಮಸವಿಲ್ಲದೆ ರಾಜನಲ್ಲಿಗೆ ಹೋಗುವೆವು. ಅವನು ಇನ್ನೂ ಜೀವಸಹಿತನಾಗಿದ್ದರೆ, ಅವನಿಗೂ ಈ ಪ್ರಿಯವಾಕ್ಯವನ್ನು ತಿಳಿಸುವೆವು' ಎಂದನು

ಇದು ಎಂಟನೆಯ ಅಧ್ಯಾಯವು



ಅಶ್ವತ್ಥಾಮಾದಿಗಳು ದುರ್ಯೋಧನನ ಬಳಿಗೆ ಬಂದು ನಡೆದ ವೃತ್ತಾಂತವನ್ನು ತಿಳಿಸಿದುದು ದುರ್ಯೋಧನನು ಪ್ರಾಣವನ್ನು ಬಿಟ್ಟುದು ಅಶ್ವತ್ಥಾಮಾದಿಗಳು ನಗರಕ್ಕೆ ಹೋದುದು. ಸಂಜಯನಿಗೆ ದಿವ್ಯಜ್ಞಾನವು ಹೋದುದು.

ಕೃಪ ಕೃತವರ್ಮಾಶ್ವತ್ಥಾಮರು ಮೂವರೂ, ದುರ್ಯೋಧನನು ಬಿದ್ದಿರುವ ಸ್ಥಳಕ್ಕೆ ಬಂದು ತಮ್ಮ ರಥಗಳಿಂದಿಳಿದು, ಅರ್ಧಪ್ರಾಣದಿಂದ ನರಳುತಿದ್ದ ಆ ನಿನ್ನ ಮಗನನ್ನು ಬಳಸಿನಿಂತರು ತೊಡೆಮುರಿದು ಅಲ್ಪಪ್ರಾಣದಿಂದ ಪ್ರಜ್ಞಾಹೀನನಾಗಿ ರಕ್ತವನ್ನು ಕಕ್ಕುತ್ತ ಮಲಗಿರುವ ಆ ದುರ್ಯೋಧನನ ಸುತ್ತಲೂ ಭಯಂಕರಾಕಾರವುಳ್ಳ ಅನೇಕದುಷ್ಟ ಮೃಗಗಳೂ, ಹಸಿದ ನಾಯಿ, ತೋಳ, ಮುಂತಾದುವೂ ನಿಂತಿರುವುವು. ತನ್ನನ್ನು ಕಚ್ಚಿತಿನ್ನುವ ಆತುರದಿಂದಿದ್ದ ಆ ದುಷ್ಟ ಮೃಗಗಳನ್ನು ನಿನ್ನ ಮಗನು ತಾನೇ ಪ್ರಯಾಸದಿಂದ ನಿವಾರಿಸುತ್ತ ಮಹಾವೇದನೆಯಿಂದ (ಭೂಮಿಯಲ್ಲಿ) ಹೊರಳಾಡುತ್ತಿರುವನು ಹೀಗೆ ರಕ್ತದಲ್ಲಿ ನೆನೆದು ನೆಲದಮೇಲೆ ಮಲಗಿರುವ ಆ ದುರ್ಯೋಧನನನ್ನು ಕಂಡು, ಅಶ್ವತ್ಥಾಮ, ಕೃಪ, ಕೃತವರ್ಮರು ಮೂವರೂ ಶೋಕದಿಂದ ಪ್ರಲಪಿಸಿದರು. ಆ ಮೂವರ ನಡುವೆ ತ್ರೇತಾಗ್ನಿಗಳಿಂದ ಆವೃತವಾದ ಯಜ್ಞವೇದಿಕೆಯಂತೆ ಕಾಣಿಸುತ್ತಿದ್ದನು.

ಆಮೇಲೆ, ಕೃಪನು ಆ ಅರಸನ ಬಾಯಿಂದ ಸ್ರವಿಸುತ್ತಿರುವ ರಕ್ತವನ್ನು ಕೈಗಳಿಂದ ಒರೆಸುತ್ತ 'ಆಹಾ! ಆಹಾ! ಹನ್ನೊಂದಕ್ಷೌಹಿಣೀಸೈನ್ಯಗಳಿಗೆ ಒಡೆಯನಾದ ಈತನು ಹೀಗೆ ರಕ್ತದಿಗ್ಧನಾಗಿ ಮರಣಶಯ್ಯೆಯಲ್ಲಿ ಮಲಗಿರುವುದನ್ನು ದೈವವಾದರೂ ಹೇಗೆ ಸಹಿಸುವುದೋ? ಆ ಮಹಾರಾಜನ ಪಕ್ಕದಲ್ಲಿ ಸುವರ್ಣದಿಂದಲಂಕೃತವಾದ ಆತನ ದಿವ್ಯಗದೆಯು ಬಿದ್ದಿರುವುದನ್ನು ನೋಡು ಯಾವ ಯುದ್ಧದಲ್ಲಿಯೂ ಈತನು ಈ ಗದೆಯನ್ನು ಕೈಬಿಟ್ಟವನಲ್ಲ. ಸ್ವರ್ಗಕ್ಕೆ ಹೋಗುವಾಗಲೂ ಇದು ಆತನನ್ನು ಬಿಟ್ಟುಹೋಗುವಂತಿಲ್ಲ ಅರಮನೆಯಲ್ಲಿ ರಾಜನೊಡನೆ ರಾಜಪತ್ನಿಯು ಮಲಗುವಂತೆ, ಆ ರಾಜನ ಪಕ್ಕದಲ್ಲಿ ಬಿದ್ದಿರುವ ಸುವರ್ಣಾಲಂಕೃತವಾದ ಈ ಗದೆಯನ್ನು ನೋಡು. ರಣಭಯಂಕರನೂ, ವೀರಾಗ್ರಣಿ

ಯೂ ಆದ ಈ ರಾಜನು ಮೃತನಾಗಿ, ಧೂಳು ಕವಿದು ಬಿದ್ದಿರುವನಲ್ಲಾ! ಕಾಲವೈಪರೀತ್ಯವನ್ನು ನೋಡಿದೆಯಾ! ಅನೇಕಕ್ಷತ್ರಿಯೋತ್ತಮರು ಯಾವನಿಂದ ಕೊಲ್ಲಲ್ಪಟ್ಟು ಭೂಮಿಯಲ್ಲಿ ಮಲಗುತಿದ್ದರೋ, ಅಂತಹ ಕೌರವ ರಾಜನೇ ಈಗ ಶತ್ರುಗಳಿಂದ ಕೊಲ್ಲಲ್ಪಟ್ಟು ನೆಲದಮೇಲೆ ಮಲಗಿರುವನು. ನೂರಾರುಮಂದಿ ರಾಜರು ಭಯದಿಂದ ಯಾವನಿಗೆ ತಲೆಬಗ್ಗುತ್ತಿದ್ದರೋ ಆತನೇ ಈಗ ಮಾಂಸಾಹಾರಿಗಳಾದ ಪ್ರಾಣಿಗಳಿಂದ ಪರಿವೃತನಾಗಿ ವೀರ ಶಯ್ಯೆಯಲ್ಲಿ ಮಲಗಿರುವನು. ಹಿಂದೆ ಯಾವ ರಾಜನನ್ನು ಜನರು ಹಣಕ್ಕಾಗಿ ಉಪಾಸಿಸುತ್ತಿದ್ದರೋ, ಅದೇ ರಾಜನನ್ನು ಈಗ ಮಾಂಸಾಪೇಕ್ಷಿಗಳಾದ ರಾಕ್ಷಸರು ಉಪಾಸಿಸುತ್ತಿರುವರು' ಎಂದು ಪ್ರಲಾಪಿಸಿದನು

ಆಗ ಅಶ್ವತ್ಥಾಮನು ಭೂಗತನಾಗಿ ಮಲಗಿದ್ದ ದುರ್ಯೋಧನನನ್ನಪ್ಪಿಕೊಂಡು, ದೀನಸ್ವರದಿಂದ, 'ಓ ನರಶ್ರೇಷ್ಠಾ! ಧನುರ್ಧಾರಿಗಳಲ್ಲಿ ಅಗ್ರಗಣ್ಯನೆಂದೂ, ಯುದ್ಧದಲ್ಲಿ ಕುಬೇರನಿಗೆ ಸಮಾನನೆಂದೂ, ಬಲರಾಮ ಶಿಷ್ಯನೆಂದೂ ಜನರು ನಿನ್ನನ್ನು ಸ್ತುತಿಸುತ್ತಿದ್ದರಲ್ಲವೆ? ಜನಾಧಿಪಾ! ಅಡಿಗೆಯವನೂ, ಪಾಪಬುದ್ಧಿಯುಳ್ಳವನೂ ಆದ ಭೀಮಸೇನನು, ನಿನಗೆ ಕೇಡನ್ನು ಮಾಡುವ ಸಂಚನ್ನು ಹೇಗೆ ತಿಳಿದನೋ? ಮಹಾರಾಜಾ! ಅಂತಹ ಭೀಮಸೇನನಿಂದ ನೀನು ಮೃತನಾದುದನ್ನು ನೋಡಿದಮೇಲೆ ಈ ಲೋಕದಲ್ಲಿ ಕಾಲವೇ ಅಧಿಕಬಲವುಳ್ಳದೆಂಬುದು ನಿಶ್ಚಯವು ಅಲ್ಪನೂ, ಪಾಪಿಯೂ ಆದ ವೃಕೋದರನು, ಎಲ್ಲಾ ಧರ್ಮಗಳನ್ನೂ ಅರಿತ ನಿನ್ನನ್ನು ಕಪಟಮಾರ್ಗದಿಂದ ಹೇಗೆ ಕೊಂದನು? ಯಾವ ರೀತಿಯಿಂದಲೂ ಕಾಲವನ್ನತಿಕ್ರಮಿಸಲಾರೆವು ಆ ಭೀಮನು ದ್ವಂದ್ವಯುದ್ಧದಲ್ಲಿ ಗದೆಯಿಂದ ನಿನ್ನ ಎರಡು ತೊಡೆಗಳನ್ನೂ ನೆಗ್ಗಿದನಲ್ಲವೆ? ಅಧರ್ಮದಿಂದ ಕೊಲ್ಲಲ್ಪಟ್ಟ ನಿನ್ನ ತಲೆಯನ್ನು ಕಾಲಿಂದ ತುಳಿಯುವಾಗ, ಬಾಯೆತ್ತದೆ ನೋಡುತ್ತಿದ್ದ ಯುಧಿಷ್ಠಿರನನ್ನು ನಿಂದಿಸಬೇಕಲ್ಲವೆ? ಯುದ್ಧವೀರರೆಲ್ಲರೂ ಈ ಅಕಾರ್ಯಕ್ಕಾಗಿ ತಮ್ಮ ಪ್ರಾಣವಿರುವವರೆಗೂ ಆ ಭೀಮನನ್ನು ನಿಂದಿಸದಿರುವುದಿಲ್ಲ. ಕಪಟದಿಂದಲ್ಲವೇ ನೀನು ಕೆಳಗೆ ಬೀಳಿಸಲ್ಪಟ್ಟೆ! ಯದುನಂದನನೂ, ವೀರನೂ ಆದ ಬಲರಾಮನು 'ಗದಾಯುದ್ಧಪ್ರಯೋಗದಲ್ಲಿ ದುರ್ಯೋಧನನಿಗೆ

ಸಮಾನರಿಲ್ಲ'ವೆಂದೂ, ಗದಾಯುದ್ಧದಲ್ಲಿ ಕುರುಕುಲಜಾತನಾದ ದುರ್ಯೋಧನನೇ ತನಗೆ ಪ್ರಿಯಶಿಷ್ಯನೆಂದೂ ಸಭೆಗಳಲ್ಲಿ ನಿನ್ನನ್ನು ಹೊಗಳುತ್ತಿದ್ದನಷ್ಟೆ! ಯುದ್ಧದಲ್ಲಿ ಹತರಾದ ವೀರರಿಗೆ ಯಾವ ಸದ್ಗತಿಯು ದೊರಕುವುದೆಂದು ಋಷಿಗಳು ಹೇಳಿರುವರೋ, ಆ ಗತಿಯು ನಿನಗೆ ಲಭಿಸುವುದು. ಆದುದರಿಂದ ನಿನಗಾಗಿ ನಾವು ದುಃಖಿಸುವುದಿಲ್ಲ. ತಮ್ಮ ಪುತ್ರರನ್ನೆಲ್ಲ ಬಲಿಕೊಟ್ಟ ನಿನ್ನ ತಾಯ್ತಂದೆಗಳಿಗಾಗಿ ನಾನು ವ್ಯಸನಪಡುತ್ತಿರುವೆನು. ಅವರಿಬ್ಬರೂ ಅನಾಥರಾದರು. ಅವರಿಬ್ಬರೂ ಈ ಭೂಮಿಯಲ್ಲಿ ಭಿಕ್ಷುಕರಂತೆ ದುಃಖಿಸುತ್ತ ಸಂಚರಿಸಬೇಕಾಗುವುದು. ತಾವು ಧರ್ಮಜ್ಞರೆಂದು ಹೇಳಿಕೊಂಡು ಅಧರ್ಮರೀತಿಯಿಂದ ಕೊಲ್ಲಲ್ಪಡುತ್ತಿರುವ ನಿನ್ನ ವಿಷಯದಲ್ಲಿ ಉಪೇಕ್ಷೆಯಿಂದಿದ್ದ ಕೃಷ್ಣನೂ, ಅರ್ಜುನನೂ ನಿಂದನಾರ್ಹರು. ಇನ್ನು ಮೇಲೆ ಆ ಪಾಂಡವರು 'ನಾವು ದುರ್ಯೋಧನನನ್ನು ಈ ರೀತಿಯಲ್ಲಿ ಕೊಂದೆವು' ಎಂದು ನಾಚಿಕೆಯಿಲ್ಲದೆ ಹೇಗೆ ಹೇಳಿಕೊಳ್ಳುವರೋ? ಓ ಗಾಂಧಾರೀನಂದನಾ! ಧರ್ಮರೀತಿಯಲ್ಲಿ ಶತ್ರುಗಳನ್ನಿದಿರಿಸಿ ಮೃತನಾದ ನೀನೇನೋ ಭಾಗ್ಯಶಾಲಿಯೇ! ಪುತ್ರರನ್ನೂ, ಜ್ಞಾತಿಗಳನ್ನೂ, ಬಂಧುಗಳನ್ನೂ ಕಳೆದುಕೊಂಡ ಗಾಂಧಾರಿಗೂ, ಅಂಧನಾದ ಧೃತರಾಷ್ಟ್ರನಿಗೂ ಇನ್ನು ಗತಿಯೇನು? ಸ್ವರ್ಗದಲ್ಲಿಯೂ ನಿನ್ನನ್ನು ಹಿಂಬಾಲಿಸದೆ ಇನ್ನೂ ಬದುಕಿರುವ ನಾನೂ, ಕೃತವರ್ಮನೂ, ಕೃಪನೂ ನಿಂದನಾರ್ಹರಾದೆವು. ನಮ್ಮ ಅಭೀಷ್ಟಗಳೆಲ್ಲವನ್ನೂ ನೆರವೇರಿಸುತ್ತ, ನಮ್ಮನ್ನು ಕಾಪಾಡುತ್ತ, ಪ್ರಜೆಗಳಿಗೆ ಹಿತವನ್ನು ಕೋರುತ್ತಿದ್ದ ನಿನ್ನನ್ನು ನಾವು ಹಿಂಬಾಲಿಸದಿದ್ದುದರಿಂದ ನರಾಧಮರಾದ ನಾವೂ ನಿಂದ್ಯರೇ! ಓ ಶೂರಾ! ನಿನ್ನ ವೀರ್ಯದಿಂದ ನನ್ನ ಮತ್ತು ನನ್ನ ತಂದೆಯ ಗೃಹಗಳು ಸದಾ ಸೇವಕರಿಂದಲೂ, ರತ್ನಗಳಿಂದಲೂ ಪರಿಪೂರ್ಣವಾಗಿದ್ದುವು. ಬಂಧುಮಿತ್ರರೊಡನೆ ನಾವು ನಿನ್ನ ದಯೆಯಿಂದಲೇ ಅಪರಿಮಿತವಾದ ದಕ್ಷಿಣೆಗಳನ್ನು ಕೊಟ್ಟು ದೊಡ್ಡ ಯಾಗಗಳನ್ನೂ ಮಾಡಿದೆವು. ಅನೇಕ ವೀರಕ್ಷತ್ರಿಯರನ್ನು ಹಿಂಬಾಲಿಸಿ ನೀನು ಇಂತಹ ಉತ್ತಮಮಾರ್ಗವನ್ನು ಹಿಡಿದಾಗ, ಪಾಪಿಗಳಾದ ನಮಗೆ ಅದಕ್ಕೆ ಮನಸ್ಸು ಬಾರದಿರುವುದು ಸಹಜವೇ. ರಾಜಾ! ಉತ್ತಮಗತಿಗೆ ಹೋಗುವ ನಿನ್ನನ್ನು ನಾವು ಮೂವರು ಮಾತ್ರ ಅನುಸರಿಸದಿರುವುದ

ರಿಂದ ನಾವು ಪಾಪಕ್ಕೊಳಗಾಗುವೆವು. ಆದುದರಿಂದ ನಾವು ನಿನ್ನ ಸತ್ಕಾರ್ಯಗಳನ್ನು ಸ್ಮರಿಸದೆ, ಸ್ವಪ್ರಯೋಜನಕ್ಕೂ, ಸ್ವರ್ಗಕ್ಕೂ ಬಾಹಿರರಾದೆವು. ನಾವುಮಾತ್ರ ನಿನ್ನನ್ನು ಬಿಟ್ಟು ಹಿಂದುಳಿಯುವ ಕಾರಣವೇನಾಗಿರಬಹುದು? ಇನ್ನು ನಾವು ಈ ಭೂಮಿಯಲ್ಲಿ ದುಃಖದಿಂದ ಜೀವಿಸಬೇಕು. ಇದು ನಿಶ್ಚಯವು. ಓ ರಾಜಾ! ನೀನು ಹೋದಮೇಲೆ ನಮಗೆ ಸುಖವೆಲ್ಲಿಯದು? ನೀನು ಸ್ವರ್ಗವನ್ನು ಸೇರಿದಮೇಲೆ ಮಹಾರಥರ ಬಳಿಗೆ ಹೋಗಿ, ನನ್ನ ಮಾತಿನಿಂದ ಅವರವರ ವಯಸ್ಸಿಗೂ, ಪದವಿಗೂ ತಕ್ಕಂತೆ ಪೂಜಿಸು. ಧನುರ್ಧಾರಿಗಳೆಲ್ಲರಿಗೂ ಧ್ವಜಪ್ರಾಯರಾದ ಆಚಾರ್ಯರನ್ನು ಪೂಜಿಸಿ, ನಾನು ಧೃಷ್ಟದ್ಯುಮ್ನನನ್ನು ಕೊಂದ ವೃತ್ತಾಂತವನ್ನು ಅವರಿಗೆ ತಿಳಿಸು ಅಲ್ಲಿ ನೀನು ಮಹಾರಥನಾದ ಬಾಹ್ಲಿಕನನ್ನೂ, ಸಿಂಧುರಾಜನನ್ನೂ, ಸೋಮದತ್ತನನ್ನೂ, ಭೂರಿಶ್ರವಸ್ಸನ್ನೂ, ನಿನಗಿಂತ ಮುಂದೆಯೇ ಸ್ವರ್ಗಸ್ಥರಾಗಿರುವ ಇನ್ನೂ ಇತರರಾಜರನ್ನೂ ಅಪ್ಪಿಕೊಂಡು, ನಾವು ಅವರ ಕ್ಷೇಮಲಾಭಗಳನ್ನು ವಿಚಾರಿಸಿದೆವೆಂದು ತಿಳಿಸು' ಎಂದನು. ತಿರುಗಿ ಆತನು ದುರ್ಯೋಧನನನ್ನು ನೋಡಿ 'ಓ ದುರ್ಯೋಧನಾ! ನಿನಗಿನ್ನೂ ಪ್ರಾಣವಿರುವುದಾದರೆ, ಕಿವಿಗಿಂಪಾದ ಕೆಲವು ವಿಷಯಗಳನ್ನು ಆದರಿಸಿ ಕೇಳು! ಈಗ ಆ ಪಾಂಡವರ ಕಡೆಯಲ್ಲಿ, ಪಂಚಪಾಂಡವರು, ಕೃಷ್ಣನು, ಸಾತ್ಯಕಿ, ಈ ಏಳುಮಂದಿ ಮಾತ್ರವೇ ಉಳಿದರು ಧೃತರಾಷ್ಟ್ರನ ಕಡೆಯಲ್ಲಿ ನಾನೂ, ಕೃತವರ್ಮನೂ, ಕೃಪನೂ ಈ ಮೂವರೇ ಉಳಿದಿರುವೆವು. ಓ ರಾಜಾ! ದ್ರೌಪದಿಯ ಎಲ್ಲಾ ಪುತ್ರರೂ, ಧೃಷ್ಟದ್ಯುಮ್ನನ ಪುತ್ರರೂ, ಎಲ್ಲಾ ಪಾಂಚಾಲರೂ ಕೊಲ್ಲಲ್ಪಟ್ಟರು ನಾವು ಹಗೆ ತೀರಿಸಿಕೊಂಡು ಬಂದೆವು. ಪಾಂಡವರೂ ತಮ್ಮ ಪುತ್ರರನ್ನು ಕಳೆದುಕೊಂಡರು. ರಾತ್ರಿ ಮಲಗಿದ್ದ ವೇಳೆಯಲ್ಲಿ ಆ ಪಾಂಡವರ ಬಿಡಾರವನ್ನೆಲ್ಲ ನಾಶಮಾಡಿ ಬಂದೆವು ರಾಜಾ! ನಾನು ನಿನ್ನೆ ರಾತ್ರಿ ಬಿಡಾರಕ್ಕೆ ನುಗ್ಗಿ, ಪಾಪಕರ್ಮಿಯಾದ ಆ ಧೃಷ್ಟದ್ಯುಮ್ನನನ್ನು ಪಶುವನ್ನು ಕೊಲ್ಲುವಂತೆ ಕೊಂದೆನು' ಎಂದನು.

ಕಿವಿಗಿಂಪಾದ ಈ ಮಾತುಗಳನ್ನು ಕೇಳಿದಮೇಲೆ ದುರ್ಯೋಧನನಿಗೆ ತಿರುಗಿ ಸ್ವಲ್ಪ ಪ್ರಜ್ಞೆ ಬಂದಿತು. ಆಗ ಆತನು ಕೃಪ ಕೃತವರ್ಮರೊಡನೆ

'ನೀವು ನನಗಾಗಿ ಮಾಡಿದಷ್ಟು ಕಾರ್ಯವನ್ನು ಭೀಷ್ಮನಾಗಲಿ, ಕರ್ಣನಾಗಲಿ, ನಿನ್ನ ಪಿತನಾಗಲಿ ಮಾಡಲಿಲ್ಲ. ಅತ್ಯಲ್ಪನಾದ ಆ ಸೈನ್ಯಾಧಿಪತಿಯಾದ ಧೃಷ್ಟದ್ಯುಮ್ನನು ಶಿಖಂಡಿಯೊಡನೆ ಹತನಾದುದರಿಂದ ಈಗ ನಾನು ಇಂದ್ರಸಮಾನನೆಂದೆನಿಸಿಕೊಳ್ಳುವೆನು. ನೀವು ಕ್ಷೇಮದಿಂದಿರಿ! ನಿಮಗೆ ಮಂಗಳವಾಗಲಿ! ನಾವು ತಿರುಗಿ ಸ್ವರ್ಗದಲ್ಲಿ ಸೇರುವೆವು' ಎಂದು ಹೇಳಿ, ಪ್ರಾಣವನ್ನು ಬಿಟ್ಟನು. ಅವನ ಆತ್ಮವು ಸ್ವರ್ಗವನ್ನು ಸೇರಿತು. ಅವನ ದೇಹವೊಂದೇ ನೆಲದಲ್ಲಿದ್ದಿತು.

ಮಹಾರಾಜಾ! ಹೀಗೆ ನಿನ್ನ ಮಗನು ಯುದ್ಧದಲ್ಲಿ ಶತ್ರುಗಳಿಂದ ಹತನಾದನು. ಸಾಯುವ ಮೊದಲು ಅವನು ಆ ಮೂವರು ವೀರರನ್ನೂ ಅಪ್ಪಿಕೊಂಡನು. ಅದೇರೀತಿಯಲ್ಲಿ ಅವರೂ ಆ ರಾಜನನ್ನಾಲಿಂಗಿಸಿಕೊಂಡು, ತಿರುಗಿತಿರುಗಿ ಅವನನ್ನು ದುಃಖದಿಂದ ನೋಡುತ್ತ ರಥಗಳನ್ನೇರಿದರು. ದ್ರೋಣಪುತ್ರನ ದೀನವಾಕ್ಯಗಳಿಗಾಗಿ ವ್ಯಾಕುಲಪಡುತ್ತ, ಬೆಳಗಿನಜಾವದಲ್ಲಿ ಪಟ್ಟಣವನ್ನು ಕುರಿತು ವೇಗದಿಂದ ಹೊರಟರು ಓ ರಾಜಾ! ಹೀಗೆ ನಿಮ್ಮ ದುರಾಲೋಚನೆಯಿಂದ ಕೌರವ ಪಾಂಡವಸೈನ್ಯಗಳೆರಡಕ್ಕೂ ಘೋರವೂ, ಭಯಂಕರವೂ, ಮಹಾವ್ಯಸನಕರವೂ ಆದ ಈ ನಾಶವು ಸಂಭವಿಸಿತು ನಿನ್ನ ಪುತ್ರನು ಸ್ವರ್ಗಸ್ಥನಾದೊಡನೆ, ದುಃಖಾಕುಲನಾಗಿದ್ದ ನನಗೆ ವ್ಯಾಸಮಹರ್ಷಿಯು ಅನುಗ್ರಹಿಸಿದ್ದ ಆ ದಿವ್ಯದೃಷ್ಟಿಯೂ ನಷ್ಟವಾಯಿತು' ಎಂದನು ಹೀಗೆ ಧೃತರಾಷ್ಟ್ರನು ತನ್ನ ಜ್ಞಾತಿಪುತ್ರಾದಿಗಳ ಮರಣವೃತ್ತಾಂತವನ್ನು ಕೇಳಿ ದೀರ್ಘವಾಗಿ ನಿಟ್ಟುಸಿರುಬಿಡುತ್ತ ಚಿಂತಾಕುಲನಾಗಿದ್ದನು

ಇದು ಒಂಭತ್ತನೆಯ ಅಧ್ಯಾಯವು

**ಇಲ್ಲಿಗೆ ಸೌಪ್ತಿಕಪರ್ವವು ಮುಗಿದುದು.**



# ಐಷೀಕಪರ್ವವು.

ಆ ರಾತ್ರಿಯ ಕೊಲೆಯಲ್ಲಿ ದೈವಾಧೀನದಿಂದ ತಪ್ಪಿಸಿಕೊಂಡು ಬಂದ ಧೃಷ್ಟದ್ಯುಮ್ನನ ಸಾರಥಿಯು, ಧರ್ಮರಾಜನಿಗೆ ಆ ಅನರ್ಥವನ್ನು ತಿಳಿಸಿದುದು ಧರ್ಮರಾಜನು ದ್ರೌಪದಿಗೆ ಹೇಳಿಕಳುಹಿಸಿ, ತಾನು ಶಿಬಿರಕ್ಕೆ ಬಂದು ಅಲ್ಲಿ ಮೃತರಾದ ತನ್ನ ಜನರನ್ನು ನೋಡಿ ರೋದಿಸಿದುದು

ಓ ಜನಮೇಜಯರಾಜಾ! ಕೇಳು! ಆ ರಾತ್ರಿಯು ಕಳೆದು ಬೆಳಗಾದಮೇಲೆ ಆ ಕೊಲೆಯಲ್ಲಿ ದೈವಾಧೀನದಿಂದ ತಲೆತಪ್ಪಿಸಿಕೊಂಡುಬಂದ ಧೃಷ್ಟದ್ಯುಮ್ನನ ಸಾರಥಿಯು ಧರ್ಮರಾಜನಲ್ಲಿಗೆ ಓಡಿಬಂದು, ರಾತ್ರಿ ಶಿಬಿರದಲ್ಲಿ ಮಲಗಿದ್ದಾಗ ಅಶ್ವತ್ಥಾಮನು ಅಲ್ಲಿ ನಡೆಸಿದ ಕೊಲೆಯನ್ನೆಲ್ಲ ಆ ಪಾಂಡವರ ಮುಂದೆ ಹೇಳತೊಡಗಿದನು 'ಮಹಾಪ್ರಭೂ! ರಾತ್ರಿ ನಮ್ಮ ಶಿಬಿರದಲ್ಲಿ ದ್ರೌಪದಿಯ ಮಕ್ಕಳೆಲ್ಲರೂ ಹತರಾದರು ದ್ರುಪದಪುತ್ರರೆಲ್ಲರೂ ಸಂಹೃತರಾದರು. ರಾತ್ರಿ ಎಲ್ಲರೂ ಮೈಮರೆತು ಮಲಗಿದ್ದಾಗ, ನೀಚನಾದ ಕೃಪನೂ, ಕೃತವರ್ಮನೂ, ಪಾಪಿಯಾದ ಅಶ್ವತ್ಥಾಮನೂ ನಮ್ಮ ಶಿಬಿರಕ್ಕೆ ನುಗ್ಗಿ ಎಲ್ಲರನ್ನೂ ಕೊಂದುಬಿಟ್ಟರು. ಆ ಮೂವರೂ ಕತ್ತಿ, ಕೊಡಲಿ, ಶಕ್ತಿ, ಪ್ರಾಸ, ಮೊದಲಾದ ಆಯುಧಗಳೊಡನೆ ಬಂದು, ಅಲ್ಲಿ ಮಲಗಿದ್ದ ಸಾವಿರಾರು ಜನರನ್ನೂ, ಆನೆಗಳನ್ನೂ, ಕುದುರೆಗಳನ್ನೂ ಕೊಂದು, ನಮ್ಮ ಶಿಬಿರವನ್ನು ಶೂನ್ಯವಾಗಿ ಮಾಡಿಬಿಟ್ಟರು. ಕಾಡಿನಲ್ಲಿ ದೊಡ್ಡ ಮರವನ್ನು ಕೊಡಲಿಯಿಂದ ಕಡಿದಾಗ, ಅದರ ಮೇಲಿದ್ದ ಹಕ್ಕಿಗಳೆಲ್ಲವೂ ಅರಚಿಕೊಂಡು ಹಾರುವಂತೆ, ನಮ್ಮ ಸೈನ್ಯದಲ್ಲಿ ರಾತ್ರಿ ಪ್ರಬಲವಾದ ವಿಲಾಪವು ಕೇಳಿಸಿತು ಓ ಧರ್ಮಪುತ್ರಾ! ನಾನೊಬ್ಬನುಮಾತ್ರ ಆ ಅನರ್ಥದಿಂದ ಹೇಗೋ ತಪ್ಪಿಸಿಕೊಂಡುಬಂದೆನು' ಎಂದನು ಈ ಮಾತು ಕಿವಿಗೆ ಬಿದ್ದೊಡನೆ ಧರ್ಮರಾಜನು ಪುತ್ರಶೋಕದಿಂದ ಮೂರ್ಛಿತನಾಗಿ ಕೆಳಗೆ ಬೀಳುವಷ್ಟರಲ್ಲಿ, ಸಾತ್ಯಕಿಯೂ, ಇತರ

ಪಾಂಡವರೂ ಥಟ್ಟನೆ ಬಂದು ಅವನನ್ನು ಹಿಡಿದುಕೊಂಡರು. ಆಮೇಲೆ ಧರ್ಮರಾಜನಿಗೆ ಸ್ವಲ್ಪವಾಗಿ ಮೂರ್ಛೆತಿಳಿದಂತಾಯಿತು. ತಾನು ಶತ್ರುಗಳನ್ನೆಲ್ಲ ಜಯಿಸಿದರೂ, ಕೊನೆಗೆ ಅವರಿಂದ ಸಂಪೂರ್ಣವಾಗಿ ಪರಾಜಿತನಾದಂತೆಯೇ ಭಾವಿಸಿ, ಧರ್ಮರಾಜನು ದುಃಖದಿಂದ ವಿಲಪಿಸುತ್ತ ಗದ್ಗದಸ್ವರದಿಂದ ಹೀಗೆಂದು ಹೇಳುವನು. 'ಆಹಾ! ಲೋಕದಲ್ಲಿ ಅರ್ಥಗತಿ, ಕರ್ಮಗತಿ, ದೈವಗತಿ, ಇವು ಹೇಗೆಂಬುದನ್ನು ಯಾರೂ ತಿಳಿಯಲಾರರು. ದಿವ್ಯಜ್ಞಾನವುಳ್ಳವರಿಗಾದರೂ ಕಾರ್ಯಗಳು ಹೇಗೆ ಹೋಗುವುವೆಂದು ತಿಳಿಯಲಾರದು. ಇದ್ದಕ್ಕಿದ್ದಹಾಗೆ ಕಾರ್ಯಗಳು ವಿಪರೀತವಾಗಿ ತಿರುಗುವುವು. ಜಯಿಸಬೇಕಾದವರು ಸೋಲುವರು! ಸೋಲಬೇಕಾದವರು ಜಯಿಸುವರು ಈಗ ನಾವು, ಒಡಹುಟ್ಟಿದವರು, ಮಿತ್ರರು, ಪಿತೃಗಳು, ಮಕ್ಕಳು, ಬಂಧುಗಳು, ಮಂತ್ರಿಗಳು, ಮೊಮ್ಮಕ್ಕಳು, ಇವರನ್ನೆಲ್ಲ ಕೊಂದು ಜಯಶೀಲರಾದೆವೆಂಬ ಸ್ಥಿತಿಯಲ್ಲಿರುವಾಗ, ನಾವೇ ಸಂಪೂರ್ಣವಾಗಿ ಸೋತಂತಾಯಿತು ಆಹಾ! ಅನರ್ಥವೇ ಅರ್ಥವಾಗಿಯೂ, ಅರ್ಥವೇ ಅನರ್ಥವಾಗಿಯೂ ಪರಿಣಮಿಸುವುದು ನಮಗೆ ಕೈಗೂಡಿ ಬಂದ ಜಯವು ಈಗ ಅಪಜಯವಾಗಿ ಪರಿಣಮಿಸಿತು ಆದುದರಿಂದ ಜಯವೂ ಅಪಜಯವೇ. ಈ ಜಯಾಪಜಯಗಳಿಗೆ ಭೇದವೇನೂ ನನಗೆ ತೋರುವುದೇ ಇಲ್ಲ. ಬುದ್ಧಿಗೆಟ್ಟ ಯಾವನು ತಾನು ಜಯಿಸಿಬಂದಮೇಲೆ ವಿಪತ್ತಿಗೆ ಗುರಿಯಾಗಿ ತಪಿಸುವನೋ, ಅವನು ಶತ್ರುಗಳಿಂದ ಪರಾಜಿತನೇ ಅಲ್ಲದೆ ಅವನನ್ನು ಹೇಗೆ ಜಯಶಾಲಿಯೆಂದು ಹೇಳಬಹುದು? ಯಾವನು ಶತ್ರುಗಳನ್ನು ಜಯಿಸಿ, ಜಯಶಾಲಿಯಾಗಿ ಬಂದರೂ, ಆಮೇಲೆ ಎಚ್ಚರಗೊಂಡ ತಮ್ಮ ಶತ್ರುಗಳಿಂದ ತಮ್ಮ ಬಂಧುಗಳು ಹತರಾಗಿ ಅದರಿಂದ ಪಾಪಕ್ಕೂ, ವ್ಯಸನಕ್ಕೂ ತಾನು ಭಾಗಿಯಾಗುವನೋ,, ಅವನಿಗೆ ಜಯದಿಂದುಂಟಾದ ಸಂತೋಷವೆಲ್ಲಿಯದು? ಇದುವರೆಗೆ ನಾವು ಎಷ್ಟೋ ಸಾಹಸಗಳನ್ನು ಮಾಡಿದೆವು? ಕರ್ಣಿ, ನಾಳೀಕಗಳೆಂಬ ಕೋರೆಹಲ್ಲುಗಳಿಂದಲೂ, ಕತ್ತಿಯೆಂಬ ನೀಡಿದ ನಾಲಗೆಗಳಿಂದಲೂ, ಬಿಲ್ಲೆಂಬ ಭಯಂಕರವಾದ ತೆರೆದ ಬಾಯಿಗಳಿಂದಲೂ, ಧನುಷ್ಟಂಕಾರವೆಂಬ ಭಯಂಕರ ಗರ್ಜನೆಯಿಂದಲೂ ಕೂಡಿದ ಕರ್ಣನೆಂಬ ಸಿಂಹವನ್ನು ಯುದ್ಧದಲ್ಲಿ ಕೊಂದು ಬಂದ

ನಾವು, ಈಗ ಎಚ್ಚರತಪ್ಪಿ ಮಲಗಿದ್ದಾಗ, ಶತ್ರುಗಳಿಂದ ಜಯಿಸಲ್ಪಟ್ಟೆವು. ಆ ದ್ರೋಣನೇನು ಸಾಮಾನ್ಯನೇ! ಅವನು ಶಸ್ತ್ರವಿದ್ಯೆಗೆ ಸಮುದ್ರದಂತಿದ್ದವನು. ರಥಗಳೇ ಅಲ್ಲಲ್ಲಿನ ಮಡುಗಳು! ಬಾಣವರ್ಷಗಳೇ ಅಲೆಗಳು! ರತ್ನಾಭರಣಗಳೇ ರತ್ನಗಳು! ವಾಹನಗಳೂ, ಯೋಧರೂ, ಜಲಚರಪ್ರಾಣಿಗಳು! ಶಕ್ತಿ, ಖುಷ್ಟಿ ಮೊದಲಾದ ಆಯುಧಗಳೇ ಮಿನುಗಳು! ಧ್ವಜಗಳೇ ನೀರುಹಾವುಗಳು! ಆನೆಗಳೇ ಮೊಸಳೆಗಳು! ಬಿಲ್ಲುಗಳೇ ಸುಳಿಗಳು! ಬಾಣಗಳೇ ನೊರೆಗಳು! ಯುದ್ಧೋತ್ಸಾಹವೇ ಚಂದ್ರೋದಯದಲ್ಲಿ ಉಂಟಾಗತಕ್ಕ ಏರಿಳಿತಗಳು! ತಲಶಬ್ದಗಳೇ ಸಮುದ್ರದ ಮೊರತಗಳು! ಇಂತಹ ಭಯಂಕರವಾದ ದ್ರೋಣನೆಂಬ ಸಮುದ್ರವನ್ನು ತಮ್ಮ ಶಸ್ತ್ರಾಸ್ತ್ರಗಳೆಂಬ ತೆಪ್ಪಗಳಿಂದ ದಾಟಿಬಂದ ರಾಜರೆಲ್ಲರೂ ಈಗ ಎಚ್ಚರತಪ್ಪಿ ಶತ್ರುಗಳಿಂದ ಹತರಾದರಲ್ಲವೆ? ಇದನ್ನು ನೋಡಿದರೆ, ಲೋಕದಲ್ಲ ಮನುಷ್ಯರಿಗೆ ಎಚ್ಚರತಪ್ಪುವುದಕ್ಕಿಂತಲೂ ಪ್ರಬಲವಾದ ಕೊಲೆಯೆಂಬುದು ಬೇರೇನೂ ಇಲ್ಲ ಎಚ್ಚರತಪ್ಪಿದವನಿಗೆ ಸರ್ವಾರ್ಥಗಳೂ ಕೈಬಿಟ್ಟುಹೋಗುವುವು. ಅನರ್ಥಗಳೆಲ್ಲವೂ ನಾನಾಮುಖಗಳಿಂದ ಮೇಲೆ ಬೀಳುವುವು ಧ್ವಜವೆಂಬ ಧೂಮಧ್ವಜದಿಂದಲೂ, ಬಾಣಗಳೆಂಬ ಜ್ವಾಲೆಗಳಿಂದಲೂ, ಪತಾಕೆಗಳೆಂಬ ದಳ್ಳುರಿಗಳಿಂದಲೂ, ಧನುಸ್ಸಿನ ಮತ್ತು ರಥಗಳ ಧ್ವನಿಯೆಂಬ ಛಟಛಟಾತ್ಕಾರಗಳಿಂದಲೂ, ಶಸ್ತ್ರಾಸ್ತ್ರ ಕವಚಗಳೆಂಬ ಆಹುತಿಗಳಿಂದಲೂ ಕೂಡಿ, ಶತ್ರುಸೈನ್ಯವೆಂಬ ಪೊದೆಗಳನ್ನೆಲ್ಲ ದಹಿಸುತ್ತಿದ್ದ ಭೀಷ್ಮನೆಂಬ ಕಾಡುಗಿಚ್ಚನ್ನು ತಮ್ಮ ಪರಾಕ್ರಮದಿಂದ ನಂದಿಸಿ, ಜಯಶೀಲರಾಗಿ ಬಂದ ರಾಜಪುತ್ರರೆಲ್ಲರೂ ಈಗ ಎಚ್ಚರತಪ್ಪಿ ಮಲಗಿದುದರಿಂದ ಶತ್ರುಗಳಿಂದ ಹತರಾದರು. ನಿಜವಾಗಿಯೂ ಎಚ್ಚರತಪ್ಪಿದ ಮನುಷ್ಯನಿಗೆ ಐಶ್ವರ್ಯವಾಗಲಿ, ಧನವಾಗಲಿ, ಕೀರ್ತಿಯಾಗಲಿ ಯಾವುದೂ ಲಭಿಸಲಾರದು ದೈತ್ಯರನ್ನೆಲ್ಲ ಸಂಹರಿಸಿ ಬಂದ ಮಹೇಂದ್ರನು, ತನ್ನ ಎಚ್ಚರಿಕೆಯಿಂದ ಮೇಲೆಮೇಲೆ ವೃದ್ಧಿಹೊಂದುತ್ತಿರುವುದನ್ನು ನೋಡು ಈಗ ನಾವು ಎಷ್ಟೋ ಕಷ್ಟಪಟ್ಟು ಶತ್ರುಗಳನ್ನೆಲ್ಲ ಜಯಿಸಿ ಬಂದರೂ, ಎಚ್ಚರಿಕೆ ತಪ್ಪಿದುದರಿಂದ, ತಮ್ಮ ಪುತ್ರ ಪೌತ್ರರೆಲ್ಲರೊಡನೆ ನಿಶ್ಶೇಷವಾಗಿ ಹತರಾದ ನಮ್ಮ ರಾಜಪುತ್ರಸಮೂಹದ ಸ್ಥಿತಿಯನ್ನು ನೋಡು. ಹಡ

ಗಿನ ವ್ಯಾಪಾರಿಗಳು ಮಹಾಸಮುದ್ರವನ್ನು ದಾಟಿಬಂದು, ಕೊನೆಗೆ ಒಂದು ಅಲ್ಪನದಿಯಲ್ಲಿ ತಮ್ಮ ಹಡಗಿನೊಡನೆ ತಾವೂ ಮುಳುಗಿಹೋದಂತಾಯಿತು. ಈಗ ಆ ಕ್ರೂರರಾದ ಶತ್ರುಗಳಿಂದ ಹತರಾದ ನಮ್ಮ ಕಡೆಯ ರಾಜಪುತ್ರರೇನೋ ಸುಖವಾಗಿ ಸ್ವರ್ಗದಲ್ಲಿ ಸೇರಿದರು. ಆದರೆ, ಆ ದ್ರೌಪದಿಯ ಸ್ಥಿತಿಗಾಗಿ ನಾನು ಬಹಳವಾಗಿ ಶೋಕಿಸುವೆನು. ಆ ಮಹಾಸಾಧ್ವಿಯು ಹೇಗೆತಾನೇ ಆ ವ್ಯಸನವನ್ನು ಸಹಿಸಬಲ್ಲಳು? ತನ್ನ ಐವರು ಮಕ್ಕಳೊಡನೆ ತನ್ನ ಸಹೋದರರೂ, ವೃದ್ಧನಾದ ತನ್ನ ತಂದೆ ಪಾಂಚಾಲರಾಜನೂ ಏಕಕಾಲದಲ್ಲಿ ಹತರಾದುದನ್ನು ಕೇಳಿ ಹೇಗೆ ಸಹಿಸುವಳು? ಅವಳು ಅದನ್ನು ಕೇಳಿದೊಡನೆ ಮೂರ್ಛೆಬೀಳುವುದು ನಿಶ್ಚಯವು ಈ ದುಃಖವನ್ನು ಹೇಗೆ ತಡೆಯುವಳು? ಮುಂದೆ ಅವಳಿಗೆ ಯಾವ ಸುಖವುಂಟು? ಅಗ್ನಿಮಧ್ಯದಲ್ಲಿದ್ದಂತೆ ದುಃಖದಿಂದ ತಪಿಸುತ್ತ, ಅವಳು ಎಷ್ಟು ವಿಲಪಿಸುವಳೋ?' ಎಂದನು

ಓ ಜನಮೇಜಯರಾಜಾ! ಧರ್ಮರಾಜನು ಹೀಗೆ ವ್ಯಸನದಿಂದ ಶೋಕಿಸುತ್ತ, ಸಮೀಪದಲ್ಲಿದ್ದ ನಕುಲನನ್ನು ನೋಡಿ, 'ನೀನು ಹೋಗಿ ಮಂದಭಾಗಿನಿಯಾದ ಆ ರಾಜಕುಮಾರಿಯನ್ನು ಮಾತೃವರ್ಗಗಳೊಡನೆ ಈಗಲೇ ಇಲ್ಲಿಗೆ ಕರೆದುಕೊಂಡು ಬಾ' ಎಂದನು ಒಡನೆಯೇ ನಕುಲನು ರಥವನ್ನೇರಿ ದ್ರೌಪದಿಯ ಅಂತಃಪುರಕ್ಕೆ ಹೋದನು ಆಮೇಲೆ ಯುಧಿಷ್ಠಿರನು ವ್ಯಸನಪರವಶನಾಗಿ, ತನ್ನ ಮಿತ್ರರೊಡನೆ ವಿಲಪಿಸುತ್ತ, ತನ್ನ ಮಕ್ಕಳು ಹತರಾಗಿರುವ ಸ್ಥಳಕ್ಕೆ ಹೊರಟನು ಭೂತಗಣಗಳಿಂದ ತುಂಬಿ ಭಯಂಕರವಾಗಿಯೂ, ಅಮಂಗಳಕರವಾಗಿಯೂ ಇರುವ ಆ ಪ್ರದೇಶದಲ್ಲಿ ತನ್ನ ಮಿತ್ರರೂ, ಮಕ್ಕಳೂ ರಕ್ತದಿಗ್ಧಗಾತ್ರರಾಗಿ, ಮೈಯೆಲ್ಲ ಛಿನ್ನಭಿನ್ನವಾಗಿ, ತಲೆಕಡಿದು ನೆಲದಲ್ಲಿ ಬಿದ್ದಿರುವುದನ್ನು ಕಂಡನು. ಆ ಭಯಂಕರ ಸ್ಥಿತಿಯನ್ನು ಕಂಡೊಡನೆ ಧರ್ಮರಾಜನ ದುಃಖವು ಮಿತಿಮೀರಿಹೋಯಿತು. ಉಚ್ಚಧ್ವನಿಯಿಂದ ಗೋಳಿಡುತ್ತ ಪ್ರಜ್ಞೆತಪ್ಪಿ ಕೆಳಗೆ ಬಿದ್ದುಬಿಟ್ಟನು.

ಇದು ಹತ್ತನೆಯ ಅಧ್ಯಾಯವು.

ನಕುಲನು ದ್ರೌಪದಿಯನ್ನು ಧರ್ಮರಾಜನ ಬಳಿಗೆ ಕರೆತಂದು
ದು ಅಶ್ವತ್ಥಾಮನ ತಲೆಯಲ್ಲಿರುವ ಮಣಿಯನ್ನು ಕಿತ್ತು
ತರುವಂತೆ ದ್ರೌಪದಿಯು ಹೇಳಿದಮೇಲೆ ಭೀಮನು ನ
ಕುಲನನ್ನು ಸಾರಥಿಯಾಗಿ ಮಾಡಿಕೊಂಡು ವೇಗ
ದಿಂದ ರಥವನ್ನೇರಿ ಹೊರಟುದು

ಓ ಜನಮೇಜಯರಾಜಾ! ಕೇಳು! ಅಲ್ಲಿ ಧರ್ಮರಾಜನಿಗೆ ಸತ್ತು ಬಿದ್ದಿದ್ದ ಪುತ್ರಪೌತ್ರಾದಿಗಳನ್ನೆಲ್ಲ ನೋಡಿ ಮಹಾವ್ಯಸನವುಂಟಾಯಿತು ಅವರ ಪೂರ್ವಚರಿತ್ರೆಗಳನ್ನೆಲ್ಲ ನೆನೆಸಿಕೊಂಡು ಪ್ರಲಾಪಿಸತೊಡಗಿದನು. ಕಣ್ಣೀರುಬಿಟ್ಟು ಗಡಗಡನೆ ನಡುಗುತ್ತ, ಮೈಮೇಲೆ ಪ್ರಜ್ಞೆಯೇ ಇಲ್ಲದಂತೆ ದುಃಖಿಸುತ್ತಿದ್ದ ಅವನನ್ನು ಸಮೀಪದಲ್ಲಿದ್ದ ಮಿತ್ರರೆಲ್ಲರೂ ಬಾರಿಬಾರಿಗೂ ಸಮಾಧಾನಪಡಿಸುತ್ತಿದ್ದರು ತನ್ನ ಮಕ್ಕಳಿಗೆಲ್ಲ ಅವನು ವಿಧ್ಯುಕ್ತವಾಗಿ ಪ್ರೇತಕಾರ್ಯಗಳನ್ನು ನಡೆಸುವುದಕ್ಕೆ ಆರಂಭಿಸಿದನು ಇಷ್ಟರಲ್ಲಿಯೇ ನಕುಲನು ದ್ರೌಪದಿಯನ್ನು ರಥದಮೇಲೆ ಕರೆದುಕೊಂಡು ಅಲ್ಲಿಗೆ ಬಂದು ಸೇರಿದನು ಉಪಪ್ಲಾವ್ಯದಲ್ಲಿದ್ದ ದ್ರೌಪದಿಯು ಪುತ್ರ ಮರಣವೆಂಬ ಮಹಾದುಃಖವಾರ್ತೆಯನ್ನು ಕೇಳಿದೊಡನೆ, ಬಿರುಗಾಳಿಗೆ ಸಿಕ್ಕಿದ ಬಾಳೆಯಂತೆ ಗಡಗಡನೆ ನಡುಗುತ್ತ ಪ್ರಜ್ಞೆಯಿಲ್ಲದವಳಾದಳು. ಅವಳು ರಥವನ್ನೇರಿ ನಕುಲನೊಡನೆ ಧರ್ಮರಾಜನಿದ್ದಲ್ಲಿಗೆ ಬಂದಕೂಡಲೆ, ತಿರುಗಿ ಮೂರ್ಛಿತೆಯಾಗಿ ಕೆಳಗೆ ಬಿದ್ದಳು ಮೇಘದಿಂದ ಮರೆಸಲ್ಪಟ್ಟ ಚಂದ್ರನಂತೆ ಅವಳ ಮುಖವು ಕಳೆಗುಂದಿತು ಗಟ್ಟಿಯಾಗಿ ಗೋಳಿಟ್ಟಳು ತಿರುಗಿ ಮೂರ್ಛೆಬಿದ್ದಳು ಮೂರ್ಛಿತಳಾಗಿ ನೆಲದಲ್ಲಿ ಬಿದ್ದ ಅವಳನ್ನು ಭೀಮನು ಬಂದು ಕೈಹಿಡಿದು ಮೇಲಕ್ಕೆತ್ತಿ ಸಮಾಧಾನಪಡಿಸಿದನು ಅದ ರಿಂದ ಅವಳು ಸ್ವಲ್ಪ ಚೇತರಿಸಿಕೊಂಡು, ಧರ್ಮರಾಜನನ್ನು ನೋಡಿ, 'ನಾಥಾ! ಅದೃಷ್ಟವಶದಿಂದ ನೀನು ಯುದ್ಧದಲ್ಲಿ ಜಯಿಸಿ ಸಮಸ್ತ ಭೂಮಿಯನ್ನೂ ನಿರಾತಂಕವಾಗಿ ಅನುಭವಿಸುವಂತಾಯಿತು ಆದರೆ, ನಿನ್ನ ಮಕ್ಕಳನ್ನೆಲ್ಲ ಕ್ಷತ್ರಿಯಧರ್ಮದಿಂದ ಯಮನ ಬಾಯಿಗೆ ಒಪ್ಪಿಸಿಬಿಟ್ಟೆ ಯಲ್ಲಾ? ಸರ್ವಾಸ್ತ್ರವಿಶಾರದನಾದ ಅಭಿಮನ್ಯುವು ಯುದ್ಧದಲ್ಲಿ ಹತನಾ ದನು. ನೀನು ರಾಜ್ಯವನ್ನನುಭವಿಸುವಾಗ ಅವನ ನೆನಪು ನಿನಗೆ ಬರುವು

ದಿಲ್ಲವೆ? ನೀನು ಸನ್ನೊಡನೆ ರಾಜ್ಯವನ್ನು ಅನುಭವಿಸುವಾಗ ಈ ನಿನ್ನ ಎಲ್ಲಾ ಪುತ್ರರ ಮರಣವೂ ನಿನ್ನ ಸ್ಮರಣೆಗೆ ಬಾರದಿರುವುದೇ? ಪಾಪಿಯಾದ ಅಶ್ವತ್ಥಾಮನು ಮಲಗಿದ್ದವರನ್ನೆಲ್ಲ ಕೊಂದುದನ್ನು ಕೇಳಿ, ಅಗ್ನಿಯು ಪೊದೆಯನ್ನು ಹೇಗೋ ಹಾಗೆ ದುಃಖಾಗ್ನಿಯು ನನ್ನನ್ನು ದಹಿಸುತ್ತಿರುವುದು ಅವನ ಸಮಸ್ತಪರಿವಾರಗಳೊಡನೆ ಪಾಪಿಯಾದ ಆ ದ್ರೋಣಪುತ್ರನ ಪ್ರಾಣವನ್ನು ನೀನು ಈಗಲೇ ತೆಗೆಯದಪಕ್ಷದಲ್ಲಿ, ನಾನು ಇಲ್ಲಿಯೇ ಪ್ರಾಯೋಪವೇಶವನ್ನು ಮಾಡಿ ಸಾಯುವೆನು ಎಲೈ ಪಾಂಡುಪುತ್ರರೇ! ಎಲ್ಲರೂ ಕೇಳಿರಿ! ಆ ದ್ರೌಣಿಯು ತನ್ನ ಪಾಪಕಾರ್ಯಕ್ಕೆ ಫಲವನ್ನುಹೊಂದದಪಕ್ಷದಲ್ಲ ನಾನು ಪ್ರಾಣವನ್ನಿಟ್ಟುಕೊಂಡಿರಲಾರನು ಇದು ಸತ್ಯವು' ಹೀಗೆಂದು ಹೇಳಿ ದ್ರೌಪದಿಯು ಧರ್ಮರಾಜನ ಪಕ್ಕದಲ್ಲಿ ಬಂದು ಕುಳಿತುಕೊಂಡಳು ಆಗ ಧರ್ಮರಾಜನು ತನ್ನ ಸಮೀಪದಲ್ಲ ಕುಳಿತ ಆ ದ್ರೌಪದಿಯನ್ನು ನೋಡಿ 'ಪ್ರಿಯೆ! ನಿನ್ನ ಮಕ್ಕಳೂ, ನಿನ್ನ ಸಹೋದರರೂ ಕ್ಷತ್ರಿಯಧರ್ಮವನ್ನನುಸರಿಸಿ ಯುದ್ಧದಲ್ಲ ಹತರಾದರು ಅದಕ್ಕಾಗಿ ನೀನು ಶೋಕಿಸಬಾರದು ಅಲ್ಲದೆ ಈಗಾಗಲೇ ಆ ದ್ರೋಣಪುತ್ರನು ಬಹು ದೂರದಲ್ಲಿರುವ ದುರ್ಗಮವಾದ ಯಾವುದೋ ಒಂದು ಕಾಡಿಗೆ ಓಡಿಹೋದನು. ಅವನನ್ನು ಕಂಡುಹಿಡಿದು ಕೊಲ್ಲುವುದು ಹೇಗೆ? ಅಥವಾ ಅವನನ್ನು ಕೊಂದರೂ ನೀನು ಅವನನ್ನು ನೋಡುವುದು ಹೇಗೆ?' ಎಂದನು ಅದಕ್ಕಾ ದ್ರೌಪದಿಯು 'ಹೇಗಾದರೂ ಆ ಪಾಪಿಯನ್ನು ಕೊಂದೇ ತೀರಬೇಕು ಅವನ ತಲೆಯಲ್ಲಿ ಜನ್ಮಸಿದ್ಧವಾದ ಒಂದು ರತ್ನವಿರುವುದಾಗಿ ಕೇಳಿರುವೆನು ಅವನ ತಲೆಯನ್ನು ಭೇದಿಸಿ, ಆ ರತ್ನವನ್ನಾದರೂ ಇಲ್ಲಿಗೆ ತಂದು ನನಗೆ ತೋರಿಸಿದರಮಾತ್ರ ನಾನು ಬದುಕಿರಬಲ್ಲೆನು ಅವನ ಮೃತಶರೀರವು ನನ್ನ ಕಣ್ಣಿಗೆ ಬೀಳದಿದ್ದರೂ ಹೋಗಲಿ' ಎಂದು ಹೇಳಿ ಕೋಪದಿಂದ ಮೇಲೆದ್ದು ಥಟ್ಟನೆ ಭೀಮನ ಬಳಿಗೆ ಬಂದು, ಅವನ ಕೈಯನ್ನು ಹಿಡಿದುಕೊಂಡು 'ಪ್ರಿಯಾ! ನನ್ನನ್ನು ರಕ್ಷಿಸು! ಕ್ಷತ್ರಿಯಧರ್ಮವನ್ನು ಮರೆಯದೆ ನೀನೇ ಆ ಪಾಪಿಯನ್ನು ಕೊಲ್ಲಬೇಕು. ಪರಾಕ್ರಮದಲ್ಲಿ ನಿನಗೆ ಸಮಾನರಿಲ್ಲವೆಂಬುದು ಲೋಕವಿದಿತವಾಗಿದೆ. ಕಾಡಿನಲ್ಲಿಯೂ, ಹಸ್ತಿನಾವತಿಯಲ್ಲಿಯೂ ಎಷ್ಟೋ ಕಷ್ಟಗಳು ಬಂದೊದಗಿದಾಗ

ಪಾಂಡವರನ್ನೆಲ್ಲ ಅದರಿಂದ ಪಾರುಹೂಡಿದವನು ನೀನೇ! ಹಿಂದೆ ಹಿಡಿಂಬನ ಕೈಗೆ ಸಿಕ್ಕಿಬಿದ್ದಾಗಲೂ ನೀನೇ ಅವರನ್ನು ರಕ್ಷಿಸಿದೆ. ವಿರಾಟನಗರದಲ್ಲಿ ಕೀಚಕನಿಂದ ನನ್ನನ್ನು ನೀನು ಕಾಪಾಡಿದೆ ಇಂತಹ ಮಹಾಕಾರ್ಯಗಳನ್ನು ನಡೆಸಿದಂತೆಯೇ, ಈಗಲೂ ನೀನು ಆ ದ್ರೋಣಪುತ್ರನನ್ನು ಕೊಂದು ಸುಖಿಯಾಗು' ಎಂದಳು ಓ ಜನಮೇಜಯರಾಜಾ! ದ್ರೌಪದಿಯ ಈ ದುಃಖವಾರ್ತೆಯು ಭೀಮಸೇನನಿಗೆ ದುಸ್ಸಹವಾಯಿತು ಒಡನೆಯೇ ಅವನು ಧನುರ್ಬಾಣಗಳನ್ನೆತ್ತಿಕೊಂಡು, ನಕುಲನನ್ನು ಸಾರಥಿಯನ್ನಾಗಿ ಮಾಡಿಕೊಂಡು, ಸುವರ್ಣಮಯವಾದ ತನ್ನ ಮಹಾರಥವನ್ನೇರಿದನು ಅಶ್ವತ್ಥಾಮನನ್ನು ಕೊಲ್ಲುವ ದೃಢಸಂಕಲ್ಪದಿಂದ ಧನುಷ್ಟಂಕಾರ ಮಾಡುತ್ತ ಕುದುರೆಗಳನ್ನು ವೇಗದಿಂದ ಬಿಟ್ಟನು ಒಡನೆಯೇ ಆ ಕುದುರೆಗಳು ಅಶ್ವತ್ಥಾಮನ ಹೋದ ಮಾರ್ಗದಿಂದ ಹೊರಟುವು.

ಇದು ಹನ್ನೊಂದನೆಯ ಅಧ್ಯಾಯವು.

---

ಭೀಮನು ಅಶ್ವತ್ಥಾಮನ ವಧಕ್ಕಾಗಿ ಹೊರಟುದನ್ನು ಕೇಳಿ ಕೃಷ್ಣನು ಧರ್ಮರಾಜನನ್ನು ನೋಡಿ, ಅಶ್ವತ್ಥಾಮನ ಕ್ರೂರಸ್ವಭಾವವನ್ನು ತಿಳಿಸಿ, ಅವನಿಂದ ಭೀಮನನ್ನು ಕಾಪಾಡಿಕೊಳ್ಳುವಂತೆ ಹೇಳಿದುದು

ಎಲೈ ಜನಮೇಜಯರಾಜಾ! ಭೀಮನು ಅತ್ತಲಾಗಿ ಹೋದೊಡನೆ, ಪುಂಡರೀಕಾಕ್ಷನಾದ ಕೃಷ್ಣನು ಯುಧಿಷ್ಠಿರನನ್ನು ಕುರಿತು "ಓ ಪಾಂಡುಕುಮಾರಾ! ನಿನ್ನ ಸಹೋದರನಾದ ಭೀಮನು ಪುತ್ರಶೋಕದಿಂದ ಹಿಂದುಮುಂದು ಕಾಣದೆ, ಏಕಾಕಿಯಾಗಿ ಅಶ್ವತ್ಥಾಮನನ್ನು ಕೊಲ್ಲುವುದಕ್ಕಾಗಿ ಹೊರಟುಬಿಟ್ಟನು ಅವನು ಬಹಳ ಅಪಾಯದಲ್ಲಿ ಸಿಕ್ಕಿಬೀಳುವನು ನಿನ್ನ ಎಲ್ಲಾ ಸಹೋದರರಿಗಿಂತಲೂ ಅವನು ನಿನಗೆ ಪ್ರಿಯನಲ್ಲವೆ? ಅಪಾಯಕ್ಕೆ ಸಿಕ್ಕಿದ ಅವನನ್ನು ನೀನು ರಕ್ಷಿಸಿಕೊಳ್ಳುವುದಕ್ಕಾಗಿ ಹೋಗಬೇಡವೆ? ಇನ್ನೂ ನೀನೇಕೆ ಹಿಂಬಾಲಿಸದಿರುವೆ? ಹಿಂದೆ ದ್ರೋಣನು ನಿಮ್ಮೆಲ್ಲರಿಗೂ ಶಸ್ತ್ರವಿದ್ಯೆಯನ್ನು ಕಲಿಸುತ್ತಿರುವಾಗ, ಬ್ರಹ್ಮಶಿರಸ್ಸೆಂದು ಹೆಸರುಗೊಂಡ

ಅಸ್ತ್ರವು ಸಮಸ್ತ ಭೂಮಿಯನ್ನಾದರೂ ದಹಿಸಬಲ್ಲುದೆಂದು ತನ್ನ ಮಗನಿಗೆ ತಿಳಿಸಿದ್ದನು. ಅಂತಹ ಅಸ್ತ್ರವನ್ನು ಆ ಆಚಾರ್ಯನು ತನಗೆ ಅರ್ಜುನನಲ್ಲಿರುವ ಅತಿಶಯವಾದ ಪ್ರೀತಿಯಿಂದ ಅವನಿಗೆಮಾತ್ರ ಮೊದಲು ಉಪದೇಶಿಸಿದನು. ಆಗ ಅವನಿಗೆ ಒಬ್ಬನೇ ಮಗನಾದ ಅಶ್ವತ್ಥಾಮನು ಮಾತ್ಸರ್ಯದಿಂದ ಏಕಾಂತದಲ್ಲಿ ತಂದೆಯ ಬಳಿಗೆ ಬಂದು ತನಗೂ ಅದನ್ನು ಕಲಿಸಿಕೊಡಬೇಕೆಂದು ಕೇಳಿದನು. ಆಗ ದ್ರೋಣನು ದುರ್ಬುದ್ಧಿಯುಳ್ಳ ತನ್ನ ಮಗನ ಚಪಲಸ್ವಭಾವವನ್ನು ತಿಳಿದವನಾದುದರಿಂದ, ಮನಸ್ಸಿನಲ್ಲಿ ಸಂತೋಷವಿಲ್ಲದೆ ತನ್ನ ಮಗನನ್ನು ನೋಡಿ 'ಕುಮಾರಾ! ನಾನೇನೋ ನಿನಗೆ ಆ ಅಸ್ತ್ರವನ್ನು ಕೊಡುವೆನು ಆದರೆ ನೀನುಮಾತ್ರ ಈ ವಿಷಯದಲ್ಲಿ ಬಹಳ ಎಚ್ಚರದಿಂದಿರಬೇಕು ನೀನು ಎಷ್ಟೇ ವಿಪತ್ತಿಗೆ ಸಿಕ್ಕಿಬಿದ್ದಾಗಲೂ, ಈ ಅಸ್ತ್ರವನ್ನು ಮುಂದಾಲೋಚನೆಯಿಲ್ಲದೆ ಪ್ರಯೋಗಿಸಬಾರದು. ಮುಖ್ಯವಾಗಿ ಮನುಷ್ಯರಮೇಲೆ ಇದನ್ನು ಪ್ರಯೋಗಿಸಲೇಬಾರದು! ನೀನು ಯಾವಾಗಲೂ ಸಾಧುಗಳ ಮಾರ್ಗದಲ್ಲಿ ನಿಲ್ಲುವವನಲ್ಲ. ಎಚ್ಚರಿಕೆ!' ಎಂದನು. ತಂದೆಯ ಈ ನಿಂದಾವಾಕ್ಯವನ್ನು ಕೇಳಿ ಅಶ್ವತ್ಥಾಮನಿಗೆ ಮಹತ್ತಾದ ವ್ಯಸನವುಂಟಾಯಿತು ಸಮಸ್ತಶ್ರೇಯಸ್ಸುಗಳಲ್ಲಿಯೂ ನಿರಾಶನಾಗಿ, ಅವನು ತಂದೆಯನ್ನು ಬಿಟ್ಟು ಭೂಮಿಯನ್ನು ಸುತ್ತುತ್ತಿದ್ದನು. ಓ ಯುಧಿಷ್ಠಿರಾ! ನೀನು ವನವಾಸದಲ್ಲಿರುವಾಗ ಆ ಅಶ್ವತ್ಥಾಮನು ದ್ವಾರಕೆಗೆ ಬಂದು, ಅಲ್ಲಿ ವೃಷ್ಣಿಗಳಿಂದ ಸತ್ಕರಿಸಲ್ಪಡುತ್ತ ವಾಸಮಾಡುತ್ತಿದ್ದನು. ಅವನು ಒಮ್ಮೆ ದ್ವಾರಕೆಯ ಪಕ್ಕದಲ್ಲಿ ಸಮುದ್ರತೀರದಲ್ಲಿ ಏಕಾಕಿಯಾಗಿದ್ದ ನನ್ನ ಬಳಿಗೆ ತಾನೊಬ್ಬನೇ ಏಕಾಂತದಿಂದ ಬಂದು ನಗುಮುಖದೊಡನೆ ಹೀಗೆಂದು ಹೇಳಿದನು 'ಕೃಷ್ಣಾ! ನನ್ನ ತಂದೆಯು ಕಠಿನತಪಸ್ಸನ್ನು ಮಾಡಿ ಬ್ರಹ್ಮಶಿರಸ್ಸೆಂಬ ದೇವಗಂಧರ್ವರಿಂದ ಪೂಜಿತವಾದ ಅಸ್ತ್ರವನ್ನು ಅಗಸ್ತ್ಯನಿಂದ ಪಡೆದನು. ನನ್ನ ತಂದೆಯಲ್ಲಿ ಹೇಗೋ ಹಾಗೆಯೇ ಆ ಅಸ್ತ್ರವು ಈಗ ನನ್ನಲ್ಲಿರುವುದು. ಓ ವಾಸುದೇವಾ! ಆ ದಿವ್ಯಾಸ್ತ್ರವನ್ನು ನನ್ನಿಂದ ನೀನು ಪಡೆದು, ನಿನ್ನಲ್ಲಿರುವ ಚಕ್ರರೂಪವಾದ ಅಸ್ತ್ರವನ್ನು ನನಗೆ ಕೊಡು' ಎಂದನು. ಹೀಗೆ ಎಷ್ಟೋ ದೈನ್ಯದಿಂದ ಯಾಚಿಸುತ್ತಿರುವ ಆ ಅಶ್ವತ್ಥಾಮನ ವಿಷಯದಲ್ಲಿ ನಾನು ಪ್ರಸನ್ನನಾಗಿ, ಬ್ರಾಹ್ಮಣೋತ್ತಮ

ನಾದ ಅವನಿಗೆ ಕೈಮುಗಿದು, 'ಬ್ರಾಹ್ಮಣಕುಮಾರಾ! ದೇವ ದಾನವ ಗಂಧರ್ವರೂ, ಮನುಷ್ಯರೂ, ಪನ್ನಗರೂ, ನಾಗರೂ ಎಲ್ಲರೂ ಒಂದಾಗಿ ಸೇರಿದರೂ ನನ್ನ ಪರಾಕ್ರಮದ ಶತಾಂಶದಲ್ಲಿ ಒಂದು ಭಾಗಕ್ಕೂ ಸಾಟಿಯಾಗಲಾರರು. ಇದೋ! ನನ್ನಲ್ಲಿ ಬಿಲ್ಲುಂಟು! ಶಕ್ತಿಯುಂಟು! ಚಕ್ರವುಂಟು! ಗದೆಯುಂಟು. ಇವುಗಳಲ್ಲಿ ನಿನಗೆ ಬೇಕಾದವುಗಳನ್ನೆಲ್ಲ ಕೊಡುವೆನು. ಓ ದ್ರೋಣಪುತ್ರಾ! ಈ ಅಸ್ತ್ರಗಳಲ್ಲಿ ಯಾವುದನ್ನು ನೀನು ಕೈಯಿಂದೆತ್ತಬಲ್ಲೆಯೋ, ಮತ್ತು ಯುದ್ಧದಲ್ಲಿ ಪ್ರಯೋಗಿಸಬಲ್ಲೆಯೋ ಅದನ್ನು ನೀನೇ ಆರಿಸಿ ತೆಗೆದುಕೊಳ್ಳಬಹುದು. ನೀನೂ ನನಗೆ ಪ್ರತಿಯಾಗಿ ಅಸ್ತ್ರವನ್ನು ಕೊಡುವುದಾಗಿ ಹೇಳಿದೆಯಲ್ಲವೆ? ಅದಿಲ್ಲದಂತೆಯೇ ನಿನಗೆ ಬೇಕಾದುದನ್ನು ನೀನು ತೆಗೆದುಕೊಳ್ಳಬಹುದು' ಎಂದನು ಆಗ ಅಶ್ವತ್ಥಾಮನು ನನ್ನಮೇಲಿನ ಹುರುಡಿನಿಂದ, ಸಾವಿರ ಅರಗಳುಳ್ಳ ಸುನಾಭವೆಂಬ ನನ್ನ ಚಕ್ರಾಯುಧವನ್ನೇ ತನಗೆ ಕೊಡಬೇಕೆಂದು ಕೇಳಿದನು ಆಗ ನಾನು 'ಸರಿ! ಅದನ್ನೇ ತೆಗೆದುಕೊಂಡುಹೋಗು' ಎಂದೆನು. ಆಗ ಅವನು ದರ್ಪದಿಂದ ಮೇಲಕ್ಕೆದ್ದು, ಅಲಕ್ಷ್ಯಭಾವದಿಂದ ಎಡಗೈಯನ್ನು ನೀಡಿ ಆ ಚಕ್ರವನ್ನು ಎತ್ತುವುದಕ್ಕೆ ಹೋದನು ಆದರೇನು? ಅದನ್ನು ಅಲ್ಲಾಡಿಸುವುದಕ್ಕೂ ಅವನಿಂದ ಸಾಧ್ಯವಾಗಲಿಲ್ಲ. ಆಮೇಲೆ ಬಲಗೈಯನ್ನಿಟ್ಟನು. ಆಗಲೂ ಅದು ಕದಲಲಿಲ್ಲ ಆಮೇಲೆ ಎರಡು ಕೈಗಳನ್ನೂ ಇಟ್ಟು ತನ್ನ ಸರ್ವಪ್ರಯತ್ನದಿಂದ, ತನ್ನ ಸಮಸ್ತ ಶಕ್ತಿಯನ್ನೂ ಉಪಯೋಗಿಸಿ ಎತ್ತುವುದಕ್ಕೆ ಹೋದನು. ಆಗಲೂ ಅದನ್ನಾಡಿಸಲು ಸಾಧ್ಯವಾಗಲಿಲ್ಲ. ಅವನಿಗೆ ಬಹಳ ಆಯಾಸವಾಯಿತು ಮಹಾವ್ಯಸನದಿಂದ ಆ ಪ್ರಯತ್ನವನ್ನು ಬಿಟ್ಟು ಸುಮ್ಮನಿದ್ದನು. ಹೀಗೆ ಆಶಾಭಂಗದಿಂದ ದುಃಖಿಸುತ್ತಿರುವ ಆ ಅಶ್ವತ್ಥಾಮನನ್ನು ನಾನು ಸಮೀಪಕ್ಕೆ ಕರೆದು 'ಓ ಬ್ರಾಹ್ಮಣಾ! ಈ ಲೋಕದಲ್ಲಿ ನನಗೆ ಅರ್ಜುನನಿಗಿಂತಲೂ ಪ್ರಿಯನಾದವನು ಬೇರೊಬ್ಬನಿಲ್ಲ. ನನ್ನಿಂದ ಅವನು ಪಡೆಯಬಾರದ ವಸ್ತುವೊಂದಾದರೂ ಇಲ್ಲ. ನನ್ನ ಪ್ರಾಣಗಳನ್ನಾದರೂ ಅವನಿಗೆ ನಾನು ಒಪ್ಪಿಸತಕ್ಕವನು. ದೇವ ಮನುಷ್ಯವರ್ಗಗಳಿಗೆಲ್ಲ ಅವನು ಆದರ್ಶವೆನಿಸಿರುವನು. ಗಾಂಡೀವಧಾರಿಯೂ, ಕಪಿಧ್ವಜನೂ, ಶ್ವೇತವಾಹನನೂ ಆದ ಆ ಕಿರೀ

ಟೆಯು, ಸಾಕ್ಷಾತ್ಪರಮಶಿವನೊಡನೆ ದ್ವಂದ್ವಯುದ್ಧವನ್ನು ಮಾಡಿ ಅವನನ್ನು ಸಂತೋಷಗೊಳಿಸಿದವನು ಅಂತವನುಕೂಡ ನನ್ನೊಡನೆ ನೀನು ಹೇಳಿದಂತೆ ಇಂತಹ ವಾಕ್ಯವನ್ನಾಡಲಿಲ್ಲ ಇದಲ್ಲದೆ ನಾನು ಹನ್ನೆರಡು ವರ್ಷಗಳವರೆಗೆ ಹಿಮವತ್ಪರ್ವತದ ಪಾರ್ಶ್ವದಲ್ಲಿ ಘೋರವಾದ ಬ್ರಹ್ಮಚರ್ಯವನ್ನು ಹಿಡಿದು, ನನ್ನ ಸಹಧರ್ಮಿಣಿಯಾದ ರುಕ್ಮಿಣಿಯಲ್ಲಿ ತಪೋಬಲದಿಂದ ಯಾವ ಪುತ್ರನನ್ನು ಪಡೆದೆನೋ, ಮಹಾತೇಜಸ್ವಿಯಾದ ಪ್ರದ್ಯುಮ್ನನೆಂಬ ಆ ನನ್ನ ಮಗನು ಸಾಕ್ಷಾತ್ಸನತ್ಕುಮಾರನ ಅಂಶಭೂತನು. ಅಂತವನೂಕೂಡ ನನ್ನಿಂದ ಈ ದಿವ್ಯಚಕ್ರವನ್ನು ಯಾಚಿಸಲಿಲ್ಲ ಮೂಢನಾದ ನೀನು ಅದನ್ನು ಕೇಳಿದೆಯಲ್ಲವೆ? ನನ್ನ ಒಡಹುಟ್ಟಿದ ಬಲರಾಮನಾಗಲಿ, ಗದನಾಗಲಿ, ಸಾಂಬನಾಗಲಿ ಇದನ್ನು ಕೇಳಿದವರಲ್ಲ ದ್ವಾರಕಾವಾಸಿಗಳಾದ ವೃಷ್ಣಿಗಳು, ಅಂಧಕರು ಮೊದಲಾದ ಯಾದವರಾರೂ ಇಂತಹ ಅಲ್ಪವಾದ ಮಾತನ್ನು ನನ್ನೊಡನೆ ಆಡಿದುದಿಲ್ಲ ನೀನು ಬುದ್ಧಿಯಿಲ್ಲದೆ ನನಗೆ ಅಸಾಧಾರಣ ಚಿಹ್ನವಾದ ಚಕ್ರವನ್ನು ಕೇಳುತ್ತಿರುವೆಯಲ್ಲಾ? ನೀನಾದರೋ ಭರತವಂಶಕ್ಕೆಲ್ಲ ಆಚಾರ್ಯನಾದ ದ್ರೋಣಾಚಾರ್ಯನ ಮಗನು ಎಲ್ಲಾ ಯಾದವರಿಂದಲೂ ಪೂಜಿಸಲ್ಪಟ್ಟವನು ಅಪ್ಪಾ! ಈ ಚಕ್ರದಿಂದ ನೀನು ಯಾರನ್ನು ಇದಿರಿಸಬೇಕೆಂದು ಯೋಚಿಸುವೆ?" ಎಂದೆನು ಅದಕ್ಕಾ ಅಶ್ವತ್ಥಾಮನು 'ಕೃಷ್ಣಾ! ನಿನ್ನನ್ನು ಪೂಜಿಸಿ ನಿನ್ನೊಡನೆಯೇ ಯುದ್ಧಮಾಡುವೆನು. ಇದರಿಂದ ನಾನು ಎಂತವರಿಗೂ ದುರ್ಜಯನೆನಿಸುವೆನು ಇದು ಸತ್ಯವು! ಓ ಕೇಶವಾ! ನೀನು ಕೊಡದಿದ್ದರೆ ನಾನು ನಿರಾಶನಾಗಿ ಹಿಂತಿರುಗಿ ಹೋಗುವೆನು ನಿನ್ನ ಮಂಗಳಾಶೀರ್ವಾದವನ್ನು ಅನುಗ್ರಹಿಸಿದರೆ ಸಾಕು ಈ ಚಕ್ರವು ಯಾದವಶ್ರೇಷ್ಠನಾದ ನಿನಗೆ ಹೊರತು ಬೇರೊಬ್ಬರಿಗೆ ಸ್ವಾಧೀನವಾಗತಕ್ಕುದಲ್ಲವೆಂದು ತಿಳಿಯಿತು. ಬೇರೊಬ್ಬನೂ ಇದನ್ನು ಧರಿಸಲಾರನು' ಎಂದು ಹೇಳಿ ನನ್ನಿಂದ ಕೆಲವು ರಥಾಶ್ವಗಳನ್ನೂ, ಧನಗಳನ್ನೂ, ಹಲವು ರತ್ನಗಳನ್ನೂ ಪಡೆದು ಹೊರಟುಹೋದನು. ಆದುದರಿಂದ ಧರ್ಮರಾಜಾ! ಆ ಅಶ್ವತ್ಥಾಮನು ಬಹಳ ಕೋಪಿಷ್ಠನು! ಚಪಲನು, ಕ್ರೂರನು, ದುರ್ಬುದ್ಧಿಯುಳ್ಳವನು, ಅಂತವನಲ್ಲಿ ಬ್ರಹ್ಮಶಿರಸ್ಸೆಂಬ ಮಹಾಸ್ತ್ರವುಂಟು. ಆದುದರಿಂದ ಭೀಮನಿಗೆ ಅವ

ನಿಂದ ಅಪಾಯವುಂಟಾಗದಂತೆ ರಕ್ಷಿಸಿಕೊಳ್ಳಬೇಕಾದುದು ಈಗ ನಿಮ್ಮೆ ಲ್ಲರ ಕರ್ತವ್ಯವು" ಎಂದನು

ಇದು ಹನ್ನೆರಡನೆಯ ಅಧ್ಯಾಯವು

{ ಕೃಷ್ಣನೇ ಮೊದಲಾದವರು ಗಂಗಾತೀರದಲ್ಲಿ ವ್ಯಾಸಮಹರ್ಷಿಯ ಬಳಿಯಲ್ಲಿ ಕುಳಿತಿದ್ದ ಅಶ್ವತ್ಥಾಮನನ್ನು ಕಂಡುದು ಇವರನ್ನು ಕಂಡೊಡನೆ ಅಶ್ವತ್ಥಾಮನು ಪಾಂಡವರೆಲ್ಲರ ನಾಶಕ್ಕಾಗಿ ಬ್ರಹ್ಮಶಿರೋಸ್ತ್ರವನ್ನು ಪ್ರಯೋಗಿಸಿದುದು }

ಓ ಜನಮೇಜಯರಾಜಾ! ಕೇಳು! ಕೃಷ್ಣನು ಯುಧಿಷ್ಠಿರನಿಗೆ ಹೀಗೆಂದು ಹೇಳಿ, ಸರ್ವಾಯುಧಸಾಮಗ್ರಿಗಳಿಂದ ಕೂಡಿದುದಾಗಿಯೂ, ಸುವರ್ಣಾಲಂಕೃತಗಳಾದ ಉತ್ತಮಜಾತಿಯ ಕುದುರೆಗಳಿಂದ ಹೂಡಿದುದಾಗಿಯೂ, ರತ್ನಕಾಂತಿಯಿಂದ ಆಗಲೇ ಉದಿಸಿದ ಸೂರ್ಯನಿಗೆ ಸಮಾನವಾಗಿಯೂ ಇದ್ದ ದಿವ್ಯರಥವನ್ನೇರಿದನು ಆ ರಥಕ್ಕೆ ಮುಂದೆ ಬಲಗಡೆಯಲ್ಲಿ ಶೈಬ್ಯವೆಂಬ ಕುದುರೆಯೂ, ಎಡಗಡೆಯಲ್ಲಿ ಸುಗ್ರೀವವೆಂಬ ಕುದುರೆಯೂ, ಅವೆರಡರ ಹಿಂದೆ ಅದೇ ರೀತಿಯಲ್ಲಿ ಮೇಘಪುಷ್ಪ, ಬಲಾಹಕಗಳೆಂಬ ಎರಡು ಕುದುರಗಳೂ ಹೂಡಲ್ಪಟ್ಟಿದ್ದುವು ವಿಶ್ವಕರ್ಮನಿರ್ಮಿತವಾದ ಆ ರಥದ ಧ್ವಜದಂಡವು ರತ್ನಖಚಿತವಾಗಿ, ಮಹೋನ್ನತವಾಗಿ ವೈನತೇಯನ ಸಾನ್ನಿಧ್ಯದಿಂದ ಶೋಭಿಸುತ್ತಿತ್ತು ಮೊದಲು ಕೃಷ್ಣನು ಅದನ್ನೇರಿದನು ಆಮೇಲೆ ಅರ್ಜುನನೂ, ಅದರಿಂದಾಚೆಗೆ ಯುಧಿಷ್ಠಿರನೂ ಆ ರಥವನ್ನೇರಿ, ಆ ಕೃಷ್ಣನ ಉಭಯಪಾರ್ಶ್ವಗಳಲ್ಲಿ ಮಹೇಂದ್ರನ ಪಕ್ಕಗಳಲ್ಲಿರುವ ಅಶ್ವಿನೀದೇವತೆಗಳಂತೆ ಪ್ರಕಾಶಿಸುತ್ತ ಕುಳಿತರು ಹೀಗೆ ಕೃಷ್ಣನು ಅವರಿಬ್ಬರನ್ನೂ ರಥದಲ್ಲಿ ಏರಿಸಿಕೊಂಡಮೇಲೆ, ತನ್ನ ಕೈಯಲ್ಲಿದ್ದ ಚಾಟಿಯಿಂದ ಕುದುರೆಗಳನ್ನು ತಟ್ಟಿಬಿಟ್ಟನು ಕುದುರೆಗಳು ಶ್ರೀಕೃಷ್ಣನಿಂದಲೂ, ಯುಧಿಷ್ಠಿರಾರ್ಜುನರಿಂದಲೂ ಕೂಡಿದ ರಥವನ್ನು ಅತಿವೇಗದಿಂದೆಳೆದುಕೊಂಡುಹೋದುವು. ಆ ಕುದುರೆಗಳು ಅತಿವೇಗದಿಂದ

ಹಾರುವ ಪಕ್ಷಿಗಳಂತೆ ರಭಸದಿಂದ ಮೊರೆಯುತ್ತ ಮುಂದೆ ಸಾಗಿ ಕ್ಷಣಮಾತ್ರದಲ್ಲಿ ಭೀಮನನ್ನು ಸಮೀಪಿಸಿಬಿಟ್ಟುವು. ಶತ್ರುವಿನಮೇಲೆ ಮಹಾಕ್ರೋಶದಿಂದ ಹೋಗುತ್ತಿರುವ ಆ ಭೀಮನನ್ನು ಈ ಮಹಾರಥರೆಲ್ಲರೂ ಅನೇಕವಿಧದಿಂದ ಒಂದಾಗಿ ಸೇರಿ ತಡೆದರೂ, ಯಾರೂ ಅವನನ್ನು ನಿಲ್ಲಿಸಲಾರದೆ ಹೋದರು. ಭೀಮನು ಎಲ್ಲರಿಗಿಂತ ಮುಂದಾಗಿ ರಥಾರೂಢನಾಗಿ ಪುತ್ರಘಾತಿಯೂ, ದುರಾತ್ಮನೂ ಆದ ಆ ಅಶ್ವತ್ಥಾಮನಿದ್ದ ಸ್ಥಳವನ್ನು ಕೇಳಿಕೊಂಡು ಅಲ್ಲಿಗೆ ಬಂದು ಸೇರಿದನು. ಗಂಗಾತೀರಕ್ಕೆ ಬಂದೊಡನೆ ಅಲ್ಲಿ ಮಹಾತ್ಮನಾದ ವ್ಯಾಸಮುನಿಯು ಅನೇಕ ಋಷಿಗಳೊಡನೆ ಕುಳಿತಿರುವುದನ್ನೂ, ಅವರೆಲ್ಲರ ನಡುವೆ ಆ ವ್ಯಾಸಮಹರ್ಷಿಯ ಪಕ್ಕದಲ್ಲಿ ಅಶ್ವತ್ಥಾಮನು ಘೃತವನ್ನು ಮೈಗೆ ಲೇಪಿಸಿ, ದರ್ಭೆಯನ್ನೂ, ನಾರುಮಡಿಯನ್ನೂ ಧರಿಸಿ ಕುಳಿತಿರುವುದನ್ನೂ ಕಂಡನು. ಒಡನೆಯೇ ಭೀಮನು ಧನುಸ್ಸಿನಲ್ಲಿ ಬಾಣವನ್ನು ಸೇರಿಸಿ, 'ಎಲಾ ದುರಾತ್ಮಾ! ಕ್ರೂರಾ! ನಿಲ್ಲು! ನಿಲ್ಲು! ಎಂದು ನೆಟ್ಟಗೆ ಅಶ್ವತ್ಥಾಮನಿದ್ದಲ್ಲಿಗೆ ಹೋದನು ಭೀಮನು ಹೀಗೆ ಮಹಾಕೋಪದಿಂದ ಧನುರ್ಧಾರಿಯಾಗಿ ಬರುತ್ತಿರುವುದನ್ನೂ, ಅವನ ಹಿಂದೆ ಶ್ರೀಕೃಷ್ಣನ ರಥವನ್ನೇರಿ ಧರ್ಮರಾಜಾರ್ಜುನರಿಬ್ಬರೂ ವೇಗದಿಂದ ಬರುವುದನ್ನೂ ನೋಡಿ ಅಶ್ವತ್ಥಾಮನ ಎದೆಯು ನಡುಗಿತು ಒಡನೆಯೇ ಅವನು ಬೇರೊಂದು ಯೋಚನೆಯೂ ತೋರದೆ, ತನ್ನಲ್ಲಿದ್ದ ಆ ಬ್ರಹ್ಮಶಿರಸ್ಸೆಂಬ ಉತ್ತಮಾಸ್ತ್ರವನ್ನು ಜ್ಞಾಪಿಸಿಕೊಂಡನು. ಆಗ ಅವನಿಗೆ, ಆ ಅಸ್ತ್ರವನ್ನು ಪ್ರಯೋಗಿಸುವುದೇ ಕಾಲೋಚಿತವೆಂದು ತೋರಿತು. ಒಡನೆಯೇ ಅವನು ಸಮೀಪದಲ್ಲಿ ಬಿದ್ದಿದ್ದ ಒಂದು ಹುಲ್ಲುಗರಿಯನ್ನು ಕೈಗೆತ್ತಿಕೊಂಡನು ದಿವ್ಯಾಯುಧಗಳನ್ನು ಧರಿಸಿ, ರಥವನ್ನೇರಿ ಬರುತ್ತಿರುವ ಆ ಶೂರರನ್ನು ನೋಡಿದೊಡನೆ, ತನಗೆ ಬರುವ ವಿಪತ್ತನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ಲೋಕವನ್ನೆಲ್ಲ ಮೂರ್ಛೆಗೊಳಿಸತಕ್ಕ ಭಯಂಕರವಾದ ಆ ಅಸ್ತ್ರಮಂತ್ರವನ್ನು ಜಪಿಸಿ, 'ಇದೋ! ಸಮಸ್ತ ಪಾಂಡವರ ನಿರ್ಮೂಲನಾರ್ಥವಾಗಿ ಈ ಅಸ್ತ್ರವನ್ನು ಬಿಡುವೆನು' ಎಂದು ಹೇಳಿ ಆ ಮಂತ್ರಾಸ್ತ್ರವನ್ನು ಪ್ರಯೋಗಿಸಿಬಿಟ್ಟನು. ಒಡನೆಯೇ ಅದರಿಂದ ಮಹಾಜ್ವಾಲೆ

ಯೊಡನೆ ದೊಡ್ಡ ಬೆಂಕಿಯು ಮೂರು ಲೋಕಗಳನ್ನೂ ಸುಡುವಂತೆ ಹೊರಟಿತು

ಇದು ಹದಿಮೂರನೆಯ ಅಧ್ಯಾಯವು.

{ ಕೃಷ್ಣಾಜ್ಞೆಯಿಂದ ಅರ್ಜುನನು ಅಶ್ವತ್ಥಾಮನ ಅಸ್ತ್ರಕ್ಕೆ ಪ್ರತ್ಯಸ್ತ್ರವನ್ನು ಬಿಟ್ಟುದು }

ಜನಮೇಜಯರಾಜಾ! ಆಗ ಕೃಷ್ಣನು ಅಶ್ವತ್ಥಾಮನ ಇಂಗಿತಗಳಿಂದಲೇ ಅವನ ಪ್ರಯತ್ನವನ್ನು ತಿಳಿದುಕೊಂಡು, ಆತುರದಿಂದ ಅರ್ಜುನನನ್ನು ನೋಡಿ 'ಅರ್ಜುನಾ! ಅರ್ಜುನಾ! ದ್ರೋಣಾಚಾರ್ಯನು ನಿನಗೆ ಉಪದೇಶಿಸಿದ ಯಾವ ದಿವ್ಯಾಸ್ತ್ರವನ್ನು ನೀನು ಹೃದಯದಲ್ಲಿಯೇ ಅಡಗಿಸಿಟ್ಟುಕೊಂಡಿರುವೆಯೋ, ಆ ಅಸ್ತ್ರಪ್ರಯೋಗಕ್ಕೆ ಈಗ ಕಾಲವು ಒದಗಿದೆ ಈಗ ಸರ್ವಪಾಂಡವ ವಿನಾಶಾರ್ಥವಾಗಿ ಅಶ್ವತ್ಥಾಮನು ಪ್ರಯೋಗಿಸಿರುವ ಅಸ್ತ್ರವನ್ನು ನಿಗ್ರಹಿಸಿ, ನಿನ್ನನ್ನೂ, ನಿನ್ನ ಸಹೋದರರನ್ನೂ ಪ್ರಾಣದಿಂದುಳಿಸುವುದಕ್ಕಾಗಿ ನೀನು ಒಡನೆಯೇ ಅದನ್ನು ಪ್ರಯೋಗಿಸಬೇಕು' ಎಂದನು ಈ ಮಾತನ್ನು ಕೇಳಿದೊಡನೆ ಅರ್ಜುನನು ಬಾಣಸಹಿತವಾದ ಬಿಲ್ಲನ್ನು ಕೈಗೆತ್ತಿಕೊಂಡು ರಥದಿಂದ ಕೆಳಕ್ಕಿಳಿದನು ಹೀಗೆ ಅರ್ಜುನನು ಕೆಳಗೆ ನಿಂತಮೇಲೆ 'ಈ ಪ್ರಯತ್ನದಿಂದ ಮೊದಲು ಆಚಾರ್ಯಪುತ್ರನಿಗೂ ಆಮೇಲೆ ತನಗೂ, ಎಲ್ಲಾ ಸಹೋದರರಿಗೂ ಅಪಾಯವಿಲ್ಲದೆ ಕ್ಷೇಮವುಂಟಾಗಲಿ' ಎಂದು ಹೇಳಿ, ಎಲ್ಲಾ ದೇವತೆಗಳಿಗೂ, ಸಮಸ್ತ ಗುರುಗಳಿಗೂ ನಮಸ್ಕರಿಸಿ, ಶಿವನನ್ನು ಧ್ಯಾನಿಸುತ್ತ 'ಈ ಅಸ್ತ್ರದಿಂದ ಆ ಅಸ್ತ್ರವು ಶಾಂತವಾಗಲಿ' ಎಂದು ಹೇಳಿ ತನ್ನ ಅಸ್ತ್ರವನ್ನು ಪ್ರಯೋಗಿಸಿದನು. ಆ ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಅಸ್ತ್ರವು ಪ್ರಳಯಕಾಲಾಗ್ನಿಯಂತೆ ಉರಿಯನ್ನು ಕೆದರುತ್ತ ಹೊರಟಿತು ಅತ್ತಲಿಂದ ಅಶ್ವತ್ಥಾಮನ ಅಸ್ತ್ರವು ಕಿಡಿಗಳನ್ನು ಕೆದರುತ್ತ ತೇಜೋವಿಶಿಷ್ಟವಾಗಿ ಬರುತ್ತಿದ್ದಿತು ಇವು ಎದಿರೆದಿರಾಗಿ ಬರುವಾಗಲೇ ಆಕಾಶದಲ್ಲಿ ಅನೇಕ ಸಿಡಿಲುಗಳು ಬೀಳುತ್ತಿದ್ದುವು. ಸಾವಿರಾರು ಉಲ್ಕೆಗಳು ಬಿದ್ದುವು. ಲೋಕದ ಸಮಸ್ತ ಭೂತ-

ಗಳೂ ಭಯದಿಂದ ತತ್ತಳಿಸುವಂತಾಯಿತು. ಆಕಾಶವೆಲ್ಲ ಭಯಂಕರ ಘೋಷದಿಂದಲೂ, ಭಯಂಕರ ಜ್ವಾಲೆಗಳಿಂದಲೂ ತುಂಬಿಹೋಯಿತು. ಪರ್ವತಾರಣ್ಯಗಳೊಡಗೂಡಿದ ಸಮಸ್ತ ಭೂಮಿಯೂ ನಡುಗಿತು ಹೀಗೆ ಅಶ್ವತ್ಥಾಮಾರ್ಜುನರಿಬ್ಬರ ಅಸ್ತ್ರಜ್ವಾಲೆಗಳಿಂದ ಲೋಕವೆಲ್ಲವೂ ನಡುಗಿ ತತ್ತಳಿಸುತ್ತಿರುವಾಗ, ಧರ್ಮಾತ್ಮನಾದ ನಾರದನೂ, ಭರತಕುಲಕ್ಕೆ ಪಿತಾಮಹನಾದ ವ್ಯಾಸಮುನಿಯೂ ಇಬ್ಬರೂ ಸೇರಿ ಆ ವೀರರಿಬ್ಬರನ್ನೂ ಶಾಂತಗೊಳಿಸುವುದಕ್ಕಾಗಿ ಮುಂದೆ ಬಂದರು ಸಮಸ್ತ ಭೂತಗಳ ಕ್ಷೇಮವನ್ನು ಕೋರತಕ್ಕವರೂ, ಸರ್ವ ಧರ್ಮಗಳನ್ನು ಬಲ್ಲವರೂ, ಮಹಾತೇಜಸ್ವಿಗಳೂ ಆದ ಅವರಿಬ್ಬರೂ ಆ ಎರಡು ಅಸ್ತ್ರಗಳ ನಡುವೆ ಬಂದು ನಿಂತುಬಿಟ್ಟರು ಯಾವ ಪ್ರಾಣಿಗಳಿಂದಲೂ ಅವಮಾನಿಸಲ್ಪಡದ ಮಹಾಮಹಿಮೆಯುಳ್ಳ ಆ ಮಹರ್ಷಿಗಳಿಬ್ಬರೂ, ಜ್ವಲಿಸುವ ಎರಡು ಮಹಾಗ್ನಿಗಳಂತೆ ಆ ಎರಡು ಅಸ್ತ್ರಗಳ ನಡುವೆ ನಿಂತು, ಲೋಕಹಿತಕ್ಕಾಗಿ ಆ ಅಸ್ತ್ರಪ್ರತ್ಯಸ್ತ್ರಗಳ ತೇಜಸ್ಸನ್ನು ಶಾಂತಿಗೊಳಿಸುವ ಉದ್ದೇಶದಿಂದ ಆ ಅಶ್ವತ್ಥಾಮನನ್ನೂ, ಅರ್ಜುನನನ್ನೂ ನೋಡಿ, 'ಎಲೈ ವೀರರೇ! ಏನಿದು ಈ ನಿಮ್ಮ ಸಾಹಸವು? ಲೋಕಕ್ಕೆಲ್ಲ ಮಹಾನರ್ಥಕರವಾದ ಈ ಕಾರ್ಯವನ್ನು ನೀವು ಮಾಡಬಹುದೆ? ಹಿಂದೆ ಮಹಾಸ್ತ್ರಗಳನ್ನು ಬಲ್ಲವರೆಷ್ಟೋ ಮಂದಿ ಮಹಾರಥರಿದ್ದರು ಹಿಂದೆ ಯಾರೂ ಮನುಷ್ಯರಮೇಲೆ ಈ ಅಸ್ತ್ರವನ್ನು ಯಾವ ಸಂದರ್ಭದಲ್ಲಿಯೂ ಪ್ರಯೋಗಿಸಿದುದಿಲ್ಲ ನೀವುಮಾತ್ರ ಹೀಗೆ ಅತಿಕ್ರಮಿಸುವುದೆಂದರೇನು?' ಎಂದರು

ಇದು ಹದಿನಾಲ್ಕನೆಯ ಅಧ್ಯಾಯವು



ಅರ್ಜುನನು ವ್ಯಾಸ ನಾರದರ ನಿರ್ಬಂಧಕ್ಕಾಗಿ ತಾನು ಪ್ರಯೋಗಿಸಿದ ಬ್ರಹ್ಮಶಿರೋಸ್ತ್ರವನ್ನು ಉಪಸಂಹರಿಸಿದುದು ಕೃಷ್ಣನು ಉತ್ತರೆಯ ಗರ್ಭವನ್ನು ತಾನು ಕಾಪಾಡುವುದಾಗಿ ಅಶ್ವತ್ಥಾಮನ ಮುಂದೆ ಪ್ರತಿಜ್ಞೆಮಾಡಿದುದು ಬ್ರಹ್ಮಚರ್ಯೆಯಿಲ್ಲದುದರಿಂದ ಅಸ್ತ್ರಪ್ರತಿಸಂಹಾರ ಮಾಡಲಾರದ ಅಶ್ವತ್ಥಾಮನು, ವ್ಯಾಸನ ಮತ್ತು ಕೃಷ್ಣನ ಮಾತನ್ನು ಮೀರಿ ಐಷೀಕಾಸ್ತ್ರವನ್ನು ಬಿಟ್ಟುದು

ಜನಮೇಜಯರಾಜಾ! ಕೇಳು! ಅಗ್ನಿಸಮಾನ ತೇಜಸ್ಸುಳ್ಳ ಆ ಮುನಿಶ್ರೇಷ್ಠರಿಬ್ಬರನ್ನೂ ನೋಡಿದೊಡನೆ, ಅರ್ಜುನನು ಆಗ ಕಾಲೋಚಿತವೇನೆಂಬುದನ್ನು ತನ್ನಲ್ಲಿತಾನೇ ಆಲೋಚಿಸಿಕೊಂಡು, ಒಡನೆಯೇ ತನ್ನ ಅಸ್ತ್ರವನ್ನು ಉಪಸಂಹಾರಮಾಡಿಕೊಳ್ಳುವ ಉದ್ದೇಶದಿಂದ, ಆ ಮಹರ್ಷಿಗಳ ಮುಂದೆ ಬದ್ಧಾಂಜಲಿಯಾಗಿ ನಿಂತು “ಓ ಮಹಾತ್ಮರೇ! ಅಶ್ವತ್ಥಾಮನ ಅಸ್ತ್ರವನ್ನಡಗಿಸುವುದಕ್ಕಾಗಿ ನಾನು ಆ ಅಸ್ತ್ರವನ್ನು ಪ್ರಯೋಗಿಸಿದೆನು ಆದರ ಈಗ ತಮ್ಮ ಆಜ್ಞೆಗಾಗಿ ನಾನೇನೋ ನನ್ನ ದಿವ್ಯಾಸ್ತ್ರವನ್ನು ಹಿಂದಕ್ಕೆಳೆದುಕೊಳ್ಳುವೆನು ಆದರ ಪಾಪಕರ್ಮಿಯಾದ ದ್ರೋಣಪುತ್ರನು ಪ್ರಯೋಗಿಸಿದ ಅಪಾಂಡವಾಸ್ತ್ರವು ನಮ್ಮೆಲ್ಲರನ್ನೂ ನಿಶ್ಶೇಷವಾಗಿ ದಹಿಸಿಬಿಡುವುದಲ್ಲವೆ? ಆದುದರಿಂದ ಈಗ ನಮಗೂ, ಸರ್ವ ಲೋಕಕ್ಕೂ ಕ್ಷೇಮಕರವಾದ ಉಪಾಯವಾವುದೋ ಅದನ್ನು ತಾವು ಯೋಚಿಸಿ ನಡೆಸಬೇಕು” ಎಂದು ಹೇಳಿ, ತನ್ನ ಅಸ್ತ್ರವನ್ನು ಹಿಂದಕ್ಕೆ ತೆಗೆದುಕೊಂಡನು ಮಹಾರಾಜಾ! ಆ ದಿವ್ಯಾಸ್ತ್ರವನ್ನು ಯುದ್ಧದಲ್ಲಿ ಪ್ರಯೋಗಿಸಿದಮೇಲೆ, ಅದನ್ನುಪಸಂಹಾರಮಾಡಿಕೊಳ್ಳುವುದು ದೇವತೆಗಳಿಗೂ ಸಾಧ್ಯವಲ್ಲ. ಅದು ಬ್ರಹ್ಮತೇಜಸ್ಸಿನಿಂದ ನಿರ್ಮಿತವಾದುದು ಅರ್ಜುನನೊಬ್ಬನು ಹೊರತು ನೂರು ಯಾಗಗಳನ್ನು ಮಾಡಿದ ಸಾಕ್ಷಾದ್ದೇವೇಂದ್ರನಾದರೂ ಅದನ್ನು ಹಿಂದೆ ತೆಗೆದುಕೊಳ್ಳಲಾರನು. ಬುದ್ಧಿಪರಿಪಾಕವಿಲ್ಲದ ಆ ಅಶ್ವತ್ಥಾಮನಾದರೋ ವಿವೇಕವಿಲ್ಲದೆ ಅದನ್ನು ಪ್ರಯೋಗಿಸಿಬಿಟ್ಟನು ಬ್ರಹ್ಮಚರ್ಯವ್ರತವನ್ನು ಸಾಧಿಸಿದವರಿಗಲ್ಲದೆ ಅದನ್ನು ಉಪಸಂಹರಿಸಿಕೊಳ್ಳುವುದು ಬೇರೆಯವರಿಗೆ ಸಾಧ್ಯವಲ್ಲ. ಹಾಗೆ ಬ್ರಹ್ಮಚರ್ಯೆಯನ್ನು ಪೂರ್ತಿಗೊಳಿ

ಸದವನು ಅಸ್ತ್ರವನ್ನು ಪ್ರಯೋಗಿಸಿದಮೇಲೆ ಹಿಂತಿರುಗಿ ಉಪಸಂಹಾರ ಮಾಡುವುದಾದರೆ, ಆ ಅಸ್ತ್ರವು ಸಮಸ್ತ ಪರಿವಾರಗಳೊಡಗೂಡಿದ ಅವನ ತಲೆಯನ್ನೇ ಛೇದಿಸಿಬಿಡುವುದು ಅರ್ಜುನನಾದರೋ ಬ್ರಹ್ಮಚರ್ಯ ವ್ರತವನ್ನು ಸಾಧಿಸಿದವನು ಇತರ ದುರ್ಲಭವಾದ ಅಸ್ತ್ರವನ್ನು ಪಡೆದ ವನು ಹಾಗಿದ್ದರೂ ಎಷ್ಟೋ ವಿಪತ್ಕಾಲದಲ್ಲಿಯಾದರೂ ಅದನ್ನು ಪ್ರಯೋ ಗಿಸಲಿಲ್ಲ. ಅವನು ಸತ್ಯಶೀಲನು! ವ್ರತನಿಷ್ಠನು! ಶೂರನು! ಬ್ರಹ್ಮ ಚಾರಿ! ಹಿರಿಯರಿಗೆ ಅಧೀನನಾಗಿ ನಡೆಯತಕ್ಕವನು. ಆದುದರಿಂದ ಅವನು ಆಚಾರ್ಯರ ಮಾತಿಗೆ ಬದ್ಧನಾಗಿ, ಆ ಅಸ್ತ್ರವನ್ನು ಉಪ ಸಂಹಾರ ಮಾಡಿಕೊಂಡನು ಆದರೇನು? ಈ ಅಸ್ತ್ರಗಳ ನಡುವೆ ನಿಂತಿದ್ದ ಆ ಋಷಿಗಳನ್ನು ನೋಡಿ ಅಶ್ವತ್ಥಾಮನಿಗೂ ಆ ಅಸ್ತ್ರವನ್ನು ಉಪಸಂಹಾರಮಾಡಬೇಕೆಂದು ತೋರಿತು ಅವನಿಗೆ ಅದು ಸಾಧ್ಯವಾಗ ಲಿಲ್ಲ ಇದಕ್ಕಾಗಿ ಅವನು ಬಹಳ ವ್ಯಾಕುಲಗೊಂಡು, ಮುಂದಿದ್ದ ವ್ಯಾಸ ಮಹರ್ಷಿಯನ್ನು ನೋಡಿ ಹೀಗೆಂದು ಹೇಳುವನು “ಓ ಮುನೀಂದ್ರಾ! ಮಹಾವಿಪತ್ತಿಗೆ ಗುರಿಯಾದ ನಾನು ಭೀಮಸೇನನ ಭಯದಿಂದ ನನ್ನ ಪ್ರಾಣವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಈ ಅಸ್ತ್ರವನ್ನು ಪ್ರಯೋಗಿಸಿ ಬಿಟ್ಟೆನು ಈ ಭೀಮಸೇನನಾದರೋ ದುರ್ಯೋಧನನೊಡನೆ ಯುದ್ಧಮಾ ಡುವಾಗ ಅಧರ್ಮದಿಂದ ಅವನನ್ನು ಹೊಡೆದನು ಇದನ್ನೆಲ್ಲ ನೋಡಿ ನಾನು ಮುಂದಾಲೋಚನೆಯಿಲ್ಲದೆ ಕೋಪವಶನಾಗಿ ಅಸ್ತ್ರವನ್ನು ಪ್ರಯೋ ಗಿಸಿಬಿಟ್ಟೆನು. ಅದನ್ನು ತಿರುಗಿ ಉಪಸಂಹಾರಮಾಡಿಕೊಳ್ಳುವುದಕ್ಕೆ ನನಗೆ ಸಾಧ್ಯವಿಲ್ಲ ಅದಲ್ಲದೆ ನಾನು ‘ಅಪಾಂಡವಾಯ’ ಎಂದು ಸಂಕ ಲ್ಪಿಸಿ, ಅಗ್ನಿತೇಜಸ್ಸನ್ನು ಅಭಿಮಂತ್ರಿಸಿ, ಇದನ್ನು ಪ್ರಯೋಗಿಸಿಬಿಟ್ಟೆನು. ಇದು ಪಾಂಡವರನ್ನೆಲ್ಲ ಕೊನೆಮುಟ್ಟಿಸುವುದಕ್ಕಾಗಿಯೇ ಬಿಡಲ್ಪಟ್ಟಿದೆ ಈ ಅಸ್ತ್ರವೇನೋ ಪಾಂಡವರ ಪ್ರಾಣವನ್ನು ತೆಗೆಯದಿರದು ಕೋಪಾವಿಷ್ಟ ನಾದ ಮನಸ್ಸಿನಿಂದ ನಾನು ಆ ಪಾಪಬುದ್ಧಿಯನ್ನು ಹಿಡಿದು ಈ ಕಾರ್ಯ ವನ್ನು ಮಾಡಿಬಿಟ್ಟೆನು ಇದಕ್ಕೆ ಮುಂದೆ ಉಪಾಯವೇನೋ ತಿಳಿಯ ಲಿಲ್ಲ” ಎಂದನು ಅದಕ್ಕೆ ವ್ಯಾಸನು “ಕುಮಾರಾ! ಅಶ್ವತ್ಥಾಮಾ! ಪ್ರಾಜ್ಞನಾದ ಧನಂಜಯನು ಅದೇ ಅಸ್ತ್ರವನ್ನು ಪ್ರಯೋಗಿಸಿದರೂ

ನಿನ್ನಂತೆ ದುರುದ್ದೇಶದಿಂದ ಅವನು ಬಿಟ್ಟವನಲ್ಲ. ನಿನ್ನ ಅಸ್ತ್ರದಿಂದ ಹಿಂಸೆ ಯಿಲ್ಲದಂತೆ ಮಾಡುವುದಕ್ಕಾಗಿ ಅವನು ಆ ಬ್ರಹ್ಮಶಿರೋಸ್ತ್ರವನ್ನು ಬಿಟ್ಟ ನಲ್ಲದೆ ನಿನ್ನಮೇಲೆ ಕೋಪದಿಂದಲೂ ಬಿಟ್ಟವನಲ್ಲ. ಆದುದರಿಂದ ಅವ ನು ಹಿಂತಿರುಗಿ ಆ ಅಸ್ತ್ರವನ್ನು ಉಪಸಂಹರಿಸಿಬಿಟ್ಟನು ನಿನ್ನ ತಂದೆಯ ಉಪದೇಶದಿಂದ ಅವನು ಅಸ್ತ್ರವನ್ನು ಪಡೆದಿದ್ದರೂ ಅವನು ಯಾವಾಗಲೂ ಕ್ಷತ್ರಧರ್ಮವನ್ನು ಮೀರಿ ನಡೆದವನಲ್ಲ ಹೀಗೆ ಮಹಾಸಾಧುವೂ, ಧೀರ ನೂ, ಸರ್ವಾಸ್ತ್ರವಿಶಾರದನೂ ಆದ ಅರ್ಜುನನನ್ನು, ಅವನ ಎಲ್ಲಾ ಭ್ರಾತೃ ಬಂಧುಗಳೊಡನೆ ಕೊಲ್ಲುವುದಕ್ಕಾಗಿ ಈ ಅಸ್ತ್ರವನ್ನು ಬಿಟ್ಟುದು ನ್ಯಾಯ ವೇ ? ಈ ದುರುದ್ದೇಶವು ನಿನಗೇಕೆ ಹುಟ್ಟಿತು ? ಬ್ರಹ್ಮಶಿರೋಸ್ತ್ರಕ್ಕೆ ಬೇರೆ ಉತ್ತಮಾಸ್ತ್ರದಿಂದ ಎಲ್ಲಿ ಭಂಗವುಂಟಾಗುವುದೋ, ಆ ಸ್ಥಳದಲ್ಲಿ ಹನ್ನೆರಡು ವರ್ಷಗಳವರೆಗೆ ಮೇಘವು ಮಳೆಯನ್ನು ಸುರಿಸಲಾರದು ಇದನ್ನೆಲ್ಲ ಯೋಚಿಸಿಯೇ ಅರ್ಜುನನು ತನಗೆ ಶಕ್ತಿಯಿದ್ದರೂ ಪ್ರಜೆಗಳ ಹಿತಕ್ಕಾಗಿ ಆ ನಿನ್ನ ಅಸ್ತ್ರವನ್ನು ಭಂಗಿಸಲಿಲ್ಲ ಪಾಂಡವರನ್ನೂ, ನಿನ್ನನ್ನೂ, ರಾಜ್ಯ ವನ್ನೂ ಯಾವಾಗಲೂ ನಿರಪಾಯವಾಗಿ ರಕ್ಷಿಸಬೇಕಾದುದು ನಮ್ಮ ಕರ್ತ ವ್ಯವು ಆದುದರಿಂದ ನಿನ್ನ ಅಸ್ತ್ರವನ್ನು ಹಿಂದಕ್ಕೆ ತೆಗೆದುಕೊಳ್ಳಲು ಪ್ರಯ ತ್ನಿಸು ನಿನ್ನ ಕೋಪವನ್ನು ಅಡಗಿಸು ಪಾಂಡವರು ಕ್ಷೇಮದಿಂದಿರಲಿ ಧರ್ಮರಾಜನು ಯಾವಾಗಲೂ ಅಧರ್ಮದಿಂದ ಶತ್ರುಗಳನ್ನು ಕೊಲ್ಲುವು ದಕ್ಕೆ ಹೋಗುವವನಲ್ಲ ನಿನ್ನ ತಲೆಯಲ್ಲಿರುವ ಸಹಜರತ್ನವನ್ನು ಪಾಂಡ ವರಿಗೆ ಕೊಟ್ಟುಬಿಡು ಅವರು ಅದರಿಂದ ತೃಪ್ತರಾಗಿ, ನಿನಗೆ ಪ್ರಾಣದಾನ ವನ್ನು ಮಾಡುವರು" ಎಂದನು ಅದಕ್ಕಾ ಅಶ್ವತ್ಥಾಮನು "ಓ ಮಹಾ ತ್ಮಾ ! ಪಾಂಡವರಲ್ಲಿಯೇ ಆಗಲಿ, ಕೌರವರಲ್ಲಿಯೇ ಆಗಲಿ ಇದುವರೆಗೆ ಇರುವ ಬೇರೆ ಎಲ್ಲಾ ರತ್ನಗಳಿಗಿಂತಲೂ ನನ್ನ ತಲೆಯಲ್ಲಿರುವ ಈ ಮಣಿ ಯು ಬಹಳ ಅತಿಶಯವಾದುದು ಈ ರತ್ನವನ್ನು ಧರಿಸಿದವನಿಗೆ ಶಸ್ತ್ರ ಭಯವಿಲ್ಲ! ರೋಗಭಯವಿಲ್ಲ ! ಹಸಿವಿನ ಭಯವಿಲ್ಲ ! ದೇವಾಸುರ ಪನ್ನ ಗರಿಂದ ಭಯವಿಲ್ಲ ರಾಕ್ಷಸಭಯವಿಲ್ಲ ಚೋರಭಯವಿಲ್ಲ ! ಅಂತಹ ಪ್ರಭಾವವುಳ್ಳ ಈ ಮಣಿಯನ್ನು ನಾನು ಯಾವ ವಿಧದಿಂದಲೂ ಅಗಲಲಾ ರೆನು. ಆದರೆ ಪೂಜ್ಯನಾದ ನೀನು ಹೇಳಿದ ಮಾತನ್ನು ನಾನು ಆಕ್ಷಣವೇ

ನಡೆಸದೆ ತೀರದು ! ಇದೋ ! ಇಲ್ಲಿ ಮಣಿಯಿರುವುದು. ಇದೋ ! ನಾನೂ ಇರುವೆನು ಆದರೆ, ನನ್ನ ಇಷೀಕಾಸ್ತ್ರವುಮಾತ್ರ ಪಾಂಡುಪುತ್ರರ ಮತ್ತು ಉತ್ತರೆಯ ಗರ್ಭದಲ್ಲಿ ಹೋಗಿ ಪ್ರವೇಶಿಸದೆ ಬಿಡದು '' ಎಂದನು. ಆಗ ವ್ಯಾಸನು ಪರಮ ದುಃಖಿತನಾಗಿ ' ಅಶ್ವತ್ಥಾಮಾ ! ' ಹಾಗೆಯೇ ನಡೆಯಲಿ ! ನೀನು ತಿರುಗಿ ಬೇರೇನನ್ನೂ ಯೋಚಿಸಬಾರದು. ನಿನ್ನ ಅಸ್ತ್ರವನ್ನು ಪಾಂಡವರ ಗರ್ಭದಲ್ಲ ಬಿಟ್ಟು, ಅಷ್ಟಕ್ಕೆ ಶಾಂತನಾಗು ' ಎಂದನು ಆಗ ಕೃಷ್ಣನು ಪಾಂಡವರ ಕ್ಷೇಮಚಿಂತೆಯಿಂದ ' ಅಶ್ವತ್ಥಾಮಾ ! ಪಾಂಡವರಿಗೆ ಮುಂದೆ ವಂಶೋದ್ಧಾರಕನಾಗುವ ಒಂದು ಬೀಜವನ್ನು ಮಾತ್ರ ಬಿಟ್ಟು, ಉಳಿದ ಗರ್ಭಗಳಲ್ಲಿ ನಿನ್ನ ಅಸ್ತ್ರವನ್ನು ಬಿಡು ಅವರಿಗೆ ಪಿಂಡದಾನಕ್ಕಾಗಿ ರಾಜರ್ಷಿಯೆನಿಸಿಕೊಂಡು ಆ ಪಾಂಡವವಂಶದ ಕೀರ್ತಿಯನ್ನು ಹೆಚ್ಚಿಸತಕ್ಕವನೂ, ಪುಣ್ಯಕರ್ಮನೂ, ಅನೇಕ ಯಾಗಗಳನ್ನು ನಡೆಸತಕ್ಕವನೂ ಆದ ಒಬ್ಬ ಪುತ್ರನನ್ನು ನಾನು ಕಾಪಾಡುವೆನು ಇಷ್ಟನ್ನಾದರೂ ನಡೆಸಿಕೊಡು ಇದಕ್ಕೆಮೇಲೆ ನೀನು ಕ್ರೂರಬುದ್ಧಿಯನ್ನು ಮಾಡಬಾರದು ! ಪಾಂಡವರ ಕುಲವನ್ನು ಗರ್ಭದಿಂದಲೇ ಕೊಂದು ಅಧಃಪಾತಕ್ಕೆ ಗುರಿಯಾಗಬೇಡ ' ಎಂದನು ಅದಕ್ಕೆ ಅಶ್ವತ್ಥಾಮನು ಕೋಪಾವೇಶದಿಂದ ಕೃಷ್ಣನನ್ನು ಕುರಿತು " ಕೇಶವಾ ! ನೀನು ಕೇವಲಪಕ್ಷಪಾತದಿಂದ ಹೇಳಿದ ಈ ಕಾರ್ಯವು ನಡೆಯದು ನಿನ್ನ ಮಾತಿಗೆ ನನ್ನ ಉದ್ದೇಶವು ಕೇವಲ ವಿರುದ್ಧವಾಗಿರುವುದು ಕೃಷ್ಣಾ ! ಈಗ ನೀನು ಯಾವ ಗರ್ಭವನ್ನು ರಕ್ಷಿಸಬೇಕೆಂದು ಉದ್ದೇಶಿಸಿರುವೆಯೋ, ಆ ವಿರಾಟಪುತ್ರಿಯ (ಅಭಿಮನ್ಯುವಿನ ಪತ್ನಿಯಾದ ಉತ್ತರೆಯ) ಗರ್ಭದಲ್ಲಿಯೇ ಈ ಅಸ್ತ್ರವು ಬಿದ್ದು ಅದನ್ನು ಕೊಲ್ಲುವುದು ' ಎಂದನು ಆಗ ಕೃಷ್ಣನು ' ದ್ರೋಣಪುತ್ರಾ ! ' ಸರಿ ! ಹಾಗೆಯೇ ಆಗಲಿ ' ನಿನ್ನ ಅಸ್ತ್ರವೇನೋ ವಿಫಲವಾಗುವುದಲ್ಲ ! ನಿನ್ನ ಅಸ್ತ್ರವು ಹೋಗಿ ಅಭಿಮನ್ಯುಪತ್ನಿಯ ಗರ್ಭದಲ್ಲಿ ಪ್ರವೇಶಿಸಿ, ಆ ಶಿಶುವನ್ನು ಕೊಲ್ಲಲಿ ಅದರಿಂದ ಮೃತವಾದ ಶಿಶುವನ್ನು ತಿರುಗಿ ನಾನು ನನ್ನ ಶಕ್ತಿಯಿಂದ ಬದುಕಿಸುವೆನು. ಹೀಗೆ ಸತ್ತು ಬದುಕಿದ ಆ ಮಗುವು ದೀರ್ಘಾಯುಷ್ಯವನ್ನು ಹೊಂದುವನು ' ಎಂದನು. ಅದನ್ನು ಕೇಳಿ ಅಶ್ವತ್ಥಾಮನು ನಗುತ್ತ ' ಗೋವಿಂದಾ ! ಹಾಗೆ ನನ್ನ ಅಸ್ತ್ರದಿಂದ ದಗ್ಧನಾದ

ಮೇಲೆ ಆ ಬಾಲನನ್ನು ನೀನು ತಿರುಗಿ ಬದುಕಿಸುವುದಾದರೆ ಬದುಕಿಸು. ಆದಕ್ಕೆ ನನ್ನ ಅಡ್ಡಿಯಿಲ್ಲ' ಎಂದು ಹೇಳಿ ವ್ಯಾಸನ ಮಾತನ್ನೂ ಅನಾದರಿಸಿ, ತನ್ನ ಅಸ್ತ್ರವನ್ನು ತಾನು ಉದ್ದೇಶಿಸಿದ ಪಾಂಡವರ ಗರ್ಭಗಳಲ್ಲಿ ಪ್ರಯೋಗಿಸಿದನು

ಇದು ಹದಿನೈದನೆಯ ಅಧ್ಯಾಯವು

ಕೃಷ್ಣನು ತನ್ನ ಆಜ್ಞೆಯನ್ನು ಮೀರಿದ ಅಶ್ವತ್ಥಾಮನನ್ನು ಶಪಿಸಿದುದು. ಭೀಮನು ಅಶ್ವತ್ಥಾಮನ ಶಿರಸ್ಸಿನಲ್ಲಿದ್ದ ಮಣಿಯನ್ನು ತಂದು ದ್ರೌಪದಿಗೆ ಕೊಟ್ಟುದು ಅದನ್ನು ದ್ರೌಪದಿಯ ಕೋರಿಕೆಯಂತೆ ಯುಧಿಷ್ಠಿರನು ತನ್ನ ತಲೆಯಲ್ಲಿಟ್ಟುಕೊಂಡುದು

ಶ್ರೀಕೃಷ್ಣನು ಅಶ್ವತ್ಥಾಮನಿಂದ ಪ್ರಯೋಗಿಸಲ್ಪಟ್ಟ ಅಸ್ತ್ರವು ಉತ್ತರೆಯ ಗರ್ಭದಲ್ಲಿ ಪ್ರವೇಶಿಸಿದುದನ್ನು ತಿಳಿದು, ಅಶ್ವತ್ಥಾಮನನ್ನು ನೋಡಿ "ಬ್ರಾಹ್ಮಣಾ! ಉಪಪ್ಲಾವ್ಯದಲ್ಲಿರುವ ಅರ್ಜುನನ ಸೊಸೆಯೂ, ವಿರಾಟರಾಜನ ಪುತ್ರಿಯೂ ಆದ ಉತ್ತರೆಯ ವಿಷಯವಾಗಿ ಹಿಂದೆಯೇ ಸತ್ಯವ್ರತನಾದ ಒಬ್ಬ ಬ್ರಾಹ್ಮಣನು 'ಕೌರವವಂಶವೆಲ್ಲವೂ ಕ್ಷೀಣದಶೆ ಹೊಂದಿದಮೇಲೆ ನಿನಗೆ ಪುತ್ರನು ಹುಟ್ಟುವನು ಆದುದರಿಂದ ಗರ್ಭದಲ್ಲಿ ಉಂಟಾದ ಆ ಶಿಶುವಿಗೆ "ಪರೀಕ್ಷಿತ್" ಎಂಬ ಹೆಸರಾಗುವುದು' ಎಂದು ಹೇಳಿದ್ದನು ಆತನ ವಾಕ್ಯವು ಈಗ ಸತ್ಯವಾಗುವುದು ಪಾಂಡವವಂಶೋದ್ಧಾರಕನಾದ 'ಪರೀಕ್ಷಿತ್' ಎಂಬ ರಾಜಕುಮಾರನೇನೋ ಹುಟ್ಟುವನು ಆದರ ಅಶ್ವತ್ಥಾಮಾ! ನಿನ್ನನ್ನು ಮಾತ್ರ ಎಲ್ಲರೂ ಮಹಾಪಾಪಿಯೆಂದೂ, ಅಲ್ಪನೆಂದೂ, ಕ್ರೂರಕರ್ಮಿಯೆಂದೂ, ಶಿಶುಘಾತಕನೆಂದೂ ನಿಂದಿಸುವಂತಾಯಿತು ನೀನೂ ಈ ಪಾಪಕೃತ್ಯಕ್ಕೆ ಫಲವನ್ನನುಭವಿಸದೆ ತೀರದು. ಇದಕ್ಕಾಗಿ ನೀನು ಇನ್ನೂ ಮೂರುಸಾವಿರ ವರ್ಷಗಳವರೆಗೆ ಈ ಭೂಲೋಕದಲ್ಲಿ ಅಲೆಯುತ್ತಿರು. ಯಾವ ಸ್ಥಳದಲ್ಲಿಯೂ, ಯಾವ ಕಾಲದಲ್ಲಿಯೂ, ಯಾರೊಡನೆಯೂ, ಯಾವ ವಿಧವಾದ ಮಾತುಕಥೆಗಳೂ ಇಲ್ಲದೆ, ಅಸ

ಹಾಯನಾಗಿ, ಏಕಾಕಿಯಾಗಿ ನಿರ್ಜನವಾದ ಸ್ಥಳದಲ್ಲಿಯೇ ಅಲೆಯು ತ್ತಿರಬೇಕು. ಎಲ ನೀಚಾ! ಆಗ ನಿನಗೆ ಜನಮಧ್ಯದಲ್ಲಿ ವಾಸವೇ ಇರ ಲಾರದು ಕೀವು, ರಕ್ತ, ಮಾಂಸ, ಕೊಬ್ಬು ಇವುಗಳ ದುರ್ಗಂಧದಿಂದ ತುಂಬಿದ ಮೈಯುಳ್ಳವನಾಗಿ ಏಕಾಕಿಯಾಗಿಯೇ ತಿರುಗುವೆ ಆ ಪರೀ ಕ್ಷಿತ್ತಾದರೋ ವಯಸ್ಕನಾಗಿ ದೊಡ್ಡ ವ್ರತವೊಂದನ್ನು ಹಿಡಿದು, ಶಾರದ್ವತ ಕುಮಾರನಾದ ಕೃಪನಿಂದ ಅಸ್ತ್ರವೇದಗಳನ್ನೆಲ್ಲ ಪಡೆಯುವನು ಮಹಾತ್ಮ ನಾದ ಆ ಪರೀಕ್ಷಿತ್ತು ಉತ್ತಮಾಸ್ತ್ರಗಳನ್ನು ಕಲಿತು ಕ್ಷತ್ರಿಯ ಧರ್ಮಕ್ಕೆ ತಕ್ಕ ವ್ರತವನ್ನು ಹಿಡಿದು ಅರುವತ್ತುವರ್ಷಕಾಲದವರೆಗೆ ಪರಿಪಾಲನಮಾ ಡುವನು ನಿನ್ನ ಕಣ್ಣೆದಿರಾಗಿಯೇ ಇನ್ನುಮೇಲೆ ಅವನು ಕುರುರಾಜ್ಯ ವನ್ನನುಭವಿಸುವನು. ಎಲೆ ನರಾಧಮಾ! ನಿನ್ನ ಶಸ್ತ್ರಾಗ್ನಿತೇಜಸ್ಸಿನಿಂದ ಸುಡಲ್ಪಟ್ಟರೂ ಅವನನ್ನು ನಾನು ತಿರುಗಿ ಬದುಕಿಸುವೆನು ನನ್ನ ತಪಸ್ಸು, ಸತ್ಯ, ಇವುಗಳ ಪ್ರಭಾವವನ್ನು ನೋಡು!' ಎಂದನು. ಇದನ್ನು ಕೇಳಿದ ಮೇಲೆ ವ್ಯಾಸನು 'ದುಷ್ಟಾ! ನಮ್ಮನ್ನೂ ಅನಾದರಿಸಿ ನೀನು ಈ ಕೆಲಸ ವನ್ನು ಮಾಡಿದೆ ಅಲ್ಲದೆ ಬ್ರಾಹ್ಮಣನಾಗಿದ್ದು ನೀನು ಈ ವಿಧವಾದ ಮಹಾಪಾಪಕಾರ್ಯವನ್ನು ಮಾಡಿದುದಕ್ಕಾಗಿ ಕೃಷ್ಣನು ಹೇಳಿದ ಮಾತು ನಿನಗೆ ಈ ಲೋಕವಿರುವವರಗೆ ತಪ್ಪಲಾರದು ಹೋಗು' ಎಂದು ಹೇಳಿ ದನು ಆದಕ್ಕೆ ಅಶ್ವತ್ಥಾಮನು ವ್ಯಸನದಿಂದ 'ಬ್ರಾಹ್ಮಣೋತ್ತಮಾ! ಲೋಕದ ಮನುಷ್ಯರಲ್ಲಿ ನಾನೂ ಒಬ್ಬನಾಗಿ ನಿನ್ನೊಡನೆಯೇ ಇರು ವೆನು ನೀನು ಸತ್ಯವಚನನಾಗು! ಪರಮಾತ್ಮನೂ ಸತ್ಯವಚನವುಳ್ಳವ ನಾಗಲಿ!' ಎಂದು ಹೇಳಿ, ಪಾಂಡವರಿಗೆ ಆ ಮಣಿಯನ್ನು ಕೊಟ್ಟು, ಅವ ರೆಲ್ಲರೂ ನೋಡುವಾಗಲೇ ಅರಣ್ಯಕ್ಕೆ ಹೋದನು. ಪಾಂಡವರೂ, ಕೇಶವ ನೊಡನೆ ವ್ಯಾಸ, ನಾರದ, ಪರ್ವತಾದಿಗಳಿಗೆ ಅಭಿವಾದನ ಮಾಡಿ ದ್ರೋಣ ಪುತ್ರನ ಮಣಿಯನ್ನು ತೆಗೆದುಕೊಂಡು, ಪ್ರಾಯೋಪವೇಶದಲ್ಲಿದ್ದ ದೃಢ ಮನಸ್ಸುಳ್ಳವಳಾದ ದ್ರೌಪದಿಯಿದ್ದಲ್ಲಿಗೆ ರಥಾರೂಢರಾಗಿ ಅತಿವೇಗದಿಂದ ಬಂದು ರಥದಿಂದಿಳಿದರು ಅಲ್ಲಿ ಪುತ್ರಮರಣದಿಂದಲೂ, ಅಶ್ವತ್ಥಾಮನಿ ಗಾದ ಅವಮಾನದಿಂದಲೂ ದುಃಖ ದಂತೋಷಗಳಿಂದ ಕೂಡಿದ ದ್ರೌಪದಿ ಯನ್ನು ಕಂಡು, ಅವಳ ಸುತ್ತಲೂ ನಿಂತರು

ಆಮೇಲೆ ಅಣ್ಣನ ಅನುಮತಿಯಿಂದ ಭೀಮಸೇನನು ದ್ರೌಪದಿಗೆ ಆ ದಿವ್ಯರತ್ನವನ್ನು ಕೊಡುತ್ತ 'ಕಲ್ಯಾಣೀ! ಈ ರತ್ನವನ್ನು ನಿನಗಾಗಿ ತಂದಿರುವೆನು. ಇದನ್ನು ಸ್ವೀಕರಿಸು. ನಿನ್ನ ಪುತ್ರನನ್ನು ಕೊಂದ ಅಶ್ವತ್ಥಾಮನು ಪರಾಜಿತನಾದನು. ಇನ್ನು ನಿನ್ನ ಶೋಕವನ್ನು ಬಿಡು ಏಳು ಕ್ಷತ್ರಿಯಧರ್ಮವನ್ನನುಸರಿಸು! ಕೃಷ್ಣನು ಸಂಧಿಗಾಗಿ ಹೊರಟ ಸಮಯದಲ್ಲಿ ನೀನು ಅವನನ್ನು ಕುರಿತು 'ಅಣ್ಣನು ಕೌರವರೊಡನೆ ಸಮಾಧಾನವನ್ನು ಕೋರುವುದಾದರೆ ನನಗೆ ಪತಿಗಳಾರೂ ಇಲ್ಲ! ಪುತ್ರರೂ ಇಲ್ಲ! ಸಹೋದರರೂ ಇಲ್ಲ! ನೀನೂ ಇಲ್ಲ!' ವೆಂದು ಹೇಳಿದೆಯಲ್ಲವೆ? ಪುರುಷೋತ್ತಮನ ಮುಂದೆ ನೀನು ನುಡಿದ ಕ್ಷತ್ರಿಯ ಧರ್ಮಕ್ಕೆ ಯೋಗ್ಯವಾದ ಆ ಮಾತನ್ನು ಈಗ ನೆನೆ! ರಾಜ್ಯಕ್ಕೆಲ್ಲ ವಿರೋಧಿಯೂ, ಪಾಪಿಯೂ ಆದ ದುರ್ಯೋಧನನು ಕೊಲ್ಲಲ್ಪಟ್ಟನು ದುಶ್ಶಾಸನನ ರಕ್ತವು ನನ್ನಿಂದ ಪಾನಮಾಡಲ್ಪಟ್ಟಿತು ಶತ್ರುವಿನ ಹಗೆಗಳ ವಿಷಯದಲ್ಲಿ ನಮ್ಮ ಸಾಲವು ತೀರಿತು ನಮ್ಮನ್ನು ನಿಂದಿಸುವವರ ನಿಂದೆಗೆ ನಾವು ಪಾತ್ರರಾಗಲಿಲ್ಲ. ದ್ರೋಣಪುತ್ರನೂ ಜಯಿಸಲ್ಪಟ್ಟು, ತನ್ನ ಬ್ರಾಹ್ಮಣ್ಯದಿಂದಲೂ, ಗೌರವದಿಂದಲೂ ಚ್ಯುತನಾದನು. ದೇವೀ! ಅವನ ಕೀರ್ತಿಯು ಮಾಸಿತು ಅವನ ಶರೀರವೊಂದು ಮಾತ್ರ ಉಳಿದಿರುವುದು ಅವನು ಮಣಿಯನ್ನೂ ಕಳೆದುಕೊಂಡನು ಆಯುಧವನ್ನೂ ಬಿಸಾಡಿದನು' ಎಂದನು. ಆಗ ದ್ರೌಪದಿಯು "ಕಾಂತಾ! ಮುಖ್ಯವಾಗಿ ನಾವು ಪ್ರತಿಜ್ಞೆಯನ್ನು ಪೂರಯಿಸಿ ಋಣಮುಕ್ತರಾದೆವು. ಹೇಗಿದ್ದರೂ ಆ ಗುರುಪುತ್ರನೇ ನಮಗೆ ಗುರು! ಈ ಮಣಿಯನ್ನು ಗುರುಪ್ರಸಾದರೂಪವಾಗಿ ಶಿರಸ್ಸಿನಲ್ಲಿಟ್ಟುಕೊಳ್ಳುವುದಕ್ಕೆ ರಾಜನೇ ಅರ್ಹನು" ಎಂದು ಆ ಮಣಿಯನ್ನು ಯುಧಿಷ್ಠಿರನ ಕೈಗೆ ಕೊಟ್ಟಳು ಯುಧಿಷ್ಠಿರನು ಅದನ್ನು ತೆಗೆದುಕೊಂಡು ದ್ರೌಪದಿಯ ಮಾತಿಗಾಗಿಯೂ, ಗುರುಪ್ರಸಾದವೆಂಬ ಗೌರವಕ್ಕಾಗಿಯೂ ಆಗ ಅದನ್ನು ತನ್ನ ಶಿರಸ್ಸಿನಲ್ಲಿ ಧರಿಸಿ ಚಂದ್ರನೊಡಗೂಡಿದ ಪರ್ವತದಂತೆ ಪ್ರಕಾಶಿಸಿದನು ಪುತ್ರವಿಯೋಗ ದುಃಖಿತಳಾದ ದ್ರೌಪದಿಯು ಮೇಲೆದ್ದು ನಿಂತಳು ಆಗ ಧರ್ಮರಾಜನು ಮಾಧವನನ್ನು ಹೀಗೆಂದು ಕೇಳುವನು.

ಇದು ಹದಿನಾರನೆಯ ಅಧ್ಯಾಯವು

ಅಶ್ವತ್ಥಾಮನೊಬ್ಬನೇ ಅಷ್ಟುಮಂದಿಯನ್ನೂ ಕೊಲ್ಲುವ ಶಕ್ತಿಯನ್ನು ರುದ್ರನ ಕೃಪೆಯಿಂದ ಪಡೆದ ವೃತ್ತಾಂತವನ್ನು ಕೃಷ್ಣನು ಯುಧಿಷ್ಠಿರನಿಗೆ ವಿವರಿಸಿದುದು.

ರಾಜೇಂದ್ರಾ ! ಆ ಮೂರುಮಂದಿ ಮಹಾರಥರು ತನ್ನ ಎಲ್ಲಾ ರಥಿಕರನ್ನೂ, ವೀರರನ್ನೂ ನಿದ್ರೆಮಾಡುವ ಸಮಯದಲ್ಲಿ ಕೊಂದುದನ್ನು ಕೇಳಿ ಯುಧಿಷ್ಠಿರನು ಬಹಳ ದುಃಖಿಸುತ್ತ ' ಕೃಷ್ಣಾ ! ಪಾಪಿಯಾದ ಅಶ್ವತ್ಥಾಮನೊಬ್ಬನಿಂದ ನನ್ನಕಡೆಯ ವೀರರಲ್ಲರೂ ಹೇಗೆ ಕೊಲ್ಲಲ್ಪಟ್ಟರು? ಯಾವ ಯುದ್ಧದಲ್ಲಿಯೂ ಹಿಂತಿರುಗದವರೂ, ಅಸ್ತ್ರಪ್ರಯೋಗದಲ್ಲಿ ನಿಪುಣರೂ, ಮಹಾಪರಾಕ್ರಮಿಗಳೂ ಆದ ದ್ರುಪದಕುಮಾರರು ಹೇಗೆ ಮೃತರಾದರು ? ಯಾವನಿಗಿದಿರಾಗಿ ದ್ರೋಣನೂ ಮುಖವನ್ನು ತೋರಿಸದಿದ್ದನೋ ಅಂತಹ ವೀರನಾದ ಧೃಷ್ಟದ್ಯುಮ್ನನನ್ನು ಅವನ ಮಗನು ಹೇಗೆ ಕೊಂದನು? ಯಾವ ಶಕ್ತಿಯಿಂದ ಕ್ರೂರನಾದ ಅಶ್ವತ್ಥಾಮನು ನಮ್ಮಕಡೆಯ ಅಷ್ಟೊಂದುಮಂದಿ ವೀರರನ್ನು ಕೊಂದನು ? ' ಎಂದು ಕೇಳಿದನು

ಅದಕ್ಕೆ ಕೃಷ್ಣನು ' ಪ್ರಭುಗಳಿಗೂ ಪ್ರಭುವಾಗಿ ಸರ್ವೇಶ್ವರನೆನಿಸಿದ ರುದ್ರನಲ್ಲಿ ಅಶ್ವತ್ಥಾಮನು ಶರಣಾಗತನಾದುದರಿಂದ ಅವನೊಬ್ಬನೇ ಅನೇಕರನ್ನು ಕೊಲ್ಲಬಲ್ಲವನಾದನು ರಾಜೇಂದ್ರಾ ! ಆ ಪರಮೇಶ್ವರನು ಪ್ರಸನ್ನನಾದರೆ ಮರಣವೇ ಇಲ್ಲದಿರುವುದನ್ನೂ, ಇಂದ್ರನನ್ನು ನಿಗ್ರಹಿಸುವ ಸಾಮರ್ಥ್ಯವನ್ನೂ ಕೊಡಬಲ್ಲನು. ಅವನ ಶಕ್ತಿಯನ್ನೂ, ಪ್ರಭಾವವನ್ನೂ ನಾನು ಚೆನ್ನಾಗಿ ಬಲ್ಲೆನು. ಅವನ ಪುರಾತನ ಚರಿತ್ರಗಳನ್ನೂ, ವಿವಿಧ ಕರ್ಮಗಳನ್ನೂ ನಾನು ತತ್ವದಿಂದ ತಿಳಿದಿರುವೆನು ಸಮಸ್ತ ಭೂತಗಳಿಗೆ ಆದಿಯೂ, ಮಧ್ಯವೂ, ಅಂತ್ಯವೂ ಅವನೇ ಆಗಿರುವನು ಜಗತ್ತೆಲ್ಲವೂ ಅವನ ಪ್ರೇರಣೆಯಿಂದಲೇ ನಡೆಯುವುದು. ಮೊದಲು ಪಿತಾಮಹನು ಭೂತಗಳನ್ನು ಸೃಷ್ಟಿಸುವುದಕ್ಕೆ ಯತ್ನಿಸಿದಾಗ ಮೊದಲು ಈ ರುದ್ರನನ್ನೇ ನೋಡಿ ' ಕಾಲವಿಳಂಬವಿಲ್ಲದೆ ಭೂತಗಳನ್ನು ಸೃಷ್ಟಿಸು ' ಎಂದು ಆಜ್ಞೆ ಮಾಡಿದನು. ಅದಕ್ಕೆ ರುದ್ರನು ಸಮ್ಮತಿಸಿ, ನೀರಿನಲ್ಲಿ ಮುಳುಗಿ, ಬಹಳ ಕಾಲದವರೆಗೆ ಉಗ್ರತಪಸ್ಸನ್ನು ಮಾಡುತ್ತಿದ್ದನು. ಆಮೇಲೆ ಪಿತಾಮ

ಹನು ಬಹುಕಾಲದವರೆಗೆ ಅವನಿಗಾಗಿ ನಿರೀಕ್ಷಿಸಿ ಕೊನೆಗೆ ಸರ್ವ ಭೂತಗಳನ್ನೂ ಸೃಷ್ಟಿಸುವುದಕ್ಕಾಗಿ ಬೇರೊಬ್ಬನನ್ನು ಮನಸ್ಸಿನಲ್ಲಿ ಸೃಷ್ಟಿಸಿದನು. ಅವನು ತನಗೆ ಮೊದಲೇ ನೀರಿನಲ್ಲಿ ಮುಳುಗಿದ್ದ ರುದ್ರನನ್ನು ಕಂಡು 'ನನಗೆ ಮೊದಲೇ ಬೇರೆ ಯಾವನೂ ಇಲ್ಲದಿದ್ದರೆಮಾತ್ರ ನಾನು ಪ್ರಜೆಗಳನ್ನು ಸೃಷ್ಟಿಸುವೆನು' ಎಂದನು ಆಗ ಪಿತಾಮಹನು 'ಬೇರೆ ಯಾವನೂ ಇಲ್ಲ. ಆದರೆ, ಮೊದಲು ನನ್ನಿಂದ ಸೃಷ್ಟಿಸಲ್ಪಟ್ಟ ರುದ್ರನೊಬ್ಬನು ನೀರಿನಲ್ಲಿ ಮುಳುಗಿರುವನು. ಆದುದರಿಂದ ನಿಶ್ಚಿಂತನಾಗಿ ನೀನೇ ಪ್ರಜೆಗಳನ್ನು ಸೃಷ್ಟಿಸು' ಎಂದನು. ಆಗ ದಕ್ಷಪ್ರಜಾಪತಿಯು, ಜರಾಯುಜಾದಿಗಳಾದ ನಾಲ್ಕು ಬಗೆಯ ಪ್ರಾಣಿವರ್ಗಗಳ ಸೃಷ್ಟಿಗೆ ಕಾರಣಭೂತವಾದ ಏಳು ಭೂತಗಳನ್ನು ಸೃಷ್ಟಿಸಿದನು. ಅವು ಹುಟ್ಟಿದೊಡನೆ ಹಸಿವಿನಿಂದ ಪೀಡಿತವಾಗಿ, ದಕ್ಷಪ್ರಜಾಪತಿಯನ್ನೇ ಭಕ್ಷಿಸಲು ಓಡಿದುವು ಆಗ ದಕ್ಷನು ಭಯದಿಂದ ಪಿತಾಮಹನಿದ್ದಲ್ಲಿಗೆ ಬಂದು 'ದೇವಾ! ನನ್ನನ್ನು ಕಾಪಾಡಬೇಕು ಇವರಿಗೆ ಬೇಗನೆ ಜೀವನವನ್ನು ಕಲ್ಪಿಸು ಇಲ್ಲದಿದ್ದರ ನನ್ನನ್ನು ತಿಂದುಬಿಡುವರು' ಎಂದನು ಆಗ ಪಿತಾಮಹನು ಆ ಪ್ರಾಣಿಗಳ ಅನ್ನಕ್ಕಾಗಿ ಸ್ಥಾವರಗಳನ್ನೂ, ಓಷಧಿಗಳನ್ನೂ, ಬಲಿಷ್ಠವಾದ ಮಾಂಸಾಹಾರಿ ಪ್ರಾಣಿಗಳಿಗೆ ದುರ್ಬಲವಾದ ಪ್ರಾಣಿಗಳನ್ನೂ ಆಹಾರವಾಗಿ ಕಲ್ಪಿಸಿಕೊಟ್ಟನು. ಅದರಿಂದ ಅವು ಸಂತುಷ್ಟಿಹೊಂದಿ, ತಾವು ಬಂದಹಾಗೆ ಹಿಂತಿರುಗಿದುವು. ಆಮೇಲೆ ಪ್ರಜೆಗಳು ಸ್ವಜಾತಿಗಳಲ್ಲಿ ಪ್ರೀತಿಯುಳ್ಳವರಾಗಿ ಅಭಿವೃದ್ಧಿಯನ್ನು ಹೊಂದಿದರು. ಅ ಪ್ರಜೆಗಳು ಅಭಿವೃದ್ಧಿಯನ್ನು ಹೊಂದುತ್ತ, ದೇವಾಸುರರೂ ಸೃಷ್ಟಿಸಲ್ಪಟ್ಟಮೇಲೆ, ತಪಸ್ಸಿನಲ್ಲಿದ್ದ ರುದ್ರನು ನೀರಿನಿಂದ ಮೇಲೆದ್ದು ಹೊರಗೆಬಂದು ನೋಡಿದನು ಆಗ ಅವನಿಗೆ ವಿವಿಧರೂಪವುಳ್ಳ ಪ್ರಜೆಗಳು ಸೃಷ್ಟಿಸಲ್ಪಟ್ಟಿರುವುದನ್ನೂ, ಅವು ನಿಜತೇಜಸ್ಸಿನಿಂದ ವೃದ್ಧಿಗೊಂಡಿರುವುದನ್ನೂ ಕಂಡು ಅಧಿಕ ಕೋಪಗೊಂಡು, ತನ್ನ ಲಿಂಗವನ್ನು ಕಿತ್ತು ಭೂಮಿಯಲ್ಲಿ ನಾಟಿದನು ಆ ಲಿಂಗವು ಭೂಮಿಯಲ್ಲಿ ಹಾಗೆಯೇ ನೇರವಾಗಿ ನಿಂತಿತು. ಆಗ ಬ್ರಹ್ಮನು ಒಳ್ಳೆಯ ಮಾತುಗಳಿಂದ ಅವನ ಕೋಪ ಸಮಾಧಾನಮಾಡುವಂತೆ ಆ ಸ್ಥಾಣುವನ್ನು ಕುರಿತು 'ಓ ಶಂಭೂ! ನೀನು ಆ ನೀರಿನಲ್ಲಿ ಮುಳುಗಿ ಅಷ್ಟು ದೀರ್ಘಕಾಲವನ್ನು ಕಳೆದೆಯಲ್ಲಾ? ನೀನು

ಅಲ್ಲಿ ಮಾಡಿದುದೇನು? ಈಗ ಈ ಲಿಂಗವನ್ನು ಕಿತ್ತು ಈ ಭೂಮಿ ಯಲ್ಲಿ ನಾಟಿದುದೇಕೆ?' ಎಂದು ಕೇಳಿದನು. ಆಗ ಲೋಕಗುರುವಾದ ಸ್ಥಾಣುವು ಪೂಜ್ಯನಾದ ಬ್ರಹ್ಮದೇವನನ್ನು ನೋಡಿ 'ಪಿತಾಮಹಾ! ಬೇರೊಬ್ಬನಿಂದ ಈ ಪ್ರಜೆಗಳು ಸೃಷ್ಟಿಸಲ್ಪಟ್ಟರು ಈ ಲಿಂಗದಿಂದ ನಾನು ಮಾಡುವುದೇನಿದೆ? ಈಗ ನಾನು ಪ್ರಜೆಗಳಿಗಾಗಿ ನನ್ನ ತಪಸ್ಸಿನಿಂದ ಅನ್ನವನ್ನು ಕಲ್ಪಿಸಿದೆನು ಇದೇ ರೀತಿಯಾಗಿ ಓಷಧಿಗಳೂ ಬೆಳೆದು ವೃದ್ಧಿಹೊಂದುವುವು ಪ್ರಾಣಿಗಳೂ ಹಾಗೆಯೇ ವೃದ್ಧಿಹೊಂದುವುವು. ಇನ್ನು ನಾನೇನುಮಾಡಬೇಕಾಗಿದೆ?' ಎಂದನು ಹೀಗೆ ಶಂಕರನು ಕೋಪದಿಂದ ಪ್ರತ್ಯುತ್ತರಕೊಟ್ಟು, ಮನಸ್ಸಿಗೆ ತೃಪ್ತಿಯಿಲ್ಲದವನಾಗಿ, ಮುಂಜವಂತವೆಂಬ ಪರ್ವತದ ಬುಡದಲ್ಲಿ ತಪಸ್ಸುಮಾಡುವುದಕ್ಕಾಗಿ ಹೊರಟುಹೋದನು

ಇದು ಹದಿನೇಳನೆಯ ಅಧ್ಯಾಯವು.



(ಶಂಕರನ ಕೋಪದಿಂದ ದೇವತೆಗಳಿಗೆ ಯಜ್ಞಗಳು ತಪ್ಪಿ, ತಿರುಗಿ ಅವನ ಅನುಗ್ರಹದಿಂದ ಲಭಿಸಿದುದು. ಈಶ್ವರನೇ ಅಶ್ವತ್ಥಾಮನ ಮೂಲಕವಾಗಿ ಉಪಪಾಂಡವಾದಿಗಳನ್ನು ಕೊಂದ ಕಥೆ)

ದೇವಯುಗವು ಕಳೆದಮೇಲೆ, ಯಾಗಮೂಲವಾದ ವೇದಪ್ರಮಾಣದಮೇಲೆ ದೇವತೆಗಳು ವಿಧ್ಯುಕ್ತರೀತಿಯಲ್ಲಿ ಒಂದು ಯಜ್ಞಕ್ಕಾಗಿ ಸಂಕಲ್ಪಿಸಿದರು. ಯಾಗಾಧಿಪತಿಗಳಾದ ದೇವತೆಗಳನ್ನು ನಿರ್ಧರಿಸಿಕೊಂಡು, ಸಾಧನಗಳನ್ನೂ, ಹವಿಸ್ಸುಗಳನ್ನೂ, ಇತರ ದ್ರವ್ಯಗಳನ್ನೂ ಸಿದ್ಧಪಡಿಸಿದರು. ಆದರೆ ಅವರು ರುದ್ರನ ಮಹಾತ್ಮ್ಯವನ್ನು ಬಗೆಯದೆ ಆತನಿಗೆ ಭಾಗವನ್ನು ನಿರ್ಣಯಿಸಲಿಲ್ಲ. ಹೀಗೆ ದೇವತೆಗಳು ತನಗೆ ಭಾಗವನ್ನು ನಿರ್ಣಯಿಸದೆ ಬಿಟ್ಟುದನ್ನು ನೋಡಿ ಕೃತ್ತಿವಾಸನು (ಶಿವನು) ತಪಸ್ಸಿನಿಂದ ಯಜ್ಞವನ್ನು ಸಾಧಿಸಬೇಕೆಂದೆಣಿಸಿ, ಮೊದಲುಬಿಲ್ಲನ್ನು ಸೃಷ್ಟಿಸಿದನು. ಲೋಕಯಜ್ಞ, ಕ್ರಿಯಾಯಜ್ಞ, ಸನಾತನವಾದ ಗೃಹಯಜ್ಞ, ಪಂಚಭೂತನೃಯಜ್ಞ, ವೆಂಬೀ ನಾಲ್ಕರಿಂದ ಈ ಪ್ರಪಂಚ

ವೆಲ್ಲವೂ ಸೃಷ್ಟವಾಯಿತು ಮಹಾದೇವನು *ಲೋಕಯಜ್ಞ, ನೃಯಜ್ಞಗಳಿಂದ ಉಳಿದ ಶಾಸ್ತ್ರೀಯಯಜ್ಞನಾಶಾರ್ಥವಾಗಿ ಬಿಲ್ಲನ್ನು ಪಡೆದನು ಆ ಬಿಲ್ಲು ಅರುವತ್ತುಮೊಳದುದ್ದವಿದ್ದು, ವಷಟ್ಕಾರವೇ ಅದರ ನಾಣಿನ ಹಗ್ಗವಾಯಿತು ನಾಲ್ಕು ಯಜ್ಞಾಂಗಗಳೂ ಅದರ ಮೈಕಟ್ಟಾಗಿದ್ದುವು ಶಿವನು ಕೋಪದಿಂದ ಆ ಬಿಲ್ಲನ್ನೆತ್ತಿಕೊಂಡು, ದೇವತೆಗಳು ಯಾಗಮಾಡುತ್ತಿದ್ದ ಸ್ಥಳಕ್ಕೆ ಬಂದನು ಬಿಲ್ಲನ್ನು ಕೈಯಲ್ಲಿ ಹಿಡಿದಿರುವ ಬ್ರಹ್ಮಚಾರಿಯೂ, ಮಹಾತ್ಮನೂ ಆದ ಆ ಪರಮಶಿವನನ್ನು ಕಂಡು ಭೂಮಿಯು ನಡುಗಿತು. ಬೆಟ್ಟಗಳು ಕಂಪಿಸಿದುವು ಗಾಳಿಯು ಸ್ತಬ್ಧವಾಯಿತು ಅಗ್ನಿಯೂ ಜ್ವಲಿಸಲಿಲ್ಲ ಆಕಾಶದಲ್ಲಿ ನಕ್ಷತ್ರಮಂಡಲವೇ ಭಯದಿಂದ ಹೊರಳಿತು ಸೂರ್ಯನು ಕಂದಿದನು. ಚಂದ್ರಮಂಡಲದಲ್ಲಿ ಕಾಂತಿಯು ಹೋಯಿತು ಆಕಾಶವೆಲ್ಲ ಕತ್ತಲೆ ಕವಿದುಕೊಂಡಿತು. ದೇವತೆಗಳೂ ಇದರ ತತ್ವವನ್ನು ಅರಿಯಲಾರದೆಹೋದರು ಅವರ ಯಜ್ಞವು ನಾಗದಂತಾಯಿತು ಅವರೆಲ್ಲ ಭಯಪಟ್ಟರು ಆಗ ಈಶ್ವರನು ಭಯಂಕರವಾದ ತನ್ನ ಬಾಣದಿಂದ ಯಜ್ಞದ (ಯಜ್ಞಪುರುಷನ) ಎದೆಯನ್ನು ಹೊಡೆದನು ಯಜ್ಞವು ಮೃಗರೂಪವಾಗಿ ಅಗ್ನಿಯೊಡನೆ ಓಡಿತು ಓ ಯುಧಿಷ್ಠಿರಾ! ರುದ್ರನಿಂದ ಹಿಂಬಾಲಿಸಲ್ಪಡುತ್ತಿದ್ದ ಆ ಯಜ್ಞಮೃಗವು ಅದೇ ರೂಪದಿಂದ ಅಂತರಿಕ್ಷದಲ್ಲಿ ಕಾಣಿಸುತ್ತಿದ್ದಿತು ದೇವತೆಗಳಿಗೆ ಏನೊಂದೂ ತೋರಲಿಲ್ಲ ಅವರಿಗೆ ಸ್ಮೃತಿಯೇ ತಪ್ಪಿಹೋಯಿತು ಕೋಪಗೊಂಡ ತ್ರಿನೇತ್ರನು ಸವಿತನ ಎರಡು ಕೈಗಳನ್ನೂ, ಭಗನ ಎರಡು ಕಣ್ಣುಗಳನ್ನೂ, ಪೂಷನ ಹಲ್ಲುಗಳನ್ನೂ, ಬಿಲ್ಲಿನ ತುದಿಯಿಂದ ಹೊಡೆದು ನಾಶಮಾಡಿದನು ಆಮೇಲೆ ದೇವತೆಗಳೂ ವೇಗದಿಂದೋಡಿದರು ಯಜ್ಞಾಂಗಗಳೂ ದಿಕ್ಕುದಿಕ್ಕಿಗೆ ಓಡಿದುವು. ಕೆಲವರು ಅಲ್ಲಲ್ಲಿ ಅಲೆಯುತ್ತ ಕೊನೆಗೆ ಮೃತಪ್ರಾಯರಾದರು. ಹೀಗೆ ನೀಲಕಂಠನು ಅವೆಲ್ಲವನ್ನೂ ಓಡಿಸಿ, ನಕ್ಕು ಹಾಸ್ಯ

---

* ಲೋಕಯಜ್ಞವೆಂದರೆ ಲೋಕೇಷಣೆ ಲೋಕವನ್ನು ಮೆಚ್ಚಿಸಿ, ತಾನೇ ಮೇಲೆನಿಸಬೇಕೆಂಬ ಆಸೆ ಕ್ರಿಯಾಯಜ್ಞವೆಂಬುದು ಗರ್ಭಾದಾನಾದಿ ಸಂಸ್ಕಾರಗಳು. ಗೃಹಯಜ್ಞವು ಆಹಿತಾಗ್ನಿಕತ್ವಾದಿಗಳು ಪಂಚಭೂತನೃಯಜ್ಞವೆಂದರೆ ಶಬ್ದಾದಿ ಪಂಚಭೂತ ಗಣಗಳಿಂದ ಮನುಷ್ಯನಿಗೆ ಉಂಟಾಗುವ ತೃಪ್ತಿ

ಮಾಡುತ್ತ, ಬಿಲ್ಲಿನ ತುದಿಯನ್ನು ನೀಡಿ, ದೇವತೆಗಳನ್ನು ತಡೆದನು. ದೇವತೆಗಳಿಂದುಕ್ತವಾದ ವಾಕ್ಯಗಳು ಆ ಬಿಲ್ಲಿನ ನಾಣನ್ನು ಕತ್ತರಿಸಿತು ರುದ್ರನು ಚಾಪಹೀನನಾದಮೇಲೆ ದೇವತೆಗಳು ಯಜ್ಞ (ಮೃಗ) ದೊಡನೆ ಬಂದು ಶರಣಾಗತರಾದರು ಆಗ ಈಶ್ವರನು ಪ್ರಸನ್ನನಾಗಿ ತನ್ನ ಕೋಪ ವನ್ನು ಸಮುದ್ರದಲ್ಲಿ ಬಿಟ್ಟನು. ಆ ಕೋಪವೇ ಬಡಬಾಗ್ನಿಯಾಗಿ ಸಮು ದ್ರಜಲವನ್ನು ಸದಾ ಶೋಷಿಸುತ್ತಿರುವುದು ಪಾಂಡವರೇ! ಭಗವಂತ ನಾದ ಶಂಕರನು ಭಗನಿಗೆ ಎರಡು ಕಣ್ಣುಗಳನ್ನೂ, ಸವಿತನಿಗೆ ಎರಡು ಕೈಗಳನ್ನೂ, ಪೂಷನಿಗೆ ಹಲ್ಲುಗಳನ್ನೂ ಮೊದಲಿನಂತೆ ಅನುಗ್ರಹಿಸಿ ಅವ ರಿಗೆ ಯಜ್ಞವನ್ನು ಹಿಂತಿರುಗಿ ಕೊಟ್ಟನು. ಆಗ ಅವೆಲ್ಲವೂ ಮೊದಲಿನಂತೆ ಉತ್ತಮಸ್ಥಿತಿಗೆ ಬಂದುವು ದೇವತೆಗಳು ಈಶ್ವರನಿಗೆ ಎಲ್ಲಾ ಹವಿಸ್ಸುಗ ಳಲ್ಲಿಯೂ ಭಾಗವನ್ನೇರ್ಪಡಿಸಿದರು ಆತನು ಕೋಪಿಸಿಕೊಂಡಾಗ, ಪ್ರ ಪಂಚವೆಲ್ಲವೂ ಕಾಂತಿಹೀನವಾಗಿದ್ದು, ಆತನು ಪ್ರಸನ್ನನಾದೊಡನೆಯೇ ಲೋಕವೆಲ್ಲವೂ ಉಲ್ಲಾಸ ಹೊಂದಿತು ಅವನ ಅಂಶದಿಂದಲೇ ಅಶ್ವ ತ್ಥಾಮನು ಹುಟ್ಟಿದನು ಆ ಮಹಾದೇವನಿಂದಲೇ ಮಹಾರಥರಾದ ನಿನ್ನ ಎಲ್ಲಾ ಪುತ್ರರೂ, ಇತರ ಶೂರರೂ, ಪಾಂಚಾಲವೀರರೂ ಕೊಲ್ಲ ಲ್ಪಟ್ಟರು ಅದಕ್ಕಾಗಿ ನೀನು ಚಿಂತಿಸಕೂಡದು ಇವೆಲ್ಲವೂ ದ್ರೋಣ ಪುತ್ರನ ಕೃತ್ಯಗಳೆಂದು ತಿಳಿಯಬೇಡ. ಮಹಾದೇವನ ಮಾಯೆಯೆಂದು ತಿಳಿದು ಮುಂದಿನ ಕಾರ್ಯಗಳನ್ನು ಮಾಡು ' ಎಂದನು

ಇದು ಹದಿನೆಂಟನೆಯ ಅಧ್ಯಾಯವು.

ಐಷೀಕಪರ್ವವು ಮುಗಿದುದು

## ಇಲ್ಲಿಗೆ ಸೌಪ್ತಿಕಪರ್ವವು ಮುಗಿದುದು.

ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ

ಶ್ರೀ. ಶ್ರೀ. ಶ್ರೀ.

People's Printing & Publishing House Ltd., Triplicane Madras.

ಶ್ರೀ

ವ್ಯಾಸಮಹರ್ಷಿಪ್ರಣೀತ

# ಶ್ರೀಮಹಾಭಾರತವು

(ಕರ್ನಾಟಕ ವಚನವು)

## ಸ್ತ್ರೀಪರ್ವವು.

SiTRi PARVA

ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯರ ವಿರಚಿತವು.



ಪ್ರಕಾಶಕರು:

ಕರ್ಣಾಟಕ ಡೆಪೋ,

1/59, ಸನ್ನಿಧಿ ಬೀದಿ, ತಿರುವಲ್ಲಿಕ್ಕೇಣಿ, ಮದರಾಸು.

1934

[ಬೆಲೆ ೦-೧೦-೦

# ವಿಷಯಾನುಕ್ರಮಣಿಕೆ.



# ಚಿತ್ರಪಟಗಳ ಪಟ್ಟಿ.









# ಶ್ರೀಮಹಾಭಾರತವು

## ಸ್ತ್ರೀಪರ್ವವು.

### ಜಲಪ್ರದಾನಿಕಪರ್ವವು.

**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋಜಯ ಮುದೀರಯೇತ್**

{ ತನ್ನ ಮಕ್ಕಳಿಗಾಗಿ ದುಃಖಪಡುತ್ತಿರುವ ಧೃತರಾಷ್ಟ್ರನನ್ನು ಸಂಜಯನು ಸಮಾಧಾನಪಡಿಸಿದುದು }

ಆಮೇಲೆ ಜನಮೇಜಯನು "ಓ ಋಷಿಶ್ರೇಷ್ಠಾ! ದುರ್ಯೋಧನನೂ, ಎಲ್ಲಾ ಸೈನ್ಯಗಳೂ ಕೊಲ್ಲಲ್ಪಟ್ಟುದನ್ನು ಕೇಳಿ ಧೃತರಾಷ್ಟ್ರನು ಏನು ಮಾಡಿದನು? ಅತ್ತಲಾಗಿ ಮಹಾತ್ಮನಾದ ಧರ್ಮರಾಜನೂ, ಇತ್ತಲಾಗಿ ಕೃಪನೇ ಮೊದಲಾದ ಮೂವರೂ ಮಾಡಿದುದೇನು? ಅಶ್ವತ್ಥಾಮನ ಕ್ರೂರಕೃತ್ಯಗಳನ್ನೂ * ಕೃಷ್ಣಾಶ್ವತ್ಥಾಮರು ಒಬ್ಬರಿಗೊಬ್ಬರು ಶಪಿಸಿದುದನ್ನೂ ಹೇಳಿದೆಯಷ್ಟೆ! ಅದಕ್ಕೆಮೇಲೆ ನಡೆದ ವೃತ್ತಾಂತಗಳನ್ನೆಲ್ಲ ಸಂಜಯನು ಹೇಳಿದಂತೆಯೇ ನನಗೆ ತಿಳಿಸು" ಎಂದನು.

ಆಗ ವೈಶಂಪಾಯನನು "ರಾಜಾ! ತನ್ನ ನೂರುಮಂದಿ ಮಕ್ಕಳೂ ಹತರಾದಮೇಲೆ, ಕೊಂಬೆಗಳನ್ನು ಕಡಿದ ಮೋಟುಮರದಂತಾಗಿ, ಪುತ್ರ

---

* ಪಾಂಡವರ ಗರ್ಭದಲ್ಲಿ ಬ್ರಹ್ಮಶಿರೋಸ್ತ್ರವು ಬೀಳಲೆಂದು ಅಶ್ವತ್ಥಾಮನ ಶಾಪವು, ಹಸ್ರುವರ್ಷಗಳವರೆಗೆ ಕುಷ್ಠರೋಗಿಯಂತೆ ದುರ್ಗಂಧಹಿಡಿದ ಮೈಯಿಂದ ಎಲ್ಲಿಯೋ ಲೆತಪ್ಪಿಸಿಕೊಂಡಿರಬೇಕೆಂದು ಕೃಷ್ಣನಿಂದ ಅಶ್ವತ್ಥಾಮನಿಗೆ ಶಾಪವು

ಶೋಕದಿಂದ ತಪಿಸುತ್ತ, ದೈನ್ಯದಿಂದ ಮಾತಾಡಲಾರದೆ ಮೂಗನಂತೆ ಚಿಂತಿಸುತ್ತಿದ್ದ ಧೃತರಾಷ್ಟ್ರಮಹಾರಾಜನನ್ನು ಕುರಿತು ಸಂಜಯನು ಹೀಗೆ ಹೇಳುವನು.

"ಓ ರಾಜಾ! ನೀನೇಕೆ ಹೀಗೆ ದುಃಖಪಡುವೆ? ಈಗ ನಿನ್ನನ್ನು ಈ ದುಃಖದಿಂದ ಪಾರುಮಾಡುವವರು ಯಾರುತಾನೇ ಇರುವರು? ಓ ಜನನಾಥಾ! ಅಲ್ಲಿ ನೆರೆದಿದ್ದ ಹದಿನೆಂಟು ಅಕ್ಷೌಹಿಣೀಸೈನ್ಯಗಳೂ ಹತವಾದುವು! ಪಾಂಡವರಿಂದ ಜಯಿಸಲ್ಪಟ್ಟರೂ ಈಗ ಭೂಮಂಡಲವು ಕ್ಷತ್ರಿಯಶೂನ್ಯವೂ, ಉತ್ಸಾಹಶೂನ್ಯವೂ ಆಗಿರುವುದು ನಿನ್ನ ಮಗನಿಗಾಗಿ ಹಲವು ದಿಕ್ಕುಗಳಿಂದ ಹಲವು ಜಾತಿಯ ಅರಸರು ಬಂದು ಸೇರಿ ನಾಶಹೊಂದಿದರು ಇನ್ನು ನೀನು ಯುದ್ಧದಲ್ಲಿ ಮೃತರಾದ ನಿನ್ನ ಪಿತೃಜನಗಳಿಗೂ, ಪುತ್ರರಿಗೂ, ಪೌತ್ರರಿಗೂ, ಮಿತ್ರರು, ಜ್ಞಾತಿಗಳು, ನಂಟರು, ಗುರುಗಳು, ಅನುಚರರು, ಇವರೆಲ್ಲರಿಗೂ ಅವರವರು ಸತ್ತ ಕಾಲಕ್ರಮದಿಂದ ಪ್ರೇತಕಾರ್ಯಗಳನ್ನು ಮಾಡಿ ಮುಗಿಸು" ಎಂದನು ದುಃಖಕರವಾದ ಈ ವಾರ್ತೆಯನ್ನು ಕೇಳಿದ ಧೃತರಾಷ್ಟ್ರನು, ತನ್ನ ಪುತ್ರ ಪೌತ್ರ ವಧೆಗಾಗಿ ಬಹಳ ವ್ಯಾಕುಲಗೊಂಡು, ಗಾಳಿಯಿಂದ ಮುರಿದುಬೀಳುವ ಮರದಂತೆ ಮೂರ್ಛಿತನಾಗಿ ನೆಲದಮೇಲೆ ಬಿದ್ದನು ಆಮೇಲೆ ಮೆಲ್ಲಗೆ ಚೇತರಿಸಿಕೊಂಡೆದ್ದು "ಅಯ್ಯೋ! ಪುತ್ರರನ್ನೂ, ಮಂತ್ರಿಗಳನ್ನೂ, ಎಲ್ಲಾ ಸುಹೃತ್ತುಗಳನ್ನೂ ಬಲಿಕೊಟ್ಟ ನಾನು, ಇಂತಹ ದುಃಖವನ್ನನುಭವಿಸುತ್ತ ಇನ್ನೂ ಈ ಭೂಮಿಯಲ್ಲಿ ಜೀವಿಸಿರಬೇಕಾಯಿತೇ? ರೆಕ್ಕೆಗಳು ಮುರಿದ ಗರುಡನಂತೆ ಬಂಧುಗಳನ್ನೆಲ್ಲ ಕಳೆದುಕೊಂಡ ನಾನು ಇನ್ನು ಜೀವಸಹಿತನಾಗಿರುವುದರಿಂದ ಪ್ರಯೋಜನವೇನು? ಓ ಸಂಜಯಾ! ಧೀಮಂತಾ! ರಾಜ್ಯವನ್ನೂ, ಸುಹೃತ್ತುಗಳನ್ನೂ, ಪುತ್ರಪೌತ್ರರನ್ನೂ ಕಳೆದುಕೊಂಡ ನಾನು ಕಾಂತಿಗುಂದಿದ ಸೂರ್ಯನಹಾಗೆ ಪ್ರಕಾಶಹೀನನಾಗಿರುವೆನು. ಹಿಂದೆ ನನಗೆ ಹಿತೈಷಿಗಳಾದ ಪರಶುರಾಮನೂ, ದೇವಋಷಿಯಾದ ನಾರದನೂ, ಕೃಷ್ಣದ್ವೈಪಾಯನನೂ, ಇತರ ಸುಹೃತ್ತುಗಳೂ ಹೇಳಿದ ಮಾತುಗಳನ್ನು ನಾನು ಕೇಳಲಿಲ್ಲ. ಕೃಷ್ಣನು ಸಭಾಮಧ್ಯದಲ್ಲಿ ನನ್ನನ್ನು

ಕುರಿತು "ರಾಜಾ! ನಿನಗೆ ಪಾಂಡುಪುತ್ರರೊಡನೆ ವೈರವು ಬೇಡ! ನಿನ್ನ ಮಗನನ್ನು ನಿನ್ನ ಅಂಕೆಯಲ್ಲಿರಿಸು" ಎಂದು ತಿಳಿಸಿದ ಹಿತವಾಕ್ಯಗಳನ್ನೂ ನಾನು ನಡೆಸದೆಹೋದೆನು. ದುರ್ಬುದ್ಧಿಯುಳ್ಳ ನಾನು ಅದಕ್ಕೆ ಫಲವಾಗಿ ಈಗ ಅಧಿಕವಾಗಿ ತಪಿಸುತ್ತಿರುವೆನು ನಾನು ಸುಖದಾಯಕಗಳಾದ ಆ ಭೀಷ್ಮನ ಮಾತುಗಳನ್ನೂ ಕೇಳದೆಹೋದೆನಲ್ಲಾ! ವೃಷಭದಂತೆ ಗರ್ಜಿಸುತ್ತಿದ್ದ ಆ ದುರ್ಯೋಧನನು! ಆ ದುಶ್ಶಾಸನನು! ಆ ಕರ್ಣನು! ಇವರೆಲ್ಲರ ವಧೆಯನ್ನೂ, ದ್ರೋಣನೆಂಬ ಆ ಸೂರ್ಯನಿಗೆ ಹಿಡಿದ ಗ್ರಹಣವನ್ನೂ ಕೇಳಿ ನನ್ನ ಹೃದಯವು ಭೇದಿಸುತ್ತಿರುವುದು ಮೂಢನಾದ ನಾನು ಈಗ ಅನುಭವಿಸುತ್ತಿರುವ ಮಹಾವ್ಯಸನಕ್ಕೆ ಕಾರಣವಾದಷ್ಟು ಘೋರ ಪಾಪವನ್ನು ಹಿಂದೆ ನಾನು ಯಾವಾಗಲೂ ಮಾಡಿದಂತೆ ನನ್ನ ಸ್ಮೃತಿಗೆ ಬರಲಿಲ್ಲವಲ್ಲಾ! ಆದರೇನು? ದೈವವು ನನ್ನನ್ನು ಈ ಮಹಾದುಃಖಕ್ಕೆ ಗುರಿಮಾಡಿದುದರಿಂದ ಹಿಂದಿನ ಜನ್ಮದಲ್ಲಿ ನಾನು ಮಹಾಪಾಪಕೃತ್ಯಗಳನ್ನೇ ಮಾಡಿರಬೇಕು ದೈವವಿಧಿಯಿಂದ ನನಗೆ ಈ ವೃದ್ಧಾಪ್ಯಕಾಲದಲ್ಲಿ ಎಲ್ಲಾ ಬಂಧುಗಳ, ಸುಹೃತ್ತುಗಳ, ಮತ್ತು ಮಿತ್ರರ ನಾಶವು ಸಂಭವಿಸಿತು. ಈ ಪ್ರಪಂಚದಲ್ಲಿ ನನಗಿಂತಲೂ ಅಧಿಕದುಃಖಕ್ಕೊಳಗಾದ ಮನುಷ್ಯನು ಬೇರೆ ಯಾವನಿರುವನು? ಆದುದರಿಂದ ವ್ರತನಿಷ್ಠರಾದ ಪಾಂಡವರು ನನಗಾಗಿ ತೆರೆದಿಟ್ಟಿರುವ ಬ್ರಹ್ಮಲೋಕದ್ವಾರದ ಮಾರ್ಗದಲ್ಲಿ ನಾನು ನಿಲ್ಲುವುದನ್ನು ಈಗಲೇ ನೋಡಲಿ! ನಾನು ಈಗಲೇ ಪ್ರಾಣವನ್ನು ಬಿಡುವೆನು" ಎಂದನು.

ಹೀಗೆ ಅಡಿಗಡಿಗೆ ಹಂಬಲಿಸುತ್ತ, ಮಹಾವ್ಯಾಕುಲಗೊಂಡ ಆ ಅರಸನ ಶೋಕನಿವಾರಣೆಗಾಗಿ ಸಂಜಯನು ಅವನನ್ನು ಕುರಿತು "ಓ ರಾಜೋತ್ತಮಾ! ದುಃಖವನ್ನು ಬಿಡು ನೀನು ಅನೇಕ ವೃದ್ಧರಿಂದ ವೇದೋಕ್ತವಾದ ನಿರ್ಣಯಗಳನ್ನೂ, ನಾನಾಶಾಸ್ತ್ರಗಳನ್ನೂ, ಆಗಮಗಳನ್ನೂ ಕೇಳಿದವನು ಹಿಂದೆ ಸೃಂಜಯನು ಪುತ್ರಶೋಕದಿಂದ ಪೀಡಿತನಾಗಿರುವ ತರುಣದಲ್ಲಿ, ಋಷಿಗಳು ಹೇಳಿದುದನ್ನೂ ನೀನು ಕೇಳಿ ತಿಳಿದಿರುವೆ. ನಿನ್ನ ಪುತ್ರನು ಯೌವನಮದದಿಂದ ಕೊಬ್ಬಿದ್ದ ಕಾಲದಲ್ಲಿ, ನಿನ್ನ ನಂಟರೆಲ್ಲ ನಿನಗೆ ಎಷ್ಟೋ ಬುದ್ಧಿವಾದಗಳನ್ನು ಹೇಳಿದರೂ ಕೇವಲ ಸ್ವಾರ್ಥಪರನಾಗಿ,

ಯಾವುದನ್ನೂ ಕೈಬಿಟ್ಟುಕೊಡಲು ಇಷ್ಟವಿಲ್ಲದ ನಿನ್ನ ಕಿವಿಗೆ ಅವೊಂದೂ ಏರದೆಹೋದುವು ಆದರಿಂದ ನಿನಗಾದರೂ ಯಾವ ಪ್ರಯೋಜನವೂ ಕೈಗೂಡಿದಂತಾಗಲಿಲ್ಲ ಕತ್ತಿಯಲಗಿನಂತೆ ಕ್ರೂರವಾದ ನಿನ್ನ ಸ್ವಬುದ್ಧಿಯಿಂದಲೇ ನೀನು ಅನ್ಯಾಯಕಾರ್ಯಗಳನ್ನು ಮಾಡಿದೆ ಓ ಮಹಾಬಾಹೂ! ಯಾವನಿಗೆ ದುಶ್ಶಾಸನನೂ, ದುರ್ಬುದ್ಧಿಯುಳ್ಳ ಕರ್ಣನೂ, ದುರಾತ್ಮನಾದ ಶಕುನಿಯೂ, ದುರ್ಮತಿಯುಳ್ಳ ಚಿತ್ರಸೇನನೂ ಮಂತ್ರಿಗಳೋ, ಯಾವನಿಂದ ವಿಶಾಲವಾದ ಭೂಮಂಡಲವೆಲ್ಲವೂ ಕೇವಲ ಕಂಟಕಮಯವಾಗಿ ಮಾಡಲ್ಪಟ್ಟಿತೋ, ಆ ನಿನ್ನ ಪುತ್ರನೂಕೂಡ, ಕೌರವವೃದ್ಧನಾದ ಭೀಷ್ಮನಾಗಲಿ, ತನ್ನ ತಾಯಿಯಾದ ಗಾಂಧಾರಿಯಾಗಲಿ, ವಿದುರದ್ರೋಣ ಕೃಪರಾಗಲಿ, ಶ್ರೀಕೃಷ್ಣನಾಗಲಿ, ಧೀಮಂತನಾದ ನಾರದನಾಗಲಿ, ಇತರ ಋಷಿಶ್ರೇಷ್ಠರಾಗಲಿ, ಮಹಾತೇಜಸ್ವಿಯಾದ ವ್ಯಾಸನಾಗಲಿ ಹೇಳಿದ ಮಾತುಗಳೊಂದನ್ನೂ ಲಕ್ಷಿಸಲಿಲ್ಲ ಇದರಿಂದ ಕ್ಷತ್ರಿಯರಲ್ಲರೂ ನಾಶವಾದರು ಶತ್ರುಗಳ ಯಶಸ್ಸು ವೃದ್ಧಿಹೊಂದಿತು ಯುದ್ಧವು ಅಧರ್ಮಪ್ರಚುರವಾದುದೆಂದು ನೀನೇ ನಿತ್ಯವೂ ಬಾಯಿಂದಾಡುತ್ತಿದ್ದರೂ, ಸಮಯದಲ್ಲಿ ತಕ್ಕ ವಚನವೊಂದನ್ನೂ ಆಡದೆ ತಟಸ್ಥನಾಗಿಯೇ ಇರುತ್ತಿದ್ದೆ. ಉಭಯಪಕ್ಷದ ಸಮಸ್ತಭಾರವನ್ನೂ ವಹಿಸಿದ್ದ ನೀನು ಆ ಭಾರವನ್ನು ತಕ್ಕಡಿಯಲ್ಲಿ ಸಮವಾಗಿ ತೂಗಲಿಲ್ಲ ಯಾವ ವಿಷಯಕ್ಕಾಗಲಿ ಮುಂದೆ ಪಶ್ಚಾತ್ತಾಪಪಡದಿರಬೇಕಾದರೆ, ಮೊದಲೇ ಮನುಷ್ಯನು ಉಚಿತರೀತಿಯಲ್ಲಿ ಎಚ್ಚರದಿಂದ ನಡೆದುಕೊಳ್ಳಬೇಕು ಪುತ್ರಮೋಹವುಳ್ಳ ನೀನು ನಿನ್ನಮಗನಿಗೆ ಪ್ರಿಯವನ್ನು ಮಾಡುವುದರಲ್ಲಿಯೇ ಮನಸ್ಸಿಟ್ಟುದರಿಂದ ಈಗ ಇಂತಹ ಪಶ್ಚಾತ್ತಾಪಕ್ಕೆ ಗುರಿಯಾದೆ ಈಗ ನೀನು ಅದಕ್ಕಾಗಿ ವ್ಯಸನಪಡುವುದರಿಂದ ಫಲವಿಲ್ಲ! ಮೇಲಿರುವ ಜೇನುತುಪ್ಪವನ್ನೇ ನೋಡುತ್ತ ಬೆಟ್ಟದ ಕೆಳಗಿರುವ ಹಳ್ಳವನ್ನು ಗಮನಿಸದ ವಿವೇಕಶೂನ್ಯನು, ಆ ಮಧುವಿನ ಆಶೆಯಿಂದ ಕೆಳಗೆ ಬಿದ್ದು ಸಾಯುವುದು ಸಹಜವೇ! ಅವನಂತೆ ನಿನ್ನ ಸ್ಥಿತಿಯೂ ಆಗಿದೆ. ಹೋದುದುಹೋಗಲಿ! ಈಗಲಾದರೂ ನಿನ್ನ ದುಃಖವನ್ನು ಬಿಡು ದುಃಖಕ್ಕೊಳಗಾದವನು ಕಾರ್ಯಸಿದ್ಧಿಯನ್ನು ಪಡೆಯಲಾರನು ಆದರಿಂದ ಆತನಿಗೆ ಸುಖವೂ ಇಲ್ಲ! ಸಂಪತ್ತೂ ಇಲ್ಲ! ಜಯವೂ

ಇಲ್ಲ! ತಾನೇ ಬೆಂಕಿಯನ್ನು ಹುಟ್ಟಿಸಿ, ಆ ಬೆಂಕಿಯ ನಡುವೆ ಸಿಕ್ಕಿ ಯಾವನು ದಹಿಸಲ್ಪಡುವನೋ ಆತನು ಹೇಗೆತಾನೇ ವಿವೇಕಿಯೆನಿಸುವನು? ನೀನೇ ಈ ಅನರ್ಥಕ್ಕೆಲ್ಲ ಮೂಲಭೂತನು ನಿಮ್ಮ ದುರ್ವಾಕ್ಯವೆಂಬ ವಾಯುವಿನಿಂದ ವೃದ್ಧಿಯಾಗಿ, ನಿಮ್ಮ ದುರಾಶೆಯೆಂಬ ತುಪ್ಪದಲ್ಲಿ ತೊಯ್ದ ಆ ಪಾಂಡವಾಗ್ನಿಯು ಈಗ ಪ್ರಜ್ವಲಿತವಾಗಿ ನಿಮ್ಮನ್ನೇ ಸುಟ್ಟಿತು. ಆ ಅಗ್ನಿಯಲ್ಲಿ ನಿನ್ನ ಪುತ್ರರು ಪತಂಗದ ಹುಳುಗಳಂತೆ ಬಿದ್ದು ಸತ್ತರು ಕೃಷ್ಣನೆಂಬ ಆ ಪವಿತ್ರಾಗ್ನಿಯಲ್ಲಿ ನಿಶ್ಶೇಷರಾಗಿ ಹತರಾದ ನಿಮ್ಮ ಮಕ್ಕಳ ವಿಷಯದಲ್ಲಿ ನೀನು ವ್ಯಸನಪಡಬೇಡ ಓ ರಾಜಾ! ಕಣ್ಣೀರು ಸುರಿಸಿ ಮುಖವನ್ನು ಕಂದಿಸುವೆಯೇಕೆ? ಇದು ಶಾಸ್ತ್ರಸಮ್ಮತವಲ್ಲ ತತ್ವಜ್ಞರಾರೂ ಇದನ್ನನುಮೋದಿಸುವುದಿಲ್ಲ ಇವು ಬೆಂಕಿಯ ಕಿಡಿಗಳಂತೆ ಮನುಷ್ಯರನ್ನು ದಹಿಸುವುವಲ್ಲವೆ? ವಿವೇಕದಿಂದಿರು! ವ್ಯಸನವನ್ನು ಬಿಡು! ಧೈರ್ಯವನ್ನವಲಂಬಿಸು! ಚಿತ್ತವನ್ನು ಸ್ವಾಸ್ಥ್ಯದಲ್ಲಿಡು” ಎಂದನು

ಸಂಜಯನು ರಾಜನನ್ನು ಹೀಗೆ ಸಮಾಧಾನಪಡಿಸಿದಮೇಲೆ ವಿದುರನು ಧೃತರಾಷ್ಟ್ರನಿಗೆ ಹೀಗೆಂದು ಹೇಳುವನು

ಇದು ಮೊದಲನೆಯ ಅಧ್ಯಾಯವು



{ ವಿದುರನು ಶಾಸ್ತ್ರಾರ್ಥಗಳನ್ನು ಹೇಳಿ ಧೃತರಾಷ್ಟ್ರನ ಶೋಕವನ್ನು ನೀಗಿಸಿದುದು }

ಆಮೇಲೆ ವಿದುರನು ಅಮೃತಸಮಾನವಾದ ವಾಕ್ಯಗಳಿಂದ ಧೃತರಾಷ್ಟ್ರನನ್ನು ಸಮಾಧಾನಗೊಳಿಸುತ್ತ ಹೀಗೆಂದು ಹೇಳುವನು “ರಾಜಾ! ಮೇಲಕ್ಕೇಳು! ಏಕೆ ಮಲಗಿರುವೆ! ಧೈರ್ಯವನ್ನವಲಂಬಿಸಿ ಮನಸ್ಸನ್ನು ಸ್ಥಿರಗೊಳಿಸು ಎಲ್ಲಾ ಪ್ರಾಣಿಗಳ ಸ್ವಭಾವಗತಿಯೇ ಇದು! ವೃದ್ಧಿಗಳೆಲ್ಲ ಕ್ಷಯದಲ್ಲಿಯೇ ಮುಗಿಯುವುವು ಹಾಗೆಯೇ ಉನ್ನತಿಯು ಅವನತಿಯಲ್ಲಿಯೂ, ಸಂಯೋಗವು ವಿಯೋಗದಲ್ಲಿಯೂ, ಜೀವಿತವು ಮರಣದಲ್ಲಿಯೂ ಮುಗಿಯುವುವು. ಯಮನಿಗೆ ಶೂರನೂ ಒಂದೇ! ಭೀರುವೂ ಒಂದೇ! ಇಬ್ಬರನ್ನೂ ಅವನು ಸಮಾನವಾಗಿಯೇ ಎಳೆದುಕೊಂಡು

ಹೋಗುವುದರಲ್ಲಿರುವಾಗ ಕ್ಷತ್ರಿಯರು ಯುದ್ಧಮಾಡದಿದ್ದಮಾತ್ರಕ್ಕೇನು? ಯುದ್ಧಕ್ಕೆ ಹೋಗದೆ ಮನೆಯಲ್ಲಿದ್ದವನೂ ಸಾಯುವನು! ಯುದ್ಧಕ್ಕೆ ಹೋದವನು ಸಾಯದೆ ಬದುಕಿಬರುವುದೂ ಉಂಟಲ್ಲವೆ? ಮಹಾರಾಜಾ! ಕಾಲಮಹಿಮೆಯನ್ನು ಮೆಟ್ಟಬಲ್ಲವನೊಬ್ಬನಾದರೂ ಇಲ್ಲ ಭೂತಗಳು ಮೊದಲಿದ್ದವುಗಳಲ್ಲ! ಕೊನೆಯಲ್ಲಿಯೂ ಇರತಕ್ಕವಲ್ಲ ಮಧ್ಯದಲ್ಲಿ ಮಾತ್ರ ಇದ್ದು ಮಾಯವಾಗುವುವು ಆ ವಿಷಯಕ್ಕಾಗಿ ಏಕೆ ಚಿಂತಿಸುವೆ? ಶೋಕಪಡುವವನು ಮೃತಪಟ್ಟವನನ್ನು ಹಿಂಬಾಲಿಸುವುದಿಲ್ಲ ತಾನೂ ಸಾಯುವುದಿಲ್ಲ ಪ್ರಪಂಚವು ಹೀಗಿರುವಾಗ ಏತಕ್ಕಾಗಿ ಹೀಗೆ ದುಃಖಿಸಬೇಕು? ಕಾಲವು ಸಕಲಪ್ರಾಣಿಗಳನ್ನೂ ತಪ್ಪದೆ ನಾಶಮಾಡುವುದು ಕಾಲಕ್ಕೆ ಯಾವನೂ ಬೇಕಾದವನಿಲ್ಲ ಯಾವನೂ ವಿರೋಧಿಯಿಲ್ಲ ರಾಜೇಂದ್ರಾ! ಗಾಳಿಯು ಹುಲ್ಲಿನ ಮೊನೆಯನ್ನು ತನ್ನ ಇಷ್ಟಬಂದಹಾಗೆ ಆಡಿಸುವಂತೆ, ಕಾಲವೂ ಪ್ರಾಣಿಗಳನ್ನು ತನ್ನ ವಶಪಡಿಸಿಕೊಂಡು ತನ್ನ ಇಷ್ಟದಂತೆ ಆಡಿಸುವುದು ಗುಂಪಾಗಿ ಸೇರಿ ಸ್ಥಳದಿಂದ ಸ್ಥಳಕ್ಕೆ ಪ್ರಯಾಣಮಾಡುವಂತೆ, ಲೋಕದಲ್ಲಿ ಜೀವಯಾತ್ರೆ ಮಾಡುವ ಮಾನವರಲ್ಲಿ ಯಾವನಿಗೆ ಕಾಲವು ಪ್ರಾಪ್ತವಾಗುವುದೋ ಅತನು ಮುಂದೆ ಹೊರಡುವನು ಇತರರು ಅವನ ಹಿಂದೆ ಹೋಗುವರು ಅದಕ್ಕಾಗಿ ದುಃಖಿಸುವುದೇಕೆ? ರಾಜಾ! ನಿನಗೆ ಶಾಸ್ತ್ರಗಳು ಪ್ರಮಾಣವಾಗಿದ್ದರೆ, ಯುದ್ಧದಲ್ಲಿ ಹತರಾದ ಇವರ ವಿಷಯವಾಗಿ ನೀನು ದುಃಖಿಸಲೇಬಾರದು ಅವರು ಉತ್ತಮಗತಿಯನ್ನೇ ಪಡೆದಿರುವರು ಅವರೆಲ್ಲರೂ ವೇದಾಧ್ಯಯನ ಮಾಡಿದವರು! ಎಲ್ಲರೂ ವ್ರತಗಳನ್ನನುಷ್ಠಿಸಿದವರು! ಎಲ್ಲರೂ ಶತ್ರುಗಳನ್ನಿದಿರಿಸಿ ನಿಂತೇ ಯುದ್ಧದಲ್ಲಿ ಪ್ರಾಣಗಳನ್ನೊಪ್ಪಿಸಿದವರು! ಅವರಿಗಾಗಿ ದುಃಖವೇಕೆ? ಅವರಲ್ಲರೂ ಎಲ್ಲಿಂದಲೋ ಬಂದಿದ್ದವರು ತಿರುಗಿ ಎಲ್ಲಿಗೋ ದೃಷ್ಟಿಗೆ ಅಗೋಚರರಾಗಿ ಹೋದರು ಅವರಾರೂ ನಿನಗೆ ಸಂಬಂಧಪಟ್ಟವರಲ್ಲ ಅವರಿಗೆ ನೀನೂ ಸಂಬಂಧಪಟ್ಟವನಲ್ಲ ಅಂತವರ ವಿಷಯಕ್ಕಾಗಿ ನೀನೇಕೆ ವ್ಯಸನಪಡಬೇಕು? ಯುದ್ಧದಲ್ಲಿ ಕೊಲ್ಲಲ್ಪಟ್ಟವನು ಸ್ವರ್ಗಸ್ಥನಾಗುವನು. ಜಯಿಸಿದವನು ಇಹದಲ್ಲಿ ಕೀರ್ತಿಯನ್ನು ಪಡೆಯುವನು ಅವೆರಡೂ ಕ್ಷತ್ರಿಯರಿಗೆ ಪ್ರಯೋಜನಕಾರಿಗಳೇ! ಹೇಗೂ

ಯುದ್ಧದಲ್ಲಿ ಫಲವಿಲ್ಲದೆ ಇಲ್ಲ ಇಂದ್ರನು ಅವರಿಗೆ ಕೋರಿದ ವಸ್ತುಗಳೆಲ್ಲವನ್ನೂ ಪಡೆಯುವ ಲೋಕಗಳನ್ನು ಕೊಡುವನು ಅವರೆಲ್ಲರೂ ದೇವೇಂದ್ರನಿಗೆ ಅತಿಥಿಗಳಾಗಿರುವರು ಯುದ್ಧದಲ್ಲಿ ಹತರಾದ ವೀರರು ಪಡೆಯುವುದಕ್ಕೆ ಸಮಾನವಾದ ಸ್ವರ್ಗಸುಖವು ಭೂರಿದಕ್ಷಿಣೆಗಳುಳ್ಳ ಯಜ್ಞಗಳಿಂದಾಗಲಿ, ತಪಸ್ಸುಗಳಿಂದಾಗಲಿ, ವಿದ್ಯೆಗಳಿಂದಾಗಲಿ ಲಭಿಸುವುದಿಲ್ಲ. ಅವರೆಲ್ಲರೂ ಶತ್ರುವೀರರ ದೇಹವೆಂಬ ಅಗ್ನಿಯಲ್ಲಿ ಬಾಣಗಳೆಂಬ ಆಹುತಿಗಳನ್ನು ಮಾಡಿದರು ತಮ್ಮ ದೇಹಾಗ್ನಿಯಲ್ಲಿ ಹೋಮಮಾಡಲ್ಪಟ್ಟ ಶತ್ರುಬಾಣಗಳನ್ನೂ ಸಹಿಸಿದರು ರಾಜಾ! ಸ್ವರ್ಗಸಾಧನೆಗೆ ಉತ್ತಮಮಾರ್ಗವೇನೆಂದು ಕೇಳುವೆಯಾದರೆ, ಈ ಪ್ರಪಂಚದಲ್ಲಿ ಕ್ಷತ್ರಿಯನಿಗೆ ಯುದ್ಧಕ್ಕಿಂತಲೂ ಉತ್ತಮವಾದ ಫಲಕಾರಿಯು ಬೇರೊಂದಿಲ್ಲ ಮಹಾತ್ಮರೂ, ಸಮರ್ಥರೂ, ಶೂರರೂ ಆದ ಆ ಕ್ಷತ್ರಿಯರಿಗೆ ಈ ಯುದ್ಧದಿಂದ ಅವರ ಮನೋರಥಗಳೆಲ್ಲ ನೆರವೇರಿದುವು ಅವರಲ್ಲಿ ಯಾರಿಗಾಗಿಯೂ ನೀನು ದುಃಖಿಸಬಾರದು ಓ ರಾಜೇಂದ್ರಾ! ಈಗ ನಿನ್ನಲ್ಲಿ ನೀನೇ ಸಮಾಧಾನವನ್ನು ತಂದುಕೊಂಡು ದುಃಖವನ್ನು ತ್ಯಜಿಸು ಇದಕ್ಕಾಗಿ ನೀನು ದುಃಖಿಸಿ ಮರಣವನ್ನು ಬಯಸುವುದು ಸರಿಯಲ್ಲ ಸಾವಿರಾರುಮಂದಿ ತಂದೆ ತಾಯಿಗಳೂ, ನೂರಾರುಮಂದಿ ಹೆಂಡಿರೂ, ಪುತ್ರರೂ ಕುಟುಂಬವೆಂಬ ನೆವದಿಂದ ಒಂದಾಗಿ ಸೇರಿ ಸುಖವನ್ನನುಭವಿಸಿ ಹೋದರು ಅವರಲ್ಲಿ ಯಾರು ಯಾರಿಗೆ ಸಂಬಂಧಪಟ್ಟವರು? ನಾವು ತಾನೇ ಅವರಲ್ಲಿ ಯಾರಿಗೆ ಸಂಬಂಧಪಟ್ಟವರು? ಸಂಸಾರದಲ್ಲಿ ಪ್ರತಿದಿನವೂ ನೂರುಸಾವಿರ ಲೆಕ್ಕದಿಂದ ಮನುಷ್ಯನಿಗೆ ಭಯವೂ, ವಿವಿಧ ದುಃಖಗಳೂ ಬಂದೊದಗುವುವು ಆದರೆ, ಅವು ಮೂಢಜನರನ್ನು ಪೀಡಿಸುವುವೇಹೊರತು ಪಂಡಿತನನ್ನು ಪೀಡಿಸಲಾರವು ಓ ಕೌರವಶ್ರೇಷ್ಠಾ! ಕಾಲಕ್ಕೆ ಯಾವನೂ ನಂಟನಲ್ಲ ಯಾವನೂ ಶತ್ರುವಲ್ಲ ಅದು ಯಾರಲ್ಲಿಯೂ ತಟಸ್ಥವಾಗಿರುವುದೂ ಇಲ್ಲ ಅದು ಎಲ್ಲವನ್ನೂ ಎಳೆಯುವುದು ಅದು ಸಮಸ್ತಭೂತಗಳನ್ನೂ ಪಕ್ವಮಾಡುವುದು ಪ್ರಜೆಗಳನ್ನು ಸಂಹರಿಸುವುದು ಪ್ರಾಣಿಗಳು ಸಾಯುವಾಗಲೂ ಕಾಲವು ಎಚ್ಚರವಾಗಿಯೇ ಇರುವುದು ಯಾವ ರೀತಿಯಿಂದಲೂ ಯಾರಿಗೂ ಕಾಲವನ್ನತಿಕ್ರಮಿಸ

ಲಾಗುವುದಿಲ್ಲ. ರೂಪ, ಯೌವನ, ಪ್ರಾಣ, ಧನಸಮೃದ್ಧಿ, ಆರೋಗ್ಯ, ಇಷ್ಟಬಂಧುಗಳೊಡನೆ ಕೂಡಾಡಿ ನಲಿಯುವುದು, ಇವೆಲ್ಲವೂ ಅಶಾಶ್ವತಗಳು ವಿದ್ವಾಂಸರು ಇವುಗಳಲ್ಲಿ ಆಸೆಯಿಡಬಾರದು. ಆದುದರಿಂದ ಲೋಕದಲ್ಲಿ ಸರ್ವಪ್ರಾಣಿಸಹಜವಾದ ದುಃಖಕ್ಕಾಗಿ ಯಾವನೂ ಮನಗುಂದಬಾರದು ಇದಕ್ಕಾಗಿ ಸತ್ತಮಾತ್ರಕ್ಕೆ ಮನುಷ್ಯನಿಗೆ ಅದರಿಂದ ನಿವೃತ್ತಿಯಿಲ್ಲ ಧೀರನಾದವನು ತಾನು ದುಃಖಕ್ಕೀಡಾಗದೆ, ಧೈರ್ಯದಿಂದ ತಕ್ಕ ಪರಿಹಾರವನ್ನು ಮಾಡಬೇಕು ಆ ವಿಷಯವಾದ ಚಿಂತೆಯನ್ನೇ ಮನಸ್ಸಿಗೆ ತಂದುಕೊಳ್ಳಬಾರದು ದುಃಖಕ್ಕೆ ಇದೇ ಪರಮೌಷಧಿಯು ಅದನ್ನು ಕುರಿತು ಸುಮ್ಮನೆ ಆಲೋಚಿಸುವುದರಿಂದ, ಆ ದುಃಖವು ಕಡಿಮೆಯಾಗುವುದಕ್ಕೆ ಬದಲಾಗಿ ಹೆಚ್ಚುತ್ತಲೇ ಹೋಗುವುದು ದುರ್ಬಲಬುದ್ಧಿಯುಳ್ಳ ಮನುಷ್ಯರೇ ಅನಿಷ್ಟಪ್ರಾಪ್ತಿಯಿಂದಲೂ, ಇಷ್ಟವಿಯೋಗದಿಂದಲೂ ದುಃಖಕ್ಕೆ ಗುರಿಯಾಗುವರು ಕಳೆದುಹೋದುದರ ವಿಚಾರವಾಗಿ ದುಃಖಿಸುವುದರಿಂದ ಧರ್ಮವೂ ಇಲ್ಲ! ಅರ್ಥವೂ ಇಲ್ಲ! ಸುಖವೂ ಇಲ್ಲ! ಈ ಮೂರು ಪುರುಷಾರ್ಥಗಳಲ್ಲಿ ಅವನು ಯಾವುದನ್ನೂ ಪಡೆಯುವಹಾಗಿಲ್ಲ ಅವನಿಗೆ ಅದರಿಂದ ಕಾರ್ಯಪ್ರಯೋಜನವೂ ಲಭಿಸುವಹಾಗಿಲ್ಲ. ಅವನಿಗೆ ಧರ್ಮಾರ್ಥಕಾಮಗಳು ಮೂರೂ ಕೈತಪ್ಪಿಹೋಗುವುವು ಕೇವಲವಿಷಯಾಸಕ್ತಿಯುಳ್ಳ ಮನುಷ್ಯರೇ ಒಬ್ಬರನ್ನೊಬ್ಬರು ದುಃಖಪಡಿಸುವುದರಲ್ಲಿ ತೃಪ್ತಿಯಿಲ್ಲದಿರುವರು ಶಾಸ್ತ್ರಜ್ಞರು ಆ ಚಿಂತೆಯಿಲ್ಲದೆ ತೃಪ್ತರಾಗಿರುವರು ವಿವೇಕದಿಂದ ಮನೋದುಃಖವನ್ನು ಅಡಗಿಸಬೇಕು. ಔಷಧಗಳಿಂದ ಶರೀರದುಃಖವನ್ನು ನಿವೃತ್ತಿಪಡಿಸಿಕೊಳ್ಳಬೇಕು ಇದೇ ಉತ್ತಮಜ್ಞಾನದ ಶಕ್ತಿ! ಇಂತಹ ಸ್ಥಿತಿಯಲ್ಲಿ ಅಜ್ಞತೆಯಿಂದ ಹುಡುಗುತನವನ್ನು ಅನುಸರಿಸಿ ನಡೆಯಬಾರದು ಮನುಷ್ಯನು ಮಾಡಿದ ಕರ್ಮವು ಆತನು ಮಲಗಿರುವಾಗ ತಾನೂ ಅವನ ಸಂಗಡಲೇ ಮಲಗಿರುವುದು. ನಿಂತಿರುವಾಗ ನಿಲ್ಲುವುದು! ಓಡುವಾಗ ಓಡುವುದು! ಯಾವಯಾವ ಸ್ಥಿತಿಯಲ್ಲಿ ಯಾವಯಾವ ಸತ್ಕಾರ್ಯ ದುಷ್ಕಾರ್ಯಗಳನ್ನು ಮಾಡುವನೋ, ಅದಕ್ಕನುಸಾರವಾಗಿ ಅವನು ಅದೇ ಸ್ಥಿತಿಯಲ್ಲಿ ಫಲವನ್ನೂ ಪಡೆಯುವನು ಯಾವಯಾವ ಶರೀರದಿಂದ ಯಾವಯಾವ ಕರ್ಮವನ್ನು

ಮಾಡುವನೋ, ಆತನು ಆಯಾ ಶರೀರದಿಂದ ಅದಕ್ಕೆ ತಕ್ಕ ಫಲವನ್ನೇ ಅನುಭವಿಸುವನು ಮನುಷ್ಯನು ತನಗೆ ತಾನೇ ಬಂಧು! ತನಗೆ ತಾನೇ ಶತ್ರು ತಾನು ಮಾಡಿದ ಸತ್ಕಾರ್ಯಗಳಿಗೂ, ದುಷ್ಕಾರ್ಯಗಳಿಗೂ ತನ್ನ ಆತ್ಮವೇ ಸಾಕ್ಷಿ! ಸತ್ಕಾರ್ಯಗಳಿಂದ ಸೌಖ್ಯವೂ. ಪಾಪಕಾರ್ಯದಿಂದ ದುಃಖವೂ ಪ್ರಾಪ್ತವಾಗುವುವು. ಎಲ್ಲಿ ಹೋದರೂ ಮಾಡಿದುದಕ್ಕೆ ಫಲವು ತಪ್ಪದು. ಮಾಡದ ಕಾರ್ಯಕ್ಕೆ ಫಲವಿಲ್ಲ ನಿನ್ನಂತಹ ಬುದ್ಧಿಶಾಲಿಗಳು ಜ್ಞಾನಮಾರ್ಗಕ್ಕೆ ವಿರುದ್ಧವೂ, ಅನೇಕ ಅಪಾಯಗಳುಳ್ಳದೂ, ಸಂಪೂರ್ಣವಾಗಿ ಆತ್ಮನಾಶಕಸ್ವಭಾವವುಳ್ಳದೂ ಆದ ಕಾರ್ಯಗಳಲ್ಲಿ ಪ್ರವರ್ತಿಸಲಾರರು" ಎಂದನು

ಇದು ಎರಡನೆಯ ಅಧ್ಯಾಯವು



 ಧೃತರಾಷ್ಟ್ರನಿಗೆ ವಿದುರನ ತತ್ವೋಪದೇಶಗಳು 

ಧೃತರಾಷ್ಟ್ರನು "ಓ ಪ್ರಾಜ್ಞಾ! ನೀನು ಹೇಳಿದುದೆಲ್ಲವೂ ಒಳ್ಳೆಯದೇ ಇನ್ನು ನನ್ನ ದುಃಖವು ನೀಗಿತು ನಿನ್ನಿಂದ ಇನ್ನೂ ಕೆಲವು ತತ್ವಗಳನ್ನು ಕೇಳಲಪೇಕ್ಷಿಸುವೆನು ಅನಿಷ್ಟಪ್ರಾಪ್ತಿಯಿಂದಲೂ, ಅಪೇಕ್ಷಿತ ಫಲಗಳು ಕೈಗೂಡದಿರುವುದರಿಂದಲೂ ಉಂಟಾಗುವ ಮನೋವ್ಯಾಕುಲತೆಯನ್ನು ಶಾಸ್ತ್ರಜ್ಞರು ಹೇಗೆ ನೀಗುವರು?" ಎಂದನು

ಅದಕ್ಕೆ ವಿದುರನು "ರಾಜಾ! ಮನುಷ್ಯನು ತನ್ನ ಮನಸ್ಸನ್ನು ಎಷ್ಟೆಷ್ಟುಮಟ್ಟಿಗೆ ಸುಖದುಃಖಗಳಿಂದ ದೂರವಾಗಿರಿಸುವನೋ, ಅದಕ್ಕೆ ತಕ್ಕಂತೆ ಆಯಾ ದುಃಖದಿಂದಲೂ, ಸುಖದಿಂದಲೂ ವಿಶ್ರಾಂತಿಯನ್ನು ಪಡೆದು, ಒಳ್ಳೆಯ ಗತಿಯನ್ನು ಹೊಂದುವನು ಓ ನರೇಂದ್ರಾ! ಚೆನ್ನಾಗಿ ಆಲೋಚಿಸಿನೋಡಿದರೆ, ಇವೆಲ್ಲವೂ ಅಶಾಶ್ವತಗಳು ಲೋಕವು ದುರ್ಬಲವಾದ ಬಾಳೆಯಗಿಡಕ್ಕೆ ಸಮಾನವಾದುದು ಇದರಲ್ಲಿ ಸಾರವಿಲ್ಲ ವಿದ್ವಾಂಸರಾಗಿರಲಿ, ಮೂಢರಾಗಿರಲಿ, ಬಡವರಾಗಿರಲಿ, ಭಾಗ್ಯವಂತರಾಗಿರಲಿ, ಕೊನೆಗೆ ಎಲ್ಲರೂ ಮರಣಕ್ಕೀಡಾಗಲೇಬೇಕು ಅವರು ಮೃತರಾಗಿ ಬಿದ್ದಮೇಲೆ

ಮಾಂಸವಿಲ್ಲದ ಬರೀ ಎಲುಬುಗಳಿಂದಲೂ, ನರಗಳ ಕಟ್ಟುಗಳಿಂದಲೂ ಅವಶಿಷ್ಟವಾದ ಅವರ ಶರೀರಗಳಲ್ಲಿ, ಜನರಿಗೆ ಕುಲರೂಪಾದಿ ವಿಶೇಷಗಳಾವುದನ್ನು ತಾನೇ ತಿಳಿಯಲವಕಾಶವುಂಟು ಹೀಗಿರುವಾಗ ಮನುಷ್ಯರು ಒಬ್ಬರಿಗೊಬ್ಬರು ವಂಚಿಸಲು ಅಪೇಕ್ಷಿಸುವುದೇಕೆ? ಪ್ರಾಜ್ಞರು ಮನುಷ್ಯರಿಗೆ ದೇಹವೇ ಮನೆಯೆಂದು ಹೇಳುವರು ಕಾಲಗತಿಯಿಂದ ಅವು ಒಂದಾಗಿ ಜೋಡಿಸಲ್ಪಡುವುವು ಹಾಗೆಯೇ ಅವು ಅಗಲಿಸಲ್ಪಡುವುವು *ಲಿಂಗಶರೀರವೊಂದೇ ಕೊನೆಯುವರೆಗೆ ಸ್ಥಿರವಾದುದು ಮನುಷ್ಯನು ಹಳೆಯಬಟ್ಟೆಯನ್ನೋ, ಹೊಸಬಟ್ಟೆಯನ್ನೋ ತೆಗೆದುಹಾಕಿ, ಬೇರೆ ವಸ್ತ್ರವೊಂದನ್ನು ಧರಿಸುವಂತೆ ದೇಹಧಾರಿಗಳಿಗೆ ಶರೀರಪ್ರಾಪ್ತಿಯಾಗುವುದು ಈ ಪ್ರಪಂಚದಲ್ಲಿ ವಾಸ್ತವವಾಗಿ ಪ್ರಾಣಿಗಳು ತಾವು ಮಾಡಿದ ಕರ್ಮಗಳಿಂದಲೇ ಸುಖದುಃಖಗಳನ್ನು ಅನುಭವಿಸುವುವು ಆದುದರಿಂದ ಸುಖದುಃಖಪ್ರಾಪ್ತಿಗಳಿಗೆಲ್ಲ ಕರ್ಮವೇ ಕಾರಣವು ಒಬ್ಬನು ಸ್ವತಂತ್ರನಾಗಿಯೋ, ಸ್ವಾತಂತ್ರ್ಯವಿಲ್ಲದೆಯೋ ಆ ಕರ್ಮಾನುಭವವೆಂಬ ಭಾರವನ್ನು ಹೊತ್ತೇ ತೀರಬೇಕು ಒಂದು ಮಣ್ಣಿನ ಗಡಿಗೆಯು ಕುಂಬಾರಚಕ್ರದಮೇಲಿರುವಾಗಲೇ ಒಡೆಯಬಹುದು! ಇಲ್ಲವೇ ಪಾತ್ರೆಯಾಗಿ ಮಾಡಲ್ಪಡುತ್ತಿರುವಾಗಲೋ, ಮಾಡಲ್ಪಟ್ಟಮೇಲೆಯೋ ಒಡೆಯಬಹುದು! ಇನ್ನೂ ಪೂರ್ಣಾಕೃತಿಗೆ ಬಾರದಿದ್ದಾಗಲೋ, ಆಕೃತಿಯೆಲ್ಲಾ ಪೂರಯಿಸಿ ಚಕ್ರದಿಂದ ಇಳಿಸಲ್ಪಡುವಾಗಲೋ, ಇಳಿಸಿದ ಮೇಲೆಯೋ, ಇನ್ನೂ ಒದ್ದೆಯಾಗಿರುವಾಗಲೋ, ಒಣಗಿರುವಾಗಲೋ, ಸುಡಲ್ಪಡುವಾಗಲೋ, ಎತ್ತುವಾಗಲೋ, ಇಡುವಾಗಲೋ, ಅಥವಾ ಕೊನೆಗೆ ಉಪಯೋಗಿಸುತ್ತಿರುವಾಗಲೋ ಒಡೆದುಹೋಗಬಹುದು ಆದರಂತೆಯೇ ದೇಹಧಾರಿಗಳ ಶರೀರವೂಕೂಡ ಮನುಷ್ಯನು ಗರ್ಭದಲ್ಲಿರುವಾಗಲೋ, ಹುಟ್ಟಿದೊಡನೆಯೋ, ಅಥವಾ ಹತ್ತು ಹದಿನೈದು ದಿನಗಳು ಕಳೆದ ಮೇಲೆಯೋ, ಅಥವಾ ಒಂದು ತಿಂಗಳು, ಒಂಡೆರಡು ವರ್ಷಗಳು ಕಳೆದ ಮೇಲೆಯೋ, ಯೌವನವಯಸ್ಸಿನಲ್ಲಿಯೋ, ಮಧ್ಯವಯಸ್ಸಿನಲ್ಲಿಯೋ, ವೃದ್ಧಾಪ್ಯದಲ್ಲಿಯೋ ಬಿದ್ದುಹೋಗುವುದು ಪ್ರಾಣಿಗಳು ತಮ್ಮ ಹಿಂದಿನ

---

* ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಪಂಚಪ್ರಾಣಗಳು, ಮನಸ್ಸು, ಎಂಬೀ ಹದಿನಾರು ಕಲೆಗಳುಳ್ಳದು

ಕರ್ಮಫಲಗಳಿಗನುಸಾರವಾಗಿಯೇ ಹುಟ್ಟುವುವು ಮತ್ತು ಅದಕ್ಕನುಸಾರ ವಾಗಿ ಸಾಯುವುವು ಹೀಗೆ ಸಾಗುತ್ತಿರುವ ಈ ಪ್ರಪಂಚದ ವಿಷಯದಲ್ಲಿ ನೀನೇಕೆ ಅನುತಾಪಪಡುವೆ? ಓ ರಾಜಾ! ಜಲಕ್ರೀಡೆಗಾಗಿ ನೀರಿಗಿಳಿದ ವನು, ಯಾವ ರೀತಿಯಲ್ಲಿ ಆಗಾಗ ಮೇಲೇಳುತ್ತಲೂ, ಮುಳುಗುತ್ತಲೂ, ಈಜುತ್ತಲೂ, ಹೀಗೆಯೇ ಇನ್ನೂ ನಾನಾಚೇಷ್ಟೆಗಳನ್ನು ಮಾಡುವನೋ, ಅದೇ ರೀತಿಯಲ್ಲಿ ಮನುಷ್ಯನು ಸಂಸಾರವೆಂಬ ಆಳವಾದ ಸಮುದ್ರದಲ್ಲಿ ಒಂದು ಸಮಯದಲ್ಲಿ ಮೇಲೇಳುವನು! ಮತ್ತೊಂದುವೇಳೆಯಲ್ಲಿ ಮುಳುಗು ವನು! ಅಂತಹ ಸಂಸಾರಬಂಧದಿಂದ ಕಟ್ಟಲ್ಪಟ್ಟು ವ್ಯಸನಕ್ಕೆ ಗುರಿಯಾ ಗುವವರು ಬುದ್ಧಿಹೀನರು ಪ್ರಾಣಿಗಳ ಈ ಸಂಯೋಗ ವಿಯೋಗಗಳೆಂಬ ಸೃಷ್ಟಿನಿಯಮವನ್ನು ತಿಳಿದು, ಯಾವ ಪ್ರಾಜ್ಞರು ಜನನ ಮರಣಗಳನ್ನು ಕೊನೆಮುಟ್ಟಿಸುವ ಉದ್ದೇಶದಿಂದ, ಅವೆರಡರ ಈ ಮಧ್ಯಕಾಲದ ಮರ್ಮ ವನ್ನು ತಿಳಿಯುವರೋ, ಅವರು ಉತ್ತಮಗತಿಯನ್ನು ಪಡೆಯುವರು" ಎಂದನು

ಇದು ಮೂರನೆಯ ಅಧ್ಯಾಯವು

{ ಜೀವನಿಗೆ ಗರ್ಭವಾಸದ ರೀತಿಯನ್ನು ವಿದುರನು ಧೃತರಾಷ್ಟ್ರನಿಗೆ ತಿಳಿಸಿದುದು }

ಆಗ ಧೃತರಾಷ್ಟ್ರನು "ಓ ಪ್ರಾಜ್ಞಾ! ವಿದ್ವಾಂಸರು ಸಂಸಾರತತ್ತ್ವ ವನ್ನು ಹೇಗೆ ವರ್ಣಿಸಿರುವರು? ನಾನು ಅದನ್ನು ನಿನ್ನಿಂದ ಕೇಳಲು ಕುತೂ ಹಲಗೊಂಡಿರುವೆನು ನನಗೆ ಆ ತತ್ವವನ್ನು ತಿಳಿಸು" ಎಂದನು

ಆಗ ವಿದುರನು "ಜೀವನು ಉತ್ಪತ್ತಿ ದಿನದಿಂದ ಹಿಡಿದೇ ಪ್ರಾಣಿ ಗಳ ಎಲ್ಲಾ ಕಾರ್ಯಗಳನ್ನೂ ನೋಡುತ್ತ, ಮೊದಲು ಕಶ್ಮಲವಾದ ಶುಕ್ಲ ಶೋಣಿತದಲ್ಲಿ ನೆಲಸಿರುವನು ಆಮೇಲೆ ದಿನದಿನಕ್ಕೆ ಪ್ರಮಾಣದಲ್ಲಿ ವೃದ್ಧಿಯಾಗುತ್ತ ಬರುವನು ಐದನೆಯ ತಿಂಗಳು ಕಳೆದೊಡನೆಯೇ ಆ ಜೀವನಿಗೆ ಮಾಂಸಸಂಬಂಧವುಂಟಾಗುವುದು. ಅದಕ್ಕೆ ಮುಂದಿನ ತಿಂಗ ಳಲ್ಲಿ ಗರ್ಭವಾಸಿಯಾದ ಆ ಜೀವನು, ಸರ್ವಾಂಗಗಳಿಂದ ಕೂಡುತ್ತ, ರಕ್ತ

ಮಾಂಸಗಳ ಮುದ್ದೆಯೆಂಬ ಅಮೇಧ್ಯದಲ್ಲಿ ವಾಸಮಾಡುತ್ತಿರುವನು. ಆಮೇಲೆ ಆ ಜೀವನು ಒಂದು ವಾಯುವಿನ ವೇಗದಿಂದ ಕಾಲುಮೇಲಾಗಿಯೂ, ತಲೆ ಕೆಳಗಾಗಿಯೂ ಯೋನಿದ್ವಾರವನ್ನು ಸೇರಿ ಅಲ್ಲಿ ಅನೇಕ ಕಷ್ಟಗಳಿಗೆ ಒಳಗಾಗುವನು. ಪ್ರಾರಬ್ಧಕರ್ಮಗಳಿಂದ ಕಟ್ಟಲ್ಪಟ್ಟ ಆ ಜೀವನು, ಕೊನೆಗೆ ಆ ಯೋನಿಯ ಒತ್ತುವಿಕೆಯಿಂದಾದ ಮಹಾಕಷ್ಟದಿಂದ ತಪ್ಪಿಸಿಕೊಂಡು ಹೊರಬೀಳುವನು ಇದರಿಂದ ಮುಕ್ತನಾದರೂ ಆಮೇಲೆ ಇನ್ನೂ ಹಲವು ಬಾಧೆಗಳನ್ನೆಲ್ಲ ಅನುಭವಿಸುವನು ನಾಯಿಗಳು ಮಾಂಸಕ್ಕೆ ಮುತ್ತಿಕೊಳ್ಳುವಂತೆ ಗ್ರಹಪೀಡೆಗಳು ಅವನನ್ನು ಆವರಿಸುವುವು ಅವನ ಪೂರ್ವ ಕರ್ಮಗಳಿಗನುಸಾರವಾಗಿ ಅವನ ಶರೀರಕ್ಕೆ ಹಲವು ವ್ಯಾಧಿಗಳು ಬರುವುವು ಇಂದ್ರಿಯಗಳೆಂಬ ಹಗ್ಗದಿಂದ ಕಟ್ಟಲ್ಪಟ್ಟವನೂ, ಸಂಗಾಪೇಕ್ಷಿಯೂ, ವ್ಯಾಧಿಗ್ರಸ್ತನೂ ಆದ ಆ ಜೀವನಿಗೆ ಇನ್ನೂ ಅನೇಕದುಃಖಗಳು ಪ್ರಾಪ್ತವಾಗುವುವು ಅಡಿಗಡಿಗೆ ಹೀಗೆ ದುಃಖಕ್ಕೊಳಗಾಗುತಿದ್ದರೂ, ಆ ಜೀವನಿಗೆ ಸಂಸಾರದಲ್ಲಿ ತೃಪ್ತಿಯೇ ಇಲ್ಲ ಆಗ ಆ ಜೀವನಿಗೆ ತಾನು ಮಾಡುವುದು ಒಳ್ಳೆಯದೋ, ಕೆಟ್ಟದೋ ಎಂಬ ಯುಕ್ತಾಯುಕ್ತಗಳೂ ತಿಳಿಯುವುದಿಲ್ಲ ಧ್ಯಾನಯೋಗದಲ್ಲಿರುವವರಾದರೆ ಅದನ್ನು ತಿಳಿದು ತಮ್ಮನ್ನು ತಾವು ಕಾಪಾಡಿಕೊಳ್ಳಬಲ್ಲರು ಇವನಿಗಾದರೋ ಯಮಲೋಕವು ಸಮೀಪಿಸುತ್ತಿದ್ದರೂ ತಿಳಿಯದು. ಅಂತ್ಯಕಾಲದಲ್ಲಿ ಯಮದೂತರಿಂದ ಎಳೆಯಲ್ಪಟ್ಟು ಮೃತನಾಗುವನು ಇಂದ್ರಿಯಗಳ ಕಾರ್ಯಗಳೆಲ್ಲ ಅಡಗಿದ ಮೇಲೆ (ತನ್ನ) ಪುಣ್ಯ ಪಾಪಗಳಿಗೆ ತಕ್ಕ ಫಲವನ್ನು ಅನುಭವಿಸುವನು ಅದನ್ನನುಭವಿಸುವಾಗಲೇ ಜೀವನು ತಿರುಗಿ ಕರ್ಮಬಂಧಗಳಿಂದ ಕಟ್ಟಲ್ಪಡುವುದನ್ನೂ ಲಕ್ಷಿಸನು ಆಹಾ! ಲೋಕವೆಲ್ಲ ಹೀಗೆ ಮೋಸಹೋಗುತ್ತಿರುವುದು ದುರಾಶೆಗೆ ವಶವಾಗುವುದು ಜನರು ಆಶಾ ಕ್ರೋಧ ಮದಗಳಿಂದ ಬುದ್ಧಿವಿಕಲ್ಪಗೊಂಡು, ತಮ್ಮನ್ನು ತಾವೇ ತಿಳಿದುಕೊಳ್ಳದಿರುವರು. ಉತ್ತಮ ಕುಲದಲ್ಲಿ ಹುಟ್ಟಿದವನು ಅಧಮಕುಲದಲ್ಲಿ ಹುಟ್ಟಿದವನನ್ನು ನಿಂದಿಸುತ್ತ ಅದರಿಂದ ಆನಂದಿಸುವನು. ಧನಮದದಿಂದ ಕೊಬ್ಬಿದವನು ದರಿದ್ರರನ್ನು ನಿಂದಿಸುತ್ತ ಬೇರೆಯವರನ್ನೆಲ್ಲ ಮೂರ್ಖರೆಂದು ದೂಷಿಸುವನು. ತನ್ನ ದುಸ್ಥಿತಿಯನ್ನೇ ತಾನು ಸರಿಯಾಗಿ ತಿಳಿದುಕೊಳ್ಳದೆ ಇತರರಲ್ಲಿ ದೋಷಗಳ

ನ್ನಾರೋಪಿಸುವನು ತನ್ನನ್ನು ತಾನೇ ಸ್ವಾಧೀನದಲ್ಲಿಟ್ಟುಕೊಂಡು ಆಳಲಾರದ ಆತನು ಇತರರಮೇಲೆ ಅಧಿಕಾರನಡೆಸುವನು ಜ್ಞಾನಿಗಳೋ, ಮೂರ್ಖರೋ, ಧನಿಕರೂ, ದರಿದ್ರರೋ, ಕುಲೀನರೋ, ಅಧಮಕುಲಜಾತರೋ, ಮಾನಿಗಳೋ, ಮಾನವಿಲ್ಲದವರೋ ಯಾರಾದರೇನು? ಎಲ್ಲರೂ ಯಾವಾಗ ಪ್ರಾಣವನ್ನು ಬಿಟ್ಟು, ಸುಡುಗಾಡನ್ನು ಸೇರಿ, ಮಾಂಸವಿಲ್ಲದೆ ಬರೀ ಅಸ್ಥಿಮಯವೂ, ನರಗಳಿಂದ ಬಂಧಿತವೂ ಆದ ದೇಹದೊಡನೆ ಬಿದ್ದಿರುವರೋ, ಆ ಸಮಯದಲ್ಲಿ ಇತರಜನರು ಅವರ ವಿಷಯದಲ್ಲಿ ಕುಲರೂಪ ವ್ಯತ್ಯಾಸಗಳನ್ನು ತಿಳಿದುಕೊಳ್ಳತಕ್ಕ ಯಾವ ವಿಶೇಷವನ್ನು ತಾನೇ ಕಾಣಬಲ್ಲರು? ಎಲ್ಲರೂ ಹೀಗೆ ಭೂಮಿಯಲ್ಲಿ ಸಮವಾಗಿ ಹುಟ್ಟಿ, ಬದುಕಿ, ಸಾಯುವವರಾದುದರಿಂದ, ಈ ಲೋಕದಲ್ಲಿ ಅಜ್ಞರು ಒಬ್ಬರನ್ನೊಬ್ಬರು ಏತಕ್ಕಾಗಿ ವಂಚಿಸುವುದಕ್ಕೆ ಅಪೇಕ್ಷಿಸುವರೋ? ಯಾವನು ಬಹಿರಂಗವಾಗಿಯೂ, ರಹಸ್ಯವಾಗಿಯೂ ಇರುವ ಈ ಶಾಸ್ತ್ರತತ್ವವನ್ನು ಕೇಳಿ ತಿಳಿದು, ಅಸ್ಥಿರವಾದ ಈ ಜೀವಲೋಕದಲ್ಲಿ ತನ್ನ ಜನ್ಮವಾದುದುಮೊದಲು ಧರ್ಮವನ್ನೇ ರಕ್ಷಿಸಿಕೊಂಡುಬರುವನೋ, ಆತನು ಉತ್ತಮಗತಿಯನ್ನು ಪಡೆಯುವನು. ಈ ಎಲ್ಲಾ ತತ್ವಗಳನ್ನೂ ತಿಳಿದು, ಅದರಂತೆ ಅನುಸರಿಸುವವನು (ಸಂಸಾರ) ಮಾರ್ಗದಿಂದ ತಾನೇ (ತನ್ನನ್ನು) ಬಿಡಿಸಿಕೊಳ್ಳುವನು'

ಇದು ನಾಲ್ಕನೆಯ ಅಧ್ಯಾಯವು

---

{ ವಿದುರನು ಸಂಸಾರವನ್ನು ಒಂದು ದೊಡ್ಡ ಕಾಡಿಗೆ ಹೋಲಿಸಿ ನಿರೂಪಿಸಿದುದು }

ಆಗ ಧೃತರಾಷ್ಟ್ರನು "ಓ ಪ್ರಾಜ್ಞಾ! ತಿಳಿಯಲಸಾಧ್ಯವಾದ ಈ ಧರ್ಮಸೂಕ್ಷ್ಮಗಳು ನನ್ನ ಬುದ್ಧಿಯಲ್ಲಿ ನಾಟುವಂತೆ ಇನ್ನೂ ಚೆನ್ನಾಗಿ ವಿವರಿಸಿ ತಿಳಿಸಬೇಕು" ಎಂದು ಕೇಳಲು, ವಿದುರನು ಹೀಗೆಂದು ಹೇಳುವನು.

"ರಾಜಾ! ಮೊದಲು ಸ್ವಯಂಭುವಾದ ಪರಮಾತ್ಮನನ್ನು ನಮಸ್ಕರಿಸಿ, ಮಹರ್ಷಿಗಳು ಸಂಸಾರವೆಂಬ ಕಾಡನ್ನು ಹೇಗೆ ನಿರೂಪಿಸಿರುವರೋ

ಅದನ್ನೇ ನಿನಗೆ ತಿಳಿಸುವೆನು ಕೇಳು. ಒಂದು ಕಾಡಿನಲ್ಲಿರುತಿದ್ದ ಬ್ರಾಹ್ಮಣನೊಬ್ಬನು, ಸುಲಭವಾಗಿ ಪ್ರವೇಶಿಸಲಸಾಧ್ಯವೂ, ಮಾಂಸಭಕ್ಷಕಗಳಾದ ಅನೇಕಕ್ರೂರಜಂತುಗಳಿಂದ ತುಂಬಿದುದೂ ಆದ ಬೇರೊಂದು ಮಹಾವನಕ್ಕೆ ಪ್ರವೇಶಿಸಿದನು ಆ ಕಾಡಿನಲ್ಲಿಯೋ ಅತ್ಯುಗ್ರರೂಪವುಳ್ಳ ಸಿಂಹ, ಹುಲಿ, ಆನೆ, ಕರಡಿ, ಮುಂತಾದ ಕ್ರೂರಮೃಗಗಳು ಅತಿಘೋರವಾಗಿ ಗರ್ಜಿಸುತ್ತ ಗುಂಪುಗುಂಪಾಗಿ ಸಂಚರಿಸುತ್ತಿದ್ದುವು ಕಣ್ಣಿಂದ ನೋಡುವುದಕ್ಕೇ ಭಯಂಕರವಾಗಿದ್ದ ಆ ಕಾಡನ್ನು ಕಂಡೊಡನೆ ಆ ಬ್ರಾಹ್ಮಣನು ಭಯದಿಂದ ನಡುಗಿದನು. ಆತನ ದೇಹದಲ್ಲಿ ರೋಮಾಂಚವೆದ್ದಿತು ಇನ್ನೂ ಹಲವು ಭಯವಿಕಾರಗಳೂ ತಲೆದೋರಿದುವು. ತನಗೆ ಅಲ್ಲಿ ಯಾವ ಸ್ಥಳದಲ್ಲಿ ಆಸರೆಯು ಸಿಕ್ಕುವುದೋ ಎಂದು ಎಲ್ಲಾ ದಿಕ್ಕುಗಳಲ್ಲಿಯೂ ಹುಡುಕಿದನು ಸಿಕ್ಕಿದಕಡೆಗಳಿಗೆಲ್ಲ ಓಡಿದನು. ಆ ವನವನ್ನೆಲ್ಲ ಸುತ್ತಾಡಿದನು ಅಲ್ಲಲ್ಲಿ ಕಂಡ ದುಷ್ಟಮೃಗಗಳನ್ನು ಅಡಗಿಸುವುದಕ್ಕಾಗಿ ಆಗಾಗ ಅವುಗಳನ್ನು ವೇಗದಿಂದಿದಿರಿಸಿ ಓಡಿದನು. ಅವನು ಭಯದಿಂದ ಓಡಿದರೂ, ಆ ದುಷ್ಟಮೃಗಗಳಿಂದ ತಪ್ಪಿಸಿಕೊಂಡುಹೋಗಲು ಸಾಧ್ಯವಾಗಲಿಲ್ಲ ಅವೂ ಬಿಟ್ಟುಹೋಗಲಿಲ್ಲ. ಅವು ಸಾಯಲೂ ಇಲ್ಲ ಇಷ್ಟರೊಳಗಾಗಿ ಮುಂದೆ ಆತನಿಗೆ ಸುತ್ತಲೂ ಬೇಲಿಹಾಕಿ ಗೋಪ್ಯವಾಗಿಯೂ, ಎಲ್ಲಾ ಕಡೆಗಳಲ್ಲಿಯೂ ಪರ್ವತಾಕಾರವಾದ ಐದುಹೆಡೆಯ ನಾಗಗಳಿಂದಲೂ, ಆಕಾಶವನ್ನು ಮುಟ್ಟುತ್ತಿರುವ ದೊಡ್ಡ ವೃಕ್ಷಗಳಿಂದಲೂ ಪರಿವೃತವಾಗಿಯೂ ಇದ್ದ ದಟ್ಟವಾದ ಇನ್ನೊಂದು ಕಾಡು ಕಾಣಿಸಿತು. ಅಲ್ಲಿ ಘೋರರೂಪವುಳ್ಳ ಸ್ತ್ರೀಯೊಬ್ಬಳು ಬಂದು ಇವನನ್ನು ಅಪ್ಪಿಕೊಂಡಳು ಆ ಕಾಡಿನ ನಡುವೆ ಮರದಕೊಂಬೆಗಳಿಂದಲೂ, ಹುಲ್ಲುಕಡ್ಡಿಗಳಿಂದಲೂ ಸುತ್ತಲೂ ಮುಚ್ಚಲ್ಪಟ್ಟ ಒಂದು ಆಳವಾದ ಬಾವಿಯಿದ್ದಿತು ಹಾಗೆ ಮರೆಯಾಗಿದ್ದ ಆ ಬಾವಿಯನ್ನು ಕಾಣದೆ ಅವನು ಅದರಲ್ಲಿ ಬಿದ್ದನು ಆ ಬಾವಿಯೊಳಗೆ ನೇತಾಡುತ್ತಿದ್ದ ಬಳ್ಳಿಗಳ ನಡುವೆ ಸಿಕ್ಕಿಕೊಂಡನು ಮರದಲ್ಲಿ ನೇತಾಡುತ್ತಿರುವ ಒಂದು ದೊಡ್ಡ ಹಲಸಿನಹಣ್ಣಿನಂತೆ ಕಾಲು ಮೇಲಾಗಿಯೂ, ತಲೆ ಕೆಳಗಾಗಿಯೂ ಜೋಲಾಡುತ್ತಿದ್ದನು ಈ ಸ್ಥಿತಿಯಲ್ಲಿ ಆತನಿಗೆ ಅಲ್ಲಿಯೇ ಮತ್ತೊಂದು ಅನರ್ಥವು ಸಂಭವಿಸಿತು. ಅದೇ ಬಾವಿಯ ನಡುವೆ ಅವನಿಗೆ ದೊಡ್ಡದೊಂದು ಕ್ರೂರ

ಸರ್ಪವು ಕಾಣಿಸಿತು ಅಲ್ಲದೆ ಬಾವಿಯ ತಲೆಕಟ್ಟಿನಲ್ಲಿ ಆರು ಮುಖವುಳ್ಳ ಆನೆಯೊಂದನ್ನು ಕಂಡನು ಅದಕ್ಕೆ ಮೈಯಲ್ಲಿ ಅನೇಕ ವರ್ಣವುಳ್ಳ ಕರಿಯ ಚುಕ್ಕಿಗಳೂ, ಹನ್ನೆರಡು ಕಾಲುಗಳೂ ಇದ್ದುವು ಅದು ಬಳ್ಳಿಗಳಿಂದಲೂ, ವೃಕ್ಷಗಳಿಂದಲೂ ಮುಚ್ಚಲ್ಪಟ್ಟು ಮುಂದೆ ಮುಂದೆ ಸರಿಯುತ್ತಿರುವುದು. ಆ ಬ್ರಾಹ್ಮಣನು ಯಾವ ಮರದ ಕೊಂಬೆಯನ್ನು ಹಿಡಿದು ನೇತಾಡುತ್ತಿದ್ದನೋ, ಆ ಮರದ ದೊಡ್ಡ ಸಣ್ಣ ಕೊಂಬೆಗಳಲ್ಲಿ ನಾನಾಬಗೆಯ ಘೋರರೂಪವುಳ್ಳ ಮತ್ತು ಮೊದಲೇ ಅಲ್ಲಿ ಗೂಡುಕಟ್ಟಿದ್ದ ಜೇನುಹುಳುಗಳು ಜೇನನ್ನು ಹುಡುಕುತ್ತ ಸುತ್ತಿಸುತ್ತಿ ಬರುವುವು ಅರಿಯದ ಮಕ್ಕಳಿಗೆ ಎಷ್ಟೆಷ್ಟು ಕುಡಿದರೂ ತೃಪ್ತಿಯನ್ನುಂಟುಮಾಡದ ಆ ಮಧುಧಾರೆಯು ನಾನಾಮುಖವಾಗಿ ಪ್ರವಹಿಸುತ್ತಿದ್ದಿತು. ಮರದಲ್ಲಿ ನೇತಾಡುತ್ತಿದ್ದಾಗಲೇ ಆ ಮನುಷ್ಯನು ಆ ಮಧುಧಾರೆಗಾಗಿ ಬಾಯೊಡ್ಡಿ ಸವಿನೋಡುತ್ತಿದ್ದನು ಸಂಕಟದಲ್ಲಿ ನರಳುತಿದ್ದ ಅವನಿಗೆ ಆ ಮಧುವನ್ನು ಎಷ್ಟೆಷ್ಟು ಕುಡಿದರೂ ಅದರಿಂದ ದಾಹವು ಅಡಗಲೇ ಇಲ್ಲ ತೃಪ್ತಿಯೇ ಇಲ್ಲದೆ ತಿರುಗಿ ತಿರುಗಿ ಆ ಮಧುಧಾರೆಯನ್ನಪೇಕ್ಷಿಸುತಿದ್ದನು ಓ ರಾಜಾ! ಆತನಿಗೆ ಆಗಲೂ ಪ್ರಾಣದಲ್ಲಿ ಜಿಹಾಸೆ ಹುಟ್ಟದೆ ಬದುಕಿನಲ್ಲಿಯೇ ಆಸೆಯಿದ್ದಿತು ಕರಿಯ ಮತ್ತು ಬಿಳಿಯ ಬಣ್ಣದ ಇಲಿಗಳೆರಡು ಆ ವೃಕ್ಷದ ಬೇರುಗಳನ್ನು ಕಡಿಯುತ್ತಿದ್ದುವು. ರಾಜಾ! ಹೀಗೆ ದುಷ್ಟಜಂತುಗಳಿಂದ ತುಂಬಿದ ಕಾಡಿನಲ್ಲಿ ಮುಂದೆ ಉಗ್ರರೂಪಿಣಿಯಾದ ಸ್ತ್ರೀ! ಆಳವಾದ ಬಾವಿಯ ಕೆಳಗೆ ಭಯಂಕರವಾದ ಹಾವು ಕಾಣಿಸುವುದು! ಮೇಲೆ ನೋಡಿದರೆ ಭೀಕರವಾದ ಕಾಡಾನೆ! ತನಗೆ ಆಶ್ರಯವಾದ ಮರದಿಂದ ತಾನು ಕೆಳಗೆ ಬೀಳುವ ಭಯವೊಂದು! ಇದರಮೇಲೆ ಮರದ ಬೇರನ್ನು ಕಡಿಯುತ್ತಿರುವ ಇಲಿಗಳಿಂದ ಐದನೆಯ ಭಯಕಾರಣವೂ ಏರ್ಪಟ್ಟಿತು ಜೇನಿನ ಆಸೆಯಿಂದ ಮುತ್ತುವ ಜೇನುಹುಳುಗಳು ಅವನ ಆರನೆಯ ಭಯಕ್ಕೆ ಕಾರಣವಾಯಿತು ಹೀಗೆ ಆತನಿಗೆ ಆರು ಭಯಗಳೂ ಏಕಕಾಲದಲ್ಲಿ ಪ್ರಾಪ್ತವಾದುವೆಂದು ಹೇಳುವರು ಈ ರೀತಿಯಲ್ಲಿ ಆತನು ಆ ಮಹಾಕೂಪದಲ್ಲಿ ಬಿದ್ದು ಸಂಕಟಪಡುವಾಗಲೂ, ಜೀವದಾಶೆಯಲ್ಲಿ ಜಿಹಾಸೆಯನ್ನು ತಾಳದಿದ್ದನು" ಎಂದನು.

ಇದು ಐದನೆಯ ಅಧ್ಯಾಯವು.

{ ವಿದುರನು ಹಿಂದೆ ಹೇಳಿದ ಕಾಡು ಮೊದಲಾದುದನ್ನೇ ಸಂಸಾರರೂಪದಿಂದ ವಿವರಿಸಿದುದು. }

ಧೃತರಾಷ್ಟ್ರನು "ಓ ನೀತಿಜ್ಞಾ! ಆಹಾ! ಆತನು ಎಂತಹ ಸಂಕಟದಲ್ಲಿ ಸಿಕ್ಕಿಬಿದ್ದನು? ಆತನಿಗೆ ಅಂತಹ ಸ್ಥಿತಿಯಲ್ಲಿಯೂ ಜೀವದಾಸೆಯೂ ಪ್ರೀತಿ ಸಂತೋಷಗಳೂ ಹೇಗುಂಟಾದುವು? ಆತನು ವಾಸಮಾಡುತ್ತಿರುವ ಧರ್ಮಸಂಕಟಸ್ಥಳವು ಎಲ್ಲಿರುವುದು? ಆ ಮನುಷ್ಯನಿಗೆ ಆ ಮಹಾಭಯದಿಂದ ಬಿಡುಗಡೆಯಾಗುವುದು ಹೇಗೆ? ಇವೆಲ್ಲವನ್ನೂ ನನಗೆ ತಿಳಿಸು ನಾವಾದರೂ ತಕ್ಕ ಪ್ರಯತ್ನಮಾಡಿ ಅವನನ್ನು ಮೇಲಕ್ಕೆತ್ತಿಬಿಡಬೇಕೆಂಬ ನನಗೆ ಕರುಣೆ ಹುಟ್ಟಿರುವುದು" ಎಂದನು

ಆಗ ವಿದುರನು "ಓ ರಾಜಾ! ಇದು ಮೋಕ್ಷತತ್ವವನ್ನು ತಿಳಿದವರು ಉದಾಹರಿಸಿದ ಒಂದು ಕಥೆ ಇದನ್ನು ತಿಳಿದ ಮನುಷ್ಯನು ಪರಲೋಕಗಳಲ್ಲಿ ಸದ್ಗತಿಯನ್ನು ಪಡೆಯುವನು. ನಾನು ಯಾವುದನ್ನು ಮಹಾರಣ್ಯವೆಂದು ತಿಳಿಸಿದೆನೋ ಅದೇ ಈ ದೊಡ್ಡ ಸಂಸಾರವು. (ಇನ್ನೊಂದು) ಅರಣ್ಯವೆಂಬುದೂ ದುರ್ಗಮವಾದ ಆ ಸಂಸಾರದಲ್ಲಿರುವ ಕಷ್ಟಗಳೇ! ದುಷ್ಟಮೃಗಗಳೆಂದು ತಿಳಿಸಿದುವೆಲ್ಲ ವ್ಯಾಧಿಗಳು ಆ ಕಾಡಿನಲ್ಲಿರುವ ದೊಡ್ಡ ದೇಹವುಳ್ಳ ಸ್ತ್ರೀಯೆಂಬುದೇ ರೂಪ ಲಕ್ಷಣಗಳನ್ನು ಕೆಡಿಸುವ ಜರೆಯೆಂದು ಪ್ರಾಜ್ಞರು ತಿಳಿಸುವರು ಆ ಬಾವಿಯೆಂಬುದು ಶರೀರಧಾರಿಗಳ ದೇಹವು ಕಾಲನೇ ಅದರ ಕೆಳಭಾಗದಲ್ಲಿ ವಾಸಮಾಡುವ ದೊಡ್ಡ ಹಾವು. ಎಲ್ಲಾ ಪ್ರಾಣಿಗಳ ಪ್ರಾಣವನ್ನೂ ಎಳೆಯುವ ಅಂತಕನು ಅವನೇ ಬಾವಿಯ ಮಧ್ಯಭಾಗದಲ್ಲಿ ಕಾಣುವ ಯಾವ ಕೊಂಬೆಯಲ್ಲಿ ಆ ಮನುಷ್ಯನು ನೇತಾಡುವನೆಂದೂ, ಅವನಿಗೆ ಅದೊಂದೇ ಆಧಾರವೆಂದೂ ಹೇಳಿದೆನೋ ಅದೇ ದೇಹಧಾರಿಗಳಿಗಿರುವ ಜೀವದಮೇಲಿನ ಆಸೆ ಬಾವಿಯ ಕಟ್ಟೆಯ ಸುತ್ತಲೂ ಆರು ಮುಖಗಳುಳ್ಳ ಯಾವ ಆನೆಯು ನಾಲ್ಕು ಕಡೆಗಳಲ್ಲಿಯೂ ಸುತ್ತಿಬರುವುದೆಂದು ಹೇಳಿದೆನೋ ಅದೇ ಸಂವತ್ಸರವು ಆರು ಋತುಗಳೇ ಅದರ ಮುಖಗಳು. ಮಾಸಗಳೇ ಅದರ ಹನ್ನೆರಡು ಕಾಲುಗಳು. ಮರದ ಬೇರನ್ನು ಯಾವ ಇಲಿಗಳೆರಡು, ಕಡಿಯುವುವೆಂದೆನೋ ಅವು

ಗಳನ್ನು ಪ್ರಾಣಿತತ್ವಗಳನ್ನರಿತವರು ರಾತ್ರಿಯೆಂದೂ, ಹಗಲೆಂದೂ ಹೇಳುವರು. ಕಾಮಗಳೇ ಆ ಮರದಮೇಲಿರುವ ಜೇನುಹುಳುಗಳು ಜೇನುಗೂಡಿನಿಂದ ಹಲವು ಕಡೆಗಳಲ್ಲಿ ಧಾರೆಧಾರೆಯಾಗಿ ಹರಿಯುವ ಜೇನೆಂದರೆ, ವಿವಿಧ ಕಾಮೋಪಭೋಗಗಳು. ಮನುಷ್ಯರು ಅದರಲ್ಲಿಯೇ ನಿತ್ಯಾಸಕ್ತರಾಗಿರುವರು ಪ್ರಾಜ್ಞರು ಸಂಸಾರಚಕ್ರದ ಪರಿವರ್ತನವನ್ನು ಹೀಗೆ ನಿರೂಪಿಸುವರು. ಇದರ ಜ್ಞಾನದಿಂದಲೇ ಅವರು ಸಂಸಾರಚಕ್ರದ ಪಾಶವನ್ನು ಎಲ್ಲಾ ವಿಧದಿಂದಲೂ ಕತ್ತರಿಸುವರು ” ಎಂದನು

ಇದು ಆರನೆಯ ಅಧ್ಯಾಯವು,



## ವಿದುರನು ಇನ್ನೂ ಕೆಲವು ತತ್ವವನ್ನು ತಿಳಿಸಿದುದು.

ಆಗ ಧೃತರಾಷ್ಟ್ರನು ಆಹಾ ! ಆಶ್ಚರ್ಯವು ! ತತ್ವದರ್ಶಿಯಾದ ನೀನು ನನಗೆ ಈ ಕಥೆಯನ್ನು ತಿಳಿಸಿದೆ ಅಮೃತಸಮಾನವಾದ ನಿನ್ನ ವಾಕ್ಯಗಳನ್ನು ಕೇಳಲು ನನಗೆ ಇನ್ನೂ ಕುತೂಹಲವುಂಟಾಗಿರುವುದು ” ಎಂದನು

ಆಗ ವಿದುರನು “ ರಾಜಾ ! ಅದನ್ನೇ ಇನ್ನೂ ನಿನಗೆ ವಿವರಿಸಿ ಹೇಳುವೆನು ಕೇಳು ವಿದ್ವಾಂಸರು ಅದನ್ನು ತಿಳಿದೇ ಸಂಸಾರದಿಂದ ಮುಕ್ತರಾಗಿ ಸುಖಿಸುವರು ರಾಜಾ ! ಬಹುದೂರ ಪ್ರಯಾಣ ಹೊರಟ ಯಾತ್ರಿಕನೊಬ್ಬನು, ದಾರಿಯಲ್ಲಿ ನಡುನಡುವೆ ತಾನು ವಿಶ್ರಾಂತಿಗೂ ತಂಗುವುದಕ್ಕೂ ಸ್ಥಳವನ್ನು ಕಲ್ಪಿಸಿಕೊಳ್ಳುವಂತೆ, ಸಂಸಾರಪರಿವರ್ತನದಲ್ಲಿಯೂ ಜೀವನು ಬೇರೆಬೇರೆ ಗರ್ಭವಾಸಗಳಲ್ಲಿ ಆಗಾಗ ತಂಗಿ ನಿಲ್ಲುವನು. ಪಂಡಿತರಾದರೋ ಆ ದಾರಿಯಿಂದ ತಪ್ಪಿಸಿಕೊಂಡು ಹೋಗುವರು ಆದುದರಿಂದಲೇ ಶಾಸ್ತ್ರಜ್ಞರು ಇದನ್ನು ಒಂದು ದುರ್ಗಮವಾದ ವನಮಾರ್ಗವನ್ನಾಗಿ ನಿರೂಪಿಸಿರುವರು. ಚರಾಚರ ಜೀವಗಳಿಗೆಲ್ಲ ಈ ಲೋಕವೆಂಬುದು ಒಂದು ಪ್ರವಾಹದ ಸುಳಿ ! ಪ್ರತ್ಯಕ್ಷವಾಗಿಯೂ, ರಹಸ್ಯವಾಗಿಯೂ ಇರುವ ಶಾರೀರಕ ಮಾನಸಿಕ ವ್ಯಾಧಿಗಳನ್ನೇ ವಿದ್ವಾಂಸರು ದುಷ್ಟಮೃಗಗಳೆಂದು ನಿರೂಪಿಸುವರು. ಆ ದುಷ್ಟಮೃಗಗಳಿಂದ ನಿತ್ಯವೂ ಬಾಧೆಗೊಳ

ಗಾಗಿ, ಕೊಲ್ಲಲ್ಪಡುತಿದ್ದರೂ, ಅಲ್ಪಬುದ್ಧಿಯುಳ್ಳವರು ಅದರಲ್ಲಿ ತೃಪ್ತರಾಗುವುದೇ ಇಲ್ಲ. ಒಂದುವೇಳೆ ಆ ವ್ಯಾಧಿಗಳಿಂದ ಬಿಡುಗಡೆ ಹೊಂದಿದರೂ, ನಾನಾಬಗೆಯ ಶಬ್ದ ರೂಪ ರಸ ಗಂಧ ಸ್ಪರ್ಶಗಳೆಂಬ ಭೋಗವಸ್ತುಗಳಿಂದ ತುಂಬಿದ ದೊಡ್ಡ ಕೆಸರಿನಲ್ಲಿ ನಿರಾಶ್ರಯರಾಗಿ ಮುಳುಗುವರು ದೇಹಸೌಂದರ್ಯವನ್ನು ಕೆಡಿಸುವ ಜರೆಯೆಂಬ ಹೆಂಗಸು ಆ ಮನುಷ್ಯರನ್ನು ಬಂದು ಹಿಡಿದೇ ಹಿಡಿಯುವಳು ಮತ್ತೊಂದು ಕಡೆಯಲ್ಲಿ ಸಂವತ್ಸರಗಳೂ, ಋತುಗಳೂ, ಮಾಸಗಳೂ, ಪಕ್ಷಗಳೂ ಹಗಲಿರುಳುಗಳ ಸಂಧಿಗಳೂ, ಕ್ರಮಕ್ರಮವಾಗಿ ಇವನ ಆಯುಸ್ಸನ್ನೂ, ರೂಪವನ್ನೂ ನುಂಗುತ್ತಿರುವುವು ಇವೆಲ್ಲವೂ ಕಾಲದ ಸೂಕ್ಷ್ಮಗತಿಗಳು ತತ್ವವನ್ನರಿಯದವರಿಗೆ ಇದು ತಿಳಿಯಲಾರದು ಎಲ್ಲಾ ಪ್ರಾಣಿಗಳೂ ಬ್ರಹ್ಮದೇವನಿಂದ ಅವುಗಳು ಕರ್ಮಾನುಸಾರವಾಗಿಯೇ ನಡೆಸಲ್ಪಡುವುವು ಪ್ರಾಣಿಗಳಿಗೆ ಶರೀರವೇ ರಥವು ಬುದ್ಧಿಯೇ ಸಾರಥಿ ಇಂದ್ರಿಯಗಳೇ ಕುದುರೆಗಳು. ಮನಸ್ಸೇ ಕಡಿವಾಣವು. ಯಾವಾತನು ಓಡುತ್ತಿರುವ ಆ ಕುದುರೆಗಳ ಗತಿವೇಗವನ್ನು ತಡೆಯದೆ, ತಾನೂ ಅದನ್ನೇ ಅನುಸರಿಸಿ ಓಡುವನೋ, ಆತನು ಈ ಸಂಸಾರಚಕ್ರದಲ್ಲಿ ಚಕ್ರದಂತೆ ಸುತ್ತಾಡುವನು ಅವುಗಳನ್ನು ಸ್ವಬುದ್ಧಿಯಿಂದ ಅಡಗಿಸಬಲ್ಲವರು ಅದನ್ನು ಜಯಿಸುವರು ಯಾರು ಸುತ್ತಿಸುತ್ತಿ ಬರುವ ಸಂಸಾರಚಕ್ರದಲ್ಲಿ ಸುತ್ತುತ್ತಿದ್ದಾಗಲೂ ಮೋಹಗೊಳ್ಳುವುದಿಲ್ಲವೋ, ಅವರು ತಿರುಗಿ ಅದರಲ್ಲಿ ಸಿಕ್ಕಿಬೀಳುವುದಿಲ್ಲ ಸಂಸಾರದಲ್ಲಿ ಭ್ರಮಿಸುವವರಿಗೇ ಈ ದುಃಖಗಳೆಲ್ಲ ಉಂಟಾಗುವುವು ಆದುದರಿಂದ ಇದರ ನಿವೃತ್ತಿಗಾಗಿಯೇ ವಿವೇಕಿಯು ಪ್ರಯತ್ನಿಸಬೇಕು ಈ ವಿಷಯದಲ್ಲಿ ಉಪೇಕ್ಷೆಮಾಡಬಾರದು. ಉಪೇಕ್ಷಿಸಿದರೆ ಅದು ನೂರಾರು ಶಾಖೆಗಳಾಗಿ ಬೆಳೆಯುವುದು. ಯಾವಾತನು ಇಂದ್ರಿಯಗಳನ್ನಡಗಿಸಿ, ಕ್ರೋಧ ಲೋಭಗಳನ್ನು ಬಿಟ್ಟು, ಸಂತೋಷದಿಂದಲೂ, ಸತ್ಯಸಂಧತೆಯಿಂದಲೂ ಕೂಡಿರುವನೋ, ಆತನೇ ಶಾಂತಿಯನ್ನು ಪಡೆಯುವನು ಮೂಢಜನಗಳನ್ನು ಮೋಹಗೊಳಿಸತಕ್ಕ ಆ ಸಂಸಾರವನ್ನೇ ಯಮಪುರಕ್ಕೆ ಸಾಗಿಸುವ ರಥವೆಂದು ಪ್ರಾಜ್ಞರು ಹೇಳುವರು. ಅದರಲ್ಲಿಸೇರಿದವರೆಲ್ಲ ನೀನು ಅನುಭವಿಸಿದಂತೆಯೇ ಕಷ್ಟಗಳನ್ನು ಅನುಭವಿಸುವರು. ಈ ದುಃಖಗಳ

ಗೆಲ್ಲ ನಿನ್ನ ಆಶೆಯೇ ಮೂಲವು. ಇದರಿಂದಲೇ ನಿನಗೆ ರಾಜ್ಯನಾಶ, ಸುಹೃನ್ನಾಶ, ಪುತ್ರನಾಶಗಳೆಲ್ಲ ಪ್ರಾಪ್ತವಾದುವು. ಸಾತ್ವಿಕನು ಈ ಮಹಾದುಃಖಗಳಿಗೆ ಔಷಧಿಯನ್ನು ಹುಡುಕಬೇಕು ಈ ಪ್ರಪಂಚದಲ್ಲಿ ಮನಸ್ಸನ್ನಡಗಿಸಿದ ಮನುಷ್ಯನು (ಸಾಮಾನ್ಯರಿಗೆ ಎಟುಕದ) ಬ್ರಹ್ಮವನ್ನೇ ಲಕ್ಷ್ಯವಾಗಿ ಉಳ್ಳ ಜ್ಞಾನವೆಂಬ ಮಹೌಷಧಿಯನ್ನು ಸಂಪಾದಿಸಿ, ಆ ದುಃಖವೆಂಬ ದೊಡ್ಡ ವ್ಯಾಧಿಯನ್ನು ನೀಗಿಸಬೇಕು ತತ್ವವನ್ನು ಸರಿಯಾಗಿ ತಿಳಿದ ಮನಸ್ಸು (ಮನುಷ್ಯನಿಗೆ) ಆ ದುಃಖವನ್ನು ನಿವೃತ್ತಿಮಾಡುವಂತೆ, ವಿದ್ಯೆಯಾಗಲಿ, ಪರಾಕ್ರಮವಾಗಲಿ, ಸಂಪತ್ತಾಗಲಿ, ಮಿತ್ರರಾಗಲಿ, ಸುಹೃತ್ತುಗಳಾಗಲಿ ಆ ವ್ಯಸನವನ್ನು ಬಿಡಿಸಲಾರರು ಆದುದರಿಂದ ಆಪತ್ಕಾಲದಲ್ಲಿ ನಿನಗೆ ರಕ್ಷಕವಾದ ಶೀಲವನ್ನು ಹಿಡಿಯಬೇಕು. ಮನೋನಿಗ್ರಹ, ಸರ್ವಸಂಗಪರಿತ್ಯಾಗ, ಎಚ್ಚರತಪ್ಪದಿರುವುದು, ಇವು ಮೂರೂ ಬ್ರಹ್ಮಲೋಕವನ್ನು ಹೊಂದಿಸುವ ಕುದುರೆಗಳು ಯಾವನು ಶೀಲವೆಂಬ ಕಡಿವಾಣದಿಂದ, ಮನಸ್ಸೆಂಬ ರಥವನ್ನು ಹಿಡಿದಿಡುವನೋ, ಆತನು ಮೃತ್ಯುಭಯವನ್ನು ಬಿಟ್ಟು, ಬ್ರಹ್ಮಲೋಕವನ್ನು ಸೇರುವನು ಯಾವನು ಎಲ್ಲಾ ಪ್ರಾಣಿಗಳಿಗೂ ಅಭಯವನ್ನು ಕೊಡುವನೋ, ಅವನು ಶಾಶ್ವತವಾದ ವಿಷ್ಣುವಿನ ಉತ್ತಮಸ್ಥಾನವನ್ನು ಸೇರುವನು. ಅಭಯವನ್ನು ಕೊಡುವುದರಿಂದ ಮನುಷ್ಯನಿಗೆ ಯಾವ ಫಲವು ಲಭಿಸುವುದೋ, ಅದು ಸಹಸ್ರ ಯಜ್ಞಗಳಿಂದಲೂ ಲಭಿಸದು. ನಿತ್ಯೋಪವಾಸಗಳಿಂದಲೂ ಲಭಿಸದು ಪ್ರಾಣಿಗಳಿಗೆ ಆತ್ಮಕ್ಕಿಂತಲೂ ಅಧಿಕ ಪ್ರಿಯವಾದುದು ಬೇರೊಂದಿಲ್ಲವೆಂಬುದು ನಿರ್ಧಾರವು ಮರಣವೆಂಬುದು ಎಲ್ಲಾ ಪ್ರಾಣಿಗಳಿಗೂ ಅನಿಷ್ಟವೇ. ಆದುದರಿಂದ ಪ್ರಾಜ್ಞನು ಎಲ್ಲಾ ಪ್ರಾಣಿಗಳ ವಿಷಯದಲ್ಲಿಯೂ ದಯೆಯನ್ನೇ ತೋರಿಸಬೇಕು. ವಿವಿಧೋಪಾಯಗಳನ್ನು ಹಿಡಿದು, ಬುದ್ಧಿಯೆಂಬ ಬಲೆಯಿಂದ ಬಿಗಿಯಲ್ಪಟ್ಟು, ಸೂಕ್ಷ್ಮದೃಷ್ಟಿಯಿಲ್ಲದ ದಡ್ಡರೇ ಆಗಾಗ ಭ್ರಮಿಸುವರು. ಸೂಕ್ಷ್ಮದೃಷ್ಟಿಯುಳ್ಳವರು ಬ್ರಹ್ಮಸಾಮ್ಯವನ್ನು ಪಡೆಯುವರು. ನೀನು ಆ ತತ್ವಗಳನ್ನು ತಿಳಿದು, ಸತ್ತವರಿಗೆ ಪರಲೋಕಸಾಧಕವಾದ ಉತ್ತರಕ್ರಿಯೆಗಳನ್ನು ಮಾಡು. ನೀನೂ ಅದರಿಂದ ಒಳ್ಳೇ ಫಲವನ್ನು ಪಡೆಯುವೆ'' ಎಂದನು. ಇದು ಏಳನೆಯ ಅಧ್ಯಾಯವು.

ವ್ಯಾಸನು ಧೃತರಾಷ್ಟ್ರನಿಗೆ ಶೋಕಸಮಾಧಾನಮಾಡಿದುದು.

ವಿದುರನ ಆ ವಾಕ್ಯವನ್ನು ಕೇಳಿ ಧೃತರಾಷ್ಟ್ರನು ಪುತ್ರಶೋಕದಿಂದ ತಿರುಗಿ ಮೂರ್ಛಿತನಾಗಿ ನೆಲದಮೇಲೆ ಬಿದ್ದನು. ಹೀಗೆ ಪ್ರಜ್ಞಾಹೀನನಾಗಿ ನೆಲದಮೇಲೆ ಬಿದ್ದಿರುವ ರಾಜನನ್ನು ನೋಡಿ, ಬಂಧುಗಳೂ, ವ್ಯಾಸನೂ, ವಿದುರನೂ, ಸಂಜಯನೂ, ಸುಹೃತ್ತುಗಳೂ, ಆತನ ಪ್ರೀತಿಪಾತ್ರರಾದ ದ್ವಾರಪಾಲಕರೂ, ಶೀತಲವಾದ ನೀರನ್ನು ತಂದು, ಅವನ ಕಣ್ಣುಗಳಿಗೂ, ಮುಖಕ್ಕೂ ಚಿಮುಕಿಸಿ, ಬೀಸಣಿಗೆಗಳಿಂದ ಬೀಸುತ್ತ, ತಮ್ಮ ಕೈಗಳಿಂದ ಆ ರಾಜನ ಮೈಯನ್ನು ಸವರಿದರು. ಮತ್ತು ಅವನನ್ನು ದೀರ್ಘಕಾಲದ ವರೆಗೆ ಉಪಚರಿಸುತ್ತಿದ್ದರು ಸ್ವಲ್ಪಹೊತ್ತಿನಮೇಲೆ ರಾಜನು ಪ್ರಜ್ಞೆ ತಿಳಿದು, ಪುತ್ರಮರಣದಿಂದಾದ ಮನೋವ್ಯಾಕುಲದಿಂದ ತತ್ತಳಿಸುತ್ತ "ಅಯ್ಯೋ! ಈ ಮಾನುಷ್ಯವನ್ನು ಸುಡಬೇಕು ಅದರಲ್ಲಿಯೂ ಮೇಲೆ ಮೇಲೆ ದುಃಖಕಾರಣಗಳಾದ ಪುತ್ರ ಮಿತ್ರ ಕಳತ್ರಾದಿ ಪರಿಗ್ರಹಗಳನ್ನು ಮತ್ತಷ್ಟು ಸುಡಬೇಕು ರಾಜಾ! ಮಿತ್ರನಾಶ, ಅರ್ಥನಾಶ, ಬಂಧುನಾಶಾದಿಗಳಿಂದ ವಿಷಕ್ಕೂ, ಬೆಂಕಿಗೂ ಸಮಾನವಾದ ಈ ಮಹಾದುಃಖವು ಪ್ರಾಪ್ತವಾಗಿ ನನ್ನ ದೇಹವನ್ನು ಸುಡುವುದು ಪ್ರಜ್ಞೆಯನ್ನು ತಪ್ಪಿಸುವುದು ಅವಮಾನಕ್ಕೂ, ಮರಣಕ್ಕೂ ಈಡುಮಾಡುವುದು. ದುರ್ಭಾಗ್ಯನಾದ ನನಗೆ ಅಂತಹ ಮಹಾದುಃಖವು ಬಂದೊದಗಿತು ಪ್ರಾಣತ್ಯಾಗದಿಂದಲ್ಲದೆ ಇದು ತೀರುವಹಾಗಿಲ್ಲ ಬ್ರಾಹ್ಮಣೋತ್ತಮಾ! ನಾನು ಅದನ್ನು ಈಗಲೇ ನಡೆಸುವೆನು" ಎಂದು ಬಹಳಹೊತ್ತು ವಿಲಪಿಸಿದನು ಮಹಾತ್ಮನೂ, ಬ್ರಹ್ಮವಿದರಲ್ಲಿ ಶ್ರೇಷ್ಠನೂ ಆದ ವ್ಯಾಸನನ್ನು ಕುರಿತು ಹೀಗೆ ಹೇಳಿದ ಮೇಲೆ, ಧೃತರಾಷ್ಟ್ರನು ತಿರುಗಿ ಮಹಾ ಶೋಕದಿಂದ ಮೂರ್ಛಿತನಾಗಿ ಮಾತನಾಡಲಾರದಿದ್ದನು ಆಗ ವ್ಯಾಸನು ಪುತ್ರಶೋಕದಿಂದ ತಪಿಸುತ್ತಿರುವ ಧೃತರಾಷ್ಟ್ರನನ್ನು ಕುರಿತು "ಓ ಮಹಾಬಾಹೂ! ನಾನು ಹೇಳುವುದನ್ನು ಕೇಳು! ನೀನು ಶಾಸ್ತ್ರಜ್ಞನೂ, ಮೇಧಾವಿಯೂ, ಧರ್ಮಾರ್ಥಸಾಧನೆಯಲ್ಲಿ ಸಮರ್ಥನೂ ಆಗಿರುವೆ. ನಿನಗೆ ಇದುವರೆಗೆ ತಿಳಿಯದ ವಿಷಯಗಳೊಂದೂ ಇಲ್ಲ. ಪ್ರಾಣಿಗಳೆಲ್ಲ ಅನಿತ್ಯವೆಂಬುದು ನಿನಗೆ ತಿಳಿಯದೆ? ಇದರಲ್ಲಿ ಸಂದೇಹವೇಕೆ? ಈ ಜೀವಲೋಕವು ಎಂದಿದ್ದರೂ

ಅಶಾಶ್ವತವೇ. ಪರಲೋಕವು ಸ್ಥಿರವಾದುದು. ಜೀವಿತಕ್ಕೆ ಮರಣವೇ ಅಂತ್ಯವು. ಹೀಗಿರುವಾಗ ನೀನೇಕೆ ವ್ಯಸನಪಡುವೆ? ಪಾಂಡವರೊಡನೆ ನಿನಗುಂಟಾದ ದ್ವೇಷಕಾರಣವು ನಿನಗೂ ಪ್ರತ್ಯಕ್ಷವಾಗಿ ತಿಳಿದೇ ಇದೆ ನಿನ್ನ ಪುತ್ರನನ್ನು ಕಾರಣವಾಗಿ ಮಾಡಿಕೊಂಡು, ಕಾಲಮಹಿಮೆಯಿಂದ ಹೀಗೆ ನಡೆಯಿತು ಕೌರವನಾಶವು ನಡೆದೇ ತೀರಬೇಕಾಗಿರುವಾಗ ಉತ್ತಮ ಗತಿಯನ್ನು ಪಡೆದ ಆ ಶೂರರ ವಿಷಯವಾಗಿ ಏಕೆ ದುಃಖಿಸುವೆ? ಮಹಾಬಾಹೂ! ಜ್ಞಾನಿಯೂ, ಮಹಾತ್ಮನೂ ಆದ ವಿದುರನು, ನಿಮ್ಮ ವೈರ ವನ್ನು ಶಮನಮಾಡಲು ಸಕಲ ವಿಧಗಳಿಂದಲೂ ಪ್ರಯತ್ನಪಟ್ಟನು ಮನುಷ್ಯನು ಎಷ್ಟೇ ಪ್ರಯತ್ನಪಟ್ಟರೂ ದೈವನಿಯಮಿತವಾದ ಮಾರ್ಗ ವನ್ನು ತಡೆಯುವುದು ಸಾಧ್ಯವಲ್ಲ ದೇವತೆಗಳ ಕಾರ್ಯಕ್ಕಾಗಿ ನನ್ನ ಕಿವಿಗೆ ಬಿದ್ದಿರುವ ಒಂದು ರಹಸ್ಯವನ್ನು ನಿನಗೆ ತಿಳಿಸುವೆನು ಕೇಳು ನಾನು ಹಿಂದೆ ಲೋಕಸಂಚಾರಮಾಡುತ್ತ ಒಮ್ಮೆ ಇಂದ್ರಸಭೆಯನ್ನು ಸೇರಿ ದೆನು ಅಲ್ಲಿ ಒಟ್ಟುಗೂಡಿದ್ದ ದೇವತೆಗಳನ್ನೂ, ನಾರದನೇ ಮುಂತಾದ ದೇವರ್ಷಿಗಳನ್ನೂ ಕಂಡೆನು ಕಾರ್ಯಾರ್ಥವಾಗಿ ಆ ದೇವತೆಗಳಲ್ಲಿಗೆ ಬಂದಿದ್ದ ಭೂದೇವಿಯನ್ನೂ ಅಲ್ಲಿ ಕಂಡೆನು ಆಗ ಭೂಮಿಯು ದೇವತೆ ಗಳ ಸಮೀಪಕ್ಕೆ ಹೋಗಿ "ಓ ಭಾಗ್ಯಶಾಲಿಗಳೇ! ಹಿಂದೆ ನೀವು ಬ್ರಹ್ಮ ಸಭೆಯಲ್ಲಿ ನನಗೆ ಪ್ರತಿಜ್ಞೆಮಾಡಿಕೊಟ್ಟ ಕಾರ್ಯವನ್ನು ಬೇಗನೆ ನೆರವೇರಿ ಸಿರಿ" ಎಂದಳು ಆ ಭೂದೇವಿಯ ಮಾತುಗಳನ್ನು ಕೇಳಿ ತ್ರಿಲೋಕ ವಂದ್ಯನೂ, ಲೋಕನಾಥನೂ ಆದ ವಿಷ್ಣುವು ನಗುತ್ತ "ಓ ದೇವೀ! ಧೃತರಾಷ್ಟ್ರನ ನೂರುಮಂದಿ ಮಕ್ಕಳಲ್ಲಿ ಹಿರಿಯವನಾಗಿ ಹುಟ್ಟುವ ದುರ್ಯೋಧನನೆಂಬವನು ನಿನ್ನ ಕಾರ್ಯವನ್ನು ನೆರವೇರಿಸುವನು ಆತನ ಬಳಿಯಲ್ಲಿ ಸೇರಿ ನೀನು ನಿನ್ನ ಕಾರ್ಯವನ್ನು ನೆರವೇರಿಸುವಳಾಗು ಆತನಿ ಗಾಗಿ ಅನೇಕರಾಜರು ಯುದ್ಧಸನ್ನದ್ಧರಾಗಿ ಕುರುಕ್ಷೇತ್ರವನ್ನು ಸೇರಿ, ತೀಕ್ಷ್ಣಬಾಣಗಳಿಂದ ಒಬ್ಬರನ್ನೊಬ್ಬರು ಕೊಲ್ಲುವರು ಆ ಯುದ್ಧದಿಂದ ನಿನ್ನ ಭಾರವು ನೀಗುವುದು ಓ ಕಲ್ಯಾಣೀ! ಇನ್ನು ನೀನು ಬೇಗನೆ ನಿನ್ನ ಸ್ಥಳಕ್ಕೆ ಹೊರಡು. ಲೋಕವನ್ನು ಭರಿಸು" ಎಂದನು ಓ ರಾಜಾ! ಆ ನಿನ್ನ ಮಗನೇ ಈಗ ಕಲಿಯ ಅಂಶದಿಂದ, ಲೋಕನಾಶಕ್ಕಾಗಿ ಮಹಾ

ಶೂರನೂ, ಕೋಪಶನೂ, ಯಾವ ರೀತಿಯಿಂದಲೂ ಸಮಾಧಾನಪಡಿಸಲಾರದ ಮೂರ್ಖನೂ ಆಗಿ, ನಿನ್ನ ಪತ್ನಿಯಾದ ಗಾಂಧಾರಿಯ ಹೊಟ್ಟೆಯಲ್ಲಿ ಹುಟ್ಟಿದ್ದನೆಂದು ತಿಳಿ ವಿಧಿವಶದಿಂದ ಆತನಿಗೆ ಅದೇತರದ ಸಹೋದರರೂ ಉದಿಸಿದ್ದರು ಅವನ ಮಾತುಲನಾದ ಶಕುನಿಯೂ, ಅವನಿಗೆ ಪರಮ ಮಿತ್ರನಾದ ಕರ್ಣನೂ, ಸಹಾಯಕರಾಗಿ ಬಂದಿದ್ದ ಇತರ ರಾಜರೂ ಭೂನಾಶಕ್ಕಾಗಿಯೇ ಹುಟ್ಟಿದವರೆಂದು ತಿಳಿ ರಾಜನ ಮನಸ್ಸು ಹೇಗಿರುವುದೋ ಆತನ ಜನರೂ ಅದಕ್ಕನುಸಾರವಾಗಿಯೇ ಇರುವರು ಯಜಮಾನನು ಧರ್ಮಿಷ್ಠನಾದರೆ ಆತನ ಅನುಯಾಯಿಗಳೂ ಧರ್ಮಿಷ್ಠರಾಗುವರು. ಆದುದರಿಂದ ಸೇವಕರ ಗುಣದೋಷಗಳು ಯಜಮಾನನ ನಡತೆಯನ್ನನುಸರಿಸುವುವೆಂಬುದು ನಿಜವು ದುಷ್ಟನಾದ ರಾಜನನ್ನು ಮೊದಲೇ ಸೇರಿ ನಿನ್ನ ಪುತ್ರರೆಲ್ಲರೂ ಮೃತರಾದರು ತತ್ವವಿದನಾದ ನಾರದನು ಇದನ್ನು ಬಲ್ಲನು ನಿನ್ನ ಮಕ್ಕಳೆಲ್ಲರೂ ತಮ್ಮತಮ್ಮ ದುಷ್ಕೃತ್ಯಗಳಿಂದಲೇ ನಷ್ಟರಾದರು. ಅವರಿಗಾಗಿ ನೀನು ದುಃಖಿಸಬೇಡ. ನಿನ್ನದುಃಖಕ್ಕೆ ಕಾರಣವೇನಿರುವುದು? ಪಾಂಡವರು ನಿನಗೆ ಸ್ವಲ್ಪವೂ ಕೇಡನ್ನು ನೆನೆಸಿದವರಲ್ಲ ಯಾರಿಂದ ಈ ಭೂಮಿಯೆಲ್ಲವೂ ಈಗ ಜನಶೂನ್ಯವಾಯಿತೋ, ಆ ನಿನ್ನ ಮಕ್ಕಳೆಲ್ಲರೂ ದುರಾತ್ಮರೇ! ಮೊದಲೇ ಯುಧಿಷ್ಠಿರನ ರಾಜಸೂಯಯಾಗಸಭೆಯಲ್ಲಿ ನಾರದನು 'ಓ ಕುಂತೀನಂದನಾ! ಮುಂದೆ ನಿನಗೆ ಮಂಗಳವಾಗುವುದರಲ್ಲಿ ಸಂಶಯವಿಲ್ಲ ಪಾಂಡವರೂ, ಕೌರವರೂ ಪರಸ್ಪರಯುದ್ಧವನ್ನು ಹೂಡಿ, ಅಲ್ಲಿ ಅನೇಕರು ಪ್ರಾಣಬಿಡುವರು ನಿನ್ನ ಕರ್ತವ್ಯವನ್ನು ನೀನು ನಡೆಸು! ಎಂದನು ಪಾಂಡವರು ನಾರದನವಚನದಂತೆಯೇ ನಡೆಸಿರುವರು

ಓ ರಾಜಾ! ನಿನಗೆ ಆ ದೇವರಹಸ್ಯವನ್ನು ತಿಳಿಸಿದೆನು. ಇದು ಹೀಗಿರುವಾಗ ನಿನಗೆ ಹೇಗೆತಾನೇ ಈ ದುಃಖವು ತಪ್ಪುವುದು? ಮತ್ತು ಪಾಂಡವರಲ್ಲಿ ನಿನಗೆ ಹೇಗೆತಾನೇ ದಯೆಯು ಹುಟ್ಟುವುದು? ಅವರಲ್ಲಿ ನಿನಗೆ ಹೇಗೆ ದ್ವೇಷವು ತಪ್ಪುವುದು? ದೈವವಿಲಾಸದಂತೆ ಎಲ್ಲವೂ ನಡೆಯಲೇಬೇಕು. ಈ ವಿಷಯವನ್ನು ನಾನು ಹಿಂದೆಯೇ ಕೇಳಿ, ರಾಜಸೂ

ಯಯಾಗದಲ್ಲಿ ಧರ್ಮರಾಜನಿಗೂ ತಿಳಿಸಿದ್ದೆನು. ಆ ರಹಸ್ಯವನ್ನು ಕೇಳಿದೊಡನೆಯೇ ಧರ್ಮರಾಜನು ಕೌರವರೊಡನೆ ಶಾಂತಿಗಾಗಿ ಪ್ರಯತ್ನಿಸಿದನು ಆದರೆ ದೈವಬಲವು ಅಧಿಕವಾದುದಲ್ಲವೆ? ಸ್ಥಾವರಜಂಗಮಗಳಾದ ಯಾವ ಪ್ರಾಣಿಗಳಿಗಾದರೂ ಯಾವವಿಧದಿಂದಲೂ ದೈವವಿಧಿಯನ್ನು ದಾಟುವುದಸಾಧ್ಯವಲ್ಲವೆ? ಪ್ರಾಣಿಗಳ ಜನನಮರಣಗಳನ್ನು ತಿಳಿದ ನೀನು, ಆ ದೈವವಿಧಿಗಾಗಿ ಹೀಗೇಕೆ ಭ್ರಮಿಸುತ್ತಿರುವೆ? ನೀನು ಹೀಗೆ ದುಃಖದಿಂದ ಮೂರ್ಛಿತನಾಗುವುದನ್ನು ಧರ್ಮರಾಜನು ಕೇಳಿದರೆ, ಆತನು ಪ್ರಾಣವನ್ನೇ ತ್ಯಜಿಸುವನು. ಆ ಯುಧಿಷ್ಠಿರನು ತಿರ್ಯಗ್ಜಾತಿಗಳಲ್ಲಿಯೂ ಯಾವಾಗಲೂ ದಯೆಯುಳ್ಳವನು ಅಂತವನು ತಂದೆಯಾದ ನಿನ್ನ ವಿಷಯದಲ್ಲಿ ದಯೆಯನ್ನು ತೋರಿಸದಿರುವನೇ? ಈ ನನ್ನ ಮಾತನ್ನೂ, ಮೀರಲಳವಲ್ಲದ ದೈವಗತಿಯನ್ನೂ, ಪಾಂಡವರ ಕಾರುಣ್ಯವನ್ನೂ ಯೋಚಿಸಿ ನೀನು ಜೀವಸಹಿತನಾಗಿರು. ಅದರಿಂದ ನಿನಗೆ ಪ್ರಪಂಚದಲ್ಲಿ ಕೀರ್ತಿಯುಂಟಾಗುವುದು ಧರ್ಮಾರ್ಥಗಳೂ ಪ್ರಾಪ್ತವಾಗುವುವು. ಸ್ವಲ್ಪಕಾಲದವರಗೆ ನೀನು ತಪಸ್ಸನ್ನು ಮಾಡಿದಂತಾಗುವುದು. ಉರಿಯುವ ಬೆಂಕಿಗೆ ಸಮಾನವಾಗಿ ಈಗ ನಿನಗೆ ಸಂಭವಿಸಿರುವ ಪುತ್ರಶೋಕಾಗ್ನಿಯನ್ನು ಯಾವಾಗಲೂ ನೀನು ಜ್ಞಾನವೆಂಬ ನೀರಿನಿಂದ ಆರಿಸುತ್ತಿರಬೇಕು' ಎಂದನು

ಮಹಾತೇಜಸ್ವಿಯಾದ ವ್ಯಾಸನ ಆ ವಾಕ್ಯಗಳನ್ನು ಕೇಳಿ, ಧೃತರಾಷ್ಟ್ರನು ಒಂದು ಮುಹೂರ್ತಕಾಲದವರೆಗೆ ಆಲೋಚಿಸಿ “ಓ ಬ್ರಾಹ್ಮಣೋತ್ತಮಾ! ನಾನು ಮಹಾಶೋಕಸಮುದ್ರದಲ್ಲಿ ಮುಳುಗಿರುವೆನು ಅಡಿಗಡಿಗೆ ಬರುವ ಬುದ್ಧಿಭ್ರಮಣದಿಂದ ನನ್ನನ್ನು ನಾನೇ ತಿಳಿಯಲಾರದಿರುವೆನು ಆದರೂ ದೇವರಹಸ್ಯವನ್ನು ತಿಳಿಸಿದ ನಿನ್ನ ಮಾತನ್ನು ಕೇಳಿದ ಮೇಲೆ ಇನ್ನು ದುಃಖವನ್ನು ಬಿಡಲು ಪ್ರಯತ್ನಿಸುವೆನು ನಾನು ಜೀವಂತನಾಗಿಯೇ ಇರುವೆನು” ಎಂದನು ಇದನ್ನು ಕೇಳಿದೊಡನೆ ವ್ಯಾಸನು ಆಸ್ಥಳದಿಂದ ಹಾಗೆಯೇ ಕಣ್ಮರೆಯಾದನು.

ಇದು ಎಂಟನೆಯ ಅಧ್ಯಾಯವು.

[ಇಲ್ಲಿ ಕೆಲವು ಪುಸ್ತಕಗಳಲ್ಲಿ ಒಂದು ಸಣ್ಣ ಅಧ್ಯಾಯವೂ, ಎರಡು ಶ್ಲೋಕಗಳೂ ಹೆಚ್ಚಾಗಿ ಕಂಡುಬರುತ್ತವೆ. ಅವುಗಳೊಳಗಿನ ವಿಷಯಗಳು ಕೇವಲ ಪುನರುಕ್ತಿಯಾಗಿ, ಹಿಂದೆ ಹೇಳಿದ ಅರ್ಥಗಳನ್ನೇ ಹೇಳುವುದರಿಂದ ಅಧಿಕಪಾಠವಾಗಿರಬಹುದೆಂದು ಅದನ್ನು ಬಿಟ್ಟಿದೆ.]

### ಧೃತರಾಷ್ಟ್ರನು ಮೃತರಾದ ತನ್ನವರನ್ನು ನೋಡಲು ಗಾಂಧಾರಿ ಮುಂತಾದವರೊಡನೆ ಯುದ್ಧಭೂಮಿಗೆ ಹೊರಟುದು

ಆಮೇಲೆ ಜನಮೇಜಯನು “ ಓ ಬ್ರಹ್ಮರ್ಷೀ! ವ್ಯಾಸನು ಹೊರಟುಹೋದಮೇಲೆ ಧೃತರಾಷ್ಟ್ರರಾಜನೇನುಮಾಡಿದನು? ಅದನ್ನು ನನಗೆ ವಿಸ್ತರಿಸಿ ತಿಳಿಸಬೇಕು” ಎಂದು ಕೇಳಿದನು

ಆಗ ವೈಶಂಪಾಯನನು “ ರಾಜಾ! ಧೃತರಾಷ್ಟ್ರನು ಸ್ವಲ್ಪಹೊತ್ತು ಚಿಂತಿಸಿ, ಮನೋವ್ಯಾಕುಲತೆಯಿಂದ ಸಂಜಯನನ್ನು ಕುರಿತು ‘ಇನ್ನು ಕುದುರೆಗಳನ್ನು ಹೂಡು!’ ಎಂದನು ಆಮೇಲೆ ವಿದುರನನ್ನು ಕುರಿತು ‘ಗಾಂಧಾರಿಯನ್ನೂ, ಇತರ ಭಾರತಮಾತೆಯರನ್ನೂ, ಕುಂತಿಯನ್ನೂ ಈಗಲೇ ಇಲ್ಲಿಗೆ ಕರೆದುಕೊಂಡು ಬಾ’ ಎಂದು ಹೇಳಿ, ಶೋಕದಿಂದ, ಬುದ್ಧಿಸ್ವಾಧೀನವಿಲ್ಲದೆ ಮೊದಲು ತಾನು ವಾಹನವನ್ನೇರಿ ಕುಳಿತನು. ಪುತ್ರಶೋಕದಿಂದ ಬೆಂದಿದ್ದರೂ, ಗಾಂಧಾರಿಯು ತನ್ನ ಪತಿಯಾಜ್ಞೆಯನ್ನು ಕೇಳಿದೊಡನೆ, ಕುಂತಿಯೊಡನೆಯೂ, ಇತರ ಸ್ತ್ರೀಯರೊಡನೆಯೂ ರಾಜನಿರುವ ಸ್ಥಳಕ್ಕೆ ಬಂದಳು. ಆ ಸ್ತ್ರೀಯರೆಲ್ಲರೂ ಬರುವಾಗ, ಮಹಾವ್ಯಸನದಿಂದ ಒಬ್ಬರನ್ನೊಬ್ಬರು ಸಮೀಪಕ್ಕೆ ಕರೆಯುತ್ತ ಗಟ್ಟಿಯಾಗಿ ರೋದಿಸತೊಡಗಿದರು. ವಿದುರನು ಅವರೆಲ್ಲರನ್ನೂ ಸಂತೈಸಿದನು. ಆ ಸ್ತ್ರೀಯರಿಗಿಂತಲೂ ತನಗೆ ದುಃಖವು ಹೆಚ್ಚಾಗಿದ್ದರೂ, ವಿದುರನು ಕಣ್ಣೀರನ್ನು ತಡೆದಿಟ್ಟುಕೊಂಡು, ಗದ್ಗದಸ್ವರದಿಂದ ಗೋಳಾಡುವ ಆ ಸ್ತ್ರೀಯರನ್ನು ವಾಹನಗಳಲ್ಲೇರಿಸಿಕೊಂಡು ಪಟ್ಟಣವನ್ನು ಬಿಟ್ಟು ಪ್ರಯಾಣಹೊರಟನು ಕೌರವರ ಮನೆಮನೆಗಳಲ್ಲಿ ದೊಡ್ಡ ರೋದನಧ್ವನಿಯು ಹೊರಟಿತು. ಮಕ್ಕಳು

ಮೊದಲಾಗಿ ಎಲ್ಲರೂ ರೋದಿಸಿದರು. ಪಟ್ಟಣವೆಲ್ಲ ಶೋಕದಲ್ಲಿ ಮುಳು ಗಿತು ಯಾವ ಸ್ತ್ರೀಯರನ್ನು ಮೊದಲು ದೇವತೆಗಳುಕೂಡ ನೋಡುವುದ ಸಾಧ್ಯವಾಗಿದ್ದಿತೋ, ಆ ಸ್ತ್ರೀಯರು ಪತಿಹೀನರಾಗಿ, ಸಾಧಾರಣ ಜನರಿಗೂ ಗೋಚರಿಸುವಂತಾದರು ಮಂಗಳಕರವಾದ ತಮ್ಮ ತಲೆಗೂದಲನ್ನು ಬಿಚ್ಚಿ ಕೊಂಡು, ಆಭರಣಗಳನ್ನು ಕಿತ್ತಿಸೆದು, ಏಕವಸ್ತ್ರಧಾರಿಣಿಯರಾಗಿ ಅನಾಥ ರಂತೆ ನಾನಾಕಡೆಗಳಿಂದ ಬೀದಿಗೆ ಬಂದು ನಿಂತರು. ಪತಿವಿಯೋಗ ಹೊಂದಿ ಪರ್ವತಗುಹೆಗಳಿಂದ ಹೊರಡುವ ಹೆಣ್ಣುಜಿಂಕೆಗಳಂತೆ, ಅನೇಕ ಸ್ತ್ರೀಯರು ಬೆಟ್ಟದಂತಿರುವ ತಮ್ಮ ಬಿಳೀ ಸೌಧಗಳಿಂದ ಹೊರಗೆ ಹೊರಟ ರು ಹೀಗೆ ಬೇರೆಬೇರೆಯಾಗಿ ಎಲ್ಲಾ ಕಡೆಗಳಲ್ಲಿಯೂ ಹೊರಟ ಆ ಸ್ತ್ರೀಯರ ಸಮೂಹವು, ಕುದುರೆಯಾಟದ ಮೈದಾನಕ್ಕೆ ಬಂದ ಹೆಣ್ಣುಕುದುರೆಗಳ ಗುಂಪಿನಂತೆ ಓಡುತಿದ್ದಿತು. ದೈವಹತರಾದ ಆ ಸ್ತ್ರೀಯರು ಬರುವ ದಾರಿ ಯಲ್ಲಿಯೇ ಅಲ್ಲಲ್ಲಿ ಸತ್ತುಬಿದ್ದಿರುವ ತಮ್ಮ ಪತಿಗಳ ಮತ್ತು ತಂದೆ ತಾಯಿಗಳ ಕೈಗಳನ್ನು ಹಿಡಿದು ಒಬ್ಬರಿಗೊಬ್ಬರು ತೋರಿಸಿ ಗೋಳಿಡುತಿದ್ದರು ಆಗ ಅಲ್ಲಿ ಪ್ರಳಯಕಾಲಕ್ಕೆ ಸಮನಾಗಿ ನಡೆದಿದ್ದ ಜನನಾಶವನ್ನು ಕಂಡೊ ಡನೆ ಕೆಲವರು ಬಾಯಿಗೆ ಬಂದಂತೆ ಪ್ರಲಪಿಸುತ್ತ ರೋದಿಸಿದರು. ಮತ್ತೆ ಕೆಲವರು ಹಿಂದು ಮುಂದು ತೋರದೆ ಹುಚ್ಚರಂತೆ ಓಡುವರು ಹೀಗೆ ಆ ಸ್ತ್ರೀಯರಿಗೆ ವ್ಯಸನದಿಂದ ಮುಂದೆ ಮಾಡುವ ಕಾರ್ಯವೇನೆಂದು ತೋರದಿದ್ದಿತು ಯಾವ ಸ್ತ್ರೀಯರು ಹಿಂದೆ ತಮ್ಮ ಸಖಿಯರನ್ನು ಕಂಡಾ ಗಲೂ ನಾಚಿಕೆಗೊಳ್ಳುತ್ತಿದ್ದರೋ, ಆ ಸ್ತ್ರೀಯರು ಈಗ ಏಕವಸ್ತ್ರಧಾರಿಗ ಳಾಗಿ ನಾಚಿಕೆಯಿಲ್ಲದೆ ಅತ್ತೆಯರಿದಿರಿಗೆ ನಿಂತರು ಓ ರಾಜಾ! ಯಾವ ಸ್ತ್ರೀಯರು ಅತ್ಯಲ್ಪವಾದ ಶೋಕಸಮಯಗಳಲ್ಲಿಯೂ ಒಬ್ಬರನ್ನೊಬ್ಬರು ಬಹಳವಾಗಿ ಸಮಾಧಾನಗೊಳಿಸುತ್ತಿದ್ದರೋ, ಅವರೆಲ್ಲರೂ ಈಗ ಶೋಕದಲ್ಲಿ ಮುಳುಗಿ ಒಬ್ಬರನ್ನೊಬ್ಬರು ಸುಮ್ಮನೆ ನೋಡುತ್ತಿದ್ದರು ಧೃತರಾಷ್ಟ್ರರಾ ಜನು ರೋದಿಸುತ್ತಿರುವ ಆ ನೂರಾರುಮಂದಿ ಸ್ತ್ರೀಯರೊಡನೆ ಬಹುದುಃಖ ದಿಂದ ಯುದ್ಧಭೂಮಿಯನ್ನು ಕುರಿತು ಹೊರಟನು ಶಿಲ್ಪಿಗಳೂ, ವರ್ತ ಕರೂ ವೈಶ್ಯರೂ, ವೃದ್ಧ ಸೇವಕರೂ ಅರಸನನ್ನು ಮುಂದೆ ಬಿಟ್ಟುಕೊಂಡು ಹಿಂದೆ ಬಂದರು. ಹೀಗೆ ಕೌರವಕುಲವಿನಾಶದಿಂದಾದ ಅವರೆಲ್ಲರ ರೋದನ

ಧ್ವನಿಯು ಪ್ರಪಂಚವನ್ನೇ ವ್ಯಾಕುಲಗೊಳಿಸುವಂತೆ ತೋರಿತು. ಯುಗಾಂತಕಾಲದಲ್ಲಿ ಕಾಲಾಗ್ನಿಯಿಂದ ದಹಿಸಲ್ಪಡುವ ಪ್ರಾಣಿಗಳಿಗೆ ಹೇಗೋ ಹಾಗೆ, ಈಗ ದೊಡ್ಡ ಪ್ರಾಣಿನಾಶವೊದಗಿದಂತೆ ಅವರೆಲ್ಲರೂ ಭಾವಿಸಿದರು. ರಾಜಾ! ಹೀಗೆ ಕೌರವರಿಗೆ ಮಹಾವಿಪತ್ತು ಸಂಭವಿಸಲು, ಆ ಪಟ್ಟಣದ ಜನರೆಲ್ಲರೂ ಅತಿವ್ಯಾಕುಲದಿಂದ ಗೋಳಿಟ್ಟರು" ಎಂದನು

ಇದು ಒಂಭತ್ತನೆಯ ಅಧ್ಯಾಯವು

ಯುದ್ಧಭೂಮಿಯನ್ನು ನೋಡಲು ಹೊರಟ ಧೃತರಾಷ್ಟ್ರನು,
ದಾರಿಯಲ್ಲಿ ಕೃಪನೇ ಮೊದಲಾದವರನ್ನು ಸಂಧಿಸಿದುದು
ಅವರು ಧೃತರಾಷ್ಟ್ರನನ್ನು ಸಮಾಧಾನಪಡಿಸಿ, ತಮ್ಮ
ದಾರಿಯನ್ನು ಹಿಡಿದು ಹೊರಟುಹೋದುದು

ಅವರು ಒಂದು ಹರಿದಾರಿಯದೂರಕ್ಕೆ ಹೊರಟುಬಂದೊಡನೆ, ದಾರಿಯಲ್ಲಿ ಕೃಪಾಶ್ವತ್ಥಾಮ ಕೃತವರ್ಮರನ್ನು ಕಂಡರು ದುಃಖದಿಂದ ಗೋಳಿಡುತ್ತಿರುವ ಅಂಧನಾದ ಆ ಧೃತರಾಷ್ಟ್ರನನ್ನು ಕಂಡೊಡನೆ ಅವರೆಲ್ಲರೂ ಕಣ್ಣೀರು ಸುರಿಸುತ್ತ ಗದ್ಗದಸ್ವರದಿಂದ 'ರಾಜಾ! ನಿನ್ನ ಪುತ್ರನು ಯಾವ ವಿಧದಿಂದಲೂ, ಯಾರಿಂದಲೂ ಮಾಡಲಸಾಧ್ಯವಾದ ಕಾರ್ಯಗಳನ್ನು ಮಾಡಿ ತನ್ನ ಪರಿವಾರಗಳೊಡನೆ ಇಂದ್ರಲೋಕವನ್ನು ಸೇರಿದನು. ದುರ್ಯೋಧನನಕಡೆಯ ಸೈನ್ಯದಲ್ಲಿ ನಾವು ಮೂವರುಮಾತ್ರವೇ ತಲೆತಪ್ಪಿಸಿಕೊಂಡೆವು ಮಿಕ್ಕ ಸೈನ್ಯವೆಲ್ಲವೂ ನಶಿಸಿತು' ಎಂದನು. ಹೀಗೆ ರಾಜನಿಗೆ ಹೇಳಿದಮೇಲೆ, ಕೃಪನು ಪುತ್ರಶೋಕದಿಂದ ಪೀಡಿತಳಾದ ಗಾಂಧಾರಿಯನ್ನು ಕುರಿತು 'ಅಮ್ಮಾ! ನಿರ್ಭಯವಾಗಿ ಯುದ್ಧಮಾಡಿದ ನಿನ್ನ ಪುತ್ರರು ಅನೇಕ ಶತ್ರುಸಮೂಹಗಳನ್ನು ಕೊಂದು, ವೀರಕೃತ್ಯಗಳನ್ನು ಮಾಡಿ, ಕೊನೆಗೆ ಮೃತರಾದರು. ಅವರು ನಿರ್ದೋಷವಾದ, ಮತ್ತು ಶಸ್ತ್ರಗಳಿಂದ ಜಯಿಸಲ್ಪಟ್ಟ ಉತ್ತಮಲೋಕಗಳನ್ನು ಸೇರಿ, ಅಲ್ಲಿ ಕಾಂತಿಯುಕ್ತವಾದ ದೇಹಗಳನ್ನು ಧರಿಸಿ, ದೇವತೆಗಳಂತೆ ವಿನೋದಿಸುತ್ತಿರುವರು. ಅವರೆಲ್ಲರೂ ಶತ್ರುಗಳನ್ನಿದಿರಿಸಿ ಯುದ್ಧಮಾಡಿಯೇ ಪ್ರಾಣಬಿಟ್ಟವರು ಆ ಶೂರ

ರಲ್ಲಿ ಒಬ್ಬನಾದರೂ ಬೆನ್ನುತೋರಿಸಿ ಓಡಲಿಲ್ಲ ಒಬ್ಬನಾದರೂ ಶತ್ರುವಿಗೆ ತಲೆಬಗ್ಗಿಸಿದವನಿಲ್ಲ. ಅವರೆಲ್ಲರೂ ಶಸ್ತ್ರಗಳಿಂದಲೇ ಸತ್ತವರು. ಯುದ್ಧದಲ್ಲಿ ಶಸ್ತ್ರಗಳಿಂದ ಸಾಯುವುದೇ ಕ್ಷತ್ರಿಯರಿಗೆ ಉತ್ತಮಗತಿಯೆಂದು ಹಿರಿಯರು ಹೇಳುವರು. ಆ ವೀರರಿಗಾಗಿ ನೀನು ದುಃಖಿಸಬಾರದು ಓ ರಾಜ್ಞೀ! ನಿಮ್ಮ ಶತ್ರುಗಳಾದ ಪಾಂಡವರಾದರೂ, ಅಪಾಯದಿಂದ ತಪ್ಪಿಸಿಕೊಳ್ಳಲಿಲ್ಲ ಅಶ್ವತ್ಥಾಮನನ್ನು ಮುಂದಿಟ್ಟುಕೊಂಡು ನಾವು ಮಾಡಿದ ಸಾಹಸಕೃತ್ಯಗಳನ್ನು ಕೇಳಿದೆಯಾ? ನಿನ್ನ ಮಗನನ್ನು ಭೀಮಸೇನನು ಅಧರ್ಮರೀತಿಯಿಂದ ಕೊಂದನೆಂಬುದನ್ನು ಕೇಳಿ, ಪಾಂಡವಶಿಬಿರಕ್ಕೆ ನುಗ್ಗಿ ಅವರಿಗೆ ಪುತ್ರವ್ಯಸನವನ್ನು ತಂದೆವು ಧೃಷ್ಟದ್ಯುಮ್ನನೇ ಮೊದಲಾದ ಎಲ್ಲಾ ಪಾಂಚಾಲರನ್ನೂ, ದ್ರುಪದಕುಮಾರರನ್ನೂ, ದ್ರೌಪದೀಪುತ್ರರನ್ನೂ ಕೊಂದೆವು ಹೀಗೆ ನಿಮ್ಮ ಶತ್ರುವರ್ಗವನ್ನೆಲ್ಲ ವಧಿಸಿ ಈಗಲೇ ನಾವು ಓಡಿಬರುತ್ತಿರುವೆವು. ನಾವು ಮೂವರೇ ಇರುವುದರಿಂದ ಇನ್ನು ಮೇಲೆ ಯುದ್ಧಕ್ಕೆ ನಿಲ್ಲಲು ಅಶಕ್ತರು ಶೂರರೂ, ಮಹಾಧನುರ್ಧಾರಿಗಳೂ ಆದ ಆ ಪಾಂಡವರು ಪುತ್ರವಧವನ್ನು ಕೇಳಿ ಕ್ರೋಧಾವೇಶದಿಂದ ಮುಯ್ಯಿ ತೀರಿಸಿಕೊಳ್ಳಲು ನಾವಿರುವ ಸ್ಥಳವನ್ನು ಹುಡುಕಿಕೊಂಡು ವೇಗದಿಂದೋಡಿಬರುತ್ತಿರುವರು ಅವರಿಗೆ ಕೇಡನ್ನುಂಟುಮಾಡಿಬಂದ ನಮಗೆ ಇಲ್ಲಿ ನೆಮ್ಮದಿಯಿಂದಿರಲು ಸಾಧ್ಯವಿಲ್ಲ ಓ ದೇವೀ! ನಮಗೆ ಅಪ್ಪಣೆಯನ್ನು ಕೊಡು. ದುಃಖಿಸಬೇಡ! ಓ ರಾಜಾ! ನೀನೂ ನಮಗೆ ಅನುಮತಿಯನ್ನು ಕೊಡು ಧೈರ್ಯವನ್ನವಲಂಬಿಸು ಈಗ ನಡೆದುಹೋದ ಕ್ಷಯವನ್ನು ನೋಡಿದಾಗ, ನೀನು ಕ್ಷತ್ರಿಯಧರ್ಮವನ್ನು ನೆನೆಸಿಕೋ'' ಎಂದರು. ಆಮೇಲೆ ಆ ಕೃಪಾಶ್ವತ್ಥಾಮಕೃತವರ್ಮರು ಮೂವರೂ, ರಾಜನಿಗೆ ಪ್ರದಕ್ಷಿಣೆ ಮಾಡಿ, ಆತನನ್ನೇ ತಿರುಗಿತಿರುಗಿ ನೋಡುತ್ತ ಗಂಗಾತೀರಮಾರ್ಗವಾಗಿ ತಮ್ಮ ಕುದುರೆಗಳನ್ನು ವೇಗದಿಂದ ನಡೆಸಿಕೊಂಡುಹೋದರು. ಹೀಗೆ ಆ ಮಹಾರಥರು ಮೂವರೂ ಸ್ವಲ್ಪ ದೂರದವರೆಗೆ ವ್ಯಸನದಿಂದ ಸಂಭಾಷಿಸುತ್ತ ಮುಂದೆ ಸಾಗಿ, ಆಮೇಲೆ ಬೇರೆಬೇರೆ ದಾರಿಯನ್ನು ಹಿಡಿದು ಅಗಲಿಹೋದರು. ಕೃಪನು ಹಸ್ತಿನಾಪುರವನ್ನೂ, ಕೃತವರ್ಮನು ತನ್ನ ದೇಶವನ್ನೂ, ಅಶ್ವತ್ಥಾಮನು ವ್ಯಾಸನ ಆಶ್ರಮವನ್ನೂ ಸೇರಿದರು. ಆ

ಮೂವರು ವೀರರೂ ಮಹಾತ್ಮರಾದ ಪಾಂಡುಪುತ್ರರಿಗೆ ಕೇಡನ್ನುಂಟು ಮಾಡಿದ ಭಯಕ್ಕಾಗಿ, ಒಬ್ಬರನ್ನೊಬ್ಬರು ಹಿಂತಿರುಗಿ ನೋಡುತ್ತ, ಸೂರ್ಯೋದಯದೊಳಗಾಗಿ ತಾವು ಉದ್ದೇಶಿಸಿದ ಸ್ಥಳಗಳನ್ನು ಸೇರಿದರು. ಇದಾದಮೇಲೆಯೇ ಮಹಾರಥರಾದ ಪಾಂಡುಪುತ್ರರು, ಅಶ್ವತ್ಥಾಮನನ್ನು ಸಂಧಿಸಿ, ಪರಾಕ್ರಮದಿಂದ ಯುದ್ಧಮಾಡಿ ಆತನನ್ನು ಜಯಿಸಿದರು

ಇದು ಹತ್ತನೆಯ ಅಧ್ಯಾಯವು.

ಯುಧಿಷ್ಠಿರನು ಕೃಷ್ಣನೇ ಮುಂತಾದವರೊಡನೆ ಧೃತರಾಷ್ಟ್ರನ ಸಮೀಪಕ್ಕೆ ಹೋಗಿ ಆತನಿಗೆ ನಮಸ್ಕರಿಸಿದುದು ಧೃತರಾಷ್ಟ್ರನು ಯುಧಿಷ್ಠಿರನನ್ನು ಮೃದುವಾಗಿ ಆಲಿಂಗಿಸಿ, ಭೀಮನನ್ನು ಕೋಪದಿಂದ ನೆಗ್ಗಿ ಬಿಡುವಂತೆ ಉದ್ದೇಶಿಸಿದಾಗ, ಆಗ ಕೃಷ್ಣನು ತಂತ್ರದಿಂದ ಕಬ್ಬಿಣದ ಪ್ರತಿಮೆಯೊಂದನ್ನು ಮುಂದಿಡಲು ಅದನ್ನು ಕೈಗಳಿಂದಪ್ಪಿ ನೆಗ್ಗಿದುದು

“ರಾಜಾ! ತನ್ನ ಸೇನೆಗಳೆಲ್ಲವೂ ಹತವಾದಮೇಲೆ, ವೃದ್ಧಪಿತನಾದ ಧೃತರಾಷ್ಟ್ರನು ಹಸ್ತಿನಾಪಟ್ಟಣದಿಂದ ಹೊರಟ ವೃತ್ತಾಂತವನ್ನು ಯುಧಿಷ್ಠಿರನು ಕೇಳಿದನು ಪುತ್ರಶೋಕದಿಂದ ಮಹಾವ್ಯಾಕುಲಗೊಂಡಿದ್ದ ಯುಧಿಷ್ಠಿರನು, ತನ್ನ ಭ್ರಾತೃಗಳೊಡನೆಯೂ, ದಾಶಾರ್ಹರು, ಸಾತ್ಯಕಿ, ಯುಯುತ್ಸು, ಇವರೊಡನೆಯೂ, ತನ್ನಂತೆಯೇ ಪುತ್ರಶೋಕದಿಂದ ಕೊರಗುವ ಧೃತರಾಷ್ಟ್ರನನ್ನು ನೋಡಲು ಹೊರಟನು ದುಃಖಿತಳಾದ ದ್ರೌಪದೀಯೂ ಪಾಂಚಾಲಸ್ತ್ರೀಯರೊಡನೆ ಆ ಯುಧಿಷ್ಠಿರನನ್ನು ಹಿಂಬಾಲಿಸಿ ಹೊರಟಳು. ಆಗ ಯುಧಿಷ್ಠಿರನು ರಣಾಂಗಣದಲ್ಲಿ ಕುರರಪಕ್ಷಿಗಳಂತೆ ದೀನಸ್ವರದಿಂದ ಅಳುತ್ತಿರುವ ಮಾತೃವರ್ಗಗಳನ್ನು ಕಂಡನು ಅಲ್ಲಿ ಆ ಸ್ತ್ರೀಯರೆಲ್ಲರೂ ಧೃತರಾಷ್ಟ್ರನನ್ನು ಸುತ್ತಿಮುತ್ತಿ ನಿಂತು, ಕೈಗಳನ್ನು ನೀಡಿ, ಮಹಾವ್ಯಸನದಿಂದ ರೋದಿಸುತ್ತ, “ಅಯ್ಯೋ! ಈ ರಾಜನ ಧರ್ಮಜ್ಞತೆಯೆಲ್ಲಿಹೋಯಿತು? ಆ ದಯೆಯೆಲ್ಲಿಹೋಯಿತು? ತಂದೆಗಳನ್ನೂ

ಒಡಹುಟ್ಟಿದವರನ್ನೂ, ಗುರುಗಳನ್ನೂ, ಗುರುಪುತ್ರರನ್ನೂ, ನಂಟರನ್ನೂ ಕೈಯ್ಯಾರೆ ಕೊಂದರಲ್ಲವೆ? ಓ ಮಹಾಬಾಹುಗಳೇ! ಆ ದ್ರೋಣನನ್ನೂ, ಭೀಷ್ಮನನ್ನೂ, ಅಳಿಯನಾದ ಜಯದ್ರಥನನ್ನೂ ಕೊಂದು, ರಾಜ್ಯಪರಿಪಾಲನ ಮಾಡುವುದರಲ್ಲಿ ನಿಮಗೆ ಮನಸ್ಸು ಹೇಗೆ ಪ್ರವರ್ತಿಸಿತು? ಪಿತೃಗಳನ್ನೂ, ಸಹೋದರರನ್ನೂ, ದುರ್ಜಯನಾದ ಆ ಅಭಿಮನ್ಯುವನ್ನೂ ದ್ರೌಪದೀಪುತ್ರರನ್ನೂ ಕಳೆದುಕೊಂಡ ನಿಮಗೆ ರಾಜ್ಯದಿಂದೇನು?' ಎಂದು ಕೆಲವರು ಪ್ರಲಪಿಸಿದರು ಇನ್ನು ಕೆಲವರು ಕೈಗಳನ್ನು ಮೇಲಕ್ಕೆತ್ತಿಕೊಂಡು ದೈನ್ಯದಿಂದ 'ಹೋ' ಎಂದು ಕೂಗಿದರು ಹೀಗೆ ಪಾಂಡವರಿಗೆ ಪ್ರಿಯರಾದ ಅಭಿಮನ್ಯು ಮುಂತಾದವರಿಗಾಗಿಯೂ, ಅಪ್ರಿಯರಾದ ದುರ್ಯೋಧನಾದಿಗಳಿಗಾಗಿಯೂ ವ್ಯಾಕುಲಪಡುವ ನೂರಾರುಮಂದಿ ಸ್ತ್ರೀಯರು ಆ ರಾಜನ ಸುತ್ತಲೂ ಇದ್ದರು ಧರ್ಮರಾಜನು ಅವರೆಲ್ಲರನ್ನೂ ದಾಟಿ, ದೊಡ್ಡಪ್ಪನ ಬಳಿಗೆ ಬಂದು ಆತನನ್ನು ನಮಸ್ಕರಿಸಿದನು ಆಮೇಲೆ ಪಾಂಡವರೆಲ್ಲರೂ ಕ್ರಮವಾಗಿ ತಮ್ಮ ಹೆಸರುಗಳನ್ನು ಹೇಳಿಕೊಳ್ಳುತ್ತ ಆ ರಾಜನಿಗೆ ನಮಸ್ಕರಿಸಿದರು ಪುತ್ರಶೋಕದಿಂದ ತಪಿಸುತ್ತಿದ್ದ ಧೃತರಾಷ್ಟ್ರನು, ತನ್ನ ಪುತ್ರಮರಣಕ್ಕೆ ಕಾರಣನಾದ ಆ ಯುಧಿಷ್ಠಿರನನ್ನು ಪ್ರೀತಿಯಿಲ್ಲದಹಾಗೆಯೇ ಅಲಕ್ಷ್ಯಭಾವದಿಂದ ಅಪ್ಪಿಕೊಂಡನು ಹೀಗೆ ಧರ್ಮರಾಜನನ್ನು ಅಪ್ಪಿಕೊಂಡು ಅವನನ್ನು ವಿಚಾರಿಸಿದಮೇಲೆ, ಭೀಮನು ಬಂದು ನಿಂತಾಗ, ಕ್ರೂರಮನಸ್ಸುಳ್ಳ ಆ ಧೃತರಾಷ್ಟ್ರನು ದುಃಖಕೋಪಗಳಿಂದ ಬೆಂಕಿಯಂತೆ ಉರಿಯುತ್ತ, ಆಲಿಂಗನವ್ಯಾಜದಿಂದ ತೋಳುಗಳಿಂದಲೇ ಭೀಮನನ್ನು ನೆಗ್ಗಿ ದಹಿಸಿಬಿಡಬೇಕೆಂದು ಆಲೋಚಿಸಿದನು ಕೋಪವೆಂಬ ಗಾಳಿಯಿಂದ ಉರುಬಲ್ಪಟ್ಟ ಅವನ ಶೋಕಾಗ್ನಿಯು, ಭೀಮಸೇನನೆಂಬ ಕಾಡನ್ನು ಕ್ಷಣಮಾತ್ರದಲ್ಲಿ ದಹಿಸಿಬಿಡುವಂತೆ ತೋರಿತು ಆಗ ಕೃಷ್ಣನು ಭೀಮನ ವಿಷಯದಲ್ಲಿ ಧೃತರಾಷ್ಟ್ರನಿಗಿರುವ ಅಮಂಗಳಕರವಾದ ಅಭಿಪ್ರಾಯವನ್ನು ತಿಳಿದು, ತನ್ನ ಎರಡುಕೈಗಳಿಂದಲೂ ಭೀಮನನ್ನು ತಟ್ಟನೆ ಹಿಂದಕ್ಕೆಳೆದು, ಅವನಿದ್ದಸ್ಥಳದಲ್ಲಿ ಕಬ್ಬಿಣದಿಂದ ತಯಾರಿಸಿದ ಭೀಮನ ಆಕೃತಿಯೊಂದನ್ನು ತಂದಿಟ್ಟನು. ಮಹಾಬುದ್ಧಿಶಾಲಿಯಾದ ಶ್ರೀಹರಿಯು ಮೊದಲೇ ಆ ಧೃತರಾಷ್ಟ್ರನ ದುರುದ್ದೇಶವನ್ನು ತಿಳಿದು, ಅದಕ್ಕೆ ತಕ್ಕ ಉಪಾ

ಯುವನ್ನು ಮಾಡಿದ್ದನು. ಧೃತರಾಷ್ಟ್ರನು ಆ ಕಬ್ಬಿಣದಪ್ರತಿಮೆಯನ್ನೇ ನೀಜವಾದ ಭೀಮಸೇನನೆಂದು ಭಾವಿಸಿ ಅದನ್ನು ತನ್ನೆರಡು ಕೈಗಳಿಂದಲೂ ತಬ್ಬಿಕೊಂಡು ನೆಗ್ಗಿಬಿಟ್ಟನು. ಆದರೇನು? ಹತ್ತುಸಾವಿರ ಆನೆಗಳಿಗೆ ಸಮಾನವಾದ ಬಲವುಳ್ಳ ಆ ರಾಜನು, ಆ ಕಬ್ಬಿಣದ ಭೀಮನನ್ನು ಹಿಡಿದೊತ್ತುವಾಗ, ತಾನೂ ಅದರಿಂದ ಎದೆಯೊಡೆದು, ಬಾಯಲ್ಲಿ ರಕ್ತವನ್ನು ಕಕ್ಕುತ್ತ, ಪುಷ್ಪಿತವಾದ ಪಾರಿಜಾತವೃಕ್ಷದ ಕೊಂಬೆಗಳಂತೆ ರಕ್ತದಲ್ಲಿ ತೊಯ್ದು ಹಾಗೆಯೇ ನೆಲದಮೇಲೆ ಬಿದ್ದನು ಆಗ ಸಂಜಯನು ಆತನನ್ನು ಮೇಲಕ್ಕೆತ್ತಿ ಸಮಾಧಾನಪಡಿಸುತ್ತ, “ರಾಜಾ! ಹೀಗೆ ಮಾಡಬಾರದು!” ಎಂದನು. ಧೃತರಾಷ್ಟ್ರನಾದರೋ ಭೀಮನು ಸತ್ತನೆಂದೇ ಭಾವಿಸಿ, ಕೋಪವನ್ನು ಬಿಟ್ಟು ಕನಿಕರದಿಂದ ‘ಹಾ! ಹಾ! ಭೀಮಾ!’ ಎಂದು ಕೂಗಿಕೊಂಡನು ಆಗ ಕೃಷ್ಣನು ನಿಜವಾಗಿ ಧೃತರಾಷ್ಟ್ರನು ಕೋಪವನ್ನು ಬಿಟ್ಟು ಭೀಮಸೇನನ ವಧದಿಂದ ದುಃಖಿಸುವನೆಂಬುದನ್ನು ತಿಳಿದು ‘ಪ್ರಭೂ! ಧೃತರಾಷ್ಟ್ರಾ! ನೀನು ವ್ಯಸನಪಡಬೇಡ! ನೀನು ಭೀಮನನ್ನು ಕೊಲ್ಲಲಿಲ್ಲ ನೀನು ನೆಗ್ಗಿ ಪುಡಿಮಾಡಿದುದು ಕಬ್ಬಿಣದಿಂದ ನಿರ್ಮಿಸಿದ ಭೀಮಸೇನನ ಪ್ರತಿಮೆ. ನೀನು ಕೋಪವಶನಾಗಿರುವುದನ್ನು ತಿಳಿದು ಮೃತ್ಯುವಿನ ಕೋರೆಹಲ್ಲುಗಳಲ್ಲಿ ಸಿಕ್ಕಿಕೊಂಡಂತಿದ್ದ ಆ ಕುಂತೀನಂದನನನ್ನು ನಾನೇ ಹಿಂದಕ್ಕೆ ತಳ್ಳಿದೆನು ಓ ರಾಜೋತ್ತಮಾ! ಬಲದಲ್ಲಿ ನಿನಗೆ ಸಮಾನನು ಒಬ್ಬನೂ ಇಲ್ಲ. ಯಾವ ಮನುಷ್ಯನುತಾನೇ ನಿನ್ನ ಕೈಗಳ ಬಿಗಿತವನ್ನು ತಡೆಯಬಲ್ಲನು? ನಿನ್ನೆರಡುಕೈಗಳ ಮಧ್ಯದಲ್ಲಿ ಸಿಕ್ಕಿಕೊಂಡವನು, ಯಮನಬಳಿಗೆ ಹೋದವನಂತೆ ಜೀವಸಹಿತನಾಗಿ ಹಿಂತಿರುಗಲಾರನು. ಆದುದರಿಂದ ಹಿಂದೆ ಯುದ್ಧಾಭ್ಯಾಸಕ್ಕಾಗಿ ನಿನ್ನ ಪುತ್ರನು ಮಾಡಿಸಿದ್ದ ಭೀಮಸೇನನ ಅಯಃಪ್ರತಿಮೆಯನ್ನೇ ನಿನಗೆ ಈಗ ಕಾಣಿಕೆಯಾಗಿ ಅರ್ಪಿಸಿದೆನು. ಪುತ್ರಶೋಕದಿಂದ ತಪಿಸುವ ನಿನ್ನ ಮನಸ್ಸು ಅಧರ್ಮದಲ್ಲಿ ಪ್ರವರ್ತಿಸಿತು. ಆ ಕಾರಣದಿಂದಲೇ ನೀನು ಭೀಮಸೇನನನ್ನು ಕೊಲ್ಲಲಪೇಕ್ಷಿಸಿದೆ. ನೀನು ಭೀಮನನ್ನು ಕೊಲ್ಲಲುದ್ದೇಶಿಸಿದುದು ಉಚಿತವಲ್ಲ. ನಿನ್ನ ಪುತ್ರರು ಇನ್ನುಮೇಲೆ ಹೇಗೂ ಬದುಕಿಬರಲಾರರು. ಆದುದರಿಂದ ಮುಂದೆ



ಪುಟ ೩೦. ಧೃತರಾಷ್ಟ್ರನು ಭೀಮನನ್ನಾಲಿಂಗಿಸುವುದಕ್ಕೆ ಬರುವಾಗ, ಅವನ ಶೋಕಾಗ್ನಿಯಿಂದ ಭೀಮನು ದಗ್ಧನಾಗುವನೆಂಬುದನ್ನು ತಿಳಿದು ಕೃಷ್ಣನು ಭೀಮನನ್ನು ಹಿಂದಕ್ಕೆ ಕರೆದು, ಅವನ ಸ್ಥಾನದಲ್ಲಿ ಭೀಮನ ಅಯಃ ಪ್ರತಿಮೆಯೊಂದನ್ನು ತಂದಿಟ್ಟುದು.

ಯಾದರೂ ನಾವು ಶಾಂತಿಯನ್ನು ಕೋರಿ ಮಾಡುವ ಪ್ರಯತ್ನಗಳೆಲ್ಲಕ್ಕೂ ನೀನೂ ಸಮ್ಮತಿಸು. ದುಃಖದಲ್ಲಿ ಮನಸ್ಸಿಡಬೇಡ" ಎಂದನು.

ಇದು ಹನ್ನೊಂದನೆಯ ಅಧ್ಯಾಯವು.

{ ಕೃಷ್ಣನ ಮಾತಿನಿಂದ ಕೋಪಸಮಾಧಾನಹೊಂದಿದ ಧೃತರಾಷ್ಟ್ರನು ಭೀಮಾದಿಗಳನ್ನು ಅಪ್ಪಿಕೊಂಡುದು }

ಆಮೇಲೆ ಸೇವಕರು ಧೃತರಾಷ್ಟ್ರನಿಗೆ ಸ್ನಾನಾದಿ ಶುದ್ಧಿಕಾರ್ಯಗಳನ್ನು ಮಾಡಿಸುವುದಕ್ಕಾಗಿ ಅವನಲ್ಲಿಗೆ ಬಂದರು. ಶುದ್ಧಿಯು ಮುಗಿದ ಮೇಲೆ ಕೃಷ್ಣನು "ರಾಜಾ! ನೀನು ವೇದಗಳನ್ನೂ, ನಾನಾಶಾಸ್ತ್ರಗಳನ್ನೂ ಅಧ್ಯಯನಮಾಡಿರುವೆ ಅನೇಕ ಪುರಾಣಗಳನ್ನೂ, ಬೇರೆಬೇರೆ ರಾಜಧರ್ಮಗಳನ್ನೂ ಕೇಳಿರುವೆ ಪ್ರಾಜ್ಞನೂ, ಶೂರನೂ ಆದ ನೀನು ಬಲಾಬಲ ವಿಚಾರದಲ್ಲಿ ಸಮರ್ಥನಾಗಿದ್ದರೂ, ಯಾವ ಕಾರಣದಿಂದ ದೋಷಕ್ಕೆಡೆಯಾಗಿ ಇಂತಹ ಕೋಪವನ್ನು ಗೊರುತ್ತಿರುವೆ? ಮೊದಲೇ ನಿನಗೆ ನಾನೂ, ಭೀಷ್ಮನೂ, ದ್ರೋಣನೂ, ವಿದುರನೂ, ಸಂಜಯನೂ ನಾರಿನಾರಿ ಹೇಳಿದೆವು ಅದರಂತೆ ನೀನು ನಡೆಯಲಿಲ್ಲ ಪಾಂಡವರು ಶೌರ್ಯದಲ್ಲಿಯೂ, ಬಲದಲ್ಲಿಯೂ ಮೇಲೆಂದು ನೀನು ಚೆನ್ನಾಗಿ ತಿಳಿದೂ ನಾವು ಹೇಳಿದಂತೆ ಕೇಳಲಿಲ್ಲ ಯಾವ ರಾಜನು ತನ್ನ ಬುದ್ಧಿಯಿಂದ ತಾನಾಗಿಯೇ ಗುಣದೋಷಗಳನ್ನೂ, ದೇಶಕಾಲಗಳ ವ್ಯತ್ಯಾಸಗಳನ್ನೂ ಅರಿಯುವನೋ, ಆತನಿಗೆ ಎಂದಿಗೂ ಒಳ್ಳೆಯದಾಗುವುದು. ತನ್ನ ಮೇಲ್ಮೆಗಾಗಿ ಇತರರು ತಿಳಿಸಿದ ಹಿತಾಹಿತಗಳನ್ನು ಯಾವನು ಕೇಳುವುದಿಲ್ಲವೋ, ಆತನು ಆಪತ್ತುಗಳಿಗೆ ಗುರಿಯಾಗಿ ನಾಶಹೊಂದುವನು ನೀನು ಅನುಚಿತ ಮಾರ್ಗದಲ್ಲಿ ನಡೆದುಕೊಂಡೆಯೆಂಬುದು ನಿನಗೂ ಚೆನ್ನಾಗಿ ತಿಳಿದೇ ಇದೆ ಚಿತ್ತಸ್ಥೈರ್ಯವುಳ್ಳ ನೀನು ದುರ್ಯೋಧನನಿಗೆ ವಶನಾಗಿದ್ದೆಯಲ್ಲವೆ? ಆ ನಿನ್ನ ದೋಷದಿಂದಲೇ ಈ ಆಪತ್ತಿಗೆ ಗುರಿಯಾದೆ ಈಗಲಾದರೂ ನೀನು ಭೀಮನನ್ನೇಕೆ ಕೊಲ್ಲಲಪೇಕ್ಷಿಸುವೆ? ನಿನ್ನ ದುಷ್ಕೃತ್ಯಗಳನ್ನು ಈಗಲಾದರೂ ನೆನೆಸಿಕೊಂಡು ಆ ಪಾಪಕ್ಕೆ ಪರಿಹಾರವನ್ನು ಮಾಡು. ಅಲ್ಪಮತಿ

ಯಾದ ಯಾವನು ದ್ವೇಷದಿಂದ ಆ ಪಾಂಚಾಲಿಯನ್ನು ಸಭೆಗೆಳೆದು ಕೊಂಡುಬಂದನೋ, ಆತನು ವೈರಸಾಧನೆಗಾಗಿ ಭೀಮಸೇನನಿಂದ ಕೊಲ್ಲಲ್ಪಟ್ಟನು. ನಿರ್ದೋಷಿಗಳಾದ ಪಾಂಡವರನ್ನು ಕೈಬಿಟ್ಟ ನಿನ್ನ ಅಕ್ರಮಾಚರಣೆಯನ್ನೂ, ದುಷ್ಟನಾದ ನಿನ್ನ ಪುತ್ರನ ದುರಾಚರಣೆಯನ್ನೂ ಈಗಲಾದರೂ ಸ್ಮರಿಸು'' ಎಂದನು

ಕೃಷ್ಣನು ತಿಳಿಸಿದ ಈ ಯಥಾರ್ಥವಾಕ್ಯಗಳನ್ನು ಕೇಳಿದಮೇಲೆ ಧೃತರಾಷ್ಟ್ರನು ''ಓ ದೇವಕೀನಂದನಾ! ಮಹಾಬಾಹೂ! ಮಾಧವಾ! ನೀನು ಹೇಳುವುದೆಲ್ಲವೂ ವಾಸ್ತವವೇ ಪ್ರಬಲವಾದ ಪುತ್ರಮೋಹವು ನನ್ನನ್ನು ಧರ್ಮಮಾರ್ಗದಿಂದ ತಪ್ಪಿಸಿತು ಕೃಷ್ಣಾ! ಈಗಲೂಕೂಡ ಪುರುಷಶ್ರೇಷ್ಠನೂ, ಮಹಾಬಲಶಾಲಿಯೂ, ಸತ್ಯವಿಕ್ರಮನೂ ಆದ ಭೀಮನು ನಿನ್ನಿಂದ ರಕ್ಷಿಸಲ್ಪಟ್ಟು, ನನ್ನ ಬಾಹುಗಳ ಮಧ್ಯದಲ್ಲಿ ಸಿಕ್ಕಿ ಸಾಯದೆ ಉಳಿದನು ಈಗ ನಾನು ಆ ಕೋಪತಾಪಗಳನ್ನೆಲ್ಲ ಬಿಟ್ಟು ಶಾಂತನಾಗಿರುವೆನು ಈಗ ತಿರುಗಿ ಆ ಪಾಂಡವವೀರನನ್ನು ಆಲಿಂಗಿಸಲು ನನಗೆ ಅವಕಾಶವನ್ನು ಕೊಡು ನನ್ನಕಡೆಯ ರಾಜಶ್ರೇಷ್ಠರೂ, ಪುತ್ರರೂ ಕೊಲ್ಲಲ್ಪಟ್ಟಮೇಲೆ, ಈಗ ನನಗ ನನ್ನ ಎಲ್ಲಾ ಧರ್ಮಾರ್ಥಗಳೂ, ಪೂರ್ಣಪ್ರೀತಿಯೂ ಪಾಂಡವರಲ್ಲಿಯೇ ನೆಲೆಗೊಂಡಿರುವುದು'' ಎಂದನು ಆಮೇಲೆ ಧೃತರಾಷ್ಟ್ರನು ಕ್ರಮವಾಗಿ ಭೀಮನನ್ನೂ, ಅರ್ಜುನನನ್ನೂ, ಮಾದ್ರೀಪುತ್ರರನ್ನೂ ತನ್ನ ಬಳಿಗೆ ಕರೆಯಿಸಿಕೊಂಡು, ರೋದಿಸುತ್ತಲೇ ಅವರ ಅಂಗಾಂಗಗಳನ್ನೆಲ್ಲ ಸ್ಪರ್ಶಿಸಿ ಸಂತೈಸಿ ಆಶೀರ್ವದಿಸಿದನು

ಇದು ಹನ್ನೆರಡನೆಯ ಅಧ್ಯಾಯವು



ಕೃಷ್ಣ ಯುಧಿಷ್ಠಿರಾದಿಗಳು ಗಾಂಧಾರಿಯಬಳಿಗೆ ಹೋದು ದು. ಗಾಂಧಾರಿಯು ಯುಧಿಷ್ಠಿರನನ್ನು ಶಪಿಸುವ ಉದ್ದೇಶದಿಂದಿರುವುದನ್ನರಿತು ವ್ಯಾಸಮುನಿಯು ಅವಳ ಕೋಪವನ್ನು ಶಮನಮಾಡಿದುದು

ಆಮೇಲೆ ಆ ಪಾಂಡವಸಹೋದರರೆಲ್ಲರೂ ಶ್ರೀಕೃಷ್ಣನೊಡನೆ ಧೃತರಾಷ್ಟ್ರನ ಅನುಮತಿಯನ್ನು ಪಡೆದು ಗಾಂಧಾರಿಯಬಳಿಗೆ ಹೋದರು ಅಲ್ಲಿ ಪುತ್ರಶೋಕದಿಂದ ಕುದಿಯುತಿದ್ದ ಗಾಂಧಾರಿಯು, ಯುಧಿಷ್ಠಿರನು ಶತ್ರುನಾಶಮಾಡಿ ಬಂದುದನ್ನು ಕಂಡೊಡನೆ, ಸಹಿಸಲಾರದ ಕೋಪದಿಂದ ಅವನನ್ನು ಶಪಿಸುವುದರಲ್ಲಿದ್ದಳು ಇಷ್ಟರಲ್ಲಿಯೇ ಸತ್ಯವತೀಪುತ್ರನಾದ ವ್ಯಾಸನು ಅವಳ ದುರಭಿಪ್ರಾಯವನ್ನು ತನ್ನ ಧ್ಯಾನದೃಷ್ಟಿಯಿಂದ ಮೊದಲೇ ತಿಳಿದಿದ್ದುದರಿಂದ, ಗಂಗೆಯಲ್ಲಿ ಸ್ನಾನಮಾಡಿ, ಪರಿಶುದ್ಧನಾಗಿ ನಿಯಮಗಳನ್ನು ಮುಗಿಸಿಕೊಂಡೊಡನೆ, ಮನೋವೇಗದಿಂದ ಆ ಸ್ಥಳಕ್ಕೆ ಬಂದು ಸೇರಿದನು ಆತನು ಯಾವಾಗಲೂ ಸಕಲಪ್ರಾಣಿಗಳ ಮನೋಗತವನ್ನೂ ತಿಳಿಯಬಲ್ಲ ಮಹಾತಪಸ್ವಿಯಾದುದರಿಂದ, ತನ್ನ ಸೊಸೆಯಾದ ಗಾಂಧಾರಿಯಬಳಿಗೆ ಬಂದು, ಅವಳಿಗೆ ಬುದ್ಧಿವಾದಗಳನ್ನು ಹೇಳುತ್ತ, “ಗಾಂಧಾರೀ! ಇದು ನಿಮ್ಮಲ್ಲಿ ಅನ್ಯೋನ್ಯ ಸಮಾಧಾನಕಾಲವೇ ಹೊರತು ಕೋಪತಾಪಗಳಿಂದ ಶಪಿಸುವ ಕಾಲವಲ್ಲವೆಂದು ತಿಳಿಸಿ, ಈಗ ನೀನು ಪಾಂಡವರಲ್ಲಿ ಕೋಪಗೊಳ್ಳುವುದುಚಿತವಲ್ಲ ಶಾಂತಿಯನ್ನು ವಹಿಸು! ರಜೋಗುಣವನ್ನು ನಿಗ್ರಹಿಸು ಹಿಂದೆಯೇ ನಿನ್ನ ಪುತ್ರನು ನಿನ್ನಲ್ಲಿಗೆ ಬಂದು ತನ್ನ ಜಯಾಭಿಲಾಷೆಯಿಂದ ‘ಅಮ್ಮಾ! ಶತ್ರುಗಳೊಡನೆ ಯುದ್ಧಮಾಡುವ ನನಗೆ ಜಯವನ್ನನುಗ್ರಹಿಸು’ ಎಂದು ಕೈಮುಗಿದು ನಿನ್ನನ್ನು ಕೇಳಿದಾಗ, ‘ಎಲ್ಲಿ ಧರ್ಮವಿರುವುದೋ ಅಲ್ಲಿ ಜಯವು’ ಎಂದು ನೀನೇ ಹೇಳಿಕಳುಹಿಸಿದೆಯಲ್ಲವೆ? ಕೀರ್ತಿಮತೀ! ಅದನ್ನು ಈಗ ನೆನಪಿಗೆ ತಂದುಕೋ. ಕಳೆದುಹೋದ ಈ ವಿಚಾರದಲ್ಲಿ ಬರಿಯ ಮಾತಿನಲ್ಲಿಯಾದರೂ ನೀನು ಕೋಪವನ್ನು ತೋರಿಸಬಾರದು ನಿನ್ನ ಮಾತು ಎಂದಿಗೂ ಸುಳ್ಳಾಗಲಾರದೆಂಬ ನನ್ನ ನಂಬಿಕೆಯಂತೆ! ಆ ಘೋರಯುದ್ಧದಲ್ಲಿ ಮಹಾಸಂಶಯಗ್ರಸ್ತರಾಗಿದ್ದ ಪಾಂಡವರು ಈಗ ಜಯಶಾಲಿಗಳಾದರಲ್ಲವೆ? ಇದರಿಂದಲೇ ನೀನು

ಧರ್ಮವೇ ಮೇಲಾದುದೆಂದು ತಿಳಿಯಬಹುದು ಹಿಂದೆ ಅಂತಹ ತಾಳ್ಮೆಯಿಂದಿದ್ದ ನಿನ್ನ ಸಹನಗುಣವು ಈಗ ಎಲ್ಲಿ ಹೋಯಿತು? ಓ ಧರ್ಮಜ್ಞೆ! ಅಧರ್ಮಚಿಂತೆಯನ್ನು ಬಿಡು. ಧರ್ಮವಿರುವೆಡೆಯಲ್ಲಿ ಜಯವು ಓ ಗಾಂಧಾರೀ! ಧರ್ಮವನ್ನೂ, ನಾನು ಹೇಳಿದ ಮಾತನ್ನೂ ಸ್ಮರಿಸಿಕೊಂಡು, ನಿನ್ನ ಪುತ್ರರಾದ ಪಾಂಡವರ ವಿಷಯದಲ್ಲಿ ಕೋಪವನ್ನಡಗಿಸು " ಎಂದನು.

ಆಗ ಗಾಂಧಾರಿಯು " ಓ ಮಹಾತ್ಮಾ! ವಾಸ್ತವದಲ್ಲಿ ನನಗೆ ಇವರಲ್ಲಿ ದ್ವೇಷವಿಲ್ಲ! ಇವರಿಗೆ ನಾಶವನ್ನೂ ನಾನು ಅಪೇಕ್ಷಿಸಿದವಳಲ್ಲ ಪುತ್ರಶೋಕದಿಂದ ನನ್ನ ಮನಸ್ಸು ಕದಲುವಂತಾಯಿತು. ಕುಂತೀಪುತ್ರರು ಕುಂತೀದೇವಿಗೆ ಹೇಗೋ, ಹಾಗೆಯೇ ನನ್ನ ರಕ್ಷಣೆಗೆ ಪಾತ್ರರು. ನೀನು ಹೇಗೆ ಅವರನ್ನು ರಕ್ಷಿಸುತ್ತಿರುವೆಯೋ, ಅದರಂತೆಯೇ ಅವರು ಧೃತರಾಷ್ಟ್ರರಾಜನ ಆದರಣೆಗೂ ಪಾತ್ರರು ದುಶ್ಶಾಸನನ ಮತ್ತು ಶಕುನಿಯ ದೋಷದಿಂದಲೂ, ಕರ್ಣ ದುರ್ಯೋಧನಾದಿಗಳಿಂದಲೂ ಕೌರವಕುಲನಾಶವುಂಟಾಯಿತೇಹೊರತು, ಪಾಂಡವರಲ್ಲಿ ಯಾವ ದೋಷವೂ ಇಲ್ಲ ಮದೋನ್ಮತ್ತರಾದ ಕೌರವರೇ ಅಹಂಕಾರದಿಂದ ಒಟ್ಟುಗೂಡಿ ಯುದ್ಧಮಾಡಿ ಶತ್ರುಗಳಿಂದ ಹತರಾದರು ಆ ವಿಷಯದಲ್ಲಿ ನನಗೇನೂ ಕೋಪವಿಲ್ಲ ಆದರೆ ಭೀಮನು ದುರ್ಯೋಧನನನ್ನು ಯುದ್ಧಕ್ಕೆ ಕರೆದು, ಕೃಷ್ಣನೂ ನೋಡುತ್ತಿದ್ದಂತೆಯೇ ಗದಾಯುದ್ಧದಲ್ಲಿ ದೊಡ್ಡ ಅಕಾರ್ಯವನ್ನು ಮಾಡಿದನಲ್ಲವೆ! ದುರ್ಯೋಧನನು ಯುದ್ಧಶಿಕ್ಷೆಯಲ್ಲಿ ತನ್ನನ್ನು ಮೀರಿದವನೆಂದು ತಿಳಿದೇ ಭೀಮನು ಆತನನ್ನು ನಾಭಿಯ ಕೆಳಭಾಗದಲ್ಲಿ ಹೊಡೆದು ಕೊಂದನು ಈ ಅನ್ಯಾಯವೇ ನನ್ನ ಕೋಪವನ್ನು ವೃದ್ಧಿಗೊಳಿಸಿತು. ಧರ್ಮಜ್ಞರಾದ ಶೂರರು ತಮ್ಮ ಪ್ರಾಣಸಂರಕ್ಷಣೆಗಾದರೂ ಮಹಾತ್ಮರಿಂದ ವಿಹಿತವಾದ ಧರ್ಮವನ್ನು ಬಿಡಬಹುದೆ?' ಎಂದಳು

ಇದು ಹದಿಮೂರನೆಯ ಅಧ್ಯಾಯವು.



### ಭೀಮನಿಗೂ, ಗಾಂಧಾರಿಗೂ ನಡೆದ ಸಂವಾದಗಳು

ಗಾಂಧಾರಿಯ ಮಾತನ್ನು ಕೇಳಿದೊಡನೆಯೇ ಭೀಮನು ಭೀತಿಗೊಂಡವನಂತೆ ಆಕೆಯನ್ನು ಕುರಿತು ಸಮಾಧಾನಪಡಿಸುತ್ತ "ಅಮ್ಮಾ! ಆ ಯುದ್ಧದಲ್ಲಿ ಭೀತಿಗೊಂಡ ನಾನು ಆತ್ಮರಕ್ಷಣೆಗಾಗಿ ಆಚರಿಸಿದ ಆ ಕಾರ್ಯವು ಧರ್ಮವಾಗಲಿ, ಅಧರ್ಮವಾಗಲಿ, ಅದನ್ನು ನೀನು ಸಹಿಸಿಕೊಳ್ಳಬೇಕು ನಿನ್ನ ಮಗನು ನಿಜವಾಗಿಯೂ ಮಹಾಬಲಶಾಲಿ! ಆ ದುರ್ಯೋಧನನನ್ನು ಧರ್ಮಯುದ್ಧದಲ್ಲಿ ಯಾರಿಂದಲೂ ಜಯಿಸಲು ಸಾಧ್ಯವಲ್ಲ ಆದುದರಿಂದಲೇ ನಾನು ಆ ಅನ್ಯಾಯಕಾರ್ಯವನ್ನು ಮಾಡಿದೆನು ಆತನೂ ಹಿಂದೆ ಅಧರ್ಮಮಾರ್ಗದಿಂದ ಯುಧಿಷ್ಠಿರನನ್ನು ಜಯಿಸಿದನಲ್ಲವೆ? ನಾವು ಅವನಿಂದ ಹಲವು ಸಾರಿ ವಂಚಿತರಾಗಿದ್ದೆವು. ಅದಕ್ಕಾಗಿ ನಾನು ಈ ಅಕಾರ್ಯವನ್ನು ಮಾಡಬೇಕಾಯಿತು ನಿಮ್ಮ ಸೈನ್ಯದಲ್ಲಿ ಉಳಿದವನಿವನೊಬ್ಬನೇ! ಆದರೂ ಗದಾಯುದ್ಧದಲ್ಲಿ ನಿಸ್ಸೀಮನು. ನಮ್ಮಿಂದ ಕಿತ್ತುಕೊಂಡ ರಾಜ್ಯವನ್ನು ಹೇಗೂ ಬಿಡಲಾರನೆಂದು ತಿಳಿದು, ನಾನು ಈ ಕಾರ್ಯವನ್ನು ಮಾಡಿದೆನು. ಪತಿವ್ರತೆಯೂ, ಏಕವಸ್ತ್ರಧಾರಿಣಿಯೂ, ಗೃಹಲಕ್ಷ್ಮಿಯೂ ಆದ ಪಾಂಚಾಲಿಯನ್ನು ಕುರಿತು ನಿನ್ನ ಕುಮಾರನು ಹೇಳಿದುದು ನಿನಗೂ ಚೆನ್ನಾಗಿ ತಿಳಿದಿದೆಯಷ್ಟೆ! ಆ ದುರ್ಯೋಧನನನ್ನು ಕೊಲ್ಲದಿದ್ದರೆ, ಸಮುದ್ರಗಳನ್ನೊಳಕೊಂಡ ಫಲವತ್ತಾದೀ ಭೂಮಿಯನ್ನು ನಾವು ಅನುಭವಿಸಲು ಸಾಧ್ಯವುಂಟೆ? ಆದುದರಿಂದ ನಾನೀಕಾರ್ಯವನ್ನು ಮಾಡಿದೆನು. ಅಲ್ಲದೆ ಆ ನಿನ್ನ ಪುತ್ರನು ಸಭಾಮಧ್ಯದಲ್ಲಿ ದ್ರೌಪದಿಗೆ ತನ್ನ ಎಡತೊಡೆಯನ್ನು ತೋರಿಸಿ, ನಮಗೆ ಎಷ್ಟು ರೋಷವನ್ನುಂಟುಮಾಡಿದನು? ದುರಾಚಾರಿಯಾದ ಆ ನಿನ್ನ ಮಗನನ್ನು ನಾವು ಆಗಲೇ ಕೊಲ್ಲಬೇಕಾಗಿದ್ದಿತು. ಆದರೆ ಧರ್ಮರಾಜನ ನಿಯಮದಿಂದ ಪ್ರತಿಜ್ಞಾಬದ್ಧರಾಗಿ ತಟಸ್ಥರಾಗಿದ್ದೆವು. ಓ ರಾಜಪತ್ನೀ! ನಿನ್ನ ಪುತ್ರನು ಅನೇಕ ರಾಜರಲ್ಲಿ ದ್ವೇಷವನ್ನು ಬೆಳೆಸಿಕೊಂಡುದರಿಂದಲೂ, ನಮ್ಮನ್ನು ಕಾಡಿಗೆ ಕಳುಹಿಸಿ ಹಲವು ಕ್ಲೇಶಗಳಿಗೆ ಗುರಿಪಡಿಸಿದುದರಿಂದಲೂ ನಾನು ಈ ಕಾರ್ಯವನ್ನು ಮಾಡಬೇಕಾಯಿತು. ದುರ್ಯೋಧನನನ್ನು ಕೊಂದು ನಮ್ಮ

ದ್ವೇಷವನ್ನು ತೀರಿಸಿಕೊಂಡೆವು. ಯುಧಿಷ್ಠಿರನಿಗೆ ರಾಜ್ಯವು ಬಂದೊಡನೆಯೇ, ನಾವೂ ಕೋಪವನ್ನು ಬಿಟ್ಟು ಶಾಂತರಾಗುವೆವು" ಎಂದನು.

ಆಗ ಗಾಂಧಾರಿಯು 'ಅಪ್ಪಾ! ನೀನೇ ಹೀಗೆ ನನ್ನ ಮಗನನ್ನು ಪ್ರಶಂಸೆಮಾಡುತ್ತಿರುವಾಗ, ಅವನನ್ನು ಆ ವಿಧವಾಗಿ ನೀನು ಕೊಂದುದು ಮಾತ್ರ ನ್ಯಾಯವಲ್ಲ! ಈಗ ನೀನು ನನ್ನೊಡನೆ ಹೇಳಿದಂತೆ ಎಷ್ಟೋ ಅನ್ಯಾಯ ಮಾಡಿದೆ ಭೀಮಾ! ವೃಷಸೇನನು ನಕುಲನ ಕುದುರೆಗಳನ್ನು ಕೊಂದಾಗ, ದುಶ್ಶಾಸನನ ದೇಹದಿಂದ ಸುರಿಯುವ ರಕ್ತವನ್ನು ನೀನು ಪಾನಮಾಡಿದೆಯಲ್ಲವೆ? ಇದು ಸಜ್ಜನರಿಗೆ ಸಮ್ಮತವಾದ ಕಾರ್ಯವೇನು? ಇದು ಅಯೋಗ್ಯವೂ, ಅಧರ್ಮವೂ ಆದ ಕ್ರೂರಕಾರ್ಯವಲ್ಲವೆ?" ಎಂದಳು ಆಗ ಭೀಮನು 'ಅಮ್ಮಾ! ಯುದ್ಧದಲ್ಲಿ ವೃಷಸೇನನಿಂದ ನಕುಲನ ಕುದುರೆಗಳು ಕೊಲ್ಲಲ್ಪಟ್ಟುದನ್ನು ಕಂಡು, ಸಂತೋಷದಿಂದ ಹಾರಾಡುತ್ತಿದ್ದ ಶತ್ರುಗಳಿಗೆ ಭೀತಿಹುಟ್ಟಿಸುವುದಕ್ಕಾಗಿಯೇ ನಾನು ಹಾಗೆ ಮಾಡಿದೆನು. ಅಲ್ಲದೆ ಹಿಂದೆ ನಾನು 'ಆ ಶತ್ರುವಿನ ರಕ್ತವನ್ನು ಪಾನಮಾಡುವೆನು' ಎಂದು ಪ್ರತಿಜ್ಞೆಮಾಡಿದ್ದೆನಲ್ಲವೆ? ಹಾಗಿದ್ದರೂ ಆ ರಕ್ತವು ನನ್ನ ಹಲ್ಲುಗಳನ್ನೂ, ತುಟಿಯನ್ನೂ ದಾಟಿ ಒಳಕ್ಕೆ ಹೋಗಲಿಲ್ಲ. ಅಮ್ಮಾ! ಯಾರ ರಕ್ತವಾದರೇನು? ಮನುಷ್ಯರಕ್ತವೇ ಮನುಷ್ಯನಿಗೆ ಪಾನಯೋಗ್ಯವಲ್ಲ. ಹಾಗಿರುವಾಗ ಸಹೋದರನ ರಕ್ತವು ಪಾನಯೋಗ್ಯವಲ್ಲವೆಂಬುದರಲ್ಲಿ ಸಂದೇಹವೇನಿದೆ? ಸಹೋದರನು ಆತ್ಮಸಮಾನನೇ! ಅವರಲ್ಲಿ ಒಬ್ಬರಿಗೊಬ್ಬರಿಗೆ ತಾರತಮ್ಯವೇನೂ ಇಲ್ಲ ಇದರ ನಿಜಕ್ಕೆ ಆ ಯಮನೇ ಸಾಕ್ಷಿ! ಅಮ್ಮಾ! ನೀನು ಅದನ್ನು ಮನಸ್ಸಿನಲ್ಲಿಡಬೇಡ ಆ ರಕ್ತವನ್ನು ನಾನು ಪಾನಮಾಡಿದವನಲ್ಲ ಹಿಂದೆ ಅವನು ದ್ಯೂತದಲ್ಲಿ ದ್ರೌಪದಿಯ ತುರುಬನ್ನು ಹಿಡಿದೆಳೆದಾಗ, ನಾನು ಕೋಪದಿಂದ ಹೇಳಿದುದು ಈಗಲೂ ನಿನ್ನ ನೆನಪಿನಲ್ಲಿರುವುದಷ್ಟೆ? ರಾಜಪತ್ನೀ! ಆ ಪ್ರತಿಜ್ಞೆಯನ್ನು ನಾನು ನೆರವೇರಿಸದೆಹೋದರೆ, ಎಂದೆಂದಿಗೂ ನಾನು ಕ್ಷತ್ರಿಯಧರ್ಮವನ್ನು ಬಿಟ್ಟವನಾಗುವೆನಲ್ಲವೆ? ಅದಕ್ಕಾಗಿಯೇ ನಾನು ಆ ಕಾರ್ಯವನ್ನು ಮಾಡಿದೆನು ನಿರ್ದೋಷಿಗಳಾದ ನಮ್ಮ ವಿಷಯದಲ್ಲಿ ಅಕ್ರಮವನ್ನು ಮಾಡಿದ ನಿನ್ನ ಪುತ್ರರನ್ನು

ನಿಗ್ರಹಿಸಿದುದಕ್ಕಾಗಿ ನೀನು ನನ್ನನ್ನು ದೋಷಿಯೆಂದು ಸಂದೇಹಪಡುವುದು ಸರಿಯಲ್ಲ' ಎಂದನು.

ಆಗ ಗಾಂಧಾರಿಯು 'ಭೀಮಾ! ನೀನು ವೃದ್ಧನಾದ ಈ ಧೃತರಾಷ್ಟ್ರನ ನೂರುಮಂದಿ ಮಕ್ಕಳನ್ನೂ ಕೊಂದೆಯಲ್ಲವೆ? ಅಲ್ಪ ದೋಷವಿದ್ದ ಒಬ್ಬ ಮಗನನ್ನಾದರೂ ನಮಗೆ ಬಿಟ್ಟುಕೊಡಬಾರದಾಗಿದ್ದಿತೇ? ಅಪ್ಪಾ! ವೃದ್ಧರೂ, ಅಂಧರೂ, ರಾಜ್ಯಭ್ರಷ್ಟರೂ ಆದ ನಮ್ಮಿಬ್ಬರಿಗೆ, ಒಂದೇ ಒಂದು ಊರುಗೋಲಿನಂತೆ ಒಬ್ಬನನ್ನಾದರೂ ನೀನು ನಮಗಾಗಿ ಉಳಿಸಲಿಲ್ಲವೇಕೆ? ನೀನು ಈ ಧರ್ಮಸೂಕ್ಷ್ಮವನ್ನು ಯೋಚಿಸಿ, ನೂರುಮಂದಿ ಮಕ್ಕಳಲ್ಲಿ ನಿನಗೆ ಕೇವಲ ದುರ್ಬಲನೆಂದು ತೋರಿದ ಒಬ್ಬ ಮಗನನ್ನಾದರೂ ಉಳಿಸಿದ್ದರೆ ಈಗ ನಮಗೆ ಇಷ್ಟು ದುಃಖವಿರುತ್ತಿರಲಿಲ್ಲ' ಎಂದಳು

ಇದು ಹದಿನಾಲ್ಕನೆಯ ಅಧ್ಯಾಯವು

---

{ಯುಧಿಷ್ಠಿರಾದಿಗಳು ಗಾಂಧಾರಿಗೂ, ಕುಂತಿಗೂ ನಮಸ್ಕರಿಸಿದುದು ಅವರಿಬ್ಬರೂ ದ್ರೌಪದಿಯನ್ನು ಸಮಾಧಾನಪಡಿಸಿದುದು}

ಆಮೇಲೆ ಪುತ್ರಪೌತ್ರ ಮರಣದಿಂದುಂಟಾದ ದುಃಖಕೋಪಗಳಿಂದ ಕುದಿಯುತಿದ್ದ ಗಾಂಧಾರಿಯು ಯುಧಿಷ್ಠಿರನ ವಿಷಯವಾಗಿ 'ಈಗಿನ ರಾಜನೆಲ್ಲಿ?' ಎಂದು ಕೇಳಿದಳು ಆಗ ಯುಧಿಷ್ಠಿರನು ನಡುಗುತ್ತ ಕೈಮುಗಿದುಕೊಂಡು ಗಾಂಧಾರಿಯ ಸಮೀಪಕ್ಕೆ ಬಂದು 'ದೇವೀ! ಇದೋ! ನಿನ್ನ ಪುತ್ರರನ್ನು ಕೊಂದ ಕ್ರೂರನಾದ ಯುಧಿಷ್ಠಿರನು ನಾನೇ! ಈಗಿನ ಲೋಕನಾಶಕ್ಕೆಲ್ಲ ನಾನೇ ಮೂಲಕಾರಣನು ನಾನು ಶಾಪಯೋಗ್ಯನಾದುದರಿಂದ ನನ್ನನ್ನು ಶಪಿಸಿಬಿಡು ಇಷ್ಟಮಿತ್ರರನ್ನೆಲ್ಲ ಕೊಂದ ಕ್ರೂರನೂ, ಮಿತ್ರದ್ರೋಹಿಯೂ ಆದ ನನಗೆ, ಇನ್ನು ನನ್ನ ಪ್ರಾಣದಲ್ಲಿಯಾಗಲಿ, ರಾಜ್ಯದಲ್ಲಿಯಾಗಲಿ, ಸುಖದಲ್ಲಿಯಾಗಲಿ ಅಪೇಕ್ಷೆಯಿಲ್ಲ' ಎಂದನು ಆ ಸ್ಥಿತಿಯಲ್ಲಿದ್ದ ಯುಧಿಷ್ಠಿರನನ್ನು ನೋಡಿ ಗಾಂಧಾರಿಯು ನಿಟ್ಟುಸಿರುಬಿಡುತ್ತ ಮರುಮಾತನ್ನಾಡದಿದ್ದಳು. ಧರ್ಮಜ್ಞಳೂ, ದೀರ್ಘ

ಲೋಚನೆಯುಳ್ಳವಳೂ ಆದ ಆ ದೇವಿಯು, ತನ್ನ ಮುಂದೆ ಸಾಷ್ಟಾಂಗ ವಾಗಿ ಮೈಬಗ್ಗಿ ತನ್ನ ಪಾದಗಳಿಗೆ ಬೀಳುತಿದ್ದ ಧರ್ಮರಾಜನ ಬೆರಳು ಗಳ ತುದಿಯನ್ನು ತನ್ನ ಕಣ್ಣುಗಳನ್ನು ಮರೆಸಿದ್ದ ಪಟ್ಟೆವಸ್ತ್ರದ ಸಂದಿ ನಿಂದ ನೋಡಿದಳು. ಅವಳ ದೃಷ್ಟಿ ಬಿದ್ದೊಡನೆ ಸುಲಕ್ಷಣವಾದ ನಖಗ ಳುಳ್ಳ ಆ ಧರ್ಮರಾಜನ ನಖಗಳು ವಿಕೃತರೂಪವುಳ್ಳವುಗಳಾದುವು ಅದ ನ್ನು ನೋಡಿ ಅರ್ಜುನನು ಭಯಪಟ್ಟು ವಾಸುದೇವನ ಹಿಂಭಾಗಕ್ಕೆ ಹೋಗಿ ನಿಂತನು. ಹೀಗೆ ಅವರು ಬೆದರಿ ಮರೆಯಾಗುತ್ತಿರುವುದನ್ನು ಕಂಡು ಗಾಂಧಾರಿಯು, ತನ್ನ ಕೋಪವನ್ನು ಬಿಟ್ಟು ಮಾತೃವಾತ್ಸಲ್ಯದಿಂದ ಅವ ರನ್ನು ಸಮಾಧಾನಗೊಳಿಸಿದಳು. ಆಗ ಪಾಂಡವರು ಗಾಂಧಾರಿಯಿಂದ ಅನುಮತಿಯನ್ನು ಪಡೆದು, ಶಾಂತಚಿತ್ತರಾಗಿ, ಒಟ್ಟುಗೂಡಿ ತಮ್ಮ ತಾಯಿ ಯಾದ ಕುಂತಿಯಬಳಿಗೆ ಹೊರಟರು. ತನ್ನ ಪುತ್ರರ ವಿಷಯವಾಗಿಯೇ ಸದಾ ಚಿಂತಿಸುತ್ತಿದ್ದ ಆ ಕುಂತಿದೇವಿಯು, ಅತಿದೀರ್ಘಕಾಲದಮೇಲೆ ಶಸ್ತ್ರದ ಗಾಯಗಳೊಡನೆ ಮುಂದೆ ಬಂದು ನಿಂತ ಆ ಮಕ್ಕಳನ್ನು ಕಂಡು, ಸೆರಗಿನಿಂದ ಕಣ್ಣುಗಳನ್ನು ಮುಚ್ಚಿಕೊಂಡು ಕಣ್ಣೀರುಸುರಿಸಿದಳು. ಆಗ ಆಕೆಯು ತನ್ನ ಪುತ್ರರಲ್ಲಿ ಒಬ್ಬೊಬ್ಬನನ್ನೂ ಕರೆದು ಮೈದಡವುತ್ತ, ಪುತ್ರ ಹೀನೆಯಾದ ದ್ರೌಪದಿಯ ವಿಷಯವಾಗಿ ಬಹಳ ವ್ಯಸನಪಡುತ್ತ ದುಃಖ ದಿಂದ ನೆಲದಮೇಲೆ ಬಿದ್ದು ಹೊರಳಾಡುತ್ತಿರುವ ಆ ಪಾಂಚಾಲಿಯಬಳಿಗೆ ಬಂದಳು ಆಗ ದ್ರೌಪದಿಯು 'ಅಮ್ಮಾ! ಅಭಿಮನ್ಯುಸಹಿತವಾಗಿ ನಿನ್ನ ಪೌತ್ರರೆಲ್ಲರೂ ಸತ್ತರು ಅವರು ನಿನ್ನನ್ನು ನೋಡಿ ಬಹಳ ದಿವಸ ಗಳಾದುವು. ಇನ್ನು ಅವರು ನಿನ್ನನ್ನು ನೋಡಲು ಬರುವಂತಿಲ್ಲ. ಅಮ್ಮಾ! ಅಂತಹ ಉತ್ತಮಪುತ್ರರನ್ನೆಲ್ಲ ಕಳೆದುಕೊಂಡ ನನಗೆ ಇನ್ನು ರಾಜ್ಯದಿಂ ದೇನು?' ಎಂದಳು. ಆಗ ಕುಂತಿಯು ದ್ರೌಪದಿಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಸಮಾಧಾನಪಡಿಸಿ, ಅವಳನ್ನೂ, ತನ್ನ ಪುತ್ರರನ್ನೂ ಸಂಗಡ ಕರೆದುಕೊಂಡು ಗಾಂಧಾರಿಯಬಳಿಗೆ ಬಂದಳು ಆಗ ಗಾಂಧಾ ರಿಯು ದ್ರೌಪದಿಯನ್ನು ಕುರಿತು 'ಬಾಲೇ! ಹೀಗೆ ನೀನು ಶೋಕಿಸ ಬೇಡ! ನನ್ನ ದುರವಸ್ಥೆಯನ್ನು ನೋಡು. ಕಾಲಮಹಿಮೆಯಿಂದ ಅವಶ್ಯ ವಾಗಿ ನಡೆದೇ ತೀರಬೇಕಾಗಿದ್ದ ಈ ಲೋಕವಿನಾಶವು ಸಹಜವಾಗಿಯೇ

ನಡೆಯಿತೆಂದು ಭಾವಿಸುವೆನು. ಹಿಂದೆ ಕೃಷ್ಣನ ಸಮಾಧಾನಪ್ರಯತ್ನವು ಫಲಿಸದೆಹೋದಕಾಲದಲ್ಲಿ, ವಿದುರನು ಏನು ಹೇಳಿದ್ದನೋ ಆ ಅಮೂಲ್ಯ ವಚನವು ಈಗ ಫಲಿಸಿತು ನೋಡು. ಅನಿವಾರ್ಯವಾಗಿ ನಡೆದುಹೋದ ಆ ಕಾರ್ಯಕ್ಕಾಗಿ ನೀನೇಕೆ ದುಃಖಿಸುವೆ? ಯುದ್ಧದಲ್ಲಿ ಮೃತರಾದವರಿಗಾಗಿ ನೀನು ದುಃಖಪಡಬಾರದು. ಈಗ ನೀನೂ ನನ್ನಂತೆಯೇ ಆಗಿರುವೆ! ನನ್ನನ್ನೂ, ನಿನ್ನನ್ನೂ ಸಂತೈಸತಕ್ಕವರು ಬೇರೆ ಯಾರುಂಟು? ಮುಖ್ಯವಾಗಿ ನನ್ನ ದೋಷದಿಂದಲೇ ಶ್ರೇಷ್ಠವಾದೀ ಕುರುಕುಲವೆಲ್ಲ ನಾಶವಾಯಿತು" ಎಂದಳು

ಇದು ಹದಿನೈದನೆಯ ಅಧ್ಯಾಯವು.

**ಇಲ್ಲಿಗೆ ಜಲಪ್ರದಾನಿಕಪರ್ವವು ಮುಗಿದುದು.**

# ಸ್ತ್ರೀವಿಲಾಪಪರ್ವವು.

ಗಾಂಧಾರಿಯು ವ್ಯಾಸನ ಕೃಪೆಯಿಂದ ಜ್ಞಾನನೇತ್ರವನ್ನು ಪಡೆದು ಯುದ್ಧಭೂಮಿಯನ್ನು ನೋಡಿದುದು ಧೃತರಾಷ್ಟ್ರ ಯುಧಿಷ್ಠಿರರೇ ಮೊದಲಾದವರು ಸ್ತ್ರೀಯರೊಡನೆ ರಣಭೂಮಿಗೆ ಬಂದುದು ರಾಜಮಾತೆಯರು ರೋದಿಸುತಿದ್ದಾಗ ಅದನ್ನು ಗಾಂಧಾರಿಯು ಕೃಷ್ಣನಿಗೆ ತೋರಿಸಿದುದು

ಆಗ ಮಹಾಪ್ರಾಜ್ಞಳೂ, ಭಾಗ್ಯಶಾಲಿನಿಯೂ, ಪತಿವ್ರತೆಯೂ, ಉಗ್ರತಪಸ್ವಿನಿಯೂ, ಯಾವಾಗಲೂ ನಿಜವನ್ನೇ ಆಡುವ ಸತ್ಯಸಂಧೆಯೂ ಆದ ಗಾಂಧಾರಿಗೆ, ಕಣ್ಣುಕಟ್ಟಿದ್ದಂತೆಯೇ ಯುದ್ಧಭೂಮಿಯೆಲ್ಲವೂ ಯಥಾವತ್ತಾಗಿ ಕಾಣಿಸುವಂತೆ ಮಹಾತ್ಮನಾದ ವ್ಯಾಸಮಹರ್ಷಿಯ ವರಪ್ರದಾನದಿಂದ ದಿವ್ಯಜ್ಞಾನವುಂಟಾಯಿತು. ನಾನಾವಿಧವಾಗಿ ವಿಲಪಿಸಿದಳು. ಆಗ ಅವಳಿಗೆ ಆ ಯುದ್ಧಭೂಮಿಯು ಅತ್ಯಾಶ್ಚರ್ಯಕರವಾಗಿ

ರೋಮಾಂಚವನ್ನೆಬ್ಬಿಸುವಂತಿದ್ದಿತು. ಆಗಿನ ರಣಾಂಗಣದ ಘೋರಸ್ಥಿತಿಯನ್ನು ಕೇಳಬೇಕೇ? ಎಲ್ಲಿ ನೋಡಿದರೂ ಭೂಮಿಯು ಎಲುಬು, ಕೂದಲು ಮತ್ತು ಕೆನ್ನೀರುಗಳಿಂದ ವ್ಯಾಪ್ತವಾಗಿರುವುದು! ಎಲ್ಲೆಲ್ಲಿಯೂ ರಕ್ತಪ್ರವಾಹವು ಹರಿಯುತ್ತಿರುವುದು! ನಾನಾಕಡೆಗಳಲ್ಲಿಯೂ ಸಾವಿರಾರು ಮೃತಶರೀರಗಳು ಬಿದ್ದಿರುವುವು ರಕ್ತದಲ್ಲಿ ನೆನೆದ ಆನೆಗಳ, ಕುದುರೆಗಳ ಮತ್ತು ವೀರರ ರುಂಡಗಳೂ, ಮುಂಡಗಳೂ ಎಲ್ಲೆಲ್ಲಿಯೂ ದಟ್ಟವಾಗಿ ಕಾಣುತ್ತಿರುವುವು ನರಿ, ಗುಳ್ಳೆನರಿ, ಕಾಗೆ, ಹದ್ದು, ಮುಂತಾದ ಮಾಂಸಾಹಾರಿ ಜಂತುಗಳು ಎಲ್ಲೆಲ್ಲಿಯೂ ನೆರೆದಿರುವುವು! ಮನುಷ್ಯಭಕ್ಷಕರಾದ ರಾಕ್ಷಸರು ಆನಂದದಿಂದ ಅಲ್ಲಲ್ಲಿ ನೆರೆದಿರುವರು ಎಲ್ಲಾ ಕಡೆಗಳಲ್ಲಿಯೂ ನರಿಗಳು ಅಮಂಗಳಕರವಾಗಿ ಕೂಗುತ್ತಿರುವುವು ದೊಡ್ಡ ರಣಹದ್ದುಗಳು ಹಾರಾಡುತ್ತಿರುವುವು. ಇಂತಹ ಭಯಂಕರವಾದ ಯುದ್ಧಭೂಮಿಯು ಬಹುದೂರದಲ್ಲಿದ್ದರೂ ಅವಳಿಗೆ ಸಮೀಪದಲ್ಲಿದ್ದಂತೆಯೇ ಕಾಣಿಸುತ್ತಿತ್ತು ಆಮೇಲೆ ವ್ಯಾಸನು ಧೃತರಾಷ್ಟ್ರನಿಗೆ ಅನುಜ್ಞೆಯನ್ನು ಕೊಡಲು ಪಾಂಡವರೆಲ್ಲರೂ ಕೃಷ್ಣನನ್ನೂ, ಧೃತರಾಷ್ಟ್ರನನ್ನೂ ಮುಂದೆಬಿಟ್ಟುಕೊಂಡು ಯುದ್ಧಭೂಮಿಗೆ ಹೊರಟರು ಕೌರವಸ್ತ್ರೀಯರೆಲ್ಲರೂ ಅವರ ಹಿಂದೆ ಹೊರಟರು ಪತಿವಿಹೀನರಾದ ಆ ಸ್ತ್ರೀಯರು ಕುರುಕ್ಷೇತ್ರವನ್ನು ಸೇರಿ ಅಲ್ಲಿ ತಮ್ಮ ಪುತ್ರರೂ, ಸಹೋದರರೂ, ಪಿತೃಜನರೂ, ಪತಿಗಳೂ ಮೃತರಾಗಿ ಬಿದ್ದಿರುವುದನ್ನೂ, ಹದ್ದು, ನರಿ, ಕಾಗೆ ಮುಂತಾದ ಮಾಂಸಾಹಾರಿ ಜಂತುಗಳೂ, ಭೂತ, ಪ್ರೇತ, ಪಿಶಾಚ, ರಾಕ್ಷಸಾದಿಗಳೂ ಆ ಹೆಣಗಳನ್ನು ಸುತ್ತಿ ನಿಂತು ಭಕ್ಷಿಸಲು ಕಾದಿರುವುದನ್ನೂ ಕಂಡರು ಆಗ ಆ ಸ್ತ್ರೀಯರು ಕಾಲರುದ್ರನ ಕ್ರೀಡಾವನಕ್ಕೆ ಸಮಾನವಾದ ಆ ಭಯಂಕರ ಸನ್ನಿವೇಶವನ್ನು ಕಂಡೊಡನೆ ಕುರರಿಗಳಂತೆ ಗೋಳಿಡುತ್ತ, ಆಗಲೇ ತಮ್ಮ ದೇಹದಿಂದ ಪ್ರಾಣವು ತಟ್ಟನೆ ಹಾರಿಹೋದಂತೆ ನಡುಗುತ್ತ ಕೆಳಗೆ ಬಿದ್ದರು ಅತಿದುಃಖಿತರಾದ ಆ ಪಾಂಚಾಲ ಕೌರವ ಸ್ತ್ರೀಯರ ರೋದನಧ್ವನಿಯು ಮೇಲೆಮೇಲೆ ಪ್ರಬಲವಾಯಿತು ಆಗ ಧರ್ಮಜ್ಞಳಾದ ಗಾಂಧಾರಿಯು, ಸ್ತ್ರೀಯರ ರೋದನಧ್ವನಿಯಿಂದ ತುಂಬಿ ಭಯಂಕರವಾಗಿ ಕಾಣುತ್ತಿದ್ದ ಆ ಯುದ್ಧಭೂಮಿಯನ್ನು ನೋಡಿ, ಪುರುಷೋತ್ತಮನಾ

ಕೃಷ್ಣನನ್ನು ಕರೆದು, ಕೌರವರಿಗೊದಗಿದ ಆ ಮಹಾವಿಪತ್ತಿನ ವಿಷಯ ವಾಗಿ ಹೀಗೆಂದು ಪ್ರಸ್ತಾಪಿಸುವಳು

'ಪುಂಡರೀಕಾಕ್ಷಾ! ಮಾಧವಾ! ಪ್ರಭೂ! ಪತಿವಿಹೀನೆಯರಾಗಿ, ತಲೆಯನ್ನು ಬಚ್ಚಿಕೊಂಡು ದೈನ್ಯದಿಂದ ರೋದಿಸುತ್ತಿರುವ ಈ ನನ್ನ ಸೊಸೆಯರ ಸ್ಥಿತಿಯನ್ನು ನೋಡಿದೆಯಾ? ಎಂದಿಗೂ ಹೊರಗೆ ಬಾರದ ಈ ರಾಜಸ್ತ್ರೀಯರು, ಈಗ ತಾವೇ ಸಾಕ್ಷಾತ್ತಾಗಿ, ಮತ್ತು ಏಕಾಕಿನಿಯರಾಗಿ ಇಲ್ಲಿಗೆ ಬಂದು ತಮ್ಮಮಕ್ಕಳನ್ನೂ, ಸಹೋದರರನ್ನೂ, ತಂದೆಯರನ್ನೂ, ಪತಿಗಳನ್ನೂ ನೆನೆಸಿಕೊಂಡು, ಅಲ್ಲಲ್ಲಿ ಹುಡುಕುತ್ತಿರುವರು ಇದೋ! ಈ ಯುದ್ಧಭೂಮಿಯನ್ನು ನೋಡು! ಮಕ್ಕಳನ್ನು ಬಲಿಕೊಟ್ಟ ವೀರಮಾತೆ ಯರಿಂದಲೂ, ಪತಿಗಳನ್ನು ಬಲಿಕೊಟ್ಟ ವೀರಪತ್ನಿಯರಿಂದಲೂ ತುಂಬಿ ರುವುದು ಶೂರರೂ, ಅಗ್ನಿಸಮಾನವಾದ ತೇಜಸ್ಸುಳ್ಳವರೂ ಆದ ಕರ್ಣ ಭೀಷ್ಮ, ಅಭಿಮನ್ಯು, ದ್ರೋಣ, ದ್ರುಪದ, ಶಲ್ಯಾದಿ ವೀರರೆಲ್ಲ ಇಲ್ಲಿ ಸತ್ತು ಬಿದ್ದಿರುವರು ಈಗಲೂ ಅವರ ದೇಹವು ಯುದ್ಧಕವಚಗಳು, ಸುವರ್ಣಾ ಭರಣಗಳು, ಅನರ್ಘ್ಯರತ್ನಗಳು, ತೋಳ್ಬಳೆಗಳು, ಉತ್ತಮವಾದ ಹಾರ ಗಳು ಇವುಗಳಿಂದ ಅಲಂಕೃತವಾಗಿ ಕಾಣಿಸುತ್ತಿರುವುದು ವೀರರ ಹಸ್ತ ಗಳಿಂದ ಪ್ರಯೋಗಿಸಲ್ಪಟ್ಟ ಖಡ್ಗ, ಶಕ್ತಿ, ಪರಿಘ, ಬಿಲ್ಲು, ಮತ್ತು ಬಾಣ ಗಳೆಲ್ಲ ಅಲ್ಲಲ್ಲಿ ಬಿದ್ದಿರುವುವು ಒಂದು ಕಡೆಯಲ್ಲಿ ರಕ್ತಮಾಂಸಗಳನ್ನು ಸೇವಿಸುವ ಪ್ರಾಣಿಗಳು ಒಟ್ಟುಗೂಡಿ ಆನಂದದಿಂದಿರುವುವು ಅಲ್ಲಲ್ಲಿ ಕೆಲವು ಸಂತೋಷದಿಂದ ಆಡುತ್ತಿರುವುವು ಮತ್ತೆ ಕೆಲವು ಒಂದಾಗಿ ಮಲಗಿರುವುವು ಜನಾರ್ದನಾ! ಮಧುಸೂದನಾ! ಇವೆಲ್ಲವನ್ನೂ ನೋಡಿ ನಾನು ಶೋಕದಿಂದ ದಗ್ಧಳಾಗುತ್ತಿರುವೆನಲ್ಲಾ? ಕೃಷ್ಣಾ! ಈಗ ನಡೆದ ಪಾಂಚಾಲ ಕೌರವರ ಮರಣವನ್ನು ನಾನು ಪಂಚಮಹಾಭೂತ ಗಳ ವಧೆಯೆಂದೇ ಎಣಿಸುವೆನು ಅಯ್ಯೋ! ರಕ್ತದಿಂದ ತೊಯ್ದ ಇವರ ದೇಹವನ್ನು ಗರುಡಪಕ್ಷಿಗಳೂ, ರಣಹದ್ದುಗಳೂ ಎಳೆದಾಡುತ್ತಿರುವುವು ನೋಡು ಕೆಲವು ಗೃಧ್ರಗಳು ಅವರ ದೇಹವನ್ನು ಕಾಲಿಂದ ಮೆಟ್ಟಿ ಕಿತ್ತು ತಿನ್ನುವುವು. ಜಯದ್ರಥನೂ, ಕರ್ಣನೂ, ದ್ರೋಣನೂ, ಭೀಷ್ಮನೂ,

ಅಭಿಮನ್ಯುವೂ ಸಾಯುವರೆಂದು ಯಾವನು ತಾನೇ ನೆನೆಸಬಲ್ಲನು? ಯಾರಿಗೂ ಅವಧ್ಯರಾಗಿದ್ದ ಈ ಪುರುಷಶ್ರೇಷ್ಠರೆಲ್ಲರೂ ದುರ್ಯೋಧನನನ್ನು ಅನುವರ್ತಿಸಿ, ಕೋಪಕ್ಕೆ ವಶರಾಗಿ, ತಮ್ಮ ಪ್ರಜ್ಞೆಯನ್ನೂ, ಬಲವನ್ನೂ ಕಳೆದುಕೊಂಡು, ಆರಿಹೋದ ಬೆಂಕಿಯಂತೆ ಸತ್ತುಬಿದ್ದಿರುವರು ಈ ವೀರರ ದೇಹಗಳನ್ನು ಹದ್ದುಗಳೂ, ಕಂಕಪಕ್ಷಿಗಳೂ, ಕಾಗೆಗಳೂ, ನಾಯಿಗಳೂ, ನರಿಗಳೂ ಸುತ್ತಿಕೊಂಡಿರುವುವು ಮೃದುವಾದ ಮತ್ತು ಶುದ್ಧವಾದ ಹಾಸಿಗೆಗಳಲ್ಲಿ ಮಲಗುತಿದ್ದ ಇವರೆಲ್ಲ, ಈಗ ವಿಪತ್ತಿಗೆ ಗುರಿಯಾಗಿ, ನಿರಾವರಣವಾದ ನೆಲದಮೇಲೆ ಮಲಗಿರುವರು ನೋಡು. ಸಕಾಲಗಳಲ್ಲಿ ಸ್ತುತಿಸುವ ಸ್ತುತಿಪಾಠಕರಿಂದ ಹೊಗಳಲ್ಪಡುತ್ತಿದ್ದ ಈ ವೀರರು ಈಗ ಅಮಂಗಳಕರವೂ, ಘೋರವೂ ಆದ ನಾನಾಬಗೆಯ ಶಬ್ದಗಳನ್ನು ಕೇಳುತ್ತಿರುವರು ಪ್ರಸಿದ್ಧರಾದ ಯಾವ ವೀರರು ಹಿಂದೆ ಗಂಧಗಳನ್ನೂ, ಅಗರುಚಂದನಗಳನ್ನೂ ಲೇಪಿಸಿಕೊಂಡು, ದಿವ್ಯವಾದ ಹಾಸಿಗೆಗಳಲ್ಲಿ ಮಲಗುತ್ತಿದ್ದರೋ, ಅವರು ಈಗ ಮಣ್ಣಿನಮೇಲೆ ಮಲಗಿರುವರು ಘೋರವಾದೀ ಗುಳ್ಳೆನರಿಗಳೂ, ಹದ್ದುಗಳೂ, ನರಿಗಳೂ, ಕಾಗೆಗಳೂ ಅಡಿಗಡಿಗೆ ಕೂಗಿಡುತ್ತ, ಅವರ ಆಭರಣಗಳಮೇಲೇರಿ ಅವುಗಳನ್ನು ಎಳೆದಾಡುತ್ತಿರುವುವು. ಈ ಯುದ್ಧವೀರರೆಲ್ಲರೂ ಈಗಲೂ ಜೀವಸಹಿತರಾಗಿರುವಂತೆಯೇ ಬಾಣಗಳನ್ನೂ, ತೀಡಿದ ಹರಿತವಾದ ಕತ್ತಿಗಳನ್ನೂ, ಥಳಥಳಿಸುವ ಗದೆಗಳನ್ನೂ ಹಿಡಿದಿರುವರು. ಒಳ್ಳೆಯ ರೂಪವರ್ಣಸಂಪನ್ನರೂ, ವೃಷಭದಂತೆ ಕಣ್ಣುಳ್ಳವರೂ ಆದ ಅನೇಕವೀರರು ನೂರಾರು ಮಾಂಸಾಹಾರಿಗಳಾದ ಪಕ್ಷಿಗಳಿಂದಲೂ, ಮೃಗಗಳಿಂದಲೂ ಎಳೆದಾಡಲ್ಪಡುತ್ತ ಮಲಗಿರುವರು. ಪರಿಘ ಸಮಾನವಾದ ಬಾಹುಗಳನ್ನುಳ್ಳ ಬೇರೆ ಕೆಲವು ಶೂರರು ತಮ್ಮ ಪ್ರಿಯಪತ್ನಿಯರನ್ನಾಲಿಂಗಿಸಿ ಮಲಗಿದಂತೆ,' ತಮ್ಮ ಗದೆಗಳನ್ನಪ್ಪಿಕೊಂಡು ಆ ಕಡೆಗೇ ದೃಷ್ಟಿಯಿಟ್ಟಂತೆ ಮಲಗಿರುವರು. ಓ ಜನಾರ್ದನಾ! ಕೆಲವರು ಆಯುಧ ಯುದ್ಧಕವಚಗಳೊಡನೆ ಸತ್ತು ಮಲಗಿರುವುದನ್ನು ನೋಡಿ, ಮಾಂಸಾಹಾರಿಗಳು ಅವರು ಜೀವಸಹಿತರಾಗಿರುವರೆಂದು ಭಾವಿಸಿ ಮುಟ್ಟಲು ಹೆದರಿ ಹಿಂಜರಿಯುವುವು. ಮಾಂಸಾಹಾರಿಗಳಿಂದ ಎಳೆದಾಡಲ್ಪಟ್ಟ ಕೆಲವು ವೀರರ ಸುವರ್ಣಚಿತ್ರಿತಗಳಾದ ಮುತ್ತಿನಹಾರ

ಗಳು ಕಿತ್ತು ಎಲ್ಲಾ ಕಡೆಗಳಲ್ಲಿಯೂ ಚೆಲ್ಲಿರುವುವು. ಭಯಂಕರವಾದೀ ನರಿಗಳು ಆ ವೀರರ ಕತ್ತುಗಳಲ್ಲಿರುವ ನೂರಾರು ಹಾರಗಳನ್ನು ಎಳೆದಾಡು ತ್ತಿರುವುವು ಬೆಳಗಿನ ಜಾವಗಳಲ್ಲಿ ಯಾರನ್ನು ವಂದಿಗಳು ದಿವ್ಯಸ್ತುತಿಗ ಳಿಂದಲೂ, ಉಪಚಾರಗಳಿಂದಲೂ ಆನಂದಗೊಳಿಸುತ್ತಿದ್ದರೋ, ಅವರ ಮುಂದೆ ಈಗ ದುಃಖಿತೆಯರಾದ ಸ್ತ್ರೀಯರು ಪ್ರಲಪಿಸುತ್ತಿರುವರು ಓ ಕೇಶವಾ ! ದುಃಖದಿಂದ ಬಹಳವಾಗಿ ಕಂದಿದ ಆ ಉತ್ತಮಸ್ತ್ರೀಯರ ಮುಖ ಗಳು ಈಗ ಒಣಗಿದ ಕೆಂದಾವರೆಯ ಕಾಡುಗಳಂತೆ ಕಾಣುವುವು ಅದೋ! ಆ ಕೌರವಸ್ತ್ರೀಯರು ಅತ್ತು, ಬಳಲಿ, ದುಃಖದಿಂದ ತಮ್ಮತಮ್ಮ ವೀರರನ್ನು ಹುಡುಕಿಕೊಂಡು ಹೊರಡುತ್ತಿರುವರು ಬಹಳವಾಗಿ ಅತ್ತು ಅತ್ತು ಕೆಂಪೇ ರಿದ ಆ ಕೌರವಸ್ತ್ರೀಯರ ಮುಖಗಳು ಸೂರ್ಯನಂತೆಯೂ, ಚಿನ್ನದಂತೆ ಯೂ ಕಾಣುವುವು ನೋಡು ಒಳ್ಳೇ ದೇಹಕಾಂತಿಯುಳ್ಳವರೂ, ಯುವತಿ ಯರೂ ಆದ ಈ ದುರ್ಯೋಧನಪತ್ನಿಯರು ಏಕವಸ್ತ್ರಧಾರಿಗಳಾಗಿ ಗುಂಪು ಕೂಡಿ ಅಳುವುದನ್ನು ನೋಡು. ಈ ಸ್ತ್ರೀಯರ ಅಸ್ಪಷ್ಟಪ್ರಲಾಪಗಳನ್ನು ಕೇಳಿದಾಗ ಒಬ್ಬರಿಗೊಬ್ಬರಿಗೆ ಇದು ಇಂಥವರ ಧ್ವನಿಯೆಂಬುದೇ ತಿಳಿಯು ವಹಾಗಿಲ್ಲ ದುಃಖಿಸುತ್ತಿರುವ ಈ ಸ್ತ್ರೀಯರನ್ನು ನೋಡಿ ನಿಟ್ಟುಸಿರುಬಿಡು ತ್ತಲೂ, ಅಧಿಕವಾಗಿ ಅಳುತ್ತಲೂ, ದುಃಖದಿಂದ ವ್ಯಥೆಪಡುತ್ತಲೂ ವೀರರು ಪ್ರಾಣಬಿಡುತ್ತಿರುವರು. ಹಲವುಮಂದಿ ಸ್ತ್ರೀಯರು ಮೃತಶರೀರಗಳನ್ನು ನೋಡಿ ನೋಡಿ ಗೋಳಿಟ್ಟು ಪ್ರಲಪಿಸುವರು ಮತ್ತೆ ಕೆಲವರು ಸ್ತ್ರೀ ಯರು ತಮ್ಮ ಮೃದುಹಸ್ತಗಳಿಂದ ತಮ್ಮ ತಲೆಗಳನ್ನು ಹೊಡೆದುಕೊಳ್ಳು ತ್ತಿರುವರು ಆ ಯುದ್ಧಭೂಮಿಯು, ಅಲ್ಲಲ್ಲಿ ತಲೆಗಳಿಂದಲೂ, ಕೈಗ ಳಿಂದಲೂ, ತುಂಡಾಗಿ ಒಂದಕ್ಕೊಂದು ಅಂಟಿಕೊಂಡಿರುವ ಅವಯವ ಭಾಗಗಳಿಂದಲೂ ವ್ಯಾಪ್ತವಾಗಿರುವುದು ನೋಡು ಯುದ್ಧವೆಂಬುದನ್ನೇ ನೋಡಿ ತಿಳಿಯದ ಕೆಲವು ಸ್ತ್ರೀಯರು, ತಲೆಯಿಲ್ಲದಿರುವ ವೀರರ ಶರೀರಗಳನ್ನೂ, ದೇಹವಿಲ್ಲದ ತಲೆಗಳನ್ನೂ ಕಂಡು ಭ್ರಾಂತರಾಗಿ ನಿಲ್ಲು ವರು. ಕೆಲವು ಸ್ತ್ರೀಯರು ಮುಂಡವಿದ್ದ ಸ್ಥಳದಲ್ಲಿ ತಲೆಯನ್ನು ಕಾಣದೆ, ಬೇರೊಂದು ತಲೆಯನ್ನು ಆ ದೇಹಕ್ಕೆ ಸೇರಿಸಿ ನೋಡಿ, ಭ್ರಮೆಗೊಂಡು ಇದು ಅವನದಲ್ಲವೆಂದು ಬಿಸುಡುವರು. ಅಲ್ಲಲ್ಲಿ ಬಿದ್ದ ಕೈಗಳನ್ನೂ, ತೊಡೆ

ಗಳನ್ನೂ, ಕಾಲುಗಳನ್ನೂ ಇತರಾವಯವಗಳನ್ನೂ ಒಟ್ಟಿಗೆ ಸೇರಿಸಿ ನೋಡುತ್ತ ವ್ಯಾಕುಲರಾಗಿ ಕೆಲವು ಸ್ತ್ರೀಯರು ಅಡಿಗಡಿಗೆ ಮೂರ್ಛಿತರಾಗುವರು. ಕೆಲವು ಸ್ತ್ರೀಯರು ಅಲ್ಲಲ್ಲಿ ಮೃಗಗಳಿಂದಲೂ, ಪಕ್ಷಿಗಳಿಂದಲೂ ಭಕ್ಷಿಸಲ್ಪಡುತ್ತಿರುವ ಬೇರೆ ಮನುಷ್ಯರ ದೇಹಗಳನ್ನು ಕಂಡು ತಮ್ಮ ಪತಿಗಳೆಂದು ಗುರ್ತಿಸಲಾರದಿರುವರು ಮತ್ತೆ ಕೆಲವು ಸ್ತ್ರೀಯರು ಶತ್ರುಗಳಿಂದ ಕೊಲ್ಲಲ್ಪಟ್ಟ ಸಹೋದರರನ್ನೂ, ಪಿತರನ್ನೂ, ಮಕ್ಕಳನ್ನೂ, ಪತಿಗಳನ್ನೂ ನೋಡಿ, ಕೈಗಳಿಂದ ತಲೆಯನ್ನು ಚಚ್ಚಿಕೊಳ್ಳುವರು ಈ ಯುದ್ಧಭೂಮಿಯು ಅಲ್ಲಲ್ಲಿ ಮಾಂಸಗಳೊಡನೆ ಕಲೆತ ರಕ್ತದ ಕೆಸರಿನಿಂದಲೂ, ಮೃತಶರೀರಗಳಿಂದಲೂ, ಕತ್ತಿಗಳನ್ನು ಹಿಡಿದ ಕೈಗಳಿಂದಲೂ, ಕುಂಡಲಗಳನ್ನು ಧರಿಸಿದ ತಲೆಗಳಿಂದಲೂ ದುರ್ಗಮವಾಗಿರುವುದು ಹಿಂದೆ ಯಾವಾಗಲೂ ದುಃಖವನ್ನೇ ಅರಿಯದ ಈ ಉತ್ತಮ ಸ್ತ್ರೀಯರು, ಸಹೋದರರೂ, ಪತಿಗಳೂ, ಪುತ್ರರೂ ಸತ್ತುಬಿದ್ದಿರುವ ಸ್ಥಳಗಳಿಗೆ ಹೋಗುತ್ತಿರುವರು ಹೆಣ್ಣುಕುದುರೆಗಳ ಸಮೂಹದಂತೆ ಲಕ್ಷಣವಾದ ಕೂದಲುಗಳುಳ್ಳ ನಮ್ಮ ಸೊಸೆಯರ ಗುಂಪನ್ನು ನೋಡು. ಈ ಸ್ತ್ರೀಯರು ನಾನಾವಿಧದಿಂದ ದುಃಖಿಸುವುದನ್ನು ನೋಡುವುದಕ್ಕಿಂತಲೂ ಅಧಿಕ ವ್ಯಸನಕರವಾದುದು ಮತ್ತೇನಿರುವುದು? ಓ ಮಾಧವಾ! ನಾನು ಹೀಗೆ ಹತರಾಗಿರುವ ಪುತ್ರರನ್ನೂ, ಪೌತ್ರರನ್ನೂ, ಸಹೋದರರನ್ನೂ ನೋಡುವಂತಾದುದರಿಂದ, ನಾನು ಹಿಂದಿನಜನ್ಮದಲ್ಲಿ ಏನೋ ಮಹಾಪಾಪಕಾರ್ಯವನ್ನು ಮಾಡಿರಬೇಕು" ಎಂದಳು ಹೀಗೆ ಗಾಂಧಾರಿಯು ತನ್ನ ವ್ಯಸನವನ್ನು ಕೃಷ್ಣನೊಡನೆ ಸೂಚಿಸಿ, ಮೃತನಾದ ತನ್ನ ಪುತ್ರನನ್ನೇ ನೋಡುತ್ತ ನಿಂತಿದ್ದಳು.

ಇದು ಹದಿನಾರನೆಯ ಅಧ್ಯಾಯವು.



{ ಗಾಂಧಾರಿಯು ದುರ್ಯೋಧನನನ್ನು ತಬ್ಬಿಕೊಂಡು ಕೃಷ್ಣನ ಮುಂದೆ ವಿಲಪಿಸಿದುದು }

ಮೃತನಾಗಿ ಬಿದ್ದಿರುವ ದುರ್ಯೋಧನನನ್ನು ನೋಡಿದೊಡನೆ ಗಾಂಧಾರಿಯು, ಕಾಡಿನಲ್ಲಿ ಕಡಿಯಲ್ಪಟ್ಟ ಬಾಳೆಯ ಗಿಡದಂತೆ, ದೊಪ್ಪನೆ ನೆಲದಮೇಲೆ ಬಿದ್ದಳು. ಆಮೇಲೆ ಮೆಲ್ಲಗೆ ಚೇತರಿಸಿಕೊಂಡು ಗಟ್ಟಿಯಾಗಿ ಗೋಳಿಟ್ಟು ವಿಲಪಿಸುತ್ತ, ರಕ್ತದಿಂದ ತೊಯ್ದು ಮಲಗಿರುವ ದುರ್ಯೋಧನನ ಮೃತದೇಹವನ್ನಪ್ಪಿಕೊಂಡು 'ಹಾ! ಮಗನೇ!' ಎಂದು ಗೋಳಿಟ್ಟಳು ಸುಂದರವಾಗಿಯೂ, ಮಾಂಸಪುಷ್ಟಿಯಿಂದ ಮರೆಸಿದ ತೋಳಿಲುಬಿನಿಂದಕೂಡಿ ವಿಶಾಲವಾಗಿಯೂ, ಹಾರಗಳಿಂದಲೂ, ಸುವರ್ಣಾಭರಣಗಳಿಂದಲೂ, ಅಲಂಕೃತವಾಗಿಯೂ ಇದ್ದ ಆ ಮಗನ ಎದೆಯನ್ನು ತನ್ನ ಕಣ್ಣೀರಿನಿಂದ ನೆನೆಸುತ್ತ, ತನ್ನ ಸಮೀಪದಲ್ಲಿರುವ ಹೃಷೀಕೇಶನನ್ನು ನೋಡಿ ಹೀಗೆ ಹೇಳುವಳು "ಓ ಪ್ರಭೂ! ವೃಷ್ಣಿವಂಶಸಂಭವಾ! ಕುಲಕ್ಷಯಕಾರಣವಾದ ಈ ಯುದ್ಧವು ಸಮೀಪಿಸಿದಾಗಲೇ ರಾಜಶ್ರೇಷ್ಠನಾದ ಈ ದುರ್ಯೋಧನನು ಕೈಗಳನ್ನು ಜೋಡಿಸಿಕೊಂಡು ನನ್ನನ್ನು ಕುರಿತು 'ಅಮ್ಮಾ! ಈ ಯುದ್ಧದಲ್ಲಿ ನನಗೆ ಜಯವನ್ನು ಹರಸು' ಎಂದನು ಮುಂದೊದಗುವ ಈ ವ್ಯಸನವೆಲ್ಲವನ್ನೂ ತಿಳಿದ ನಾನು, ಆಗ 'ವತ್ಸಾ! ಧರ್ಮವೆಲ್ಲಿರುವುದೋ ಅಲ್ಲಿ ಜಯವು! ಯುದ್ಧದಲ್ಲಿಯೇ ದೃಢಸಂಕಲ್ಪವುಳ್ಳ ನೀನು ಸತ್ತರೂ ದೇವನಂತೆ ಶಸ್ತ್ರಗಳಿಂದ ಜಯಿಸಲ್ಪಟ್ಟ ಲೋಕವನ್ನು ಪಡೆಯುವೆ ಇದು ನಿಜವು' ಎಂದು ಹೇಳಿದೆನು ಕೃಷ್ಣಾ! ಇವನ ವಿಷಯವಾಗಿ ಈಗ ನಾನು ವ್ಯಸನಪಡಲಿಲ್ಲ ಆದರೆ, ಬಂಧುಗಳನ್ನೆಲ್ಲ ಕಳೆದುಕೊಂಡು ದೀನನಾದ ಧೃತರಾಷ್ಟ್ರನ ವಿಷಯವಾಗಿ ನಾನು ಬಹಳ ವ್ಯಸನಪಡುತ್ತಿರುವೆನು ಮಾಧವಾ! ಕೋಪಸ್ವಭಾವವುಳ್ಳವನೂ, ಯುದ್ಧಮಾಡುವವರಲ್ಲಿ ಅಗ್ರಗಣ್ಯನೂ, ಅಸ್ತ್ರವಿದ್ಯಾನಿಪುಣನೂ, ಮಹಾಮದೋದ್ರಿಕ್ತನೂ ಆದ ನನ್ನ ಮಗನು ವೀರಶಯನದಲ್ಲಿ ಮಲಗಿರುವನು ನೋಡು. ರಿಪುಭಯಂಕರನಾಗಿ, ಕಿರೀಟಧಾರಿಗಳಲ್ಲಿ ಮುಂದಾಳೆನಿಸಿದ್ದ ಈ ದುರ್ಯೋಧನನು ಈಗ ಮಣ್ಣಿನಲ್ಲಿ ಮಲಗಿರುವುದನ್ನು ನೋಡು. ಕಾಲವ್ಯತ್ಯಾಸವನ್ನು ನೋಡಿದೆಯಾ! ವೀರರಿಂದ ಬಯಸಲ್ಪಟ್ಟ ರಣಶಯ್ಯೆ

ಯಲ್ಲಿ ಮಲಗಿರುವುದರಿಂದ, ಈ ದುರ್ಯೋಧನನು ಸುಲಭವಾಗಿ ದೊರೆಯು ಲಾರದ ಉತ್ತಮಗತಿಯನ್ನೇ ಪಡೆದಿರುವನು. ಇದು ಸತ್ಯವು. ಹಿಂದೆ ರಾಜರೆಲ್ಲರೂ ಯಾವನನ್ನು ಸಮೀಪಿಸಿ ಉಪಚರಿಸುವುದರಲ್ಲಿ ಸಂತೋಷ ಗೊಳ್ಳುತ್ತಿದ್ದರೋ, ಆತನನ್ನು ಈಗ ಎಲ್ಲಾ ಕಡೆಗಳಲ್ಲಿಯೂ ರಣಹದ್ದು ಗಳು ಕಿತ್ತುತಿನ್ನುತ್ತಿರುವುವು ಹಿಂದೆ ಯಾವಾತನನ್ನು ಸ್ತ್ರೀಯರು ಮನೋಹರವಾದ ಬೀಸಣಿಗೆಗಳಿಂದ ಬೀಸುತ್ತಿದ್ದರೋ, ಆತನನ್ನು ಈಗ ಪಕ್ಷಿಗಳು ತಮ್ಮ ರೆಕ್ಕೆಗಳಿಂದ ಬೀಸುತ್ತಿರುವುವು ನೀಡಿದ ಕೈಗಳುಳ್ಳವನೂ ಬಲಶಾಲಿಯೂ, ಸತ್ಯಪರಾಕ್ರಮಿಯೂ ಆದ ಈ ದುರ್ಯೋಧನನು, ಸಿಂಹ ದಿಂದ ಕೆಡಹಲ್ಪಟ್ಟ ಆನೆಯಂತೆ ಯುದ್ಧದಲ್ಲಿ ಭೀಮಸೇನನಿಂದ ಕೆಡಹ ಲ್ಪಟ್ಟು ಮಲಗಿರುವನು ಓ ಕೃಷ್ಣಾ ! ಭೀಮಸೇನನಿಂದ ಕೊಲ್ಲಲ್ಪಟ್ಟು ರಕ್ತದಲ್ಲಿ ತೊಯ್ದು ಈಗಲೂ ಗದೆಯನ್ನು ಬಿಡದೆ ಮಲಗಿರುವ ಈ ದುರ್ಯೋಧನನ ಸ್ಥಿತಿಯನ್ನು ನೋಡಿದೆಯಾ ? ಹಿಂದೆ ಹನ್ನೊಂದಕ್ಷೌಹಿಣೀ ಸೈನ್ಯಗಳನ್ನೂ ಕರೆತಂದ ಮಹಾಬಾಹುಬಲವುಳ್ಳ ಈತನು, ಈಗಿನ ಯುದ್ಧ ದಲ್ಲಿ ಅಧರ್ಮರೀತಿಯಲ್ಲಿ ಹತನಾದನು ಮಹಾಧನುರ್ಧಾರಿಯೂ, ಬಲ ಶಾಲಿಯೂ ಆದ ಈ ದುರ್ಯೋಧನನು ಸಿಂಹದಿಂದ ಹತವಾದ ಹುಲಿ ಯು ಹೇಗೋಹಾಗೆ ಭೀಮಸೇನನಿಂದ ಕೆಡಹಲ್ಪಟ್ಟು ಮಲಗಿರುವನು ಮಂದಭಾಗ್ಯನೂ, ಮಂದಬುದ್ಧಿಯೂ ಆದ ಇವನು, ಬಾಲಭಾವದಿಂದ ವಿದುರನನ್ನೂ, ಪಿತನನ್ನೂ ಅವಮತಿಸಿ ಆ ವೃದ್ಧರನ್ನು ಅವಮಾನಪಡಿ ಸಿದ ದೋಷದಿಂದ ಮೃತ್ಯುವಶನಾದನು ಶತ್ರುಬಾಧೆಗಳಿಲ್ಲದೆ ಯಾವನ ವಶದಲ್ಲಿ ಈ ಭೂಮಿಯು ಹದಿಮೂರು ವರ್ಷಗಳಕಾಲವಿದ್ದಿತೋ, ರಾಜ ನಾದ ಆ ದುರ್ಯೋಧನನು ಈಗ ಮೃತನಾಗಿ ಮಣ್ಣಿನಲ್ಲಿ ಮಲಗಿರು ವನು ವೃಷ್ಣಿಕುಲತಿಲಕಾ! ಕೃಷ್ಣಾ ! ಈ ಭೂಮಿಯು ಧೃತರಾಷ್ಟ್ರನ ರಕ್ಷಣೆಯಲ್ಲಿ ಗಜಾಶ್ವಗಳಿಂದಲೂ, ಗೋವುಗಳಿಂದಲೂ ತುಂಬಿದ್ದುದನ್ನು ನೋಡಿದೆವು. ಆದರೆ ಅದನ್ನೂ ನಾವು ಬಹುಕಾಲ ನೋಡಲಿಲ್ಲ ಓ ಮಹಾಬಾಹೂ ! ಈಗ ಅದೇ ಭೂಮಿಯು ಅನ್ಯರ ವಶವಾಗಿ, ಕೇವಲ ಶೂನ್ಯಪ್ರಾಯವಾಗಿರುವುದನ್ನೂ ಕಾಣುತ್ತಿರುವೆವು. ಓ ಮಾಧವಾ! ಇನ್ನು ನಾನೇಕೆ ಬದುಕಿರಬೇಕು ? ಈ ಯುದ್ಧರಂಗದಲ್ಲಿ ಹತರಾದ ಶೂರರನ್ನೂ,

ಸುತ್ತಿಮುತ್ತಿ ಅಳುತ್ತಿರುವ ಈ ಸ್ತ್ರೀಯರನ್ನೂ ನೋಡುವುದು, ನನ್ನ ಮಗನ ಸಾವನ್ನು ನೋಡುವುದಕ್ಕಿಂತಲೂ ನನಗೆ ಅಧಿಕ ಕಷ್ಟವಾಗಿರುವುದಲ್ಲಾ! ಸುಂದರವಾದ ಜಘನವುಳ್ಳವಳಾಗಿ, ಸುವರ್ಣವೇದಿಗೆ ಸಮಾನಳಾಗಿ, ದುರ್ಯೋಧನನ ತೊಡೆಯನ್ನೇರುತಿದ್ದ ಈ ಲಕ್ಷ್ಮಣನ ತಾಯಿಯು, ಈಗ ತಲೆಬಿಚ್ಚಿಕೊಂಡು ಅಳುವುದನ್ನು ನೋಡು. ಹಿಂದೆ ದುರ್ಯೋಧನನು ಜೀವಿಸಿರುವಕಾಲದಲ್ಲಿ ಆತನ ಭುಜಾಶ್ರಯದಿಂದ ಎಷ್ಟೋ ಸುಖವನ್ನನು ಭವಿಸುತಿದ್ದಳು! ಅಯ್ಯೋ! ಈಗಿನ ಯುದ್ಧದಲ್ಲಿ ತನ್ನ ಮಗನೊಡನೆ ಹತನಾಗಿ ಬಿದ್ದಿರುವ ಈ ಪುತ್ರನನ್ನು ನೋಡುವ ನನ್ನ ಹೃದಯವು ಏಕೆ ಛಿನ್ನಭಿನ್ನವಾಗಿ ಒಡೆಯದಿರುವುದೋ? ಅಸಮಾನರೂಪವುಳ್ಳವಳೂ, ಸುಂದರವಾದ ತೊಡೆಗಳುಳ್ಳವಳೂ ಆದ ಈ ಭಾನುಮತಿಯು, ರಕ್ತದಲ್ಲಿ ನೆನೆದ ಪುತ್ರನನ್ನು ಮೂಸಿನೋಡುತ್ತಲೂ, ದುರ್ಯೋಧನನ ಎಲ್ಲಾ ದೇಹಭಾಗಗಳನ್ನೂ ಸವರುತ್ತಲೂ ಇರುವುದನ್ನು ನೋಡು! ಈಕೆಯು ಈಗ ತನ್ನ ಪತಿಗಾಗಿ ದುಃಖಿಸುವುದೆ? ಅಥವಾ ಮೃತನಾಗಿ ಬಿದ್ದಿರುವ ಪುತ್ರನಿಗಾಗಿ ದುಃಖಿಸುವುದೆ? ಈಕೆಯು ಈ ಸ್ಥಿತಿಯಲ್ಲಿರುವ ಪತಿಯನ್ನೂ, ಪುತ್ರನನ್ನೂ ಪ್ರತ್ಯಕ್ಷವಾಗಿ ನೋಡಿ ಹೇಗೆ ಸಹಿಸುವಳೋ? ಓ ಮಾಧವಾ! ವಿಶಾಲನೇತ್ರಳಾದ ಈಕೆಯು ತನ್ನ ಎರಡು ಕೈಗಳಿಂದಲೂ ತಲೆಯನ್ನು ಚಚ್ಚಿಕೊಂಡು, ವೀರನಾದ ಕುರುರಾಜನ ಎದೆಯಮೇಲೆ ಬಿಳುತ್ತಿರುವುದನ್ನು ನೋಡು ಬಿಳಿದಾವರೆ ಹೂವಿನಂತೆ ಸುಕುಮಾರಳೂ, ಅದೇ ಹೂವಿನ ಕಾಂತಿಗೆ ಸಮಾನವಾದ ದೇಹಕಾಂತಿಯುಳ್ಳವಳೂ, ಮೋಹನಾಂಗಿಯೂ ಆದ ಈಕೆಯು, ಬಾರಿಬಾರಿಗೂ ತನ್ನ ಪತಿ ಪುತ್ರರ ಮುಖವನ್ನೊರೆಸುತ್ತಿರುವಳು ನೋಡು. ಶಾಸ್ತ್ರಗಳೂ, ವೇದಗಳೂ ಸತ್ಯವಾದಪಕ್ಷದಲ್ಲಿ ಈ ರಾಜನು ತನ್ನ ಬಾಹುಬಲದಿಂದ ಸಂಪಾದಿಸಿದ ಉತ್ತಮ ಲೋಕಗಳನ್ನು ಸೇರಿರುವುದರಲ್ಲಿ ಯಾವ ಸಂಶಯವೂ ಇಲ್ಲ" ಎಂದಳು.

ಇದು ಹದಿನೇಳನೆಯ ಅಧ್ಯಾಯವು.

## ಗಾಂಧಾರಿಯು ಮಗನನ್ನು ಕುರಿತು ಕೃಷ್ಣನೊಡನೆ ವಿಲಪಿಸಿದುದು

"ಮಾಧವಾ! ಭೀಮಸೇನನಿಂದ ಹತರಾಗಿ ಬಿದ್ದ ನನ್ನ ನೂರು ಮಂದಿ ಮಕ್ಕಳನ್ನೂ ನೋಡು. ಪತಿಪುತ್ರರನ್ನು ಕಳೆದುಕೊಂಡ ನನ್ನ ಸೊಸೆಯರು ತಲೆಕೂದಲುಗಳನ್ನು ಬಿಚ್ಚಿಕೊಂಡು, ದುಃಖದಿಂದ ಮೈ ಮರೆತು ಯುದ್ಧಭೂಮಿಯಲ್ಲೆಲ್ಲ ಓಡುತ್ತಿರುವುದು ಮಹಾವ್ಯಸನಕರ ವಲ್ಲವೆ? ಉತ್ತಮವಾದ ಆಭರಣಗಳನ್ನು ಧರಿಸಿದ ತಮ್ಮ ಕಾಲುಗ ಳಿಂದ ಉಪ್ಪರಿಗೆಗಳಲ್ಲಿ ಸಂಚರಿಸುತ್ತಿದ್ದ ನನ್ನ ಸೊಸೆಯರು, ಈಗ ರಕ್ತ ದಿಂದ ತೊಯ್ದ ಈ ಭೂಮಿಯಲ್ಲಿ ಸಂಚರಿಸುತ್ತಿರುವರು ದುಃಖಾಕ್ರಾಂತ ರಾಗಿ ಹುಚ್ಚುಹಿಡಿದಂತಿರುವ ಈ ಸ್ತ್ರೀಯರು, ತಮ್ಮ ಪತಿಗಳ ಮೈಮೇಲೆ ಕುಳಿತಿರುವ ಹದ್ದುಗಳನ್ನೂ, ನರಿಗಳನ್ನೂ, ಕಾಗೆಗಳನ್ನೂ, ಪ್ರಯಾಸದಿಂದ ಟ್ಟುತ್ತ ಅಲೆದಾಡುತ್ತಿರುವರು ಅದೋ! ಸರ್ವಲಕ್ಷಣಸಂಪನ್ನಳಾದ ಒಬ್ಬ ಸ್ತ್ರೀಯು ಘೋರವಾದ ಈ ಯುದ್ಧಭೂಮಿಯನ್ನು ಕಂಡೊಡನೆ ಅಧಿಕ ದುಃಖದಿಂದ ಮೂರ್ಛಿತಳಾಗಿ ಬಿದ್ದಳು ಓ ಮಹಾಬಾಹೂ! ಲಕ್ಷ್ಮಣನ ತಾಯಿಯಾದ ಈ ರಾಜಪತ್ನಿಯ ಸ್ಥಿತಿಯನ್ನು ನೋಡಿದಮೇಲೆ ನನ್ನ ಮನಸ್ಸಿಗೆ ಶಾಂತಿಯೆಲ್ಲಿಯದು? ಈ ಸ್ತ್ರೀಯರಲ್ಲಿ ಕೆಲವರು ಹತರಾಗಿ ಬಿದ್ದಿ ರುವ ಸಹೋದರರನ್ನೂ, ಕೆಲವರು ಪಿತರನ್ನೂ, ಕೆಲವರು ಪುತ್ರರನ್ನೂ, ನೋಡಿ (ಅವರ) ಮಹಾಭುಜಗಳನ್ನು ಹಿಡಿದುಕೊಂಡು ಗೋಳಿಡುತ್ತ, ಮೂರ್ಛೆಬೀಳುತ್ತಿರುವುದನ್ನು ನೋಡು. ಭಯಂಕರವಾದ ಈ ಯುದ್ಧ ದಲ್ಲಿ ಬಂಧುಗಳನ್ನು ಕಳೆದುಕೊಂಡ ಮಧ್ಯವಯಸ್ಕರೂ, ಯೌವನವತಿ ಯರೂ ಆದ ಈ ಸ್ತ್ರೀಯರ ರೋದನವನ್ನು ಕೇಳು ಓ ದೀರ್ಘಬಾಹೂ! ತಮ್ಮತಮ್ಮ ಇಷ್ಟಜನಗಳ ರಥಸಮೂಹಗಳನ್ನೂ, ಸತ್ತುಬಿದ್ದಿರುವ ಆನೆ ಕುದುರೆಗಳನ್ನೂ ಹಿಡಿದುಕೊಂಡು ಮೋಹಪರವಶರಾಗಿ ನಿಂತಿರುವ ಸ್ತ್ರೀಯ ರನ್ನು ನೋಡು ಕೃಷ್ಣಾ! ಅದೋ! ಅಲ್ಲಿ ಒಬ್ಬಳು ಸುಂದರವಾದ ಕುಂಡಲಗಳನ್ನು ಧರಿಸಿ, ಕೋಮಲವಾದ ಮೂಗುಳ್ಳ ತನ್ನ ಬಂಧುವಿನ ಕಡಿದ ತಲೆಯನ್ನೆತ್ತಿಕೊಂಡು ನಿಂತಿರುವಳು ನೋಡು. ಜನಾರ್ದನಾ! ಅಂತಹ ಮಹಾತ್ಮನಾದ ಧರ್ಮಪುತ್ರನೇ ಈ ನಮ್ಮ ಕುಲವನ್ನು ನಾಶ

ಮಾಡಿದುದರಿಂದ ಈ ಸ್ತ್ರೀಯರೂ, ನಿರ್ಭಾಗ್ಯಳಾದ ನಾನೂ ಹಿಂದೆ ಏನೋ ಮಹಾಪಾಪವನ್ನು ಮಾಡಿರುವೆನೆಂದೆಣಿಸುವೆನು ಸತ್ಕಾರ್ಯ ದುಷ್ಕಾರ್ಯಗಳಿರಡಕ್ಕೂ ನಾಶವಿಲ್ಲ. ರೂಪಯೌವನ ಸೌಂದರ್ಯಗಳಿಂದೊಪ್ಪುವ ಈ ಸ್ತ್ರೀಯರ ಮುಖಗಳು ಬಾಡಿರುವುದನ್ನು ನೋಡು ಈ ಸ್ತ್ರೀಯರೆಲ್ಲ ಒಳ್ಳೆಯ ಕುಲದಲ್ಲಿ ಹುಟ್ಟಿದವರು! ಲಜ್ಜಾವತಿಯರು! ಕಪ್ಪಾದ ಎವೆ ಮುಂತಾದ ಒಳ್ಳೇ ಶುಭಲಕ್ಷಣವುಳ್ಳವರು! ಹಂಸಗಳಂತೆ ಇಂಪಾಗಿ ಮಾತಾಡುವವರು ಇವರೆಲ್ಲರೂ ದುಃಖದಿಂದ ಬುದ್ಧಿಭ್ರಮೆಗೊಂಡು ಸಾರಸಪಕ್ಷಿಗಳಂತೆ ನಡುಗುತ್ತ ಕೆಳಗೆ ಬೀಳುವುದನ್ನು ನೋಡಿದೆಯಾ? ಪುಂಡರೀಕಾಕ್ಷಾ! ಅರಳಿದ ತಾವರೆ ಹೂಗಳಂತೆ ಪ್ರಕಾಶಿಸುವ ಕೋಮಲವಾದ ಈ ಸ್ತ್ರೀಯರ ಮುಖಗಳನ್ನು ಈಗ ಸೂರ್ಯನು ತನ್ನ ಕಿರಣಗಳಿಂದ ಕಂದಿಸುತ್ತಿರುವುದನ್ನು ನೋಡು. ವಾಸುದೇವಾ! ಮದದಾನೆಗಳಂತೆ ಮಾನಿಗಳಾಗಿದ್ದ ನನ್ನ ಪುತ್ರರ ಅಂತಃಪುರದಲ್ಲಿದ್ದ ಸ್ತ್ರೀಯರನ್ನು ಈಗ ಸಾಮಾನ್ಯಜನರೂ ನೋಡುವಂತಾಯಿತಲ್ಲಾ! ಅಲ್ಲಲ್ಲ ನೆಲದಮೇಲೆ ಬಿದ್ದಿರುವ ನನ್ನ ಪುತ್ರರ ಖೇಟಕಗಳನ್ನೂ, ಸೂರ್ಯನಂತೆ ಜ್ವಲಿಸುವ ಧ್ವಜಗಳನ್ನೂ, ಯುದ್ಧಕವಚಗಳನ್ನೂ, ಸುವರ್ಣಮಯವಾದ ಕಂಠಾಭರಣಗಳನ್ನೂ, ಅವರ ಶಿರೋವಸ್ತ್ರಗಳನ್ನೂ ನೋಡು. ಇದೋ! ಇಲ್ಲಿ ದುಶ್ಶಾಸನನು ಬಿದ್ದಿರುವುದನ್ನು ನೋಡು. ಭೀಮನು ಆತನ ದೇಹದ ಎಲ್ಲಾ ಅವಯವಗಳಿಂದಲೂ ರಕ್ತವನ್ನು ಕುಡಿದು ಅವನನ್ನು ನಿಸ್ಸಾರಮಾಡಿ ಕೆಡಹಿಬಿಟ್ಟಿರುವನು. ದ್ಯೂತಕಾಲದಲ್ಲಿತ ನಗುಂಟಾದ ಭಂಗಕ್ಕಾಗಿ ದ್ರೌಪದಿಯು ರೇಗಿಸಿದುದರಿಂದ, ಭೀಮಸೇನನು ತನ್ನ ಗದೆಯನ್ನು ಪ್ರಯೋಗಿಸಿ, ಈ ನನ್ನ ಪುತ್ರನನ್ನು ಕೊಂದುಕೆಡಹಿರುವನು. ಓ ಜನಾರ್ದನಾ! ತನ್ನ ಅಣ್ಣನಿಗೂ, ಕರ್ಣನಿಗೂ ಪ್ರಿಯವನ್ನುಂಟುಮಾಡಬೇಕೆಂಬ ಉದ್ದೇಶದಿಂದ ಆಗ ದುಶ್ಶಾಸನನು ದ್ಯೂತದಲ್ಲಿ ಜಿತಳಾದ ದ್ರೌಪದಿಯನ್ನು ಕುರಿತು 'ಓ ಪಾಂಚಾಲೀ! ನೀನು ಸಹದೇವನೊಡನೆಯೂ, ನಕುಲನೊಡನೆಯೂ, ಅರ್ಜುನನೊಡನೆಯೂ ನಮ್ಮ ದಾಸಿಯಾದೆ! ಒಡನೆ ನಮ್ಮ ಅರಮನೆಯನ್ನು ಪ್ರವೇಶಿಸು' ಎಂದು ಸಭೆಯಲ್ಲಿ ಕೂಗಿ ಹೇಳಿದನು ಕೃಷ್ಣಾ! ಆಗ ನಾನು ದುರ್ಯೋಧನನನ್ನು ಕುರಿತು 'ಪುತ್ರಾ! ನಿನಗೆ ಮೃತ್ಯುಪಾಶವಾಗಿ ಬಂದಿರುವ ದ್ರೌಪದಿಯನ್ನು

ಬಿಟ್ಟುಬಿಡು. ನಿನ್ನ ಈ ಮಾವನು (ಶಕುನಿ) ಮಹಾದುರ್ಬುದ್ಧಿಯುಳ್ಳವನೆಂದೂ, ಕಲಹಪ್ರಿಯನೆಂದೂ ತಿಳಿ! ದ್ರೌಪದಿಯನ್ನು ಈಗಲೇ ಬಿಟ್ಟು ಕಳುಹಿಸು! ಪಾಂಡವರೊಡನೆ ಸಮಾಧಾನದಿಂದಿರು. ದುರ್ಮತೀ! ಕೊಳ್ಳಿಯಿಂದ ಆನೆಯನ್ನು ತಿವಿದಂತೆ ಕ್ರೂರವಾಕ್ಯಗಳೆಂಬ ಬಾಣಗಳಿಂದ ಮಹಾಕೋಪಿಯಾದ ಈ ಭೀಮಸೇನನನ್ನು ವ್ಯಥೆಪಡಿಸುತ್ತಿರುವೆ ನೀನು ಅವನ ವಿಚಾರವನ್ನು ತಿಳಿಯೆ!' ಎಂದು ಸಾರಿಸಾರಿ ಹೇಳಿದೆನು. ಅಂತಹ ವಾಗ್ಬಾಣಗಳನ್ನು ನೆನೆಸಿಕೊಂಡೇ ಕ್ರೋಧವಶನಾದ ಭೀಮಸೇನನು, ಸರ್ಪವು ಗೂಳಿಗಳಮೇಲೆ ಹೇಗೋ ಹಾಗೆ, ದುರ್ಯೋಧನನೇ ಮೊದಲಾದ ಕೌರವರಮೇಲೆ ತನ್ನ ವಿಷವನ್ನು ಕಕ್ಕಿದನು ಸಿಂಹದಿಂದ ಮಹಾಗಜವು ಕೊಲ್ಲಲ್ಪಡುವಂತೆ, ಭೀಮಸೇನನಿಂದ ಕೊಲ್ಲಲ್ಪಟ್ಟ ಈ ದುಶ್ಶಾಸನನು ತನ್ನ ದೀರ್ಘಬಾಹುಗಳೆರಡನ್ನೂ ಬೀಸಿ ಮಲಗಿರುವನು ಮಿತಿಯಿಲ್ಲದ ಕೋಪವುಳ್ಳ ಭೀಮಸೇನನು ಯುದ್ಧದಲ್ಲಿ ಆ ದುಶ್ಶಾಸನನ ರಕ್ತವನ್ನೆಲ್ಲ ಹೀರಿ ಎಂತಹ ಭಯಂಕರಕೃತ್ಯವನ್ನು ತೋರಿಸಿದನೋ ನೋಡು" ಎಂದಳು

ಇದು ಹದಿನೆಂಟನೆಯ ಅಧ್ಯಾಯವು.

## ಗಾಂಧಾರಿಯ ಪ್ರಲಾಪವು

"ಮಾಧವಾ! ವಿದ್ಯಾವಂತರ ಸ್ತುತಿಗೆ ಪಾತ್ರನಾದ ಈ ನನ್ನ ಮಗನು (ವಿಕರ್ಣನು) ಭೀಮನಿಂದ ಶತಖಂಡವಾಗಿ ಭೇದಿಸಲ್ಪಟ್ಟು ಭೂಮಿಯಲ್ಲಿ ಮಲಗಿರುವನು ನೋಡು! ಮಧುಸೂದನಾ! ಶರತ್ಕಾಲದಲ್ಲಿ ಕರೀಮೇಘದಿಂದ ಪರಿವೃತನಾದ ಚಂದ್ರನಂತೆ ವಿಕರ್ಣನು ಆನೆಗಳ ಮಧ್ಯದಲ್ಲಿ ಹತನಾಗಿ ಮಲಗಿರುವನು ಬಿಲ್ಲನ್ನು ಹಿಡಿದುದರಿಂದ ಪಟ್ಟುಗಟ್ಟಿ ಕೈಚೀಲಗಳನ್ನು ಧರಿಸಿದ ಇವನ ಕೈಗಳನ್ನು, ಮಾಂಸಾಪೇಕ್ಷಿಗಳಾದ ಹದ್ದುಗಳು ಪ್ರಯಾಸದಿಂದ ಕಿತ್ತುತಿನ್ನುತ್ತಿರುವುವು ನೋಡು. ಮಾಧವಾ! ಯೌವನವತಿಯೂ, ಮೋಹನಾಂಗಿಯೂ ಆದ ಇವನ ಪತ್ನಿಯು, ಈತನ ದೇಹದ ಮಾಂಸವನ್ನು ತಿನ್ನುವುದಕ್ಕಾಗಿ ಇಳಿಯುತ್ತಿರುವ ಹದ್ದುಗಳನ್ನೂ,

ಕಾಗೆಗಳನ್ನೂ ಓಡಿಸುತ್ತಿರುವುದನ್ನು ನೋಡಿದೆಯಾ? ಆ ಕಾರ್ಯವು ಅವಳಿಂದ ಸಾಗದಂತಿದೆ. ಓ ಪುರುಷೋತ್ತಮಾ! ಯೌವನವಂತನಾಗಿ, ದೇವಸಮಾನನೆನಿಸಿ, ಯಾವಾಗಲೂ ಸುಖದಲ್ಲಿಯೇ ಬೆಳೆದು, ಸುಖವಾಗಿದ್ದ ಆ ವಿಕರ್ಣನು ಈಗ ಮಣ್ಣಿನಲ್ಲಿ ಮಲಗಿರುವನು ನೋಡು ಕರ್ಣಿ, ನಾಳೀಕ, ನಾರಾಚ, ಮೊದಲಾದ ವಿವಿಧಬಾಣಗಳಿಂದ ಇವನ ಮೈಯೆಲ್ಲ ಹರಿದಿದ್ದರೂ, ರಾಜಲಕ್ಷ್ಮಿಯು ಇನ್ನೂ ಇವನನ್ನು ಬಿಡಲಿಲ್ಲ ಇವನ ಕಳೆಯನ್ನು ನೋಡು ಶತ್ರುಸಮೂಹಗಳನ್ನು ನಿಗ್ರಹಿಸುವ ಈ ದುರ್ಮುಖನು, ಯುದ್ಧದಲ್ಲಿ ಶೂರನೂ, ಪ್ರತಿಜ್ಞಾಪರಿಪಾಲಕನೂ ಆದ ಭೀಮನಿಂದ ಕೊಲ್ಲಲ್ಪಟ್ಟು ಅಂಗತ್ತನಾಗಿ ಮಲಗಿರುವನು ಕೃಷ್ಣಾ! ದುಷ್ಟಮೃಗಗಳು ಈತನ ದೇಹದಲ್ಲಿ ಅರ್ಧಭಾಗಕ್ಕಿಂತ ಹೆಚ್ಚುಭಾಗವನ್ನು ತಿಂದುಬಿಟ್ಟಿರುವುವು ಆತನ ಮುಖವು ಸಪ್ತಮಿಯ ಚಂದ್ರನಂತೆ ಪ್ರಕಾಶಿಸುವುದು ನೋಡು. ಆ ನನ್ನ ಮಗನು ಹತನಾಗಿ ನೆಲದಲ್ಲಿ ಹೊರಳುತ್ತಿರುವನಲ್ಲಾ! ಯಾವನನ್ನಿದಿರಿಸಿ ಯಾವ ಶತ್ರುಗಳೂ ನಿಲ್ಲಲಾರರೋ, ದೇವಲೋಕವನ್ನೇ ಜಯಿಸಿದ ಆ ದುರ್ಮುಖನು ಶತ್ರುಗಳಿಂದ ಹೇಗೆ ಕೊಲ್ಲಲ್ಪಟ್ಟನು? ಮಧುಸೂದನಾ! ಶಸ್ತ್ರವಿದ್ಯಾನಿಪುಣನಾದ ಈ ನನ್ನ ಪುತ್ರನು, (ಚಿತ್ರಸೇನನು) ಮೃತನಾಗಿ ಬಿದ್ದಿರುವುದನ್ನು ನೋಡು ವಿಚಿತ್ರಮಾಲೆಗಳನ್ನೂ, ಆಭರಣಗಳನ್ನೂ ಧರಿಸಿದ ಆ ಚಿತ್ರಸೇನನನ್ನು ನೋಡಿ ಗೋಳಿಡುತ್ತ, ಶೋಕಗ್ರಸ್ತರಾದ ಯುವತಿಯರು ಮಾಂಸಾಹಾರಿಗಳಾದ ಪ್ರಾಣಿಗಳೊಡನೆ ನಿಂತಿರುವರು ಸ್ತ್ರೀಯರ ರೋದನಧ್ವನಿ, ದುಷ್ಟಮೃಗಗಳ ಗರ್ಜನೆ, ಇವುಗಳನ್ನು ಕೇಳಿ ನನಗೆ ಬುದ್ಧಿಭ್ರಮವಾಗುವುದು ಯೌವನವಂತನೂ, ಯಾವಾಗಲೂ ಸ್ತ್ರೀಯರಿಂದ ಪರಿವೃತನೂ ಆಗಿದ್ದ ಈ ವಿವಿಂಶತಿಯು ಹತನಾಗಿ ನೆಲದಲ್ಲಿ ಹೊರಳಾಡುತ್ತಿರುವನು ಬಾಣಗಳಿಂದ ಹರಿದ ಕವಚಗಳುಳ್ಳ ಈ ವೀರನ ಮೈಯನ್ನು ಹದ್ದುಗಳು ಮುತ್ತಿಕೊಂಡಿರುವುವು ಕೃಷ್ಣಾ! ಈ ದೃಶ್ಯವನ್ನು ನೋಡಿದೆಯಾ! ಮಹಾವೀರನಾದ ಈ ವಿವಿಂಶತಿಯು ಧೈರ್ಯದಿಂದ ಪಾಂಡವರ ಸೈನ್ಯದಲ್ಲಿ ಪ್ರವೇಶಿಸಿ, ಕೊನೆಗೆ ಸತ್ಪುರುಷರಿಗೆ ಯೋಗ್ಯವಾದ ವೀರಶಯ್ಯೆಯಲ್ಲಿ ಮಲಗಿಬಿಟ್ಟನು. ಎಸಳಾದ ಮೂಗು! ಸುಂದರವಾದ ಹುಬ್ಬುಗಳು! ಚಂದ್ರ

ಸಮಾನವಾದ ಕಾಂತಿ! ಕಿರುನಗೆಯಿಂದ ಕೂಡಿದ ಆತನ ಮುಖವು ಎಷ್ಟು ಲಕ್ಷಣವಾಗಿರುವುದು? ನೂರಾರುಮಂದಿ ದೇವಕನ್ನಿಕೆಯರು ಗಂಧರ್ವರಾಜನನ್ನು ಉಪಾಸಿಸುವಂತೆ ಅನೇಕ ಉತ್ತಮಸ್ತ್ರೀಯರಿಂದ ಸದಾ ಪರಿವೃತನಾಗಿ, ಶತ್ರುನಾಶಕನೂ, ಯುದ್ಧವೀರನೂ ಎನಿಸಿದ ದುಸ್ಸಹನನ್ನು ಇದಿರಿಸಬಲ್ಲ ಶೂರನು ಯಾವನಿದ್ದನು? ಈ ದುಸ್ಸಹನ ಶರೀರವು ಈಗ ಬಾಣಗಳಿಂದ ನಾಟಲ್ಪಟ್ಟು, ಪುಷ್ಪಭರಿತವಾದ ಕರ್ಣಿಕಾರವೃಕ್ಷಗಳಿಂದ ತುಂಬಿದ ಬೆಟ್ಟದಂತೆ ಕಾಣುವುದು ಈ ದುಸ್ಸಹನು ಮೃತನಾಗಿದ್ದರೂ, ಸುವರ್ಣಾಭರಣಗಳಿಂದಲೂ, ಪ್ರಕಾಶಮಾನವಾದ ಕವಚಗಳಿಂದಲೂ ಕೂಡಿದ ಅವನ ದೇಹವು, ಅಗ್ನಿಯಿಂದ ಕೂಡಿದ ಶ್ವೇತಗಿರಿಯಂತೆ ಪ್ರಕಾಶಿಸುತ್ತಿರುವುದು

ಇದು ಹತ್ತೊಂಭತ್ತನೆಯ ಅಧ್ಯಾಯವು.

---

{ ಗಾಂಧಾರಿಯು ವಿಲಪಿಸುತ್ತಿರುವ ಸ್ತ್ರೀಯರನ್ನು ಕೃಷ್ಣನಿಗೆ ತೋರಿಸಿದುದು }

“ಕೇಶವಾ! ಯಾವಾತನನ್ನು ಬಲದಲ್ಲಿಯೂ, ಶೌರ್ಯದಲ್ಲಿಯೂ, ಅರ್ಜುನನಿಗಿಂತಲೂ, ನಿನಗಿಂತಲೂ ಅರ್ಧಪಾಲು ಮೇಲೆಂದೂ, ಮದಿಸಿದ ಸಿಂಹಕ್ಕೆ ಸಮಾನವಾದ ಶೌರ್ಯವುಳ್ಳವನೆಂದೂ ಹೇಳುತ್ತಿದ್ದರೋ, ಯಾವಾತನು ಒಬ್ಬಂಟಿಗನಾಗಿಯೇ ದುರ್ಭೇದ್ಯವಾದ ನನ್ನ ಪುತ್ರನ ಸೈನ್ಯವನ್ನು ಭೇದಿಸಿದನೋ, ಇತರರಿಗೆ ಮೃತ್ಯುಪ್ರಾಯನಾಗಿದ್ದ ಅಂತಹ ಅಭಿಮನ್ಯುವೇ ಮೃತ್ಯುವಶನಾದನಲ್ಲವೆ? ಕೃಷ್ಣಾ! ಅಸಮಾನತೇಜಸ್ವಿಯೂ, ಅರ್ಜುನಕುಮಾರನೂ ಆದ ಆ ಅಭಿಮನ್ಯುವು, ಮೃತನಾಗಿದ್ದರೂ, ಅವನ ತೇಜಸ್ಸು ಕಂದಿಲ್ಲ ನೋಡು! ಅರ್ಜುನನ ಸೊಸೆಯಾದ ಈ ವಿರಾಟಪುತ್ರಿಯು, ತನ್ನ ಪತಿಯ ಬಳಿಯಲ್ಲಿ ಕುಳಿತು ತನ್ನ ಕೈಯಿಂದ ಆತನನ್ನು ಸವರುತ್ತಿರುವಳು ನೋಡು! ಸದ್ಗುಣದಿಂದಲೂ, ರೂಪಸೌಂದರ್ಯಗಳಿಂದಲೂ ಒಪ್ಪುವ ಈ ಉತ್ತರೆಯು, ಅರಳಿದ ಕಮಲಕ್ಕೂ, ಶಂಖಕ್ಕೂ ಸಮಾನವಾದ ಕಂಠವುಳ್ಳ ಆ ಅಭಿಮನ್ಯುವಿನ ಮುಖವನ್ನು

ಆಗಾಗ ಆಘ್ರಾಣಿಸುತ್ತ ಬಾರಿಬಾರಿಗೂ ಅಪ್ಪಿಕೊಳ್ಳುವಳು. ಮೊದಲು ಮದ್ಯಮದದಿಂದ ವೈಮರೆತಿದ್ದಾಗಲೂ ಯಾವಳು ಇವನನ್ನು ನೋಡಲು ನಾಚುತಿದ್ದಳೋ, ಅವಳು ಈಗ ಎಲ್ಲರಮುಂದೆ ರಕ್ತದಿಗ್ಧವಾದ ಆ ಅಭಿಮನ್ಯುವಿನ ಸುವರ್ಣಕವಚವನ್ನು ಬಿಚ್ಚಿ ಆತನ ಶರೀರವನ್ನೇ ನೋಡುತ್ತಿರುವಳು ಕೃಷ್ಣಾ! ಅದೋ ನೋಡು! ಆಕೆಯು ಆತನನ್ನು ನೋಡಿಕೊಂಡೇ ನಿನ್ನನ್ನು ಕುರಿತು "ಓ ಪುಂಡರೀಕಾಕ್ಷಾ! ನಿನ್ನಂತೆ ಅಂದವಾದಕಣ್ಣುಳ್ಳವನೂ, ಬಲದಲ್ಲಿಯೂ, ವೀರ್ಯದಲ್ಲಿಯೂ ನಿನಗೆ ಸಮಾನನೂ ಆದ ಈ ವೀರನು ಶಸ್ತ್ರಹತನಾಗಿ ಭೂಮಿಯಲ್ಲಿ ಮಲಗಿರುವನಲ್ಲವೆ? ತೇಜಸ್ಸಿನಲ್ಲಿಯೂ, ರೂಪದಲ್ಲಿಯೂ ನಿನಗೆ ಸಮಾನನಾದ ಈ ವೀರನು ಹೇಗೆ ಬಿದ್ದಿರುವನು ನೋಡು!" ಎಂದು ಕೂಗಿ ಹೇಳುತ್ತಿರುವಳಲ್ಲಾ! ಅದೋ! ಅವಳು ತನ್ನ ಪತಿಯನ್ನು ಕುರಿತು 'ಮೃದುವಾದ ರತ್ನಕಂಬಳಿಗಳಮೇಲೂ, ಚರ್ಮದಮೇಲೆಯೂ ಮಲಗುತಿದ್ದ ನಿನ್ನ ಕೋಮಲಶರೀರಕ್ಕೆ ಈಗ ಈ ನೆಲದಮೇಲೆ ಮಲಗಿರುವುದರಿಂದ ಬಾಧೆಯಾಗುವುದಿಲ್ಲವೆ? ಆನೆಯ ಸುಂಡಿಲಿಗೆ ಸಮಾನವಾಗಿ, ಅಸ್ತ್ರಧಾರಣೆಯಿಂದ ಪಟ್ಟುಗಟ್ಟಿ ಕಠಿನವಾದ ಚರ್ಮವುಳ್ಳದಾಗಿ, ಸುವರ್ಣಮಯವಾದ ತೋಳ್ಬಳೆಗಳಿಂದ ಕೂಡಿದ ದೀರ್ಘಬಾಹುಗಳೆರಡನ್ನೂ ಬೀಸಿ, ಯುದ್ಧಶ್ರಮ ಪರಿಹಾರಕ್ಕಾಗಿ ನೀನು ವಿಶ್ರಮಿಸಿಕೊಂಡಿರುವೆಯೇನು? ಹೌದು! ಅದರಲ್ಲಿ ಸಂದೇಹವಿಲ್ಲ ಆದರೇನು? ದುಃಖದಿಂದ ವಿಲಪಿಸುತ್ತಿರುವ ನನ್ನನ್ನು ಒಂದಾವರ್ತಿ ನೋಡಿ ನೀನೇಕೆ ಮಾತನಾಡದಿರುವೆ? ನಿನ್ನ ವಿಷಯದಲ್ಲಿ ನಾನು ಯಾವ ಅಪರಾಧವನ್ನೂ ಮಾಡಿದಂತೆ ತೋರಲಿಲ್ಲವಲ್ಲಾ! ನನಗೆ ಪ್ರತ್ಯುತ್ತರಕೊಡದಿರುವೆಯೇಕೆ? ನಾಥಾ! ಹಿಂದೆ ನೀನು ನನ್ನನ್ನು ದೂರದಿಂದ ಕಂಡಾಗಲೇ ಪ್ರೀತಿಯಿಂದ ಸಲ್ಲಾಪಮಾಡುತ್ತಿದ್ದೆಯಲ್ಲವೆ? ನಾನು ನಿನ್ನಲ್ಲಿ ಯಾವ ಅಪರಾಧವನ್ನೂ ಮಾಡಿದವಳಲ್ಲ? ನನ್ನೊಡನೆ ಮಾತನಾಡದಿರುವೆಯೇಕೆ? ಪೂಜಾರ್ಹಳಾದ ಸುಭದ್ರೆಯನ್ನೂ, ದೇವಸಮಾನರಾದ ಈ ಪಿತೃಗಳನ್ನೂ, ದುಃಖಗ್ರಸ್ತಳಾದ ನನ್ನನ್ನೂ ಬಿಟ್ಟು ನೀನೆಲ್ಲಿಗೆ ಹೋಗುವೆ?" ಎಂದು ಗೋಳಿಡುತ್ತ, ರಕ್ತದಲ್ಲಿ ತೊಯ್ದು ಆತನ ದೇಹವನ್ನು ತನ್ನ ಕೈಗಳಿಂಧ ಮೇಲಕ್ಕೆತ್ತಿ, ತನ್ನ ಮಡಿಲಲ್ಲಿ ಆತನ ಮುಖವನ್ನಿ

ಟ್ಟುಕೊಂಡು, ಆತನು ಸಜೀವನಾಗಿರುವಂತೆ ಭಾವಿಸಿ ಆತನನ್ನು ಮಾತಾಡಿಸುತ್ತಿರುವಳು ನೋಡು! “ನಾಥಾ! ವಾಸುದೇವನಿಗೆ ಮೈದುನನೂ, ಅರ್ಜುನಪುತ್ರನೂ ಆದ ನೀನು ಯುದ್ಧಮಧ್ಯದಲ್ಲಿರುವಾಗ ಈ ಮಹಾರಥರು ನಿನ್ನನ್ನು ಹೇಗೆ ಕೊಂದರು? ಯಾರಿಂದ ನಾನು ಈ ವೈಧವ್ಯಕ್ಕೆ ಗುರಿಮಾಡಲ್ಪಟ್ಟೆನೋ, ಕ್ರೂರಕರ್ಮಿಗಳಾದ ಆ ಕೃಪ, ಕರ್ಣ, ಜಯದ್ರಥರ, ದ್ರೋಣನ ಮತ್ತು ದ್ರೋಣಪುತ್ರನ ಚರ್ಯೆಯನ್ನು ಸುಡಬೇಕಲ್ಲವೆ? ಬಾಲನೂ, ಅಸಹಾಯನೂ ಆದ ನಿನ್ನನ್ನು ತಮ್ಮ ನಡುವೆ ಸೇರಿಸಿಕೊಂಡು ಅನೇಕರು ಒಂದಾಗಿ ಸೇರಿ ಕೊಲ್ಲುವುದಕ್ಕೆ ರಥಿಕಶ್ರೇಷ್ಠರಾದ ಅವರಿಗೆ ಮನಸ್ಸು ಹೇಗೆ ಬಂದಿತು? ವೀರಾ! ಅನೇಕ ನಾಥರುಳ್ಳ ನೀನು, ಪಾಂಡವರೂ, ಪಾಂಚಾಲರೂ ನೋಡುತ್ತಿರುವಾಗಲೇ ಅನಾಥನಂತೆ ಹೇಗೆ ಮೃತನಾದೆ? ಯುದ್ಧದಲ್ಲಿ ಅನೇಕರಿಂದ ಕೊಲ್ಲಲ್ಪಟ್ಟ ನಿನ್ನನ್ನು ನೋಡಿ ವೀರನೂ, ಪುರುಷಶ್ರೇಷ್ಠನೂ, ಪಾಂಡುನಂದನನೂ ಆದ ನಿನ್ನ ಪಿತನು ಹೇಗೆ ಜೀವಿಸಿರಬಲ್ಲನು? ಓ ಕಮಲದಳಾಯತಾಕ್ಷಾ! ಈಗ ಪಾಂಡವರಿಗೆ ಜಯವುಂಟಾಗಿ, ರಾಜ್ಯವು ಕೈಸೇರಿದ್ದರೂ, ನೀನಿಲ್ಲದೆ ಅವರಿಗೆ ಹೇಗೆ ಸಂತೋಷವುಂಟಾಗುವುದು? ಧರ್ಮದಿಂದಲೂ, ಧೈರ್ಯದಿಂದಲೂ, ನೀನು ಅಸ್ತ್ರಬಲದಿಂದ ಸಾಧಿಸಿರುವ ಲೋಕಗಳಿಗೆ ಇದೋ ನಾನೂ ನಿನ್ನನ್ನು ಹಿಂಬಾಲಿಸಿ ಬರುವೆನು. ಅಲ್ಲಿ ನೀನು ನನ್ನನ್ನು ಇದಿರುಗೊಂಡು ಆದರಿಸಬೇಕು. ದುರ್ಭಾಗ್ಯಳಾದ ನಾನು, ಮೃತನಾದ ನಿನ್ನನ್ನು ನೋಡಿಯೂ ಇನ್ನೂ ಬದುಕಿರುವುದನ್ನು ನೋಡಿದರೆ, ಕಾಲವು ಪ್ರಾಪ್ತವಾಗದಪಕ್ಷದಲ್ಲಿ ಯಾವ ಪ್ರಾಣಿಯೂ ಸಾಯಲಾರದೆಂದು ತಿಳಿದುಬರುತ್ತಿರುವುದು ಪುರುಷಪುಂಗವಾ! ನೀನು ಪಿತೃಲೋಕವನ್ನು ಸೇರಿದಮೇಲೆ, ಅಲ್ಲಿ ನನ್ನಂತೆ ಬೇರೆ ಯಾವ ಸ್ತ್ರೀಯನ್ನು ಪ್ರೀತಿಸಿ, ಮುಗುಳುನಗೆಯಿಂದ ಕೂಡಿದ ವಾಕ್ಯಗಳಿಂದ ಕರೆಯುವೆ? ನೀನು ನಿನ್ನ ಮನೋಹರ ರೂಪದಿಂದಲೂ, ಕಿರುನಗೆಯೊಡಗೂಡಿದ ವಾಕ್ಯಗಳಿಂದಲೂ ಸ್ವರ್ಗದಲ್ಲಿ ಅಪ್ಸರಸ್ಸುಗಳ ಮನಸ್ಸನ್ನು ಕೂಡ ಕಲಗಿಸುವೆಯೆಂಬುದರಲ್ಲಿ ಸಂದೇಹವಿಲ್ಲ. ಓ ಸುಭದ್ರಾಪುತ್ರಾ! ಅನೇಕಪುಣ್ಯಗಳನ್ನು ಮಾಡಿದವರಿಗುಂಟಾಗುವ ಲೋಕಗಳನ್ನು ಸೇರಿ, ಅಲ್ಲಿ ಅಪ್ಸರಸ್ಸುಗಳೊಡನೆ ಕ್ರೀಡಿಸುತ್ತಿದ್ದರೂ, ನೀನು ತಕ್ಕ ಸಮಯಗಳಲ್ಲಿ ನನ್ನ

ಪ್ರಿಯಕಾರ್ಯಗಳನ್ನಾದರೂ ನೆನೆಸಿಕೊಳ್ಳುತ್ತಿರು. ಓ ವೀರಾ ! ಈ ಲೋಕದಲ್ಲಿ ನಿನ್ನೊಡನೆ ನನಗೆ ಆರುತಿಂಗಳಕಾಲಮಾತ್ರವೇ ಸುಖವಾಸವು ಏರ್ಪಟ್ಟಿತು. ಏಳನೆಯ ತಿಂಗಳಲ್ಲಿಯೇ ನೀನು ಮೃತನಾದೆ ' ಎಂದು ನಾನಾವಿಧವಾಗಿ ಗೋಳಿಡುತ್ತ, ದುಃಖದಿಂದ ವ್ಯರ್ಥಮನೋರಥಳಾಗಿ ಬಾಧೆಪಡುತ್ತಿರುವ ಈ ಉತ್ತರೆಯನ್ನು, ಮತ್ಸ್ಯಕುಲದ ಇತರ ಸ್ತ್ರೀಯರು ಆಕೆಯ ಪತಿಯಬಳಿಯಿಂದ ಬಲಾತ್ಕಾರದಿಂದ ಪ್ರತ್ಯೇಕಿಸುವರು ನೋಡು. ಮೃತನಾಗಿ ಬಿದ್ದಿರುವ ವಿರಾಟನನ್ನು ಕಂಡು ನಡುಗುತ್ತ ಅವರು ಪ್ರಲಪಿಸುವರು. ದ್ರೋಣನ ಅಸ್ತ್ರಗಳಿಂದ ಪೆಟ್ಟುತಿಂದು ರಕ್ತದಿಗ್ಧನಾಗಿ ಮಲಗಿರುವ ವಿರಾಟರಾಜನನ್ನು ಹದ್ದುಗಳೂ, ನರಿಗಳೂ, ಕಾಗೆಗಳೂ ಕಿತ್ತು ತಿನ್ನುವುವು ನೋಡು. ಹಾಗೆ ಕುಕ್ಕುತ್ತಿರುವ ಆ ಪಕ್ಷಿಗಳ ಬಾಧೆಯಿಂದ ಆ ವಿರಾಟನನ್ನು ಈ ಸ್ತ್ರೀಯರು ರಕ್ಷಿಸಲಾರದೆ ಹೋದರು ಬಿಸಿಲಿನಲ್ಲಿ ಬಾಡಿ ಆಯಾಸಪಡುತ್ತಿರುವ ಈ ಮಾತೆಯರ ಶ್ರಮದಿಂದ ಅವರ ಮುಖಲಕ್ಷಣದ ಗುರುತೇ ತಿಳಿಯದಂತೆ ಮಾರ್ಪಟ್ಟಿರುವುದು ಮಾಧವಾ ! ಉತ್ತರನನ್ನೂ, ಅಭಿಮನ್ಯುವನ್ನೂ, ಕಾಂಭೋಜದೇಶಾಧಿಪತಿಯಾದ ಸುದಕ್ಷಿಣನನ್ನೂ, ಅಭಿಮನ್ಯುವಿನಿಂದ ಹತನಾಗಿ ಯುದ್ಧಭೂಮಿಯ ಮಧ್ಯದಲ್ಲಿ ಮಲಗಿರುವ ಪ್ರಿಯದರ್ಶನವುಳ್ಳ ಲಕ್ಷ್ಮಣನನ್ನೂ ನೋಡಿದೆಯಾ ? ” ಎಂದಳು.

ಇದು ಇಪ್ಪತ್ತನೆಯ ಅಧ್ಯಾಯವು.

---

## { ಗಾಂಧಾರಿಯು ಕೃಷ್ಣನಿಗೆ ಕರ್ಣನನ್ನೂ, ಅವನ ಪತ್ನಿಯರನ್ನೂ ತೋರಿಸಿದುದು }

“ ಮಹಾಧನುರ್ಧಾರಿಯೂ, ಮಹಾತ್ಮನೂ ಆದ ಕರ್ಣನು ಯುದ್ಧದಲ್ಲಿ ಉರಿಯುತ್ತಿದ್ದ ಬೆಂಕಿಯು ಆರಿಹೋದಂತೆ, ಅರ್ಜುನನ ತೇಜಸ್ಸಿನಿಂದ ಹತತೇಜನಾಗಿ ಮಲಗಿರುವನು ನೋಡು. ಅನೇಕ ಅತಿರಥರನ್ನು ಕೊಂದು ಕೊನೆಗೆ ಹತನಾಗಿ ಬಿದ್ದಿರುವ ಸೂರ್ಯಪುತ್ರನಾದ ಈ ಕರ್ಣನ ದೇಹದೊಳಗೆಲ್ಲ ಅಲ್ಲಲ್ಲಿ ಒಣಗಿದ ರಕ್ತದ ಪರೆಗಳು ತುಂಬಿ

ರುವುವು. ದೀರ್ಘರೋಷವುಳ್ಳವನೂ, ಮಹಾಧನುರ್ಧಾರಿಯೂ, ಮಹಾರಥನೂ, ಶೂರನೂ ಆದ ಈ ಕರ್ಣನು ಯುದ್ಧದಲ್ಲಿ ಅರ್ಜುನನಿಂದ ಕೊಲ್ಲಲ್ಪಟ್ಟು, ಉರಿದು ನಂದಿದ ಬೆಂಕಿಯಂತೆ ಮಲಗಿರುವುದನ್ನು ನೋಡು. ಓ ಪುರುಷೋತ್ತಮಾ! ಆನೆಗಳು ಸಲಗನನ್ನು ಹೇಗೋ ಹಾಗೆ ಮಹಾರಥರಾದ ನನ್ನ ಮಕ್ಕಳು ಪಾಂಡವರ ಭಯದಿಂದ ಯಾವನನ್ನು ಮುಂದೆಬಿಟ್ಟುಕೊಂಡು ಯುದ್ಧಮಾಡಿದರೋ, ಸಿಂಹದಿಂದ ಹುಲಿಯೂ, ಮದದಾನೆಯಿಂದ ಮತ್ತೊಂದು ಆನೆಯೂ ಕೆಡಹಲ್ಪಡುವಂತೆ ಸವ್ಯಸಾಚಿಯಿಂದ ಕೆಡಹಲ್ಪಟ್ಟು ಸತ್ತುಬಿದ್ದಿರುವ ಈ ಕರ್ಣನನ್ನು ಆತನ ಸ್ತ್ರೀಯರು ಬಿಚ್ಚಿದ ತಲೆಯೊಡನೆ ಸುತ್ತಿ ನಿಂತಿರುವರು. ಯುಧಿಷ್ಠಿರನು ಯಾವನಿಗಾಗಿ ಸದಾ ಭಯಪಡುತ್ತ, ಅವನ ಬೆಜ್ಜರದಿಂದಲೇ ಹದಿಮೂರುವರ್ಷಕಾಲವೂ ನಿದ್ರಿಸದಿದ್ದನೋ, ಮಹೇಂದ್ರನಂತೆ ಶತ್ರುದುರ್ಜಯನೂ, ಅಗ್ನಿಯಂತೆ ತೇಜಸ್ವಿಯೂ, ಹಿಮಾಚಲದಂತೆ ನಿಶ್ಚಲನೂ ಆದ ಈ ಕರ್ಣನು, ಇದುವರೆಗೆ ದುರ್ಯೋಧನನಿಗೆ ಮುಖ್ಯರಕ್ಷಕನಾಗಿದ್ದು, (ಈಗ) ಗಾಳಿಯಿಂದ ಮುರಿದ ಮರದಂತೆ ಮೈಮುರಿದು ಮಲಗಿರುವನು ನೋಡು ವೃಷಸೇನನ ಮಾತೆಯಾದ ಈ ಕರ್ಣಪತ್ನಿಯು ಅವನ ಬಳಿಯಲ್ಲಿ ನೆಲದಮೇಲೆ ಬಿದ್ದು ಗೋಳಿಡುತ್ತ 'ನಿನ್ನ ಗುರುಶಾಪವೇ ನಿನ್ನನ್ನು ಕೊಂದಿತು! ನಿನ್ನ ರಥಚಕ್ರವನ್ನು ಭೂಮಿಯು ನುಂಗಿತು. ಅದರಿಂದಲೇ ಧನಂಜಯನ ಬಾಣದಿಂದ ನಿನ್ನ ತಲೆಯು ಭೇದಿಸಲ್ಪಟ್ಟಿತು' ಎಂದು ಅಡಿಗಡಿಗೆ ದೀನಸ್ವರದಿಂದ ಅಳುವುದನ್ನು ನೋಡು ಸುವರ್ಣವಸ್ತ್ರಗಳನ್ನುಟ್ಟು, ಗಂಭೀರವಾದ ಆಕೃತಿಯಿಂದ ಮಲಗಿರುವ ಮಹಾಬಾಹುಬಲವುಳ್ಳ ಕರ್ಣನನ್ನು ನೋಡಿನೋಡಿ, ಈ ಸುಷೇಣನ ತಾಯಿಯು ಅಧಿಕ ವ್ಯಸನದಿಂದ ಪೀಡಿತಳಾಗಿ ಭಯಪಡುತ್ತ ಪ್ರಜ್ಞಾಹೀನಳಾಗಿ ಕೆಳಗೆ ಬೀಳುವಳು. ಹಾ! ಹಾ! ಕಷ್ಟವು! ಎಲ್ಲಾ ಕಡೆಗಳಲ್ಲಿಯೂ ಮಾಂಸಾಹಾರಿ ಮೃಗಪಕ್ಷಿಗಳು ಕರ್ಣನ ದೇಹದ ಬಹುಭಾಗವನ್ನು ತಿಂದು, ಅಲ್ಪಾವಶೇಷವಾಗಿ ಬಿಟ್ಟಿರುವುವು. ಈತನು ಕೃಷ್ಣಪಕ್ಷದ ಚತುರ್ದಶೀಚಂದ್ರನಂತೆ ನೋಡುವುದಕ್ಕೆ ಅಸಹ್ಯನಾಗಿರುವನು. ಪುತ್ರವಧೆಯಿಂದ ವ್ಯಾಕುಲಗೊಂಡು ಭೂಮಿಯಲ್ಲಿ ಬಿದ್ದುಬಿದ್ದು ಏಳುತ್ತಿರುವ ಈ ಸುಷೇಣನ

ಮಾತೆಯು ಕರ್ಣನ ಮುಖವನ್ನು ಮೂಸಿನೋಡುತ್ತ ಅಧಿಕವಾಗಿ ರೋದಿಸುವಳು ನೋಡು!"

ಇದು ಇಪ್ಪತ್ತೊಂದನೆಯ ಅಧ್ಯಾಯವು

{ ಗಾಂಧಾರಿಯು ಮೃತರಾಗಿ ಬಿದ್ದಿರುವ ಬಾಹ್ಲಿಕನೇ ಮುಂತಾದವರನ್ನೂ, ಅವರ ಪತ್ನಿಯರನ್ನೂ ತೋರಿಸಿದುದು }

"ಕೃಷ್ಣಾ! ಭೀಮಸೇನನಿಂದ ಹತನಾಗಿ ಅನೇಕಬಂಧುಜನಗಳಿದ್ದರೂ ಅನಾಥನಂತೆ ಬಿದ್ದಿರುವ ಈ ಅವಂತಿದೇಶಾಧಿಪತಿಯನ್ನು ಹದ್ದುಗಳೂ, ನರಿಗಳೂ ಭಕ್ಷಿಸುತ್ತಿರುವುವು ನೋಡು. ಮಧುಸೂದನಾ! ಇವನು ಅನೇಕಶೂರರನ್ನು ಕೊಂದು ಕೊನೆಗೆ ಈ ವೀರಶಯನದಲ್ಲಿ ಮಲಗಿರುವನು. ರಕ್ತದಿಂದ ತೊಯ್ದ ಮೈಯುಳ್ಳ ಆ ಅವಂತಿದೇಶಾಧಿಪತಿಯನ್ನು ನೋಡಿದೆಯಾ? ಇವನ ಮೈಯನ್ನು ನರಿಗಳೂ, ಹದ್ದುಗಳೂ, ನಾನಾ ಬಗೆಯ ಮಾಂಸಾಹಾರಿಗಳೂ ಬೇರೆಬೇರೆ ಕಡೆಗಳಲ್ಲಿ ಎಳೆಯುತ್ತಿರುವುವು. ಕಾಲಮಹಿಮೆಯನ್ನು ನೋಡಿದೆಯಾ? ವೀರಶಯನದಲ್ಲಿ ಮಲಗಿರುವ ಈ ಅವಂತಿದೇಶಾಧಿಪತಿಯ ಸುತ್ತಲೂ ಅವನ ಸ್ತ್ರೀಯರು ನಿಂತಿರುವರು ನೋಡು ಕೃಷ್ಣಾ! ಪ್ರತೀಪಪುತ್ರನೂ, ಮಹಾಧನುರ್ಧಾರಿಯೂ ಆದ ಬಾಹ್ಲಿಕನು ಭೀಮನಿಂದ ಹತನಾಗಿ ಹುಲಿಯಂತೆ ಮಲಗಿರುವನು ನೋಡಿದೆಯಾ? ಈತನು ಮೃತನಾಗಿದ್ದರೂ ಈತನ ಮುಖವರ್ಣವು ಪೂರ್ಣಿಮೆಯ ಪೂರ್ಣಚಂದ್ರನಂತೆ ಪ್ರಕಾಶಿಸುವುದು. ಪುತ್ರಶೋಕದಿಂದ ತಾನು ಮಾಡಿದ ಪ್ರತಿಜ್ಞೆಯನ್ನು ಸಾಧಿಸುವುದಕ್ಕಾಗಿ ಇಂದ್ರಕುಮಾರನಾದ ಅರ್ಜುನನಿಂದ ಜಯದ್ರಥನು ಕೊಲ್ಲಲ್ಪಟ್ಟನು ಮಹಾಶೂರರಿಂದ ರಕ್ಷಿತವಾದ ಹನ್ನೊಂದಕ್ಷೌಹಿಣೀಸೈನ್ಯಗಳನ್ನೂ ಕೊಂದ ಅರ್ಜುನನು ತನ್ನ ಸತ್ಯಪರಿಪಾಲನೆಗಾಗಿ ಇವನನ್ನು ಒಂದೇದಿನದಲ್ಲಿ ಕೊಂದನು ಓ ಜನಾರ್ದನಾ! ಸಿಂಧು ಸೌವೀರ ದೇಶಗಳಿಗೆ ನಾಥನಾಗಿ ಮದದಿಂದ ಕೊಬ್ಬಿದ ಈ ಜಯದ್ರಥನನ್ನು ಈಗ ನರಿಗಳೂ, ಹದ್ದುಗಳೂ ಕಿತ್ತು ತಿನ್ನುವಂತಾಯಿತು. ಅಚ್ಯುತಾ! ಪ್ರಿಯಪತ್ನಿಯರಿಂದ ರಕ್ಷಿತನಾಗಿದ್ದರೂ, ಆ ಜಯದ್ರಥನ

ದೇಹವನ್ನು ಭಯಂಕರಗಳಾದ ನರಿಗಳು ಹಳ್ಳವಾದ ಕಾಡಿನ ಸಮೀಪಕ್ಕೆ ಎಳೆದುಕೊಂಡು ಹೋಗುತ್ತಿರುವುವು ನೋಡು. ಮಹಾಬಾಹುಬಲವುಳ್ಳ ಈ ಜಯದ್ರಥನನ್ನು ಸಿಂಧು, ಸೌವೀರ, ಕಾಂಭೋಜ, ಗಾಂಧಾರ, ಯವನರಾಷ್ಟ್ರಗಳ ಸ್ತ್ರೀಯರೆಲ್ಲ ಎಲ್ಲಾ ಕಡೆಗಳಲ್ಲಿಯೂ ಸುತ್ತಿ ನಿಂತಿರುವರು. ಹಿಂದೆ ಈ ಜಯದ್ರಥನು ದ್ರೌಪದಿಯನ್ನೆತ್ತಿಕೊಂಡು ಕೇಕಯರೊಡನೆ ಓಡಿಹೋಗುತಿದ್ದಾಗಲೇ ಇವನು ಪಾಂಡವರಿಂದ ಹತನಾಗಬೇಕಾಗಿದ್ದಿತು. ಆಗ ಪಾಂಡವರು ನಮ್ಮ ಮಗಳಾದ ದುಶ್ಶಲೆಯನ್ನು ನೋಡಿ, ಅವಳ ಪ್ರಿಯಕ್ಕಾಗಿ ಅವನನ್ನು ಜೀವದೊಂದಿಗೆ ಬಿಟ್ಟರು. ಕೃಷ್ಣಾ! ಅವರಿಗೆ ಈಗ ಆಕೆಯಲ್ಲಿ ಆ ಅಭಿಮಾನವಿಲ್ಲದೆಹೋದುದೇಕೆ? ನನ್ನ ಪುತ್ರಿಯು ತನ್ನ ಪತಿಯಾದ ಸೈಂಧವನಿಗಾಗಿ ದುಃಖಪಡುತ್ತ, ಗದ್ಗದಸ್ವರದಿಂದ ಪಾಂಡವರನ್ನು ನಿಂದಿಸುವಳು ನೋಡು. ಕೃಷ್ಣಾ! ನನ್ನ ಪುತ್ರಿಯೂ, ನನ್ನ ಸೊಸೆಯರೂ ಎಲ್ಲರೂ ವಿಧವೆಯರಾದರು. ನನಗೆ ಇದಕ್ಕಿಂತಲೂ ಅಧಿಕದುಃಖವು ಬೇರೇನಾಗಬೇಕು? ಹಾ! ಹಾ! ಪತಿಯ ಶಿರಸ್ಸನ್ನು ಕಾಣದೆ ಅಲ್ಲಲ್ಲಿ ಸುತ್ತಿ ಹುಡುಕುತ್ತ ಶೋಕಭಯಗಳನ್ನು ಬಿಟ್ಟಂತೆ ಮೈಮರೆತು ನಿಂತಿರುವ ದುಶ್ಶಲೆಯನ್ನು ನೋಡು. ಹಾ! ಕಷ್ಟವೇ! ಯಾವಾತನು ಪುತ್ರನ ರಕ್ಷಣೆಗಾಗಿ ಬಂದ ಎಲ್ಲಾ ಪಾಂಡವರನ್ನೂ ತಡೆದನೋ, ಆ ಜಯದ್ರಥನು ಅನೇಕ ಶತ್ರುಸೈನ್ಯಗಳನ್ನು ಕೊಂದು, ಕೊನೆಗೆ ತಾನೂ ಮೃತ್ಯುವಶನಾದನು. ಮದದಾನೆಗೆ ಸಮಾನನೂ, ವೀರನೂ, ಅಜೇಯನೂ ಆದ ಆತನನ್ನು ಸುತ್ತಿಮುತ್ತಿ ಚಂದ್ರಮುಖಿಯರಾದ ಅನೇಕಸ್ತ್ರೀಯರು ಅಳುತ್ತಿರುವರು ನೋಡು” ಎಂದಳು.

ಇದು ಇಪ್ಪತ್ತೆರಡನೆಯ ಅಧ್ಯಾಯವು.



{ ಗಾಂಧಾರಿಯು ಭೀಷ್ಮನೇ ಮೊದಲಾದವರ ಗುಣಗಳನ್ನು ವರ್ಣಿಸಿ, ಅವರ ಶರೀರಗಳನ್ನೂ, ಅವರ ಮುಂದೆ ಅಳುತ್ತಿರುವ ಭಾರತವಮಾತೆಯರನ್ನೂ ತೋರಿಸಿದುದು }

ಕೃಷ್ಣಾ! ಇದೋ! ನಕುಲಸಹದೇವರಿಗೆ ಮಾವನಾದ ಶಲ್ಯನು, ಯುದ್ಧದಲ್ಲಿ ಧರ್ಮಜ್ಞನಾದ ಧರ್ಮರಾಜನಿಂದಲೇ ಕೊಲ್ಲಲ್ಪಟ್ಟು ಮಲಗಿರುವನು. ಪುರುಷೋತ್ತಮಾ! ಎಲ್ಲಾ ವಿಷಯದಲ್ಲಿಯೂ ಯಾವಾಗಲೂ ನಿನ್ನೊಡನೆಯೇ ಹುರುಡಿಸುತಿದ್ದ ಮಹಾಬಲಶಾಲಿಯಾದ ಆ ಮದ್ರರಾಜನೂ ಈಗ ಕೊಲ್ಲಲ್ಪಟ್ಟು ಮಲಗಿರುವನು. ಕೇಶವಾ! ಜನರು ಜಯದ್ರಥನ ವಿಷಯದಲ್ಲಿಯಾದರೂ ದೋಷವನ್ನು ಆರೋಪಿಸಬಹುದು. ಮದ್ರರಾಜನಲ್ಲಿ ಯಾವ ದೋಷವುಂಟು? ಯುದ್ಧದಲ್ಲಿ ಕರ್ಣನ ರಥದಮೇಲೇರಿ ಅವನ ಕುದುರೆಗಳನ್ನು ನಡೆಸುತಿದ್ದಾಗಲೂ, ಇವನು ಪಾಂಡವರಿಗೆ ಜಯವು ಲಭಿಸಬೇಕೆಂದು ಕರ್ಣನಿಗೆ ತೇಜೋವಧವಮಾಡುತ್ತಿದ್ದನು ಹಾ! ಕಷ್ಟವು!' ಪೂರ್ಣಚಂದ್ರಕಾಂತಿಯಿಂದಲೂ, ಕಮಲದಳಗಳಂತಿರುವ ಕಣ್ಣುಗಳಿಂದಲೂ ಕೂಡಿದ ನಿರ್ದುಷ್ಟವಾದ ಈ ಶಲ್ಯನ ಮುಖವನ್ನು ಕಾಗೆಗಳು ಕೀಳುತ್ತಿರುವುವು ನೋಡು ಸುವರ್ಣಕಾಂತಿಯುಳ್ಳ ಈ ಶಲ್ಯನ ಬಾಯಿಂದ ಹೊರಕ್ಕೆ ನೀಡಿ, ಪುಟಹಾಕಿದ ಚಿನ್ನಕ್ಕೆ ಸಮಾನವಾದ ಅವನ ನಾಲಗೆಯು ಪಕ್ಷಿಗಳಿಂದ ಭಕ್ಷಿಸಲ್ಪಡುವುದನ್ನು ನೋಡು ಯುಧಿಷ್ಠಿರನಿಂದ ಕೊಲ್ಲಲ್ಪಟ್ಟ ಶಲ್ಯನನ್ನು ಸುತ್ತಿ ಅವನ ಕುಲಸ್ತ್ರೀಯರು ಅಳುತ್ತಾ ನಿಂತಿರುವರು. ಈ ಕ್ಷತ್ರಿಯ ಸ್ತ್ರೀಯರು ಸಣ್ಣ ದುಕೂಲಗಳನ್ನುಟ್ಟು, ಕೆಸರಿನಲ್ಲಿ ಸಿಕ್ಕಿಬಿದ್ದ ವೃಷಭದಸುತ್ತಲೂ ನಿಂತ ಹಸುಗಳಂತೆ ಶಲ್ಯನ ಸುತ್ತಲೂ ನಾಲ್ಕು ಕಡೆಗಳಲ್ಲಿಯೂ ಸುತ್ತಿ ನಿಂತಿರುವರು ನೋಡು? ಓ ವೃಷ್ಣಿನಂದನಾ! ಇವನು ದೀನರಕ್ಷಕನು. ಮಹಾಶೂರನು! ಅಂತವನು ಬಾಣಗಳಿಂದ ಭೇದಿಸಲ್ಪಟ್ಟು ವೀರಶಯನದಲ್ಲಿ ಮಲಗಿರುವುದನ್ನು ನೋಡು. ಪರ್ವತವಾಸಿಯೂ, ಪ್ರತಾಪಶಾಲಿಯೂ, ಅಂಕುಶಧಾರಿಯೂ ಆದ ಈ ಭಗದತ್ತರಾಜನು ರಣಭೂಮಿಯಲ್ಲಿ ಹತನಾಗಿ ಮಲಗಿರುವುದನ್ನು ನೋಡು. ದುಷ್ಟಮೃಗಗಳಿಂದ ಭಕ್ಷಿಸಲ್ಪಡುತ್ತಿರುವ ಇವನ ತಲೆಯಲ್ಲಿರುವ ಈ ಸುವರ್ಣಹಾರವು, ಅವನ ತಲೆಕೂದಲಿಗೆ ಅಂದವನ್ನುಂಟುಮಾಡು

ತ್ತಿರುವುದು. ಈ ಭಗದತ್ತನೊಡನೆ ಅರ್ಜುನನಿಗೆ ಇಂದ್ರವೃತ್ರರಿಗೆ ಹೇಗೋ ಹಾಗೆ, ರೋಮಾಂಚವನ್ನೆಬ್ಬಿಸುವಂತೆ ಅತಿಭಯಂಕರವಾದ ಘೋರ ಯುದ್ಧವು ಸಂಭವಿಸಿತಂತೆ! ದೀರ್ಘಬಾಹುಗಳುಳ್ಳ ಈ ಭಗದತ್ತನು ಅರ್ಜುನನೊಡನೆ ಯುದ್ಧಮಾಡುವಾಗ, ಅವನಿಗೆ ಪ್ರಾಣಸಂಶಯವುಂಟಾಗುವಂತೆ ಮಾಡಿ, ಕಡೆಗೆ ಆ ಅರ್ಜುನನಿಂದ ಹತನಾದನು ಇದೋ! ಇಲ್ಲಿ ಶೌರ್ಯದಲ್ಲಿಯೂ, ವೀರ್ಯದಲ್ಲಿಯೂ ಅಸಮಾನನಾಗಿ, ಮಹಾಭಯಂಕರಕಾರ್ಯಗಳನ್ನು ಮಾಡಿದ ಭೀಷ್ಮನು ಹತನಾಗಿ ಮಲಗಿರುವುದನ್ನು ನೋಡಿದೆಯಾ? ಈ ಶಂತನುಪುತ್ರನು ಪ್ರಳಯಕಾಲದಲ್ಲಿ ಕಾಲಮಹಿಮೆಯಿಂದ ಕೆಳಕ್ಕೆ ಬಿದ್ದ ಸೂರ್ಯನಂತೆ (ಯುದ್ಧಭೂಮಿಯಲ್ಲಿ) ಮಲಗಿರುವನು. ಈತನು ತನ್ನ ಅಸ್ತ್ರಗಳಿಂದ ಅನೇಕ ಶತ್ರುಗಳನ್ನು ಕೊಂದು, ಕೊನೆಗೆ ಸೂರ್ಯನಂತೆ ಅಸ್ತಂಗತನಾಗಿ ಈಗ ಶರತಲ್ಪದಲ್ಲಿ ಮಲಗಿರುವನು ಜಿತೇಂದ್ರಿಯನೂ, ದೃಢವ್ರತನೂ, ಆದ ಇವನು ಈಗ ವೀರಶಯ್ಯೆಯಲ್ಲಿ ಮಲಗಿರುವನು! ಕರ್ಣಿ, ನಾಳೀಕ, ನಾರಾಚಗಳೆಂಬ ವಿವಿಧಬಾಣಗಳಿಂದ ಮಾಡಿದ ಉತ್ತಮ ಶಯನದಲ್ಲಿರುವ ಇವನು ಶರವಣದಲ್ಲಿ ಮಲಗಿದ ಭಗವಂತನಾದ ಸ್ಕಂದನಂತೆ ಕಾಣುವುದನ್ನು ನೋಡು ಮಾಧವಾ! ತಂದೆಯ ಪ್ರಿಯಕ್ಕಾಗಿ ಊರ್ಧ್ವರೇತಸ್ಕನಾಗಿದ್ದು, ಮಹಾಕೀರ್ತಿಗೆ ಭಾಗಿಯಾದ ಈ ಗಂಗಾಪುತ್ರನು, ಹತ್ತಿಯಿಲ್ಲದೆ ಕೇವಲ ಬಾಣಗಳಿಂದಲೇ ಅರ್ಜುನನು ಮಾಡಿಕೊಟ್ಟ ತಲೆದಿಂಬನ್ನು ನೆಮ್ಮಿ ಮಲಗಿರುವನು ನೋಡು. ಧರ್ಮಾತ್ಮನೂ, ಜ್ಞಾನಿಯೂ ಆದ ಈತನು ಮರ್ತ್ಯನಾಗಿ ಹುಟ್ಟಿದ್ದರೂ ಮರಣವಿಲ್ಲದ ದೇವತೆಗಳಂತೆ ಸ್ವೇಚ್ಛಾಮರಣಿಯೆನಿಸಿ, ಇನ್ನೂ ಪ್ರಾಣವನ್ನುಳಿಸಿಕೊಂಡಿರುವನು. ಈ ಭೀಷ್ಮನನ್ನು ಯುದ್ಧದಲ್ಲಿ ಜಯಿಸುವಂತಹ ಪರಾಕ್ರಮಿಯೂ ಇಲ್ಲ. ಕುಶಲಿಯೂ ಇಲ್ಲ ಸಮರ್ಥನೂ ಬೇರೊಬ್ಬನಿಲ್ಲ ಶೂರನೂ, ಸತ್ಯವಾದಿಯೂ, ಧರ್ಮಜ್ಞನೂ ಆದೀತನು, ಪಾಂಡವರ ಪ್ರಾರ್ಥನೆಯಿಂದ ಯುದ್ಧದಲ್ಲಿ ತನ್ನ ಮರಣೋಪಾಯವನ್ನು ತಾನೇ ತಿಳಿಸಿದನು. ನಷ್ಟವಾಗಿದ್ದ ಕುರುವಂಶವು ಯಾವನಿಂದ ಪುನರುಜ್ಜೀವಿತವಾಯಿತೋ, ಮಹಾಬುದ್ಧಿಶಾಲಿಯಾದ ಆ ಭೀಷ್ಮನು ಕೌರವರೊಡನೆ ಈಗ ಪರಾಭವವನ್ನು ಹೊಂದಿದನಲ್ಲಾ! ದೇವವ್ರತನೆಂಬ

ಕೀರ್ತಿಯುಳ್ಳವನೂ, ದೇವಸಮಾನನೂ, ಪುರುಷೋತ್ತಮನೂ ಆದ ಈ ಭೀಷ್ಮನು ಮೃತನಾದಮೇಲೆ, ಕೌರವರು ಇನ್ನು ಯಾವ ಧರ್ಮದಿಂದ (ಉತ್ತಮಫಲವನ್ನು) ಕಾಣುವರು? ಅದೋ! ಅಲ್ಲಿ ಅರ್ಜುನನಿಗೂ, ಸಾತ್ಯಕಿಗೂ, ಕೌರವರಿಗೂ ಗುರುವಾದ ದ್ರೋಣನು ಮೃತನಾಗಿ ಬಿದ್ದಿರುವುದನ್ನು ನೋಡಿದೆಯಾ? ಮಾಧವಾ! ದೇವೇಂದ್ರನಂತೆಯೂ, ಶುಕ್ರಾಚಾರ್ಯನಂತೆಯೂ ಮಹಾವೀರ್ಯವುಳ್ಳ ದ್ರೋಣನು, ನಾಲ್ಕು ಬಗೆಯ ಅಸ್ತ್ರಗಳನ್ನೂ ಅರಿತವನು. ಯಾವನ ಕೃಪೆಯಿಂದ ಭೀಮನು ಅಮಾನುಷಕಾರ್ಯಗಳನ್ನು ಮಾಡಿದನೋ, ಆತನು ಈಗ ಮೃತನಾಗಿ ಮಲಗಿರುವನು ಈತನನ್ನು ಅವನ ಅಸ್ತ್ರಗಳೂ ಕಾಪಾಡಲಿಲ್ಲ. ಕೌರವರು ಯಾರ ಬಲದಿಂದ ಪಾಂಡವರನ್ನು ಯುದ್ಧಕ್ಕೆ ಕರೆದರೋ, ಅಸ್ತ್ರವಿದ್ಯಾನಿಪುಣನಾದ ದ್ರೋಣನು ಈಗ ತಾನೇ ಶಸ್ತ್ರಗಳಿಂದ ಭೇದಿಸಲ್ಪಟ್ಟು ಮಲಗಿರುವನು ಯಾವನು ಉರಿಯುವ ಬೆಂಕಿಯಂತೆ ಶತ್ರುಸೈನ್ಯವನ್ನು ದಹಿಸುತಿದ್ದನೋ, ಆತನು ಈಗ ಉರಿಯಾರಿದ ಬೆಂಕಿಯಂತೆ ಮೃತನಾಗಿ ನೆಲದಮೇಲೆ ಮಲಗಿರುವನು. ಮಾಧವಾ! ಇವನು ಸತ್ತಿದ್ದರೂ ಈಗಲೂ ಜೀವಂತನಾಗಿರುವಂತೆ ಕೈಯಲ್ಲಿ ಬಿಲ್ಲನ್ನು ಹಿಡಿದಿರುವನು ನೋಡು ಇವನ ಕೈಚೀಲವನ್ನು ನೋಡು ಕೇಶವಾ! ಆದಿಕಾಲದಲ್ಲಿ ಚತುರ್ಮುಖ ಬ್ರಹ್ಮನಿಂದ ಚತುರ್ವೇದಗಳು ಹೇಗೋಹಾಗೆ ಯಾವ ಶೂರನಿಂದ ಎಲ್ಲಾ ವೇದಗಳೂ, ಅಸ್ತ್ರಗಳೂ ಅಗಲದಿದ್ದುವೋ, ಅವನು ಈಗ ಶಸ್ತ್ರತ್ಯಾಗಮಾಡಿ ಸತ್ತು ಮಲಗಿರುವನು. ಚಂದನಾನುಲೇಪನಯೋಗ್ಯವಾಗಿ, ವಂದಿಗಳಿಂದ ನಮಸ್ಕರಿಸಲ್ಪಡುತ್ತ, ನೂರಾರು ಶಿಷ್ಯರಿಂದ ಅರ್ಚಿಸಲ್ಪಡುತ್ತಿದ್ದ ಈ ಆಚಾರ್ಯನ ಪಾದಗಳೆರಡನ್ನೂ ಈಗ ನರಿಗಳು ಎಳೆದಾಡುತ್ತಿರುವುವು ನೋಡು. ದ್ರುಪದಪುತ್ರನಿಂದ ಕೊಲ್ಲಲ್ಪಟ್ಟು ಮಲಗಿರುವ ಈತನ ಪಕ್ಕದಲ್ಲಿ ಕೃಪಿಯು ದುಃಖದಿಂದ ಪ್ರಜ್ಞಾಹೀನಳಾಗಿ ಕುಳಿತಿರುವಳು. ಆಕೆಯು ದುಃಖದಿಂದ ರೋದಿಸುತ್ತ ತಲೆಕೂದಲುಗಳನ್ನು ಬಿಚ್ಚಿಕೊಂಡು ತಲೆಬಗ್ಗಿಸಿ ಕುಳಿತಿರುವುದನ್ನು ನೋಡು ಧೃಷ್ಟದ್ಯುಮ್ನನ ಬಾಣಗಳಿಂದ ಹರಿದ ಕವಚವುಳ್ಳ ಆ ದ್ರೋಣನನ್ನು, ಜಟಾಧಾರಿಣಿಯೂ, ಬ್ರಹ್ಮಚಾರಿಣಿಯೂ ಆದ ಕೃಪಿಯು ಈಗಲೂ ಯುದ್ಧಭೂಮಿಯಲ್ಲಿ ದೈನ್ಯದಿಂದ

ಉಪಾಸಿಸುತ್ತಿರುವಳು. ಸುವರ್ಣವರ್ಣವುಳ್ಳವಳೂ, ಕೀರ್ತಿಮತಿಯೂ ಆದ ಕೃಪಿಯು, ಮನೋವ್ಯಾಕುಲದಿಂದ ತನ್ನ ಭೃತ್ಯನ ಪ್ರೇತಕೃತ್ಯದಲ್ಲಿ ಆತುರಗೊಂಡು, ಅದಕ್ಕಾಗಿ ಯತ್ನಿಸುತ್ತಿರುವುದನ್ನು ನೋಡು! ಸಾಮಕರು ವಿಧ್ಯುಕ್ತರೀತಿಯಲ್ಲಿ ಅಗ್ನಿಯನ್ನು ಹತ್ತಿಸಿ, ನಾಲ್ಕು ಕಡೆಗಳಲ್ಲಿಯೂ ಚಿತೆಯನ್ನುರಿಸಿ, ದ್ರೋಣನನ್ನು ಅದರಲ್ಲಿಟ್ಟು ಮೂರುಬಗೆಯ ಸಾಮಗಳನ್ನೂ ಗಾನಮಾಡುತ್ತಿರುವರು ನೋಡು! ಜಟಾಧಾರಿಗಳಾದ ಕೆಲವು ಬ್ರಹ್ಮಚಾರಿಗಳು ಚಿತೆಯನ್ನು ಏರ್ಪಡಿಸಿಟ್ಟು, ಬಿಲ್ಲು, ಬಾಣ, ರಥ, ವಿವಿಧ ಶಸ್ತ್ರಾಸ್ತ್ರಗಳೊಡನೆ ಅಧಿಕತೇಜಸ್ವಿಯಾದ ಆ ದ್ರೋಣನನ್ನು ಉರಿಸುವರು. ಬ್ರಹ್ಮಚಾರಿಗಳು ದ್ರೋಣನನ್ನೆತ್ತಿಕೊಂಡು, ಸಾಮಗಾನಮಾಡುತ್ತಲೂ, ರೋದಿಸುತ್ತಲೂ ಹೋಗುವರು ಇತರರು ಅಂತಸ್ಥಗಳೆಂಬ ಮೂರು ಸಾಮಗಳಿಂದ ಸ್ತುತಿಸುವರು ದ್ರೋಣನ ಶಿಷ್ಯರಾದ ಬ್ರಾಹ್ಮಣರು ಅಗ್ನಿಯಲ್ಲಿ ಅಗ್ನಿಯನ್ನು ಸೇರಿಸಿ, ದ್ರೋಣನನ್ನು ಅಗ್ನಿಯಲ್ಲಿ ಹೋಮಮಾಡಿ ಚಿತೆಯನ್ನು ಅಪ್ರದಕ್ಷಿಣವಾಗಿ ಸುತ್ತಿಬರುತ್ತ, ಕೃಪಿಯನ್ನು ಮುಂದೆಬಿಟ್ಟುಕೊಂಡು ಗಂಗಾನದಿಗೆ ಹೊರಡುತ್ತಿರುವರು ನೋಡು"

ಇದು ಇಪ್ಪತ್ತು ಮೂರನೆಯ ಅಧ್ಯಾಯವು.

---

{ ಗಾಂಧಾರಿಯು ಭೂರಿಶ್ರವಸ್ಸು ಮೊದಲಾದವರನ್ನೂ, ಅವರ ಪತ್ನಿಯರನ್ನೂ ಕೃಷ್ಣನಿಗೆ ತೋರಿಸಿದುದು }

ಕೃಷ್ಣಾ! ಸಾತ್ಯಕಿಯಿಂದ ಹತನಾಗಿ ಬಿದ್ದು, ನಾನಾಜಾತಿಯ ಪಕ್ಷಿಗಳಿಂದ ಕುಕ್ಕಲ್ಪಡುತ್ತ ನೆಲದಲ್ಲಿ ಮಲಗಿರುವ ಈ ಸೋಮದತ್ತಕುಮಾರನನ್ನು ನೋಡಿದೆಯಾ? ಪುತ್ರಶೋಕದಿಂದ ತಪಿಸುತ್ತ ಸೋಮದತ್ತನು ಈಗಲೂ ಮಹಾಧನುರ್ಧಾರಿಯಾದ ಆ ಯುಯುಧಾನನನ್ನು ನಿಂದಿಸುವಂತೆ ಕಾಣಿಸುವನು ನೋಡು ಈ ಭೂರಿಶ್ರವಸ್ಸಿನ ತಾಯಿಯು ಶೋಕದಿಂದ ತಪಿಸುತ್ತ ಪತಿಯಾದ ಸೋಮದತ್ತನನ್ನು ಸಮಾಧಾನಪಡಿಸುವ ರೀತಿಯನ್ನು ನೋಡು. "ಪ್ರಿಯಾ! ಭಯಂಕರವೂ, ಭರತಕುಲವಿನಾಶಕವೂ ಆದ ಈ ಕೌರವಯುದ್ಧವೆಂಬ ಪ್ರಳಯವನ್ನು ನೀನು ಕಣ್ಣಾರೆ

ನೋಡದಂತಾದುದು ನಿನ್ನ ಭಾಗ್ಯವು. ಯೂಪಧ್ವಜವುಳ್ಳವನೂ, ವೀರನೂ, ನೂರಾರು ದಕ್ಷಿಣೆಗಳನ್ನು ಕೊಟ್ಟು ಯಾಗಮಾಡುತಿದ್ದವನೂ, ಅನೇಕ ಯಾಗಗಳಿಂದ ದೇವತೆಗಳನ್ನು ಪೂಜಿಸಿದವನೂ ಆದ ನಿನ್ನ ಪುತ್ರನು ಸತ್ತುಬಿದ್ದಿರುವುದನ್ನು ನೋಡದಿದ್ದುದು ನಿನ್ನ ಭಾಗ್ಯವು ಸಮುದ್ರದಲ್ಲಿ ಸಾರಸಪಕ್ಷಿಗಳ ಶಬ್ದದಂತೆ ಯುದ್ಧದಲ್ಲಿ ಸೊಸೆಯರ ಘೋರವಾದ ಹಲವು ಬಗೆಯ ದುಃಖಗಳನ್ನು ಭಾಗ್ಯವಶದಿಂದ ನೀನು ಕೇಳದಿರುವೆ. ಪುತ್ರರೂ ಪತಿಗಳೂ ಕೊಲ್ಲಲ್ಪಟ್ಟ ನಮ್ಮ ಈ ಐದು ರಾಷ್ಟ್ರದ ಸ್ತ್ರೀಯರೂ, ಏಕ ವಸ್ತ್ರಧಾರಿಣಿಗಳಾಗಿ. ಕಪ್ಪಾದ ತಮ್ಮ ತಲೆಕೂದಲುಗಳನ್ನು ಬಿಚ್ಚಿ ಕೊಂಡು, ಎಲ್ಲಾ ಕಡೆಗಳಲ್ಲಿಯೂ ಓಡುತ್ತಿರುವರಲ್ಲಾ ! ಹಾ! ಈ ಪುರುಷ ಶ್ರೇಷ್ಠನು, ಅರ್ಜುನನಿಂದ ಕೈಗಳು ತುಂಡಾಗಿ ಬೀಳಲು, ದುಷ್ಟಮೃಗಗ ಳಿಂದ ಭಕ್ಷಿಸಲ್ಪಡುತ್ತ ನೆಲದಲ್ಲಿ ಬಿದ್ದಿರುವುದನ್ನು ನೋಡದಿರುವೆಯಲ್ಲಾ ? ಯುದ್ಧದಲ್ಲಿ ಹತನಾದ ಈ ಶಲನನ್ನೂ, ಈ ಭೂರಿಶ್ರವಸ್ಸನ್ನೂ, ಬೇರೆಬೇರೆ ಪೌತ್ರರನ್ನೂ ನಿನ್ನ ಭಾಗ್ಯವಶದಿಂದ ನೋಡದಿರುವೆ ಯೂಪಧ್ವಜವುಳ್ಳ ವನೂ ಮಹಾತ್ಮನೂ ಆದ ಸೋಮದತ್ತನಾದ (ನಿನ್ನ) ಕುಮಾರನ ರಥದಿಂದ ಮುರಿದುಬಿದ್ದ ಛತ್ರವನ್ನು ನಿನ್ನ ಭಾಗ್ಯವಶದಿಂದ ನೀನು ಕಾಣ ದಿರುವೆ'

ಈ ಭೂರಿಶ್ರವಸ್ಸಿನ ಪತ್ನಿಯರು ಸಾತ್ಯಕಿಯಿಂದ ಕೊಲ್ಲಲ್ಪಟ್ಟ ಪತಿಯನ್ನು ಸುತ್ತಿ ನಿಂತು ವ್ಯಸನಪಡುತ್ತಿರುವರು ನೋಡು. ಕೇಶವಾ ! ಈ ಸ್ತ್ರೀಯರು ದೀನವಾಗಿ ಪ್ರಲಪಿಸುತ್ತ ಕೆಳಗೆ ಬೀಳುತ್ತಿರುವುದನ್ನು ನೋಡಿದರೆ ನಮಗೆ ಪರಿತಾಪವಾಗದಿರದು ಹಾ ! ಕಷ್ಟವೆ ! ಮಾಧವಾ! ಇವನು ಎಚ್ಚರತಪ್ಪಿದ್ದಾಗ ಶೂರನೂ, ಯಾಗಶೀಲನೂ ಆದ ಈತನ ಕೈಗಳನ್ನು ಭೀಭತ್ಸುವು ಕತ್ತರಿಸಿದನಲ್ಲವೆ ? ಅಯ್ಯೋ! ಅತ್ಯಂತ ಹೀನ ವಾದ ಈ ಕಾರ್ಯವನ್ನು ಅರ್ಜುನನು ಹೇಗೆ ಮಾಡಿದನು ? ಸಾತ್ಯಕಿಯು ಅದಕ್ಕಿಂತಲೂ ಅಧಿಕ ಪಾಪಕಾರ್ಯವನ್ನು ಮಾಡಿರುವನು. ಅವನು ಭೂರಿಶ್ರವಸ್ಸನ್ನು ಕೊಂದುದು ಎಂತಹ ಪಾಪವೋ ನೋಡು. ಕ್ಷತ್ರಿಯ ಧರ್ಮದಲ್ಲಿದ್ದ ಈತನು ಏಕಾಕಿಯಾಗಿದ್ದಾಗ ಇಬ್ಬರು ಸೇರಿ ಅವನನ್ನು

ಕೊಂದರು ಪುಣ್ಯನಾಶಕ್ಕೂ, ಅಪಯಶಸ್ಸಿಗೂ ಕಾರಣವಾದ ಇಂತಹ ಅಕಾರ್ಯವನ್ನು ಮಾಡಿದ ಸಾತ್ಯಕಿಯು, ಸಜ್ಜನಗೋಷ್ಠಿಗಳಲ್ಲಿಯೂ, ಸಭೆಗಳಲ್ಲಿಯೂ ಅದನ್ನು ಹೇಗೆಂದು ಹೇಳಿಕೊಳ್ಳುವನು?" ಎಂದು ಈತನ ಪತ್ನಿಯು ಪ್ರಲಪಿಸುತ್ತಿರುವುದನ್ನು ನೋಡು! ಈಕೆಯು ಪತಿಯ ಕೈಗಳನ್ನು ತನ್ನ ಮಡಿಲಲ್ಲಿಟ್ಟುಕೊಂಡು, ದೀನವಾಕ್ಯಗಳಿಂದ 'ಅಯ್ಯೋ! ಈ ಕೈಯು ಅನೇಕ ಶೂರರನ್ನು ಕೊಂದಿತು ಮಿತ್ರರಿಗೆ ಅಭಯವನ್ನು ಕೊಟ್ಟಿತು ಸಾವಿರ ಹಸುಗಳನ್ನು ದಾನಮಾಡಿತು ಕ್ಷತ್ರಿಯರಿಗೆ ನಾಶ ವನ್ನುಂಟುಮಾಡಿತು. ಅಂತಹ ಈ ಬಾಹುವು ತುಂಡಾಗಿ ಬಿದ್ದಿದೆಯಲ್ಲ? ಅಯ್ಯೋ! ಇವು ನನ್ನ ಒಡ್ಯಾಣವನ್ನು ಸಡಿಲಿಸಿದ ಸುಂದರ ಹಸ್ತವು! ನನ್ನ ಉಬ್ಬಿದ ಸ್ತನಗಳನ್ನು ಮರ್ದಿಸಿದ ಕೈ! ನನ್ನ ನಾಭಿ, ತೊಡೆ, ಜಘ ನಾದ್ಯಂಗಗಳನ್ನು ಸವರಿದ ಕೈ! ನನ್ನ ನಡುಗಂಟನ್ನು ಸಡಿಲಿಸಿದ ಸುಂದ ರವಾದ ಕೈ! ಅಂತಹ ಕೈಯನ್ನು ಅರ್ಜುನನು ಶ್ರೀಕೃಷ್ಣನ ಸಮಕ್ಷಮ ದಲ್ಲಿಯೇ ನನ್ನ ಪತಿಯು ಅಜಾಗ್ರತೆಯಿಂದಿದ್ದ ಸಮಯದಲ್ಲಿ ಕತ್ತರಿಸಿ ಕೆಡಹಿದನಲ್ಲಾ! ಏನನ್ಯಾಯವಿದು? ಓ ಜನಾರ್ದನಾ! ನೀನು ಅರ್ಜು ನನ ಈ ಮಹಾಕಾರ್ಯವನ್ನು ಸಭೆಗಳಲ್ಲಿಯೂ, ಇತಿಹಾಸಗಳಲ್ಲಿಯೂ ಹೇಗೆ ಹೇಳುವೆ? ಅರ್ಜುನನಾದರೂ ಇದನ್ನು ಹೇಗೆ ಹೇಳಿಕೊಳ್ಳುವನು?' ಎಂದು ನಿಂದಿಸುತ್ತ ಸುಮ್ಮನಾದಳು ನೋಡು ಇವಳ ಸವತಿಯರೂ ಕೂಡ ಆ ಸ್ಥಿತಿಯಲ್ಲಿ ತಮ್ಮತಮ್ಮ ಸೊಸೆಯರನ್ನು ಕಂಡರೆ ಹೇಗೋ ಹಾಗೆ ಇವಳನ್ನು ನೋಡಿ ದುಃಖಿಸುತ್ತಿರುವರು ಬಲಶಾಲಿಯೂ, ಮಹಾಪರಾ ಕ್ರಮಿಯೂ, ಮಾವನೂ, ಗಾಂಧಾರರಾಜನೂ, ಆದ ಶಕುನಿಯು ಸಹ ದೇವನಿಂದ ಕೊಲ್ಲಲ್ಪಟ್ಟಿರುವುದನ್ನು ನೋಡು! ಯಾವನನ್ನು ಹಿಂದೆ ಸುವರ್ಣದ ಹಿಡಿಗಳುಳ್ಳ ಬೀಸಣಿಗೆಗಳಿಂದ ಬೀಸುತ್ತಿದ್ದರೋ, ಆತನು ಈಗ ರಣಭೂಮಿಯಲ್ಲಿ ಮಲಗಿ, ಪಕ್ಷಿಗಳ ರೆಕ್ಕೆಗಳಿಂದ ಬೀಸಲ್ಪಡುತ್ತಿರು ವನು. ಯಾವನು ನೂರುಸಾವಿರ ಲೆಕ್ಕದ ಮಾಯೆಗಳನ್ನು ತೋರ್ಪಡಿಸ ಬಲ್ಲನೋ, ಆ ಮಾಯಾವಿಯ ಮಾಯೆಗಳೆಲ್ಲ ಈಗ ಪಾಂಡವ ತೇಜಸ್ಸಿ ನಿಂದ ದಹಿಸಿಹೋದುವು. ಯಾವಾತನು ದ್ಯೂತದಲ್ಲಿ ವಂಚನೆಯಿಂದ ಯುಧಿಷ್ಠಿರನನ್ನು ಜಯಿಸಿ, ದೊಡ್ಡ ರಾಜ್ಯವನ್ನು ವಶಪಡಿಸಿಕೊಟ್ಟನೋ

ಆತನು ಹೇಗೆ ಪ್ರಾಣವನ್ನು ಬಿಟ್ಟನು ನೋಡಿದೆಯಾ? ಕೃಷ್ಣಾ! ನನ್ನ ಪುತ್ರರ ನಾಶಕ್ಕಾಗಿಯೇ ಈ ಕಪಟವಿದ್ಯೆಯನ್ನು ಕಲಿತ ಜೂಜುಗಾರನಾದ ಈ ಶಕುನಿಯನ್ನು, ಈಗ ಎಲ್ಲಾ ಕಡೆಗಳಲ್ಲಿಯೂ ಮಾಂಸಾರಿಪಕ್ಷಿಗಳು ಹೇಗೆ ಆವರಿಸಿರುವುವು ನೋಡು ನನ್ನ ಪುತ್ರರ, ಮತ್ತು ಪರಿವಾರ ಸಮೇತನಾದ ತನ್ನ ನಾಶಕ್ಕಾಗಿಯೇ ಈತನಿಂದ ಪಾಂಡವರೊಡನೆ ಅಂತಹ ಮಹಾದ್ವೇಷವು ಏರ್ಪಟ್ಟಿತೆಂದು ತಿಳಿ. ಪ್ರಭೂ! ನನ್ನ ಪುತ್ರನು ತನ್ನ ಶಸ್ತ್ರಗಳಿಂದ ಉತ್ತಮಲೋಕಗಳನ್ನು ಜಯಿಸಿದಂತೆಯೇ, ದುರ್ಬುದ್ಧಿಯುಳ್ಳ ಈತನೂ ಕೊನೆಗೆ ಶಸ್ತ್ರಗಳಿಂದ ಉತ್ತಮಲೋಕಗಳನ್ನೇ ಸಾಧಿಸಿದನು ಮಧುಸೂದನಾ! ವಕ್ರಬುದ್ಧಿಯುಳ್ಳ ಈ ಶಕುನಿಯೇ ಸದ್ಬುದ್ಧಿಯುಳ್ಳ ನನ್ನ ಪುತ್ರರಿಗೆ ತಮ್ಮ ಸಹೋದರರೊಡನೆ ದ್ವೇಷವು ಹುಟ್ಟುವಂತೆ ಮಾಡಿರುವನು!"

ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು



ಗಾಂಧಾರಿಯು ಕೌರವಪಾಂಡವರ ನಾಶಕ್ಕೆ ಕೃಷ್ಣನ ಉಪೇಕ್ಷೆಯೇ ಕಾರಣವೆಂದು ತಿಳಿಸಿ, ಆತನ ಬಂಧುಬಳಗದವರೆಲ್ಲರಿಗೂ ನಾಶವಾಗುವಂತೆ ಶಪಿಸಿದುದು.

"ಮಾಧವಾ! ಅಜೇಯನೂ, ಕಾಂಭೋಜದೇಶದ ದಿವ್ಯಶಯ್ಯೆಗಳಲ್ಲಿ ಶಯನಿಸುತಿದ್ದವನೂ, ವೃಷಭದಂತೆ ಹೆಗಲುಳ್ಳವನೂ ಆದ ಈ ಕಾಂಭೋಜನು ಇಲ್ಲಿ ಸತ್ತು ಮಲಗಿರುವುದನ್ನು ನೋಡು ರಕ್ತಮಿಶ್ರಿತವಾದ ದಿವ್ಯಗಂಧಗಳನ್ನು ಧರಿಸಿದ ಈತನ ಬಾಹುಗಳನ್ನು, ಅನಾಥೆಯಾದ ಆತನ ಪತ್ನಿಯು ನೋಡಿ ದುಃಖದಿಂದ ನಡುಗುತ್ತ 'ಹಾ! ಕಾಂತಾ! ಹಿಂದೆ ಯಾವ ಎರಡು ಬಾಹುಗಳ ನಡುವೆ ಸೇರಿದ ನನಗೆ ಎಷ್ಟಾದರೂ ತೃಪ್ತಿಯಿರುತ್ತಿರಲಿಲ್ಲವೋ, ಪರಿಘಸಮಾನವಾದ ಆ ಬಾಹುಗಳಲ್ಲವೇ ಇವು? ಪತಿಹೀನಳಾದ ನನಗೆ ಇನ್ನೇನು ಗತಿ?' ಎಂದು ವಿಲಪಿಸುವಳು ನೋಡು. ಬಿಸಿಲಿನಲ್ಲಿ ಬಿಸುಟ ಪುಷ್ಪಮಾಲಿಕೆಯಂತೆ ಈ ಸ್ತ್ರೀಯರು ದುಃಖದಿಂದ ಬಾಡಿದ್ದರೂ ಅವರ ಕಾಂತಿಯು ಕುಂದಲಿಲ್ಲ. ಮಧುಸೂದನಾ!

ಆತನ ಪಕ್ಕದಲ್ಲಿ ಶೂರನೂ, ಜ್ವಲಿಸುವ ತೋಳ್ಬಳೆಗಳನ್ನು ಧರಿಸಿದವನೂ, ಧನುರ್ಧಾರಿಗಳಲ್ಲಿ ಶ್ರೇಷ್ಠನೂ ಆದ ಕಳಿಂಗದೇಶಾಧಿಪತಿಯು ಮಲಗಿರುವನು ನೋಡು ಜನಾರ್ದನಾ! ಮಗಧದೇಶಾಧಿಪತಿಯನ್ನು ಸುತ್ತಿ ಕುಳಿತು ಆ ದೇಶದ ಸ್ತ್ರೀಯರು ವಿಲಪಿಸುತ್ತಿರುವುದನ್ನು ನೋಡಿದೆಯಾ? ಮೃಗಾಕ್ಷಿಯರಾದ ಅವರ ರೋದನಧ್ವನಿಯು ನನ್ನ ಮನಸ್ಸನ್ನೂ, ಕಿವಿಗಳನ್ನೂ ಮೋಹಗೊಳಿಸುತ್ತಿರುವುದು ದಿವ್ಯಶಯನಗಳಲ್ಲ ಮಲಗುತಿದ್ದ ಆ ಮಗಧಸ್ತ್ರೀಯರು, ಈಗ ಕದಲಿದ ವಸ್ತ್ರಾಭರಣಗಳೊಡನೆ ನೆಲ್ಲದಮೇಲೆ ಹೊರಳಾಡುತ್ತಿರುವರು ಕೋಸಲದೇಶಾಧಿಪತಿಯಾದ ಬೃಹದ್ಬಲನನ್ನು ಸುತ್ತಿನಿಂತು ಈ ಸ್ತ್ರೀಯರು ಹಂಬಲಿಸುತ್ತಿರುವರು ನೋಡು ಅಭಿಮನ್ಯುವಿನಿಂದ ಈತನ ದೇಹದಲ್ಲಿ ನಾಟಲ್ಪಟ್ಟಿರುವ ಬಾಣಗಳನ್ನು ಶೋಕಗ್ರಸ್ತರಾದ ಈ ಸ್ತ್ರೀಯರೇ ಕೀಳುತ್ತ, ಅಡಿಗಡಿಗೆ ಮೂರ್ಛಿತರಾಗುತ್ತಿರುವರು ನೋಡು ಈ ಸ್ತ್ರೀಯರ ಮುಖಗಳು ಬಿಸಿಲಿನಿಂದ ಬಾಡಿದ ತಾವರಯ ಹೂಗಳಂತೆ ದುಃಖದಿಂದ ಕಾಂತಿವಿಹೀನವಾಗಿರುವುವು ಸುಂದರವಾದ ತೋಳ್ಬಳೆಗಳನ್ನೂ, ಸುವರ್ಣಮಾಲೆಗಳನ್ನೂ ಧರಿಸಿ ಇನ್ನೂ ಶಿಶುಗಳಂತಿರುವ ಈ ಧೃಷ್ಟದ್ಯುಮ್ನನ ಪುತ್ರರೆಲ್ಲರೂ ದ್ರೋಣನಿಂದ ಕೊಲ್ಲಲ್ಪಟ್ಟು ಮಲಗಿರುವುದನ್ನು ನೋಡು. ರಥವೆಂಬ ಅಗ್ನಿಶಾಲೆಯಲ್ಲಿ, ಬಿಲ್ಲೆಂಬ ಜ್ವಾಲೆಗಳಿಂದಲೂ, ಶಕ್ತಿಗದೆಗಳೆಂಬ ಇಂಧನಗಳಿಂದಲೂ ಪ್ರಜ್ವಲಿತವಾದ ದ್ರೋಣನೆಂಬ ಬೆಂಕಿಯಲ್ಲಿ, ಇವರೆಲ್ಲರೂ ಪತಂಗದ ಹುಳುಗಳಂತೆ ಉರಿಸಲ್ಪಟ್ಟಿರು ಹಾಗೆಯೇ ಶೂರರೂ, ಸುಂದರವಾದ ತೋಳ್ಬಳೆಗಳುಳ್ಳವರೂ, ಯುದ್ಧನಿಪುಣರೂ ಆದ ಐದುಮಂದಿ ಕೇಕಯಸಹೋದರರೂ ದ್ರೋಣನಿಂದ ಕೊಲ್ಲಲ್ಪಟ್ಟು ಮಲಗಿರುವರು ಸುವರ್ಣಕವಚಗಳನ್ನು ಧರಿಸಿ, ತಾಳೆಯಮರದಂತೆ ಉದ್ದವಾದ ಧ್ವಜಗಳುಳ್ಳ ರಥಸಮೂಹಗಳನ್ನೇರಿ, ಬೆಂಕಿಯಂತೆ ಕಾಂತಿಯುಕ್ತರಾದ ಈ ವೀರರು ತಮ್ಮ ಕಾಂತಿಯಿಂದ ಭೂಮಿಯೆಲ್ಲವನ್ನೂ ಬೆಳಗುತ್ತಿರುವರು. ಕೃಷ್ಣಾ! ಕಾಡಿನಲ್ಲಿ ಸಿಂಹದಿಂದ ಕೊಲ್ಲಲ್ಪಟ್ಟ ದೊಡ್ಡ ಆನೆಯಂತೆ, ದ್ರೋಣನಿಂದ ಹತನಾಗಿ ಸತ್ತು ಬಿದ್ದಿರುವ ಈ ದ್ರುಪದನನ್ನು ನೋಡು. ಸ್ವಲ್ಪವೂ ಕೊಳೆಯಿಲ್ಲದೆ, ಶುದ್ಧವಾದ ಪಾಂಚಾಲರಾಜನ ಈ ಶ್ವೇತಚ್ಛತ್ರವು, ಶರತ್ಕಾಲದ

ಚಂದ್ರನಂತೆ ಪ್ರಕಾಶಿಸುವುದು ನೋಡು! ಅದೋ! ಅಲ್ಲಿ ದ್ರುಪದನ ಸೊಸೆಯರೂ, ಪತ್ನಿಯರೂ ದುಃಖಾಕುಲರಾಗಿ, ವೃದ್ಧನಾದ ಪಾಂಚಾಲ ರಾಜನಿಗೆ ದಹನಸಂಸ್ಕಾರ ಮಾಡಿ, ಅಪ್ರದಕ್ಷಿಣವಾಗಿ ಸುತ್ತಿಬರುವರು ನೋಡು. ಹಾಗೆಯೇ ದ್ರೋಣನಿಂದ ಕೊಲ್ಲಲ್ಪಟ್ಟ ಚೇದಿರಾಜನಾದ ಧೃಷ್ಟ ಕೇತುವನ್ನು, ಅವನ ಮಾತೆಯರೇ ದುಃಖದಿಂದ ಸಾಗಿಸಿಕೊಂಡುಹೋಗು ತ್ತಿರುವರು ಮಧುಸೂದನಾ! ಈತನು ದ್ರೋಣನ ಅಸ್ತ್ರದಿಂದ ಹತ ನಾಗಿ, ವಜ್ರಾಯುಧದಿಂದ ಭಿನ್ನವಾದ ಮರದಂತೆ ಬಿದ್ದಿರುವುದನ್ನು ನೋಡು ಶೂರನೂ, ಮಹಾರಥನೂ ಆದ ಈ ಧೃಷ್ಟಕೇತುವು, ಯುದ್ಧ ದಲ್ಲಿ ಶತ್ರುಗಳನ್ನು ಸಾವಿರಲೆಕ್ಕದಿಂದ ಕೊಂದು, ಕಡೆಗೆ ತಾನೂ ಕೊಲ್ಲ ಲ್ಪಟ್ಟು ಬಿದ್ದಿರುವನು ಹೃಷೀಕೇಶಾ! ಸೈನ್ಯದೊಡನೆಯೂ, ಬಂಧುಗ ಳೊಡನೆಯೂ ಮೃತನಾಗಿ ಬಿದ್ದು, ಪಕ್ಷಿಗಳಿಂದ ಕುಕ್ಕಲ್ಪಡುತ್ತಿರುವ ಈ ಚೇದಿರಾಜನ ಶವದಬಳಿಗೆ ಬಂದು, (ಆತನ) ಪತ್ನಿಯರು, ಸಾಹಸಿಯೂ, ವೀರನೂ ಆದ ಆ ದಾಶಾರ್ಹಪೌತ್ರನ ಮೃತದೇಹವನ್ನೆತ್ತಿ ತೊಡೆಯಲ್ಲಿರಿಸಿ ಕೊಂಡು ಹೇಗೆ ಅಳುತ್ತಿರುವರೋ ನೋಡು ಸುಂದರವಾದ ಮುಖವುಳ್ಳ ವನೂ, ಒಳ್ಳೇ ಕುಂಡಲಗಳನ್ನು ಧರಿಸಿದವನೂ ಆದ ಆತನ ಪುತ್ರನು, ದ್ರೋಣನ ಅಸ್ತ್ರಗಳಿಂದ ಭೇದಿಸಲ್ಪಟ್ಟು ಮಲಗಿರುವುದನ್ನು ನೋಡು. ಯುದ್ಧರಂಗದಲ್ಲಿ ಶತ್ರುಗಳೊಡನೆ ಯುದ್ಧವಾಡುವಾಗಲೂ, ಈ ವೀರನು ತನ್ನ ತಂದೆಯನ್ನು ಬಿಟ್ಟು ಅಗಲಲಿಲ್ಲ ಓ ಮಹಾಬಾಹೂ! ಶತ್ರುವೀರ ರನ್ನು ಕೊಲ್ಲುತಿದ್ದ ನನ್ನ ಮೊಮ್ಮಗನಾದ ಲಕ್ಷ್ಮಣನೂ ಇದೇರೀತಿಯಲ್ಲಿ ಯೇ ತನ್ನ ಪಿತನನ್ನು ಎಡೆಬಿಡದೆ ಹಿಂಬಾಲಿಸುತಿದ್ದನು ಹೇಮಂತಋತು ವಿನ ಕೊನೆಯಲ್ಲಿ ಗಾಳಿಯಿಂದ ಮುರಿಯಲ್ಪಟ್ಟ ಎರಡು ದೊಡ್ಡ ಸಾಲವೃಕ್ಷ ಗಳಂತೆ ಬಿದ್ದಿರುವ ಅವಂತಿದೇಶದರಸರಾದ ವಿಂದಾನುವಿಂದರನ್ನು ನೋಡು ಸತ್ತು ಮಲಗಿದ್ದರೂ ಇವರಿಬ್ಬರೂ ಸುವರ್ಣಮಯವಾದ ಕವಚಗಳನ್ನೂ, ತೋಳ್ಬಳೆಗಳನ್ನೂ, ಬಾಣಗಳನ್ನೂ, ಕತ್ತಿಗಳನ್ನೂ, ಬಿಲ್ಲುಗಳನ್ನೂ ಬಿಡದೆ ಕೈಯಲ್ಲಿ ಹಿಡಿದಿರುವರು ಇವರ ಕಣ್ಣುಗಳು ವೃಷ ಭದ ಕಣ್ಣುಗಳಂತಿರುವುವು. ನಿರ್ಮಲವಾದ ಪುಷ್ಪಹಾರಗಳನ್ನು ಧರಿ ಸಿರುವರು. ಕೃಷ್ಣಾ! ದ್ರೋಣನು, ಭೀಷ್ಮನು, ಸೂರ್ಯಪುತ್ರನಾದ

ಕರ್ಣನು, ಕೃಪನು, ದುರ್ಯೋಧನನು, ದ್ರೋಣಪುತ್ರನು, ಸಿಂಧುದೇಶಾಧಿಪತಿಯಾದ ಜಯದ್ರಥನು, ಸೋಮದತ್ತನು, ವಿಕರ್ಣನು, ಶೂರನಾದ ಕೃತವರ್ಮನು, ಇವರೆಲ್ಲರ ಕೈಗಳಿಂದ ತಪ್ಪಿ ಬದುಕಿಬಂದಮೇಲೆ, ಪಾಂಡವರಿಗೆ ಇನ್ನು ಸಾವೆಂಬುದೇ ಇಲ್ಲ! ಯಾವ ಪುರುಷಶ್ರೇಷ್ಠರು ತಮ್ಮ ಶಸ್ತ್ರವೇಗದಿಂದ ದೇವತೆಗಳನ್ನೂ ಕೊಲ್ಲಬಲ್ಲರೋ, ಅಂಹತ ವೀರರೆಲ್ಲ ಈಗ ಯುದ್ಧದಲ್ಲಿ ಹತರಾದರು! ಕಾಲಮಹಿಮೆಯನ್ನು ನೋಡಿದೆಯಾ? ಮಾಧವಾ! ಕ್ಷತ್ರಿಯಶ್ರೇಷ್ಠರೂ, ಶೂರರೂ, ವಿದ್ವಾಂಸರೂ, ಧೈರ್ಯಶಾಲಿಗಳೂ ಆದ ಈ ನನ್ನ ಪುತ್ರರೇ ಹೀಗೆ ಕೊಲ್ಲಲ್ಪಟ್ಟಮೇಲೆ, ದೈವಕ್ಕೆ ಯಾವುದೂ ಅಸಾಧ್ಯವಲ್ಲ ಕೃಷ್ಣಾ! ಹಿಂದೆ ನಿನ್ನ ಸಂಧಿಪ್ರಯತ್ನವು ನೆರವೇರದೆ, ನೀನು ಉಪಪ್ಲಾವ್ಯಕ್ಕೆ ಹಿಂತಿರುಗಿದಾಗಲೇ ನನ್ನ ಪುತ್ರರೆಲ್ಲರೂ ಮೃತಪ್ರಾಯರಾದರು! ಶಂತನುಪುತ್ರನಾದ ಭೀಷ್ಮನೂ, ವಿದುರನೂ 'ಇನ್ನು ನಿನ್ನ ಮಕ್ಕಳಲ್ಲಿ ಆಶೆಯಿಡಬೇಡ'ವೆಂದು ಹೇಳಿದುದನ್ನೂ ಆಗಲೇ ಕೇಳಿದ್ದೆನು ಅವರಿಬ್ಬರ ಹೇಳಿಕೆಯು ಎಂದಾದರೂ ತಪ್ಪುವುದೇ? ಅದರಂತೆ ಬಹುಶೀಘ್ರಕಾಲದಲ್ಲಿಯೇ ನನ್ನ ಪುತ್ರರು ಭಸ್ಮೀಭೂತರಾದರು" ಎಂದಳು

ಆಮೇಲೆ ಆಕೆಯು ದುಃಖದಿಂದ ಪ್ರಜ್ಞಾಹೀನಳಾಗಿ ನೆಲದಮೇಲೆ ಬಿದ್ದಳು. ಕೋಪದಿಂದಲೂ, ಪುತ್ರಶೋಕದಿಂದಲೂ, ತಪಿಸುತಿದ್ದ ಆಕೆಯು, ತನ್ನ ಸಂಕಟವನ್ನು ತಡೆಯಲಾರದೆ ಶ್ರೀಕೃಷ್ಣನಲ್ಲಿ ದೋಷವನ್ನಾರೋಪಿಸುತ್ತ, "ಓ ಕೃಷ್ಣಾ! ಜನಾರ್ದನಾ! ಪರಸ್ಪರನಾಶಕ್ಕಾಗಿ ಯತ್ನಿಸುತ್ತಿದ್ದ ಆ ಪಾಂಡವಕೌರವರವಿಷಯದಲ್ಲಿ ಹಾಗೆ ನೀನು ಉಪೇಕ್ಷೆಯಿಂದಿದ್ದುದಕ್ಕೆ ಕಾರಣವೇನು? ಮಧುಸೂದನಾ! ಮಹಾಬಾಹೂ! ನೀನಾದರೂ ಸಾಮಾನ್ಯನಲ್ಲ! ಮಹಾಪರಾಕ್ರಮಿ! ಅನೇಕ ಪರಿವಾರಗಳಿಂದ ಕೂಡಿದವನು! ದೊಡ್ಡ ಸೈನ್ಯವುಳ್ಳವನು! ಉಭಯಪಕ್ಷಗಳಲ್ಲಿಯೂ ಅಧಿಕಾರವುಳ್ಳವನು! ಮಧುರವಾಕ್ಕುಳ್ಳವನು! ಕುರುವಂಶದ ನಾಶವನ್ನು ನೀನೇ ಮನಃಪೂರ್ವಕವಾಗಿ ಬಯಸಿದಂತಿದೆ. ಈ ಕೌರವಕುಲನಾಶದ ವಿಷಯದಲ್ಲಿ ಹಾಗೆ ನೀನು ಅಲಕ್ಷ್ಯದಿಂದಿದ್ದುದರ ಫಲವನ್ನು ನೀನೂ ಅನುಭವಿ



ಪುಟ ೬೯. ಗಾಂಧಾರಿಯು ಮೃತರಾದ ತನ್ನ ಕಡೆಯವರನ್ನೆಲ್ಲ ಕೃಷ್ಣನಿಗೆ ತೋರಿಸಿ, ಅವನಿಗೂ ಹೀಗೆಯೇ ಕುಲ (ಯಾದವಕುಲ) ನಾಶವಾಗಲೆಂದು ಶಪಿಸಿದುದು.

ಷದೆ ಹೋಗಲಾರೆ! ನಾನು ಪತಿಶುಶ್ರೂಷೆಯಿಂದ ಸಂಪಾದಿಸಿದ ಅಸಾಧಾರಣವಾದ ತಪಃಫಲದಿಂದ, ಈಗ ಚಕ್ರಧಾರಿಯಾದ ನಿನ್ನನ್ನೇ ಶಪಿಸುವೆನು ಗೋವಿಂದಾ! ಒಬ್ಬರನ್ನೊಬ್ಬರು ಕೊಲ್ಲುತ್ತಿದ್ದ ಜ್ಞಾತಿಗಳಾದ ಕೌರವಪಾಂಡವರ ವಿಷಯದಲ್ಲಿ ನೀನು ಉಪೇಕ್ಷೆಯಿಂದಿದ್ದುದರಿಂದ, ನೀನೂ (ನಿನ್ನ) ಜ್ಞಾತಿಗಳ ವಧವನ್ನು ನೋಡುವೆ. ಇದುಮೊದಲು ಮೂವತ್ತಾರನೆಯ ವರ್ಷವು ಬಂದೊಡನೆ, ನಿನ್ನ ಜ್ಞಾತಿಗಳೂ, ಮಂತ್ರಿಗಳೂ, ಪುತ್ರರೂ ಮೃತರಾಗಿ, ನೀನೂ ಅನಾಥನಂತೆ ಲೋಕದಲ್ಲಿ ಅದೃಶ್ಯನಾಗಿರುತ್ತ, ಕೇವಲ ಹೇಯವಾದ ರೀತಿಯಿಂದ ಮೃತನಾಗುವೆ ಈಗ ಈ ಭಾರತಸ್ತ್ರೀಯರು ಹೇಗೋ ಹಾಗೆ, ನಿನ್ನ ಸ್ತ್ರೀಯರೂ ಆಗ ಪುತ್ರಬಂಧುವಧದಿಂದ ಪರಿತಪಿಸುವರು" ಎಂದು ಶಪಿಸಿದಳು.

ಉದಾರಮನಸ್ಸುಳ್ಳ ಕೃಷ್ಣನು, ಆ ಕ್ರೂರವಾಕ್ಯಗಳನ್ನು ಕೇಳಿಯೂ, ಮಂದಹಾಸವದನನಾಗಿ ಗಾಂಧಾರಿಯನ್ನು ಕುರಿತು ಹೀಗೆ ಹೇಳುವನು. "ಓ ಕ್ಷತ್ರಿಯರಮಣೀ! ಹೀಗೆ ನಡೆಯುವುದೆಂದು ನನಗೂ ತಿಳಿದಿದ್ದಿತು. ನಾನು ಅನುಷ್ಠಿಸಿದ ಮಾರ್ಗವನ್ನೇ ನೀನೂ ಅನುಸರಿಸುವೆ. ಹೀಗೆಯೇ ವೃಷ್ಣಿಕುಲದವರೂ ದೈವವಿಧಿಯಿಂದ ನಾಶವಾಗುವುದರಲ್ಲಿ ಸಂದೇಹವೇ ಇಲ್ಲ ಕಲ್ಯಾಣೀ! ಆ ವೃಷ್ಣಿಕುಲವನ್ನು ಸಂಹರಿಸುವವನಾದರೂ ನಾನಲ್ಲದೆ ಬೇರೆ ಯಾರೂ ಇಲ್ಲ ಬೇರೆ ಯಾವ ಮನುಷ್ಯರಿಂದಲೂ, ದೇವತೆಗಳಿಂದಲೂ, ದಾನವರಿಂದಲೂ ಅವರು ಕೊಲ್ಲಲ್ಪಡತಕ್ಕವರಲ್ಲ ಆ ಯಾದವರು ಪರಸ್ಪರವಾಗಿ ಹೊಡೆದಾಡಿ, ತಮಗೆತಾವೇ ನಾಶವನ್ನುಂಟುಮಾಡಿಕೊಳ್ಳುವರು" ಎಂದನು ಕೃಷ್ಣನ ಮಾತುಗಳನ್ನು ಕೇಳಿದೊಡನೆಯೇ ಪಾಂಡವರು ಮನಸ್ಸಿನಲ್ಲಿ ಭಯಗೊಂಡು ನಡುಗುತ್ತ ವ್ಯಾಕುಲಗ್ರಸ್ತರಾಗಿ, ತಮ್ಮ ಪ್ರಾಣದಮೇಲೆಯೇ ಆಸೆಯನ್ನು ತೊರೆದರು.

ಇದು ಇಪ್ಪತ್ತೈದನೆಯ ಅಧ್ಯಾಯವು.

**ಇಲ್ಲಿಗೆ ಸ್ತ್ರೀವಿಲಾಪಪರ್ವವು ಮುಗಿದುದು.**



# ಶ್ರಾದ್ಧಪರ್ವವು.

ಶೋಕದಿಂದ ಮೂರ್ಛಿತಳಾದ ಗಾಂಧಾರಿಯನ್ನು ಕೃಷ್ಣನು ಸಮಾಧಾನಪಡಿಸಿದುದು ಯುಧಿಷ್ಠಿರನ ಅನುಮತಿಯಂತೆ ವಿದುರನು ಸಂಜಯಾದಿಗಳೊಡನೆ ಮೃತರಾದವರಿಗೆ ದಹನಕ್ರಿಯೆಯನ್ನು ಮಾಡಿಸಿದುದು

ಕೃಷ್ಣನು "ಅಮ್ಮಾ! ಗಾಂಧಾರೀ! ಏಳು! ವ್ಯಾಕುಲವನ್ನು ಬಿಡು ನಿನ್ನ ಮಗನಾದ ದುರ್ಯೋಧನನು ಬಹಳ ದುರಾತ್ಮನು! ತಾಳ್ಮೆಯಿಲ್ಲದವನು! ಮಿತಿಮೀರಿದ ಅಹಂಕಾರವುಳ್ಳವನು! ದುಷ್ಟನು! ಯಾವಾಗಲೂ ಹಗೆತನದಲ್ಲಿಯೇ ಮನಸ್ಸುಳ್ಳವನು ಹಿರಿಯರ ಕಟ್ಟಳೆಗಳನ್ನು ಮೀರುವವನು ಅಂತಹ ಮಗನನ್ನು ಆದರಿಸುತಿದ್ದ ನಿಮ್ಮ ನಡೆವಳಿಕೆಯಾದರೂ ಒಳ್ಳೆಯದೆಂದು ಭಾವಿಸಿದೆಯಾ? ನಿನ್ನ ದೋಷದಿಂದಲೇ ಕೌರವರು ನಾಶವಾದರೆಂದು ತಿಳಿ ನಿನ್ನ ದೋಷವನ್ನು ಏಕೆ ನನ್ನಮೇಲೆ ಆರೋಪಿಸುತ್ತಿರುವೆ? ಯಾವನು ಸತ್ತವರಿಗೂ, ನಷ್ಟವಾದುದಕ್ಕೂ, ಹಿಂದೆ ನಡೆದುಹೋದುದಕ್ಕೂ ವ್ಯಸನಪಡುವನೋ, ಆತನು ಮುಂದೆ ಇನ್ನೂ ಹೆಚ್ಚು ದುಃಖಕ್ಕೆ ಗುರಿಯಾಗುವನು ಅವನಿಗೆ ದುಃಖದೊಡನೆ ಮತ್ತೊಂದು ದುಃಖವುಂಟಾಗಿ, ಎರಡು ಅನರ್ಥಗಳಿಗೆ ಗುರಿಯಾಗುವನು. ಬ್ರಾಹ್ಮಣಸ್ತ್ರೀಯು ಗರ್ಭದಲ್ಲಿ ತಪಸ್ವಿಯನ್ನೇ ಧರಿಸುವಳು ಹಸುವು ಭಾರವನ್ನು ಹೊರತಕ್ಕ ಹೋರಿಯನ್ನೂ, ಹೆಣ್ಣುಕುದುರೆಯು ಓಡುವ ಸ್ವಭಾವವುಳ್ಳ ಕುದುರೆಗಳನ್ನೂ ಗರ್ಭದಲ್ಲಿ ಧರಿಸುವುವು ಶೂದ್ರಸ್ತ್ರೀಯು ಸೇವಕನನ್ನೂ, ವೈಶ್ಯಸ್ತ್ರೀಯು ಗೋಪಾಲಕನನ್ನೂ ಗರ್ಭದಲ್ಲಿ ಪಡೆಯುವಳು ಅದರಂತೆಯೇ ಕ್ಷತ್ರಿಯರಮಣಿಯಾದ ನಿನ್ನಂತವಳು, ಯುದ್ಧದಲ್ಲಿ ಮರಣಕ್ಕೀಡಾಗುವ ಕ್ಷತ್ರಿಯನನ್ನೇ ಗರ್ಭದಲ್ಲಿ ಪಡೆದುದು ಸಹಜವೇ" ಎಂದನು. ಕೃಷ್ಣನ ಈ ಅಪ್ರಿಯವಾಕ್ಯಗಳನ್ನು ಕೇಳಿ ಗಾಂಧಾರಿಯು ಶೋಕದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಮಾತನಾಡದೆ ಇದ್ದಳು

ಧರ್ಮವಿದನೂ, ರಾಜಋಷಿಯೂ ಆದ ಧೃತರಾಷ್ಟ್ರನು, ಆಗ ತನ್ನ ಮಂದಬುದ್ಧಿಯಿಂದುಂಟಾದ ಅಜ್ಞಾನವನ್ನು ನೀಗಿಸಿಕೊಂಡು, ಯುಧಿಷ್ಠಿರನನ್ನು ಕುರಿತು "ಓ ಪಾಂಡುನಂದನಾ! ಮೊದಲು ಜೀವಂತರಾಗಿದ್ದ ವೀರರ ಸಂಖ್ಯೆಯು ನಿನಗೆ ಚೆನ್ನಾಗಿ ತಿಳಿದಿದೆಯಲ್ಲವೆ? ಈಗ ಸತ್ತವರ ಸಂಖ್ಯೆಯನ್ನು ನೀನು ತಿಳಿದಿದ್ದರೆ ಅದನ್ನು ನನಗೆ ತಿಳಿಸು" ಎಂದು ಕೇಳಲು, ಯುಧಿಷ್ಠಿರನು "ರಾಜಾ! ಈ ಯುದ್ಧದಲ್ಲಿ ಮೊದಲು *ಹತ್ತುಕೋಟಿವೀರರೂ, ಅಮೇಲೆ ಇಪ್ಪತ್ತುಸಾವಿರಮಂದಿ ವೀರರೂ, ಆಮೇಲೆ ಅರುವತ್ತಾರುಕೋಟಿವೀರರೂ ಕೊಲ್ಲಲ್ಪಟ್ಟಿರುವರು ಇದಲ್ಲದೆ ನಮ್ಮ ಲೆಕ್ಕಕ್ಕೆ ಬಾರದೆ ತಪ್ಪಿಹೋದ ವೀರರ ಸಂಖ್ಯೆಯು, ಮೊದಲು ಹದಿನಾಲ್ಕುಸಾವಿರವೂ, ಆಮೇಲೆ ಹದಿನಾಲ್ಕುಸಾವಿರವೂ, ಅದಕ್ಕೆಮೇಲೆ ನೂರರುವತ್ತುಸಾವಿರವೂ ಆಗಿದೆ" ಎಂದನು ಆಗ ಧೃತರಾಷ್ಟ್ರನು 'ಪುರುಷೋತ್ತಮಾ! ಯುಧಿಷ್ಠಿರಾ! ಅವರೆಲ್ಲರೂ ಯಾವ ಗತಿಗೆ ಹೋದರೋ ನನಗೆ ತಿಳಿಸು ನೀನು ಇವೆಲ್ಲವನ್ನೂ ತಿಳಿದವನೆಂದು ಭಾವಿಸುತ್ತಿರುವೆನು' ಎನಲು, ಯುಧಿಷ್ಠಿರನು 'ಯಾರು ಯುದ್ಧದಲ್ಲಿ ನಿಜವಾದ ಉತ್ಸಾಹಗೊಂಡು ತಮ್ಮ ಶರೀರಗಳನ್ನು ಶಸ್ತ್ರಾಗ್ನಿಗೆ ಹೋಮವಮಾಡಿದರೋ, ಅವರು ಇಂದ್ರಲೋಕಕ್ಕೆ ಸಮಾನವಾದ ಉತ್ತಮಲೋಕವನ್ನು ಸೇರಿರುವರು ಯಾರು ತಾವು 'ಸಾಯಬೇಕಲ್ಲಾ' ಎಂಬ ಸಂಕಟದಿಂದ, ಉತ್ಸಾಹವಿಲ್ಲದೆ ನಿರ್ಬಂಧಕ್ಕಾಗಿ ಹೋಗಿ ಯುದ್ಧದಲ್ಲಿ ಕೊಲ್ಲಲ್ಪಟ್ಟರೋ, ಅವರು ಗಂಧರ್ವರೊಡನೆ ಸೇರಿದರು ಯಾರು ಯುದ್ಧಭೂಮಿಯಿಂದ ಹಿಂಜರಿದು ಓಡಿಹೋಗಿ ಪ್ರಾಣರಕ್ಷಣೆಗಾಗಿ ಶತ್ರುಗಳನ್ನು ಬೇಡುತ್ತ, ಕೊನೆಗೆ ಶಸ್ತ್ರಘಾತದಿಂದ ಮೃತರಾದರೋ, ಅವರು ಗುಹ್ಯಕರ ಗತಿಗೆ ಹೋದರು ಯಾವ ವೀರರು ಯುದ್ಧದಲ್ಲಿ ಶತ್ರುಗಳಿಂದ ಬಾರಿಬಾರಿಗೂ ಹೊಡೆಯಲ್ಪಟ್ಟು, ಬಲವು ತಗ್ಗಿ, ಆಯುಧಶೂನ್ಯರಾಗಿ, ಅವಮಾನಿತರಾದರೂ, ಧೀರಮನಸ್ಕರಾಗಿ, ಶತ್ರುಗಳೆದಿರಿಗೆ ನಿಂತು, ತೀಕ್ಷ್ಣವಾದ ಶಸ್ತ್ರಗಳಿಂದ ಭೇದಿಸಲ್ಪಡುವಾಗಲೂ ಕ್ಷತ್ರಿಯಧರ್ಮವನ್ನು ಬಿಡದೆ ಶತ್ರುಗಳಿಂದ ಹತರಾದರೋ

* ಇಲ್ಲಿ ಹತರಾದ ವೀರರ ಸಂಖ್ಯೆಯು ೧೬೬೦೦೨೦೦೦೦ ಎಂದೂ ತಪ್ಪಿಹೋದವರ ಸಂಖ್ಯೆ ೨೪೧೬೫ ಎಂದೂ ಪಾಠಭೇದವುಂಟು

ಮಹಾ ತೇಜಸ್ವಿಗಳಾದ ಆ ವೀರರು ಬ್ರಹ್ಮಲೋಕವನ್ನು ಸೇರಿರುವರು. ರಾಜಾ! ಹೆಚ್ಚೇಕೆ? ಈ ಯುದ್ಧಭೂಮಿಯಲ್ಲಿ ಯಾರು ಯಾವ ರೀತಿಯಿಂದ ಕೊಲ್ಲಲ್ಪಟ್ಟಿದ್ದರೂ ಅವರೆಲ್ಲರೂ ಒಂದು ವಿಧವಾದ ಉತ್ತಮ ಗತಿಯನ್ನೇ ಪಡೆದಿರುವರು' ಎಂದನು.

ಆಗ ಧೃತರಾಷ್ಟ್ರನು, 'ಪುತ್ರಾ! ಮಹಾಬಾಹೂ! ನೀನು ಯಾವ ಜ್ಞಾನಬಲದಿಂದ ಸಿದ್ಧನಂತೆ ಇದನ್ನು ತಿಳಿದಿರುವೆ? ಅದನ್ನು ನನಗೆ ತಿಳಿಸು' ಎನಲು, ಯುಧಿಷ್ಠಿರನು 'ಹಿಂದೆ ನಿನ್ನ ಆಜ್ಞೆಯಂತೆ ನಾನು ವನದಲ್ಲಿ ಸಂಚರಿಸುತಿದ್ದಾಗ, ತೀರ್ಥಯಾತ್ರೆಗೆ ಹೋದೆನು ಆಗ ಈ ಅನುಗ್ರಹವನ್ನು ಪಡೆದೆನು (ಆ ಕಾಲದಲ್ಲಿ) ದೇವರ್ಷಿಯಾದ ಲೋಮಶನನ್ನು ಕಂಡೆನು ಆತನಿಂದ ನಾನು ಅಸಾಧಾರಣ ಸ್ಮರಣಶಕ್ತಿಯನ್ನು ಪಡೆದೆನು. ಜ್ಞಾನಯೋಗದಿಂದ ಜ್ಞಾನಚಕ್ಷುಸ್ಸನ್ನೂ ಹೊಂದಿದೆನು' ಎಂದನು. ಆಮೇಲೆ ಧೃತರಾಷ್ಟ್ರನು 'ಪಾಂಡುನಂದನಾ! ಸನಾಥರೂ, ಅನಾಥರೂ ಆದ ಎಲ್ಲರ ಮೃತಶರೀರಗಳನ್ನು ಈಗ ಶಾಸ್ತ್ರವಿಧಿಯಿಂದ ದಹನಮಾಡುವವರಾರು?' ಎನಲು, ಆಗ ಯುಧಿಷ್ಠಿರನು "ಜನಕಾ! ಕರ್ಮವಿಧಿಗಳು ಬಹುವಾಗಿರುವುದರಿಂದ, ಮೃತರಾದ ಈ ಯುದ್ಧವೀರರಲ್ಲಿ ಯಾರಿಗೆ ಶಾಂತಿಯನ್ನು ಮಾಡುವವರಿಲ್ಲವೋ, ಯಾರು ಆಹಿತಾಗ್ನಿಗಳಲ್ಲವೋ, ಅವರೆಲ್ಲರಿಗೂ ಮಾಡಬೇಕಾದ ಕರ್ಮಗಳನ್ನು ನಾವೇ ಮಾಡುವೆವು. ಯಾರ ದೇಹವನ್ನು ಅಲ್ಲಲ್ಲಿ ಗೂಬೆಗಳೂ, ಹದ್ದುಗಳೂ ಎಳೆದಾಡಿಬಿಟ್ಟುವೋ, ಅವರಿಗೂ ಅದರಿಂದ ಸಂಕರ್ಷಣ ಲೋಕಗಳು ದೊರೆಯುವುವು ಇದರಲ್ಲಿ ಸಂಶಯವಿಲ್ಲ" ಎಂದನು.

"ಮಹಾರಾಜಾ! ಆಮೇಲೆ ಧರ್ಮರಾಜನು ಸುಧರ್ಮನನ್ನೂ, ಧೌಮ್ಯನನ್ನೂ, ಸೂತನಾದ ಸಂಜಯನನ್ನೂ, ಮಹಾಬುದ್ಧಿಶಾಲಿಯಾದ ವಿದುರನನ್ನೂ, ಯುಯುತ್ಸುವನ್ನೂ ಇಂದ್ರಸೇನನೇ ಮೊದಲಾದ ಸೇವಕರನ್ನೂ ಸಾವಿರಲೆಕ್ಕದ ಸೂತರನ್ನೂ ಕರೆದು 'ನೀವು ಅನಾಥರಾದವರ ಮೃತಶರೀರಗಳಲ್ಲಿ ಯಾವುದೊಂದನ್ನೂ ಹಾಗೆಯೇ ಬಿಟ್ಟುಬಿಡದೆ, ಅವರೆಲ್ಲರಿಗೂ ಪ್ರೇತಕಾರ್ಯಗಳನ್ನು ಮಾಡಿರಿ' ಎಂದು ಆಜ್ಞಾಪಿಸಿದನು. ಆಗ ಧರ್ಮ

ರಾಜನ ಆಜ್ಞೆಯಂತೆ ವಿದುರನೂ, ಸಂಜಯನೂ, ಧೌಮ್ಯನೊಡಗೂಡಿದ ಸುಧರ್ಮನೂ, ಇಂದ್ರಸೇನನೇ ಮೊದಲಾದವರೂ ಕಟ್ಟಿಗೆಗಳನ್ನೂ, ಬಿಳಿಯ ರೇಷ್ಮೆಬಟ್ಟೆಯನ್ನೂ, ಚಂದನ, ಅಗರು, ಕಾಲೀಯಕ ವೃಕ್ಷಗಳ ಕಟ್ಟಿಗೆಗಳನ್ನೂ ತಂದು, ಸುಗಂಧದ ಪುಡಿಗಳನ್ನೂ, ಅಲ್ಲಲ್ಲಿ ಮುರಿದುಬಿದ್ದಿದ್ದ ರಥಗಳನ್ನೂ, ನಾನಾಬಗೆಯ ಆಯುಧಗಳನ್ನೂ ಶೇಖರಿಸಿ ಚಿತೆಯನ್ನೊಡ್ಡಿ, ಯಾರುಯಾರು ಪ್ರಧಾನರಾಜರೋ ಅವರೆಲ್ಲರನ್ನೂ ಏಕರೀತಿಯಾದ ಮನಸ್ಸಿನಿಂದ ಶಾಸ್ತ್ರವಿಧಿಗನುಸಾರವಾಗಿ ದಹನ ಮಾಡಿದರು ದುರ್ಯೋಧನರಾಜನು, ಅವನ ತಮ್ಮಂದಿರು, ಶಲ್ಯನು, ಶಲನು, ಭೂರಿಶ್ರವಸ್ಸು, ಜಯದ್ರಥನು, ಅಭಿಮನ್ಯು, ದುಶ್ಶಾಸನಪುತ್ರನು, ಲಕ್ಷ್ಮಣನು, ಧೃಷ್ಟಕೇತು, ಬೃಹದ್ಬಲನು, ಸೋಮದತ್ತನು, ಸೃಂಜಯನು, ಕ್ಷೇಮದತ್ತನು, ವಿರಾಟನು, ದ್ರುಪದನು, ಪಾಂಚಾಲರಾಜಕುಮಾರನಾದ ಶಿಖಂಡಿ, ಧೃಷ್ಟದ್ಯುಮ್ನನು, ಯುಧಾಮನ್ಯು, ಉತ್ತಮೌಜಸ್ಸು, ಕೌಸಲರಾಜಕುಮಾರನು, ದ್ರೌಪದೀಪುತ್ರರು, ಶಕುನಿ, ಅಚಲನು, ವೃಷಕನು, ಭಗದತ್ತನು, ಸೂರ್ಯಪುತ್ರನಾದ ಕರ್ಣನು, ಆತನ ಕುಮಾರರು, ಕೇಕಯರು, ತ್ರಿಗರ್ತರು, ರಾಕ್ಷಸೇಂದ್ರನಾದ ಘಟೋತ್ಕಚನು, ಭಗನ ಸಹೋದರನು, ರಾಕ್ಷಸನಾದ ಅಲಂಬುಸನು, ಜಲಸಂಧನು, ಈ ಮೊದಲಾದವರನ್ನೂ ಇನ್ನೂ ಸಾವಿರಲೆಕ್ಕದ ರಾಜರನ್ನೂ, ತುಪ್ಪದ ಧಾರೆಗಳಿಂದ ಹುತಮಾಡಿ ಜ್ವಲಿಸುತ್ತಿರುವ ಅಗ್ನಿಯಲ್ಲಿ ದಹನಮಾಡಿದರು ಮಹಾತ್ಮರಾದ ಕೆಲವರಿಗೆ ಪಿತೃಮೇಧಸಂಸ್ಕಾರಗಳೂ ನಡೆದುವು ಸಾಮಗಳಿಂದ ಗಾನಮಾಡಿದರು ಇತರರಿಂದ ನಡೆಯಬೇಕಾದ ಕರ್ಮಗಳನ್ನೂ ಅವರವರಿಗೆ ವಿಧಿಸಿ ಮಾಡಿಸಿದರು ಋಕ್ಸಾಮವೇದಗಳ ಶಬ್ದದಿಂದಲೂ, ಸ್ತ್ರೀಯರ ರೋದನಧ್ವನಿಯಿಂದಲೂ ಆ ರಾತ್ರಿಯಲ್ಲಿ ಎಲ್ಲಾ ಪ್ರಾಣಿಗಳಿಗೂ ದಿಗ್ಭ್ರಮೆಹಿಡಿದಂತಾಯಿತು ಹುತಮಾಡಿ ಜ್ವಲಿಸುವ ಅಗ್ನಿಗಳು ಆಕಾಶದಲ್ಲಿ ಸೂಕ್ಷ್ಮಮೇಘಗಳಿಂದ ಆವೃತವಾದ ಗ್ರಹಗಳಂತೆ ಕಂಡುಬಂದುವು. ವಿದುರನು ಅರಸನ ಕಟ್ಟಳೆಯಂತೆ ಯಾರುಯಾರು ನಾನಾದೇಶಗಳಿಂದ ಬಂದು ಅಲ್ಲಿ ಮೃತರಾಗಿದ್ದರೋ, ಅವರೆಲ್ಲರನ್ನೂ ಸಾಗಿಸಿ ತಂದು, ಕ್ಷತ್ರಿಯಧರ್ಮಕ್ಕನುಸಾರವಾಗಿ ಚಿತೆಯೊಡ್ಡಿ, ಅವರೆಲ್ಲರನ್ನೂ ಸೇವಕರಮೂಲಕ ಎಣ್ಣೆಹಚ್ಚಿದ

ಕಟ್ಟಿಗೆಗಳಿಂದ ದಹನಮಾಡಿಸಿದನು. ಯುಧಿಷ್ಠಿರನು ಅವರಿಗೆಲ್ಲ ಉತ್ತರ ಕ್ರಿಯೆಗಳನ್ನು ಮಾಡಿಸಿ, ಧೃತರಾಷ್ಟ್ರನನ್ನು ಮುಂದೆಬಿಟ್ಟುಕೊಂಡು ಗಂಗಾತೀರಕ್ಕೆ ಹೊರಟನು

ಇದು ಇಪ್ಪತ್ತಾರನೆಯ ಅಧ್ಯಾಯವು

ಧೃತರಾಷ್ಟ್ರ ಯುಧಿಷ್ಠಿರರೇ ಮುಂತಾದವರು ಗಂಗಾತೀರಕ್ಕೆ ಬಂದುದು ಮೃತರಾದವರಿಗೆ ತರ್ಪಣವನ್ನು ಮಾಡಲಾರಂಭಿಸಿದೊಡನೆ, ಕುಂತಿಯು, ಕರ್ಣನೂ ತನ್ನ ಮಗನೆಂದು ಯುಧಿಷ್ಠಿರನಿಗೆ ತಿಳಿಸಿ, ಅವನಿಗೂ ತರ್ಪಣವನ್ನು ಬಿಡುವಂತೆ ಹೇಳಿದುದು ಯುಧಿಷ್ಠಿರಾದಿಗಳು ಉದಕದಾನ ಮಾಡಿದುದು

‘ ರಾಜಾ ! ಅವರೆಲ್ಲರೂ ಪವಿತ್ರಜಲದಿಂದ ತುಂಬಿ ಮಂಗಳಕರವಾದ ಗಂಗಾನದಿಯ ಬಳಿಗೆ ಬಂದರು ಮನಸ್ಸಿಗೆ ಆನಂದಕರವಾದ ಮತ್ತು ಸ್ವಚ್ಛಜಲವುಳ್ಳ ಆ ಗಂಗಾನದಿಯಬಳಿಗೆ ಬಂದೊಡನೆ, ತಮ್ಮ ವಸ್ತ್ರಭೂಷಣಾದಿಗಳನ್ನೂ, ವಿಚಿತ್ರವಾದ ಕವಚಗಳನ್ನೂ ಕಳಚಿ, ಗಂಗೆಯಲ್ಲಿಳಿದು ಸ್ನಾನಮಾಡಿದರು ಎಲ್ಲಾ ಸ್ತ್ರೀಯರೂ ಮಹಾವ್ಯಸನದಿಂದ ಅಳುತ್ತ ತಮ್ಮತಮ್ಮ ಪತಿಪುತ್ರ ಸಹೋದರರಿಗೂ, ಪಿತೃಜನಗಳಿಗೂ, ಗುರುಗಳಿಗೂ, ಮುಮ್ಮಕ್ಕಳಿಗೂ, ತಮ್ಮ ಬಂಧುಜನಗಳಿಗೂ ಜಲತರ್ಪಣವನ್ನು ಬಿಟ್ಟರು ಧರ್ಮಜ್ಞರಾದ ತಮ್ಮತಮ್ಮ ಮಿತ್ರರಿಗೂ ಜಲತರ್ಪಣವನ್ನು ಮಾಡಿದರು ಬಹುಮಂದಿ ವೀರಪತ್ನಿಯರೆಲ್ಲ ಸೇರಿ, ವೀರರಿಗೆ ಜಲದಾನ ಮಾಡುತಿದ್ದಾಗ, ಗಂಗಾನದಿಯ ನೀರೇ ಇಳಿದಂತಾಗಿದ್ದು, ಆಮೇಲೆ ತಿರುಗಿ ಅಧಿಕವಾಗಿ ಪ್ರವಹಿಸಿತು. ಸಮುದ್ರಸಮಾನವಾಗಿದ್ದ ಆ ಗಂಗಾತೀರವು, ದುಃಖಿತರಾದ ವೀರಪತ್ನಿಯರಿಂದ ಪರಿವೃತವಾಗಿದ್ದಾಗ ಸಂತೋಷಹೀನವಾಗಿ ಕಾಣಿಸುತ್ತಿದ್ದಿತು

ಮಹಾರಾಜಾ ! ಆಮೇಲೆ ಶೋಕಗ್ರಸ್ತಳಾದ ಕುಂತಿಯು ಅಳುತ್ತ ನಾಚಿಕೆಯಿಂದ ತನ್ನ ಪುತ್ರರನ್ನು ಕುರಿತು ಮೃದುವಾಕ್ಯಗಳಿಂದ ಹೀಗೆಂ-

ದಳು. 'ಪಾಂಡುಪುತ್ರರೇ! ಮಹಾಧನುರ್ಧಾರಿಯೂ, ರಥಿಕಾಗ್ರೇಸರರಿಗೆಲ್ಲ ಯೂಥಪತಿಯೂ, ವೀರಲಕ್ಷಣಗಳಿಂದ ಕೂಡಿದವನೂ ಆದ ಯಾವ ವೀರನು ಯುದ್ಧದಲ್ಲಿ ಅರ್ಜುನನಿಂದ ಕೊಲ್ಲಲ್ಪಟ್ಟನೋ, ಯಾವಾತನನ್ನು ನೀವು ಸೂತಪುತ್ರನೆಂದೂ, ರಾಧಾಪುತ್ರನೆಂದೂ ಭಾವಿಸಿದ್ದಿರೋ, ಯಾವಾತನು ಸೇನಾಮಧ್ಯದಲ್ಲಿ ಸೂರ್ಯನಂತೆ ಪ್ರಕಾಶಿಸುತಿದ್ದನೋ, ಯಾವನು ಹಿಂದೆ ಪರಿವಾರಸಮೇತರಾದ ನಿಮ್ಮೆಲ್ಲರನ್ನೂ ಇದಿರಿಸಿ ಯುದ್ಧಮಾಡಿದನೋ, ಯಾವನು ದುರ್ಯೋಧನನ ಸೈನ್ಯವೆಲ್ಲವನ್ನೂ ಬಹಳ ಚಾತುರ್ಯದಿಂದ ನಡೆಸುತ್ತ ಪ್ರಕಾಶಿಸಿದನೋ, ವೀರ್ಯದಲ್ಲಿ ಯಾವನಿಗೆ ಸಮಾನನು ಭೂಮಿಯಲ್ಲಿಲ್ಲವೋ, ಶೂರನಾದ ಯಾವಾತನು ತನ್ನ ಪ್ರಾಣಗಳಿಗಿಂತಲೂ ಕೀರ್ತಿಯನ್ನೇ ಅಧಿಕವಾಗಿ ಪ್ರೀತಿಸುತಿದ್ದನೋ, ಸತ್ಯಸಂಧನೂ, ಯುದ್ಧದಲ್ಲಿ ಹಿಮ್ಮೆಟ್ಟದವನೂ, ಸಾಹಸಿಯೂ, ನಿಮ್ಮ ಸಹೋದರನೂ ಆದ ಆ ಕರ್ಣನಿಗಾಗಿ ನೀವು ಉದಕದಾನಮಾಡಿರಿ ಆತನು ನಿಮ್ಮೆಲ್ಲರಿಗಿಂತಲೂ ಮೊದಲು ಹುಟ್ಟಿದ ಜ್ಯೇಷ್ಠಸಹೋದರನು! ನಿಮ್ಮ ತಂದೆಗೆ ಸಮಾನನು ಸಹಜವಾದ ಕವಚಕುಂಡಲಗಳಿಂದಲೂ, ಸೂರ್ಯತೇಜಸ್ಸಿನಿಂದಲೂ ಬೆಳಗುತ್ತ ಸೂರ್ಯನಿಂದ ನನ್ನಲ್ಲಿ ಹುಟ್ಟಿದನು' ಎಂದಳು

ತಾಯಿಯ ಮಾತಿನಂತೆ ಆ ಪಾಂಡವರೆಲ್ಲರೂ ಆ ಕರ್ಣನ ವಿಷಯವಾಗಿ ಅಧಿಕ ದುಃಖಾಕ್ರಾಂತರಾದರು. ಆಮೇಲೆ ಪುರುಷಶ್ರೇಷ್ಠನಾದ ಯುಧಿಷ್ಠಿರನು ಸರ್ಪದಂತೆ ನಿಟ್ಟುಸಿರುಬಿಡುತ್ತ, ತಾಯಿಯನ್ನು ಕುರಿತು "ಅಮ್ಮಾ! ಮಹಾರಥನೆನಿಸಿದ ಕರ್ಣನೆಂಬ ಯಾವ ಮಹಾಸಮುದ್ರವು, ಬಾಣಗಳೆಂಬ ಅಲೆಗಳಿಂದಲೂ, ಧ್ವಜಗಳೆಂಬ ಸುಳಿಗಳಿಂದಲೂ, ಮಹಾಭುಜಗಳೆಂಬ ದೊಡ್ಡ ಮೊಸಳೆಗಳಿಂದಲೂ, ತಲಶಬ್ದಗಳೆಂಬ ದೊಡ್ಡ ಪ್ರವಾಹಘೋಷದಿಂದಲೂ ಶತ್ರುದುಸ್ತರವಾಗಿದ್ದಿತೋ, ಯಾವನ ಬಾಣವು ಬೀಳುವ ಸ್ಥಳದಲ್ಲಿ ಅರ್ಜುನನು ಹೊರತು ಬೇರೊಬ್ಬನೂ ನಿಲ್ಲಲಾರದೆ ಹೋದನೋ, ದೇವಕುಮಾರನೂ, ಕುಂಡಲಕವಚಗಳನ್ನು ಧರಿಸಿದವನೂ, ಶೂರನೂ, ಸೂರ್ಯಸಮಾನ ಕಾಂತಿಯುಳ್ಳವನೂ ಆದ ಅವನು ನಿನಗೆ ಪುತ್ರನಾಗಿ ಹುಟ್ಟಿದುದು ಹೇಗೆ? ಯಾವನ ಭುಜಪ್ರತಾಪಕ್ಕಾಗಿ ನಾವು

ಯಾವಾಗಲೂ ಭಯಪಟ್ಟು ತಪಿಸುತಿದ್ದೆವೋ, ಆತನನ್ನು ನೀನು ಅಗ್ನಿಯನ್ನು ವಸ್ತ್ರದಿಂದ ಹೇಗೋ ಹಾಗೆ ಇದುವರೆಗೆ ಮರೆಸಿಟ್ಟುಕೊಂಡಿದ್ದ ಬಗೆಯೇನು? ಯಾವಾತನ ಬಾಹುಬಲವನ್ನು ನಂಬಿ ದುರ್ಯೋಧನನು ನಮ್ಮಲ್ಲಿ ಹಗೆತನನನ್ನು ಸಾಧಿಸಿದನೋ, ಆತನು ನಮ್ಮ ಹಿರಿಯಣ್ಣನೆಂದು ಇದುವರೆಗೂ ನೀನು ಹೇಗೆ ತಿಳಿಸದೆ ಇದ್ದೆ? ನಾವು ಗಾಂಡೀವಧನುರ್ಧಾರಿಯಾದ ಈ ಅರ್ಜುನನನ್ನು ಹೇಗೋ ಹಾಗೆ, ಕೌರವರು ಹಿಂಬಾಲಿಸುತಿದ್ದ ಮಹಾಧನುರ್ಧಾರಿಯಾದ ಕರ್ಣನನ್ನು ಹೇಗೆ ಮರೆಮಾಚಿದೆ? ರಥಿಕನಾದ ಆ ಕರ್ಣನುಹೊರತು ಬೇರೆ ಯಾವ ಶೂರನೂ ಎಲ್ಲಾ ರಥಿಕರ ಸೈನ್ಯಗಳನ್ನೂ ಇದಿರಿಸಿದವನಿಲ್ಲ ಅಸ್ತ್ರಧಾರಿಗಳಲ್ಲೆಲ್ಲ ಅಗ್ರಗಣ್ಯನೂ, ಮಹಾಪರಾಕ್ರಮಿಯೂ ಆದ ಆತನನ್ನು ನೀನು ನಮಗಿಂತಲೂ ಮೊದಲು ಹಿಂದೆ ಪಡೆದುದು ಹೇಗೆ? ನೀನು ಆ ವಿಷಯವನ್ನು ರಹಸ್ಯವಾಗಿಟ್ಟುದರಿಂದಲ್ಲವೇ ನಾವು ಮೋಸಹೋದುದು! ಕರ್ಣನ ಮರಣದಿಂದ ನಾವೂ, ನಮ್ಮ ಬಂಧುಗಳೂ ಮಹಾದುಃಖಕ್ಕೆ ಗುರಿಯಾದೆವಲ್ಲವೆ? ಅಭಿಮನ್ಯುವಿನ ಮರಣದಿಂದಲೂ, ದ್ರೌಪದೀಪುತ್ರರ ಕೊಲೆಯಿಂದಲೂ, ಪಾಂಚಾಲರ ಸಾವಿನಿಂದಲೂ, ಕೌರವರ ಮರಣದಿಂದಲೂ, ಉಂಟಾದ ದುಃಖಕ್ಕಿಂತಲೂ ನೂರುಪಾಲು ಅಧಿಕವಾದ ದುಃಖವು ಇದರಿಂದ ನಮಗೆ ಪ್ರಾಪ್ತವಾಯಿತು ಈಗ ನಾನು ಕರ್ಣನ ವಿಷಯವಾಗಿ ದುಃಖಿಸುತ್ತ ಅಗ್ನಿಯಲ್ಲಿ ಬಿದ್ದಂತೆ ದಗ್ಧನಾಗುತ್ತಿರುವೆನು ಈ ಲೋಕದಲ್ಲಿ ಕೌರವಕ್ಷಯಕಾರಣವೂ, ಘೋರವೂ ಆದ ಈ ಯುದ್ಧವು ಸಂಭವಿಸದಿದ್ದರೆ, ನಮಗೆ ಸ್ವರ್ಗದಲ್ಲಿಕೂಡ ಪಡೆಯಲಾರದ ವಸ್ತುವು ಯಾವುದೂ ಇರುತ್ತಿರಲಿಲ್ಲ" ಎಂದನು

ಹೀಗೆ ವಿಲಪಿಸುತ್ತಿದ್ದು, ಆಮೇಲೆ ಕರ್ಣನಿಗೆ ಜಲತರ್ಪಣವನ್ನು ಬಿಟ್ಟನು ಆ ಉದಕದಾನಕರ್ಮವನ್ನು ಮಾಡುವಾಗ, ಅಲ್ಲಿ ಉಭಯಪಾರ್ಶ್ವಗಳಲ್ಲಿಯೂ ನೆರೆದಿದ್ದ ಸ್ತ್ರೀಯರೆಲ್ಲರೂ ಗಟ್ಟಿಯಾಗಿ ಅತ್ತರು. ಆಮೇಲೆ ಯುಧಿಷ್ಠಿರನು ಸಹೋದರಪ್ರೇಮದಿಂದ ಕರ್ಣನ ಸ್ತ್ರೀಯರನ್ನು ಪರಿವಾರಸಮೇತವಾಗಿ ಕರೆತರುವಂತೆ ಆಜ್ಞಾಪಿಸಿದನು. ಆ ಸ್ತ್ರೀಯರೊ

ಡನೆ ತಾನೂ ಕರ್ಣನಿಗೆ ಮಾಡಬೇಕಾದ ಪ್ರೇತಕೃತ್ಯವೆಲ್ಲವನ್ನೂ ಭೂರಿ ದಕ್ಷಿಣೆಗಳೊಡನೆ ವಿಧ್ಯುಕ್ತವಾಗಿ ನೆರವೇರಿಸಿದನು ಧೃತರಾಷ್ಟ್ರನು ಕೂಡ ಬೇಸರಪಡದೆ ತರ್ಪಣವನ್ನು ಮಾಡಿ, ತನ್ನ ಪತ್ನಿಯೊಡನೆ ನದಿಯ ದಡದ ಮೇಲಕ್ಕೆ ಬಂದನು ಆಗ ಯುಧಿಷ್ಠಿರನು 'ನಿಜಸ್ಥಿತಿಯನ್ನರಿಯದ ಪಾಪಿ ಯಾದ ನನ್ನಿಂದ ಅಂತಹ ಜ್ಯೇಷ್ಠಭ್ರಾತೃವೇ ಕೊಲ್ಲಲ್ಪಟ್ಟನಲ್ಲವೇ? ಆದುದರಿಂದ ಇನ್ನುಮೇಲೆ ರಹಸ್ಯವಿಷಯವಾವುದೂ ಸ್ತ್ರೀಯರ ಮನಸ್ಸಿ ನಲ್ಲಿ ನಿಲ್ಲದೆ ಹೊರಬೀಳಲಿ' ಎಂದು ಶಪಿಸಿ, ತನ್ನ ಸಹೋದರರಲ್ಲರೊಡನೆ ಜಲದಿಂದೆದ್ದು ಗಂಗೆಯ ದಡಕ್ಕೆ ಹೋದನು

ಇದು ಇಪ್ಪತ್ತೇಳನೆಯ ಅಧ್ಯಾಯವು

**ಇಲ್ಲಿಗೆ ಶ್ರಾದ್ಧಪರ್ವವು ಮುಗಿದುದು.**

## ಸ್ತ್ರೀಪರ್ವವು ಸಮಾಪ್ತವು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ

ಶ್ರೀ ಶ್ರೀ ಶ್ರೀ

People's Printing & Publishing House Ltd., Triplicane Madras.